# ಮಗ್ಗೆಯ ಮಾಯಿದೇವನ ಶಿವಾನುಭವ ಸೂತ್ರ
## ಒಂದು ಅಧ್ಯಯನ


ಸಂಶೋಧಕರು,

ಚನ್ನಬಸವದೇವರು. ಓಲೆಮಠ

ಮಾರ್ಗದರ್ಶಕರು,

ಪಂ. ನಾಗಭೂಷಣ ಶಾಸ್ತ್ರಿಗಳು







ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೯೯೪

# ಮಗ್ಗೆಯ ಮಾಯಿದೇವನ ಶಿವಾನುಭವ ಸೂತ್ರ
# ಒಂದು ಅಧ್ಯಯನ

ಸಂಶೋಧಕರು,

ಚನ್ನಬಸವದೇವರು. ಓಲೆಮಠ



ಮಾರ್ಗದರ್ಶಕರು,

ಪಂ. ನಾಗಭೂಷಣ ಶಾಸ್ತ್ರಿಗಳು




ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೯೯೪



# ಪ್ರಮಾಣ ಪತ್ರ

"ಮಗ್ಗೆಯ ಮಾಯಿದೇವನ ಶಿವಾನುಭವಸೂತ್ರ : ಒಂದು ಅಧ್ಯಯನ" ಎಂಬ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ, ಪಂ. ನಾಗಭೂಷಣಶಾಸ್ತ್ರಿಗಳ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವದಿಲ್ಲ.

ಚೆನ್ನಬಸವದೇವ. ಓಲೆಮಠ.

ಧಾರವಾಡ

(ಚೆನ್ನಬಸವದೇವರು. ಓಲೆಮಠ.)

ಸಂಶೋಧಕರು

ದಿನಾಂಕ: ೫-೧೧-೯೪

# ದೃಢೀಕರಣ ಪತ್ರ

ಶ್ರೀ ಚೆನ್ನಬಸವದೇವರು, ಒಲೆಮಠ ಅವರು "ಮಗ್ಗೆಯ ಮಾಯಿದೇವನ ಶಿವಾನುಭವಸೂತ್ರ : ಒಂದು ಅಧ್ಯಯನ" ವಿಷಯ ಕುರಿತು ನನ್ನ ಮಾರ್ಗದರ್ಶನದಲ್ಲಿ ಕೈಗೊಂಡಿರುವ ಪಿಎಚ್.ಡಿ. ಸಂಶೋಧನೆ ವಿನೂತನ ಸ್ವರೂಪದ್ದಾಗಿದೆ. ಇದು ಇಡಿಯಾಗಿ ಇಲ್ಲವೇ ಬಿಡಿಯಾಗಿ ಈ ಮೊದಲು ಎಲ್ಲಿಯೂ ಪ್ರಕಟವಾಗಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಧಾರವಾಡ

(ಪಂ. ನಾಗಭೂಷಣಶಾಸ್ತ್ರಿಗಳು)
ಮಾರ್ಗದರ್ಶಕರು

ದಿನಾಂಕ: ೪-೧೧-೯೪

# ಕೃತಜ್ಞತೆಗಳು

ಕನ್ನಡ ವಿಶ್ವವಿದ್ಯಾಲಯದಲ್ಲಿ ಪಿಎಚ್.ಡಿ. ಅಧ್ಯಯನಕ್ಕೆ ಅವಕಾಶ ಒದಗಿಸಿದ ಕುಲಪತಿಗಳಾದ ಡಾ. ಚಂದ್ರಶೇಖರ ಕಂಬಾರ ಅವರಿಗೆ ಚಿರಋಣಿಯಾಗಿದ್ದೇನೆ.

ತಮ್ಮ ವಾರ್ಧಕ್ಯದಲ್ಲಿಯೂ ಆಸಕ್ತಿಯಿಂದ ಮಾರ್ಗದರ್ಶನ ಮಾಡಿದ ಪಂಡಿತ ಶ್ರೀ ನಾಗಭೂಷಣ ಶಾಸ್ತ್ರಿಗಳಿಗೆ ಕೃತಜ್ಞನಾಗಿದ್ದೇನೆ.

ಸಂಶೋಧನಾ ಕಮ್ಮಟಗಳ ಸಂದರ್ಭದಲ್ಲಿ ಅಧ್ಯಯನದ ವಿಷಯಕ್ಕೆ ಸಂಬಂಧಿಸಿದಂತೆ, ಚರ್ಚಿಸಿ ಹಲವಾರು ಉಪಯುಕ್ತ ಸಲಹೆಗಳನ್ನು ನೀಡಿದ ಕುಲಸಚಿವರಾದ ಡಾ. ಕೆ.ವಿ. ನಾರಾಯಣ, ಡಾ. ಪುರುಷೋತ್ತಮ ಬಿಳಿಮಲೆ; ಡಾ. ಎಚ್.ಎಸ್. ರಾಘವೇಂದ್ರರಾವ, ಪ್ರೊ. ಓ.ಎಲ್. ನಾಗಭೂಷಣಸ್ವಾಮಿ, ಪ್ರೊ. ಮಲ್ಲೇಪುರಂ. ಜಿ. ವೆಂಕಟೇಶ ಅವರನ್ನು ತುಂಬು ಹೃದಯದಿಂದ ನೆನಸಿಕೊಳ್ಳುತ್ತೇನೆ.

ಉಣಿಸಿ ಉಡಿಸಿ ಸಾಕಿ ಸಲುಹಿದ ನಾಗನೂರಿನ ರುದ್ರಾಕ್ಷಿ ಮಠದ ಸದ್ಗುರು ಲಿಂ. ಡಾ. ಶಿವಬಸವ ಮಹಾಸ್ವಾಮಿಗಳು ಬೆಳಗಾವಿ, ಪ್ರಾತಃಸ್ಮರಣೀಯರಾದ ಜಗದ್ಗುರು ಸಂಗನಬಸವ ಮಹಾಸ್ವಾಮಿಗಳು, ಹೊಸಪೇಟೆ, ಹಾಲುಕೆರೆ, ನನ್ನ ಏಳ್ಗೆಗೆ ಚಿಂತಿಸುತ್ತಾ ಆಗಾಗ ಪುನಶ್ಚೇತನ ನೀಡುತ್ತಿರುವ ಪರಮ ಪೂಜ್ಯ ಜಗದ್ಗುರು ಡಾ. ಸಿದ್ಧಲಿಂಗ ಮಹಾಸ್ವಾಮಿಗಳು ಡಂಬಳ ಗದಗ, ಈ ಎಲ್ಲ ಮಹಾಪೂಜ್ಯರ ಶ್ರೀ ಚರಣಕ್ಕೆ ಭಕ್ತಿಪೂರ್ವಕ ಪ್ರಣಾಮಗಳು.

ಆಗಾಗ ಷಟ್‌ಸ್ಥಲ ಕುರಿತು ಬಹು ತಾಳ್ಮೆಯಿಂದ ನನ್ನೊಂದಿಗೆ ಚರ್ಚಿಸಿದ, ಹುಬ್ಬಳ್ಳಿ, ಸುತ್ತೂರು, ಹಾನಗಲ್, ಇಲಕಲ್, ವಿಜಾಪುರ, ಒಳಬಳ್ಳಾರಿ, ಅಮ್ಮಿನಗಡ, ಗಂಗಾವತಿ, ನೀಲಗುಂದ, ಹಡಗಲಿ, ಗರಗ ನಾಗಲಾಪುರ, ಸಿರಿಗೆರೆ ಈ ಎಲ್ಲ ಮಹಾಪೂಜ್ಯರಿಗೂ ನನ್ನ ಅನಂತ ನಮನಗಳು.

ಸಂದರ್ಭಾನುಸಾರ, ಹಲವಾರು ಸಲಹೆ ಸೂಚನೆಗಳನ್ನು ನೀಡಿದ ಡಾ. ಎಂ. ಚಿದಾನಂದ ಮೂರ್ತಿಯವರಿಗೂ ಡಾ. ಆರ.ಸಿ. ಹಿರೇಮಠ, ಡಾ. ಡಿ.ವ್ಹಿ. ಪುರಾಣಿಕ, ಡಾ. ಬಸವರಾಜ ಮಲಶೆಟ್ಟಿ, ಡಾ. ಬಸವರಾಜ ಜಗಜಂಪಿ, ಡಾ. ಆನಂದ ಮುಳಗುಂದ, ಡಾ. ಸಿದ್ಧಯ್ಯ ಪುರಾಣಿಕ, ಪ್ರೊ. ಎಸ್. ರಾಜಶೇಖರ, ಶ್ರೀ ಸತ್ಯಕಾಮಾ, ಡಾ. ಮಲ್ಲಿಕಾರ್ಜುನ ಪರಡ್ಡಿ, ಡಾ. ವ್ಹಿ.ಎಸ್. ಕಂಬಿ, ಶ್ರೀ ದು. ನಿಂ. ಬೆಳಗಲಿ ಅವರುಗಳಿಗೆ ನನ್ನ ಕೃತಜ್ಞತೆಗಳು.

ಪರೋಕ್ಷವಾಗಿ ಪ್ರೋತ್ಸಾಹಿಸಿದ ಡಾ. ಎಂ.ಎಂ. ಕಲಬುರ್ಗಿ, ಡಾ. ವೃಷಭೇಂದ್ರಸ್ವಾಮಿ, ಡಾ. ಬಿ.ಆರ್. ಹಿರೇಮಠ ಅವರಿಗೆ,

ಅಗತ್ಯವಿದ್ದ ಆಕರಗ್ರಂಥಗಳನ್ನು ಸಮಯಾನುಸಾರವಾಗಿ ಒದಗಿಸಿದ ವಿಶ್ವವಿದ್ಯಾಲಯದ ಗ್ರಂಥಾಲಯ ಸಿಬ್ಬಂದಿ, ಬಸವೇಶ್ವರ ವಾಚನಾಲಯ ಜಗದ್ಗುರು ಕೊಟ್ಟೂರುಸ್ವಾಮಿಮಠ ಹೊಸಪೇಟೆ, ಶ್ರೀ ಮೃತ್ಯುಂಜಯ ಶಿವಾನುಭವ ಕುಟೀರ ಬಳ್ಳಾರಿ, ರೇವಣಸಿದ್ಧೇಶ್ವರ ವಾಚನಾಲಯ ಶಿವಯೋಗ ಮಂದಿರ, ಬಿ.ಎಚ್.ಎಸ್. ಕಲಾ ಹಾಗೂ ವಿಜ್ಞಾನ ಮಹಾವಿದ್ಯಾಲಯದ ಗ್ರಂಥಾಲಯ ಜಮಖಂಡಿ, ಜಿಲ್ಲಾ ಕೇಂದ್ರ ಗ್ರಂಥಾಲಯ ಸವದತ್ತಿ, ಶ್ರೀ ಎನ್.ಎಸ್.

ದೇವರವರ(ವಕೀಲರು) ಚಂದ್ರಮೌಳಿ, ಕರ್ಪೂರಮಠ ಬಿಜಾಪುರ, ಪ್ರೊ. ಶಿಲಾಕ್ ಪತ್ತಾರ ಬದಾಮಿ, ಶ್ರೀ ಮಾರ್ಕಂಡೆಯ ದೊಡಮನಿ, ರವಿ ತೇಲಿ ಜಮಖಂಡಿ, ಶ್ರೀ ಗಂಗಾಧರ ದೇವರು ಮೈಸೂರು ಅವರುಗಳಿಗೆ,

ಕೈಬರಹ ಪ್ರತಿಗಳ ಬರಹ ಹಾಗೂ ಪೂರಕ ತಿದ್ದುಪಡಿಯೊಂದಿಗೆ ಬೆರಳಚ್ಚು ಪ್ರತಿಗಳ ಪರಿಷ್ಕಾರ ಸಂದರ್ಭದಲ್ಲಿ ಸಹಕರಿಸಿದ ಶ್ರೀ ಹೆಗಡೆ ಗುರುವೃಂದಕ್ಕೂ, ಪ್ರಿ. ಘಟನಟ್ಟಿ, ರಾಜು ಹುಲ್ಲಾಳಕರ ಅವರ ಗೆಳೆಯರ ಬಳಗಕ್ಕೂ, ಹನಮಂತ ತೇಲಿ, ಎಸ್.ಎಮ್. ಜಾಟಗೊಂಡ. ಸತ್ಯಪ್ಪ ಹೊಳೆಪ್ಪನವರ,

ಕೈಬರಹ ಪ್ರತಿಗಳನ್ನು ಸ್ಖಾಲಿತ್ಯರಹಿತವಾಗಿ ಬೆರಳಚ್ಚು ಮಾಡಿಕೊಡುವಲ್ಲಿ ಸಹಕರಿಸಿದ ಬಸವರಾಜ, ನಾಗರಾಜ, ನಾಗಮ್ಮ ಚಿಂಚಣಿ, ಪಾಟೀಲ, ಸಿ.ಜಿ. ದೊಡಮನಿ, ಎಫ್.ಬಿ. ಬೆನಕಟ್ಟಿ, ಶಿದ್ಧಲಿಂಗಪ್ಪಾ ಪಟ್ಟಣಶೆಟ್ಟಿ,

ಸೂಕ್ತ ಕ್ಷೇತ್ರ ಕಾರ್ಯ ಸಮೀಕ್ಷೆಯಲ್ಲಿ ಸಹಕರಿಸಿದ ಶ್ರೀ ವಿ.ಜಿ. ಸಾರಂಗಮಠ ಹಾಗೂ ಕೆ.ಜಿ. ಸಾರಂಗಮಠ, ಶ್ರೀ ಎಸ್.ಎಚ್. ಕಪ್ಪನ್ನವರ,

ಗಣಕಯಂತ್ರದ ಬೆರಳಚ್ಚಿನ ಪ್ರತಿಗಳನ್ನು ಓದಿ ಪರಿಷ್ಕರಿಸಿದ ಶ್ರೀಮತಿ ಶಶಿಕಲಾ ಮಾಳಿ, ಶೌಕತ್ ದರೂರು, ಬಸವರಾಜ ಕುಂಬಾರ,

ಅಧ್ಯಯನದುದ್ದಕ್ಕೂ ಸಹಕರಿಸಿದ ದರೂರ ದೇವರು, ರಾಚಯ್ಯ, ಶಂಕರಯ್ಯ, ಶಂಕರಯ್ಯ ಶಾಸ್ತ್ರೀ, ಮಹಾಂತೇಶ, ರಹೀಮ ದರೂರು, ವೀರಯ್ಯ, ಬಸವನಗೌಡ, ಗಣೇಶ ಅಮೀನಗಡ, ಗುರುನಾಥ, ರಮೇಶ ಅವರಿಗೆ,

ಸ್ಫುಟವಾಗಿ ಕಂಪ್ಯೂಟರ್ ಬೆರಳಚ್ಚು ಮುದ್ರಣ ಮಾಡಿಕೊಟ್ಟ ಅಖಿಲ ಗ್ರಾಫಿಕ್ಸ್ ಧಾರವಾಡ ಅವರಿಗೆ ಋಣಿಯಾಗಿದ್ದೇನೆ.

ಅಂದವಾಗಿ ಮಹಾಪ್ರಬಂಧದ 'ರಟ್ಟುಕಟ್ಟುವಕಾರ್ಯ'ದಲ್ಲಿ ನೆರವಾದ ಮಹಾಂತೇಶ ಬೈಂಡರ್ಸ್ ಅವರಿಗೂ ಧನ್ಯವಾದಗಳು.

ಸ್ಥಳ: ವಿದ್ಯಾರಣ್ಯ

ದಿನಾಂಕ:

ಸಂಶೋಧಕರು

ಚನ್ನಬಸವದೇವರು ಓಲೀಮಠ

ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಪರಿವಿಡಿ

ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ ಹಾಗೂ ಸ್ವರೂಪ

ಕನ್ನಡ ಸಾಹಿತ್ಯ ಬಹುಪಾಲು ರಾಜಾಶ್ರಯದಲ್ಲಿ ಬೆಳೆದು ಬಂದುದು ನಿರ್ವಿವಾದ. ಗಂಗ, ರಾಷ್ಟ್ರಕೂಟ, ಚಾಲುಕ್ಯ, ಹೊಯ್ಸಳ, ವಿಜಯನಗರ, ಮೈಸೂರು, ಕೆಳದಿ, ಸ್ವಾದಿ ಈ ಎಲ್ಲ ಅರಸರ ಕಾಲದಲ್ಲೂ ಸಾಹಿತ್ಯ ಪ್ರವರ್ಧಮಾನವಾದುದು ಐತಿಹಾಸಿಕ ಸತ್ಯ. ಮೇಲಾಗಿ ಕನ್ನಡ ಸಾಹಿತ್ಯ ಸರಸ್ವತಿಯ ಸುವರ್ಣಸೌಧ ಮತ-ಧರ್ಮಗಳ ಭದ್ರ ಬುನಾದಿಯ ಮೇಲೆ ನಿಂತಿದೆ, ಮತಗಳೇ ಅದಕ್ಕೆ ಪ್ರೇರಕ, ಪ್ರಚೋದಕ ಹಾಗೂ ಪೋಷಕ. ಆದರೂ ಧರ್ಮಗ್ರಂಥಗಳು ಮತ ತತ್ವಪ್ರತಿಪಾದನೆಯ ಶುಷ್ಕ ಗ್ರಂಥಗಳಾಗದೆ, ಧರ್ಮ ಹಾಗೂ ಕಾವ್ಯಧರ್ಮಗಳ ಸಮನ್ವಯತೆಯಿಂದ ತುಂಬಿಕೊಂಡು, ಮತಾತೀತವಾದ ಸಂದೇಶವನ್ನು, ಕಾವ್ಯದ ಸೊಬಗು ಸೌಂದರ್ಯಗಳನ್ನು ಬೀರುವ ರಸವತ್ಕೃತಿಗಳಾಗಿವೆ. ಅದರಲ್ಲಿ ವೀರಶೈವ ಧರ್ಮ ಸಲ್ಲಿಸಿದ ಕಾಣಿಕೆ ಘನವಾದುದಾಗಿದೆ.

ಈ ವಿವೇಚನೆ ಕನ್ನಡ ವಾಙ್ಮಯ ಪ್ರಪಂಚಕ್ಕಷ್ಟೇ ಸೀಮಿತವಾಗಿರದೆ, ತೆಲುಗು, ತಮಿಳು, ಮರಾಠಿ ಮುಂತಾದ ಭಾರತೀಯ ಭಾಷೆಗಳಲ್ಲೂ ದಷ್ಟಪುಷ್ಟವಾಗಿ ಮೈಚಾಚಿ, ವಿಪುಲವಾಗಿ ಬೆಳೆದು, ವಿಶ್ವಸಾಹಿತ್ಯವಾಗಿ ನೆಲೆನಿಂತಿದೆ. ವೀರಶೈವ ಸಾಹಿತ್ಯದ ಆಕರಗಳನ್ನು ನಾವು ವೇದೋಪನಿಷತ್ತುಗಳಲ್ಲೂ ಶಿವಾಗಮಗಳಲ್ಲೂ ಪ್ರಾಸಂಗಿಕವಾಗಿ ಕಾಣುತ್ತಿದ್ದರೂ, ವೀರಶೈವದ ನೆಲೆ ಬೆಲೆಗಳಿಗೆ ಒಂದು ಮೂರ್ತಸ್ವರೂಪ ನೀಡಿದ ಘನತೆ, ಬಸವಾದಿ ಶರಣರಿಗೆ ಸಲ್ಲುತ್ತದೆ. ವೀರಶೈವದ ಅಂಗವಾದ ಅಷ್ಟಾವರಣ, ಪ್ರಾಣವಾದ ಪಂಚಾಚಾರ, ಆತ್ಮವೆಂದು ಪರಿಗಣಿಸಲಾದ ಷಟ್‌ಸ್ಥಲ - ಇವೆಲ್ಲ ವಚನ ಸಾಹಿತ್ಯದಲ್ಲಿ ಆಮೂಲಾಗ್ರವಾಗಿ ನಿರೂಪಿತಗೊಂಡಿವೆ. ಇವುಗಳೊಂದಿಗೆ ವೀರಶೈವದ ಇತರ ತತ್ವಗಳಾದ ಕಾಯಕ-ದಾಸೋಹ-ಪ್ರಸಾದ-ಲಿಂಗಾಂಗಸಾಮರಸ್ಯ ಮೊದಲಾದವುಗಳ ವಿವೇಚನೆ ವಚನಸಾಹಿತ್ಯದಲ್ಲಿ ಶಾಸ್ತ್ರೀಯವಾಗಿ ಪ್ರತಿಪಾದನೆಗೊಳಗಾಗಿದೆ. ಹೀಗೆ ವ್ಯಾಪಕ ಸ್ವರೂಪದ ವೀರಶೈವದ ಸಮಗ್ರತೆಗೆ ಬಸವಾದಿ ಶರಣರು ಒಂದು ಮೂರ್ತ ಸ್ವರೂಪವನ್ನು ಕೊಡುವಲ್ಲಿ ಸಾಕಷ್ಟು ಶ್ರಮಿಸಿದರೂ ಕಲ್ಯಾಣ ಕ್ರಾಂತಿಯ ಪರಿಣಾಮವಾಗಿ, ಅದರ ಸಾಕಾರ ಸ್ವರೂಪವನ್ನು ನಾವು ಹದಿನೈದನೆಯ ಶತಮಾನದ ಆರಂಭದಲ್ಲಿ ಕಾಣುವಂತಾಯಿತು.

ನೂರೊಂದುವಿರಕ್ತರು, ಕವಿಗಳು, ವಚನ ಸಂಕಲನಕಾರರು, ವ್ಯಾಖ್ಯಾನಕಾರರು, ತತ್ವವೇತ್ತರು ಮೊದಲಾದ ಘಟಾನುಘಟಿಗಳೆಲ್ಲ ಏಕಕಾಲಕ್ಕೆ ಉದಯವಾಗಿ ವೀರಶೈವ ಸಾಹಿತ್ಯ ಹಾಗೂ ಧರ್ಮಗಳನ್ನು ವ್ಯಾಪಕವಾಗಿ ಪ್ರಸಾರಗೊಳಿಸಿದರು. ಷಟ್‌ಸ್ಥಲಸಿದ್ಧಾಂತ, ವೀರಶೈವದ ಆತ್ಮವೆಂದು ಪರಿಗಣಿಸಲಾಗಿದೆ. ೧ನೆಯ ಪ್ರೌಢದೇವರಾಯನ ಸಮಕಾಲೀನ ಪರಿಸರದಲ್ಲಿ ಬಾಳಿಬದುಕಿದ ಮಗ್ಗೆಯ ಮಾಯಿದೇವ, ವೀರಶೈವ ತತ್ವಶಾಸ್ತ್ರವೇತ್ತರಲ್ಲಿಯೇ ಗಮನಾರ್ಹ ಕೊಡುಗೆ ನೀಡಿದ ಶಿವಾನುಭವಿ. ಅವನ ಶಿವಾನುಭವ ಸೂತ್ರವು ಷಟ್‌ಸ್ಥಲ ತತ್ವಪ್ರತಿಪಾದನೆಯನ್ನು ನಿಖರವಾಗಿ ವಿವರಿಸುವ ಕೃತಿಯಾಗಿದೆ. ಪ್ರಸ್ತುತ ಕೃತಿಯ ಉತ್ತರಭಾಗವಾದ "ವಿಶೇಷಾರ್ಥ ಪ್ರಕಾಶಿಕಾ" ವೀರಶೈವರು ಆಚರಿಸುವ ವಿಧಿವಿಧಾನಗಳ ಮೇಲೆ ಬೆಳಕು ಚೆಲ್ಲುತ್ತದೆ.

ಮಗ್ಗೆಯ ಮಾಯಿದೇವನ ಶಿವಾನುಭವಸೂತ್ರವು, ಷಟಸ್ಥಲ ತತ್ವವನ್ನು ವಿಶದವಾಗಿ ಪ್ರತಿಪಾದಿಸುವ ಸಂಸ್ಕೃತ ವಾಂಙ್ಮಯಪ್ರಪಂಚದ ಪ್ರಥಮ ಕೃತಿ. ವೀರಶೈವ ತತ್ವಶಾಸ್ತ್ರದ ಅತ್ಮದಂತಿರುವ ಷಟ್‌ಸ್ಥಲತತ್ವಪ್ರತಿಪಾದನೆಯನ್ನು ವಿಸ್ತೃತವಾಗಿ ನಿರೂಪಿಸಿದ ಮಗ್ಗೆಯ ಮಾಯಿದೇವನನ್ನು ಕುರಿತು ಅವನ ನಂತರದ ಕವಿಗಳು, ಪ್ರಾಸಂಗಿಕವಾಗಿ ಆತನನ್ನು ಸ್ಮರಿಸಿ, ಮಾಯಿದೇವನು ನೆಟ್ಟ "ನೆಳಲಿಲ್ಲದ ಧ್ವಜಸ್ತಂಭ" ಕುರಿತು ಪ್ರಸ್ತಾಪಿಸಿದ್ದಾರೆ. ಆಧುನಿಕ ವಿದ್ವಾಂಸರಾದ ಸ.ಸ. ಮಾಳವಾಡರು ಮಾಯಿದೇವನನ್ನು ಕುರಿತು "ಸಾಹಿತ್ಯ ಸಂಗಮ"ದಲ್ಲಿ, ಸಿದ್ಧಯ್ಯ ಪುರಾಣಿಕರು "ಶರಣ ಚರಿತಾಮೃತ"ದಲ್ಲಿ, ಆ.ನ.ಕೃ ಅವರು "ವೀರಶೈವ ಸಾಹಿತ್ಯ ಹಾಗೂ ಸಂಸ್ಕೃತಿ"ಯಲ್ಲಿ, ಡಾ. ಎಂ.ಎಂ.ಕಲಬುರ್ಗಿಯವರು "ಮಾರ್ಗ ಸಂ. ೧"ರಲ್ಲಿ ಡಾ. ವಿ. ಶಿವಾನಂದ ವಿರಕ್ತಮಠರು "ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ"ದಲ್ಲಿ, ಎಚ್. ದೇವೀರಪ್ಪನವರು "ಲಕ್ಕಣ್ಣ ದಂಡೇಶ ಶಿವತತ್ವ ಚಿಂತಾಮಣಿ"ಯಲ್ಲಿ, ಡಾ. ಶಿ.ಚಿ. ನಂದಿಮಠರು "A hand book of veerashavism"ದಲ್ಲಿ, ಆರ್.ಜಿ. ಭಂಡಾರಕರ ಅವರು "Vaishnavism & Shavism"ದಲ್ಲಿ, ಜಚನಿಯವರು "ಶತಕತ್ರಯ ಪ್ರವಚನ"ದಲ್ಲಿ ಪ್ರಾಸಂಗಿಕವಾಗಿ ಚರ್ಚಿಸಿದ್ದಾರೆ. ಡಾ. ಡಿ.ವ್ಹಿ. ಪುರಾಣಿಕರು "ಮಗ್ಗೆಯ ಮಾಯಿದೇವ : ಒಂದು ಅಧ್ಯಯನ" ಎಂಬ ಮಹಾಪ್ರಬಂಧದಲ್ಲಿ ಅವನ ಬದುಕು ಬರಹಗಳನ್ನು ಕುರಿತು ವಿವರವಾಗಿ ವಿವೇಚಿಸಿದ್ದಾರೆ.

ಈ ಎಲ್ಲ ಕೃತಿಗಳಲ್ಲಿ ಮಾಯಿದೇವನ "ಶಿವಾನುಭವಸೂತ್ರಂ" ಕೃತಿ ಕುರಿತಾದ ಸಮಗ್ರ ಅಧ್ಯಯನ ಮೂಡಿ ಬಂದಿಲ್ಲ. ಅಲ್ಲದೆ ಷಟ್‌ಸ್ಥಲ ಸಿದ್ಧಾಂತಕ್ಕನುಗುಣವಾಗಿ ಮಾಯಿದೇವ, ಪ್ರಸ್ತುತ ಗ್ರಂಥದ ದ್ವಿತೀಯಾಧಿಕರಣವನ್ನು ಸ್ಥಲ ತತ್ವ ಪ್ರತಿಪಾದನೆಗೆಯೇ ಮೀಸಲಿಟ್ಟಿದ್ದಾನೆ. ಈ ಹಿನ್ನೆಲೆಯಲ್ಲಿ ಮಾಯಿದೇವನ ಆಕರಸಾಹಿತ್ಯದಲ್ಲಿ ಸ್ಥಲ ತತ್ವದ ಸ್ವರೂಪ ಕುರಿತು ವೇದ, ಉಪನಿಷತ್ತು, ಗೀತೆ, ಶಿವಾಗಮ, ಪುರಾಣ, ರಾಮಾಯಣ, ಮಹಾಭಾರತ, ವಚನಸಾಹಿತ್ಯ, ಮೊದಲಾದ ಕೃತಿಗಳಲ್ಲಿ ನಿರೂಪಿತವಾದ ವಿಷಯವನ್ನು ಪ್ರಸ್ತಾಪಿಸಲಾಗಿದೆ. ಮಾಯಿದೇವ, ತೃತೀಯಾಧಿಕರಣದಿಂದ ಅಷ್ಟಮಾಧಿಕರಣದವರೆಗಿನ ಆರು ಅಧಿಕರಣಗಳಲ್ಲಿ ಷಟ್‌ಸ್ಥಲವನ್ನು ಭಾರತೀಯ ದರ್ಶನಗಳ ಚೌಕಟ್ಟಿಗೆ ಅಳವಡಿಸಿ, ಅದಕ್ಕೆ ಶಾಸ್ತ್ರೀಯ ಸ್ವರೂಪವನ್ನು ನೀಡಿದ್ದಾನೆ. ಸಾಂದರ್ಭಿಕವಾಗಿ ಶಿವಾನುಭವಸೂತ್ರದಲ್ಲಿ ಉಲ್ಲೇಖಗೊಂಡ ಭಾರತೀಯ ದರ್ಶನಗಳನ್ನು ಗುರುತಿಸಿ, ಮಾಯಿದೇವನ ಒಟ್ಟು ಧೋರಣೆಯನ್ನೇ ಅನುಸರಿಸಿ, ಷಟ್‌ಸ್ಥಲ ತತ್ವ ಪ್ರತಿಪಾದನೆಯನ್ನು ಪ್ರಸ್ತುತ ಮಹಾಪ್ರಬಂಧದಲ್ಲಿ ನಾಲ್ಕನೆಯ ಅಧ್ಯಾಯದಲ್ಲಿ ಮಾಡಲಾಗಿದೆ. ಐದನೇಯ ಅಧ್ಯಾಯದಲ್ಲಿ "ಶಿವಾನುಭವಸೂತ್ರಂ" ಗ್ರಂಥದಲ್ಲಿ ನಿರೂಪಿತವಾದ ಷಟ್‌ಸ್ಥಲ ತತ್ವದ ಸಮಗ್ರ ವಿಷಯ ನಿರೂಪಣೆಯಾದ ಈಶ್ವರ, ಜೀವ, ಜಗತ್ತು, ಬಂಧ, ಬಂಧಕಾರಣ, ಬಂಧ ವಿಮೋಚನೆ, ಮೋಕ್ಷಸ್ವರೂಪ ಮೊದಲಾದ ವಿಷಯಗಳ ವಿಸ್ತೃತ ವಿವರಣೆಯನ್ನು ಕೈಕೊಳ್ಳಲಾಗಿದೆ. ಜೊತೆಗೆ ಮಾಯಿದೇವನ ಇನ್ನಿತರ ಕೃತಿಗಳನ್ನು ಕುರಿತು ಪ್ರಾಸಂಗಿಕವಾಗಿ ನಿರೂಪಿಸಲಾಗಿದೆ.

ಆರನೆಯ ಅಧ್ಯಾಯದಲ್ಲಿ, ಷಟ್‌ಸ್ಥಲಕ್ಕೆ ಸಂಬಂಧಿಸಿದ ಸಾಧನಮಾರ್ಗದ ತೌಲನಿಕ ಅಧ್ಯಯನವನ್ನು ಕೈಕೊಳ್ಳಲಾಗಿದೆ. ಏಳನೆಯ ಅಧ್ಯಾಯವು, ಹಿಂದಿನ ಆರೂ ಅಧ್ಯಾಯಗಳ ಸಾರವನ್ನೊಳಗೊಂಡು ಸಮಾರೋಪಗೊಳ್ಳುತ್ತದೆ.

❑

# ಅಧ್ಯಾಯ : ಎರಡು

# ಸಮಕಾಲೀನ ಪರಿಸರದ ವಿವೇಚನೆ

## ೧. ರಾಜಕೀಯ:

### ವಿಜಯನಗರದ ಸ್ಥಾಪನೆಯ ಉದ್ದೇಶ :

ಜನತೆಯ ನಾಗರಿಕ ಜೀವನದಲ್ಲಿ ತಲೆತಲಾಂತರಗಳಿಂದ ಬೆಳೆದು ಬಂದಿದ್ದ ಭಾರತೀಯ ಸಂಸ್ಕೃತಿ, ರೀತಿನೀತಿಗಳನ್ನು ಸರ್ವವಿಧದಿಂದಲೂ ಸಂರಕ್ಷಿಸಿ, ಸಂವರ್ಧನಗೊಳಿಸುವುದು; ಎಲ್ಲ ಧರ್ಮಪಂಥಗಳನ್ನು, ಆ ಧರ್ಮ ಪಂಥಗಳು ಕಟ್ಟಿಕೊಂಡಿದ್ದ ಸಂಘಸಂಸ್ಥೆಗಳನ್ನು ಊರ್ಜಿತಗೊಳಿಸುವುದು; ಸ್ವಕೀಯ ಭಾಷೆ, ಸಾಹಿತ್ಯ, ಕಲೆಗಳನ್ನು ಪ್ರೋತ್ಸಾಹಿಸುವುದು; ಇವೇ ವಿಜಯನರಗರ ಸ್ಥಾಪನೆಯ ಪ್ರಮುಖ ಧ್ಯೇಯೋದ್ದೇಶಗಳಾಗಿದ್ದವು. ವಿಜಯನಗರದ ಅಧಿಪತಿಗಳಾಗಿ ಮೂರು ವಂಶದ ಅರಸರು ರಾಜ್ಯಭಾರ ಮಾಡಿದರು. ಅವರ ಹೆಸರು ಹಾಗೂ ಆಳ್ವಿಕೆಯ ಕಾಲಕ್ರಮ ಈ ಕೆಳಗಿನಂತಿದೆ.

| | |
|---|---|
| ಒಂದನೆಯ ಹರಿಹರರಾಯ | (ಕ್ರಿ.ಶ. ೧೩೩೬-೧೩೫೬) |
| ಒಂದನೆಯ ಬುಕ್ಕರಾಯ | (ಕ್ರಿ.ಶ. ೧೩೫೬-೧೩೭೭) |
| ಇಮ್ಮಡಿ ಹರಿಹರರಾಯ | (ಕ್ರಿ.ಶ. ೧೩೭೭-೧೪೦೪) |
| ಒಂದನೆಯ ದೇವರಾಯ | (ಕ್ರಿ.ಶ. ೧೪೦೬-೧೪೨೨) |
| ವೀರವಿಜಯರಾಯ | (ಕ್ರಿ.ಶ. ೧೪೨೨-೧೪೨೪) |
| ಎರಡನೆಯ ದೇವರಾಯ | (ಕ್ರಿ.ಶ. ೧೪೨೪-೧೪೪೬) |

### ಒಂದನೆಯ ದೇವರಾಯ :

• ಸಂಗಮವಂಶದ ಅರಸರಲ್ಲಿ ಒಂದನೆಯ ಪ್ರೌಢದೇವರಾಯನೇ ಮಾಯಿದೇವನನ್ನು ಪೂಜೆಗೈದುದರಿಂದ ಇಲ್ಲಿನ ಸಂಧರ್ಭಕ್ಕೆ ಈತ ಗಮನಾರ್ಹನಾಗಿದ್ದಾನೆ. ಒಂದನೆಯ ಹರಿಹರನು ತನ್ನ ಸೋದರರ ಸಹಾಯದಿಂದ ನವರಾಜ್ಯ ಸ್ಥಾಪಿಸಿ ಗಮನಾರ್ಹನೆನಿಸಿದರೆ, ದಕ್ಷಿಣದ ದಂಡ ಯಾತ್ರೆಯೊಂದಿಗೆ ಒಂದನೆಯ ಬುಕ್ಕರಾಯ ಇತಿಹಾಸದಲ್ಲಿ ದಿಟ್ಟವಾದ ಹೆಜ್ಜೆಯನ್ನಿಟ್ಟವ. ಇಮ್ಮಡಿ ಹರಿಹರರಾಯನು ಅರ್ಹ ಮಂತ್ರಿಗಳನ್ನು, ಸಮರ್ಥ ದಂಡನಾಯಕರನ್ನು, ನಿಷ್ಠ ಆಡಳಿತ ಅಧಿಕಾರಿಗಳನ್ನು ಹೊಂದಿ ವಿಜಯನಗರದ ಸರ್ವತೋಮುಖ ಅಭಿವೃದ್ಧಿಗೆ ಹೆಚ್ಚಿನ ಸಹಾಯಸಲ್ಲಿಸಿದಂತೆ, ಫಿರೋಜಶಹನನ್ನು ಸೋಲಿಸಿ ಕೃಷ್ಣಾ, ತುಂಗಾ, ಭದ್ರಾನದಿಗಳ, ಮಧ್ಯ ಭೂಮಿಯ ಮೇಲೆ ಪ್ರಭುತ್ವ ಸ್ಥಾಪಿಸಿ ತನ್ನ ತಂದೆಯಂತೆ ಬಲಿಷ್ಠ, ದಕ್ಷನೆನಿಸಿಕೊಂಡವ ಒಂದನೆಯ ಪ್ರೌಡದೇವರಾಯ.

ಹರಿಹರನ ನಿಧನಾನಂತರ ಆತನ ಪುತ್ರರಾದ ಬುಕ್ಕರಾಯ, ವಿರೂಪಾಕ್ಷ, ಹಾಗೂ ದೇವರಾಯರಲ್ಲಿ ಸಿಂಹಾಸನಕ್ಕಾಗಿ ಸ್ಪರ್ಧೆ ನಡೆಯಿತು.[೧] ಇದರಲ್ಲಿ ರಾಜಕುಮಾರ ಒಂದನೆಯ ದೇವರಾಯನು ಜಯಶಾಲಿಯಾಗಿ, ಕ್ರಿ. ಶ. ೧೪೦೬ರಿಂದ ತನ್ನ ಆಳ್ವಿಕೆಯನ್ನು ಆರಂಭಿಸಿದನು. ಈ ರಾಯನು ಬಲಿಷ್ಠನೂ ಕ್ರಿಯಾಶೀಲನೂ ಆಗಿದ್ದ.[೨]

ದೇವರಾಯನು ಬಹಮನಿ ಸುಲ್ತಾನ ಫಿರೋಜ ಶಹನೊಂದಿಗೆ ಎರಡು ಬಾರಿ ಕದನದ ಕಣದಲ್ಲಿ ಇಳಿದನು. ಒಂದನೆಯ ಯುದ್ಧವು ದೇವರಾಯನ ರಾಜ್ಯಾರೋಹಣದ ವರ್ಷವೇ ಕ್ರಿ. ಶ. ಸು. ೧೪೦೬ರಲ್ಲಿ ಪ್ರಾರಂಭವಾಯಿತು. ಶಹನು ಮುದಗಲ್ ಕೋಟೆಯನ್ನು ವಶಪಡಿಸಿಕೊಂಡನು. ಆದರೆ ಅದನ್ನು ಸ್ವಾಧೀನದಲ್ಲಿ ಇಟ್ಟುಕೊಳ್ಳುವ ಆತನ ಸಾಹಸವು ವಿಫಲವಾಯಿತು. ಇದರಿಂದ ರೊಚ್ಚಿಗೆದ್ದ ಶಹನು ಸೇಡು ತೀರಿಸಿಕೊಳ್ಳುವ ಉದ್ದೇಶದಿಂದ ವಿಜಯನಗರ ಪ್ರದೇಶದಲ್ಲಿ ನುಗ್ಗಿದನು. ಬಂಕಾಪುರದ ಆಯಕಟ್ಟಿನ ಕೋಟೆಯನ್ನು ಗೆದ್ದು, ತನ್ನ ರಾಜ್ಯಕ್ಕೆ ಸೇರಿಸಿಕೊಂಡನು. ಮುಂದೆ ಆತನು ಆದವಾನಿ ದುರ್ಗದ ಮೇಲೆ ದಂಡೆತ್ತಿ ಬಂದು ಸೋತನು.

ಎರಡನೆಯ ಯುದ್ಧವು ಕ್ರಿ. ಶ. ೧೪೧೫ ರಿಂದ ೧೪೧೯ ರವರೆಗೆ ನಾಲ್ಕು ವರ್ಷಮುಂದುವರಿಯಿತು. ಇದು ಎರಡು ರಾಜ್ಯಗಳ ನಡುವೆ ಆಂಧ್ರ ಪ್ರದೇಶದ ಸ್ವಾಮಿತ್ವದ ದೆಸೆಯಿಂದ ಹೂಡಿದ ಸ್ಪರ್ಧೆಯಾಗಿತ್ತು. ಈ ಸಮರದಲ್ಲಿ ಮೊದಮೊದಲು ಬಹಮನಿ ಸುಲ್ತಾನನಿಗೆ ಕೆಲಮಟ್ಟಿಗೆ ಲಾಭವೂ ದೊರೆತಂತಾಯಿತು. ಆದರೆ ಆ ನಂತರ ವಿಜಯನಗರದ ಸೈನಿಕರ ಕೈ ಮೇಲಾಯಿತು. ಅವರು ಅತಿ ಸಾಹಸದಿಂದ ತೆಲುಗು ಸೀಮೆಯಲ್ಲಿ ಭದ್ರವಾದ ಪಾನಗಲ್ ಕೋಟೆಯನ್ನು ಜಯಿಸಿದರು. ಮುಂದೆ ವೈರಿಯನ್ನು ಆತನ ರಾಜ್ಯದ ಅಂತರ್ ಭಾಗದಲ್ಲಿ ಬೆನ್ನಟ್ಟಿಕೊಂಡು ಹೋದರು. ಘೋರ ಈ ಪರಾಜಯದ ಆಘಾತವನ್ನು ಸಹಿಸದಾದ ಫಿರೋಜ ಶಹನು ಎದೆಯೊಡೆದುಕೊಂಡು ಕ್ರಿ. ಶ. ೧೪೨೨ರಲ್ಲಿ ಅಸುನೀಗಿದನು. ಈ ಸಮರದ ಫಲಿತಾಂಶದಿಂದಾಗಿ ಮೂರು ನದಿಗಳ ಮಧ್ಯದಲ್ಲಿ ವಿಜಯನಗರದ ಪ್ರಭುತ್ವವು ಸ್ಥಾಪನೆಯಾಯಿತು.

**ದೇವರಾಯನ ರಚನಾತ್ಮಕ ಕಾರ್ಯಗಳು:**

ವಿಜಯನಗರ ರಾಜಧಾನಿಯ ವಿಕಾಸ ಹಾಗೂ ಕೋಟೆ ಕೊತ್ತಳಗಳನ್ನು ವಿಸ್ತಾರಗೊಳಿಸುವ, ಆ ನಗರಿಗೆ ಸುಭದ್ರತೆಯನ್ನೊದಗಿಸುವುದೇ ಮೊದಲಾದ ರಚನಾತ್ಮಕ ಕಾರ್ಯಗಳನ್ನು ಕೈಕೊಳ್ಳುವುದಲ್ಲದೆ ಅನೇಕ ಕಲಾತ್ಮಕ ಮಂದಿರಗಳನ್ನು ನಿರ್ಮಿಸಿ ಅವುಗಳ ಶೋಭೆಯನ್ನು ಹೆಚ್ಚಿಸಿದನು. ಈ ರಾಯನು ತುಂಗಭದ್ರಾನದಿಗೆ ವಿಸ್ತೀರ್ಣವಾದ ಆಣೆಕಟ್ಟನ್ನು ನಿರ್ಮಿಸಿ ಹದಿನೈದು ಮೈಲು ಉದ್ದನೆಯ ಕಾಲುವೆಯನ್ನು ತೋಡಿಸಿ ರಾಜಧಾನಿಗೆ ನಿರಂತರ ನೀರಿನ ಸೌಲಭ್ಯವನ್ನು ದೊರಕಿಸಿ ಕೊಟ್ಟನು. ಈ ಬೃಹತ್ ಕಾಲುವೆಯಿಂದ ಆ ಮಹಾನಗರಿಗೆ ವಿಪುಲವಾಗಿ ಜಲ ಸೌಕರ್ಯವು ಉಂಟಾಯಿತು. ಈ ಕಾಲುವೆ ನೀರಾವರಿಗೂ ಉಪಯೋಗವಾಗಿ ಅದರಿಂದ ತೋಟ, ಗದ್ದೆ, ಕೃಷಿ, ಬೇಸಾಯದ ಕಾರ್ಯಗಳು ಶ್ರೀಮಂತಗೊಂಡವು.[೩]

ಮುಂದೆ ಬರುವ ೨ನೇ ದೇವರಾಯನಂತೂ ವಿಜಯನಗರದಲ್ಲಿ ಸುವರ್ಣ ಯುಗವನ್ನೇ ಸೃಷ್ಟಿಸಿದುದು ಐತಿಹಾಸಿಕ ಸತ್ಯ.

---

೧) ಕರ್ನಾಟಕ ಪರಂಪರೆ (ಸಂಪುಟ ೨) ೧೯೯೨, ಪುಟ ೨೧, ಕರ್ನಾಟಕ ಸರ್ಕಾರ ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೨) "ಈತನು ವಿಲಾಸಿಯಾಗಿದ್ದನು" ಎಂಬ ಅಭಿಪ್ರಾಯವೂ ಇದೆ. ನೋಡಿ: ರಾಬರ್ಟ ಸಿವೆಲ್ ಮರೆತು ಹೋಗಿರುವ ಸಾಮ್ರಾಜ್ಯ ವಿಜಯನಗರ (೧೯೯೨) (ಕನ್ನಡಕ್ಕೆ ಅನುವಾದ) ಡಾ। ಸದಾನಂದ ಕನವಳ್ಳಿ ಪುಟ ೬೧.

೩) ಅದೇ, ಪು. ೨೨.

೨. ಧಾರ್ಮಿಕ-ಸಾಹಿತ್ಯಕ:

ವೀರಶೈವ ಸಾಹಿತ್ಯದ ಬೆಳವಣಿಗೆಯ ದೃಷ್ಟಿಯಿಂದ ೧೨ ಹಾಗೂ ೧೫ನೆಯ ಶತಮಾನಗಳು ಗಮನಾರ್ಹವಾಗಿವೆ. "ಬಸವಣ್ಣನವರ ಕಾಲವನ್ನು ವೀರಶೈವ ಸಾಹಿತ್ಯದ ಸುವರ್ಣ ಯುಗವೆಂದು ಕರೆಯಬಹುದಾದರೆ, ಪ್ರೌಢದೇವರಾಯನ ಕಾಲ (೧೪೧೯-೪೬)ಕ್ಕೆ ವೀರಶೈವ ಸಾಹಿತ್ಯದ ಪುನರುಜ್ಜೀವನ ಯುಗವೆಂದು ಹೆಸರಿಸಬಹುದು" ಎನ್ನುತ್ತಾರೆ ಅ.ನ.ಕೃ.[೪] ಅವರ ಈ ಮಾತಿನಲ್ಲಿ ಸತ್ಯಾಂಶವಿಲ್ಲದಿಲ್ಲ. ೧೩-೧೪ನೆಯ ಶತಮಾನಗಳಲ್ಲಿ ವೀರಶೈವ ಸಾಹಿತ್ಯ ವಿಶೇಷವಾಗಿ ಬೆಳೆಯಲಿಲ್ಲ. ಅದಕ್ಕೆ ರಾಜಾಶ್ರಯ ಇದ್ದಿರಲಿಲ್ಲವೆಂಬುದು ಕಾರಣವಾಗಲಾರದು. 'ಜನಬದುಕಬೇಕೆಂಬ' ಗುರಿಯನ್ನು ಹೊಂದಿದ ಅಂದಿನ ಹರಿಹರ-ರಾಘವಾಂಕರ ಸಾಹಿತ್ಯ ನಿರ್ಮಾಣಕ್ಕೆ ಅದು ಬೇಕಾಗಿಯೂ ಇರಲಿಲ್ಲ. ಹೀಗಾಗಿ ೧೪ನೆಯ ಶತಮಾನದಲ್ಲಿ ವೀರಶೈವ ಸಾಹಿತ್ಯ ವಿಪುಲವಾಗಿ ಮೂಡಿ ಬರದಿರಲು ರಾಜಾಶ್ರಯ ದೊರೆಯದೇ ಇದ್ದುದು ಕಾಲಣವಾಗಲಾರದು. ಅದ್ದರಿಂದ ಇಲ್ಲಿ ಅದು ಬೆಳೆಯದೇ ಇದ್ದುದಕ್ಕೆ ಅಂದಿನ ಹಾಗೂ ಹಿಂದಿನ ಸಾಮಾಜಿಕ-ಧಾರ್ಮಿಕ-ರಾಜಕೀಯ ಸ್ಥಿತಿಗತಿಯನ್ನು ಅವಲಂಭಿಸಿದ್ದು ಕಂಡುಬರುತ್ತದೆ.

ಬಸವಣ್ಣನವರ ಜೀವನದ ಕೊನೆಯ ದಿನಗಳಲ್ಲಿ ಕಲ್ಯಾಣದಲ್ಲಿ ಕ್ಷೋಭೆಯುಂಟಾಯಿತು. ಇದರಿಂದಾಗಿ ವೈದಿಕ, ಜೈನ, ಶೈವ ಶಾಸ್ತ್ರರ ಪ್ರಾಬಲ್ಯ ಹೆಚ್ಚಾಗಿ; ಸಂಪ್ರದಾಯಸ್ಥ ಶೈವ ಹಾಗೂ ವಾಮಾಚಾರಕ್ಕಿಳಿದ ಶಾಸ್ತ್ರರಿಂದ ಶರಣರ ವಿರುದ್ಧ ಪ್ರತಿಭಟನೆಗಳು ನಡೆದುವು. ಶರಣ ಮಾರ್ಗದರ್ಶನವು ಇದ್ದಕ್ಕಿದಂತೆ ಇಲ್ಲವಾದಾಗ ಅಂದಿನ ಸಾಮಾಜಿಕ ಜೀವನವೇ ಅಸ್ತವ್ಯಸ್ತಗೊಂಡಿತು. ೧೪ನೆಯ ಶತಮಾನಕ್ಕೆ ಪೂರ್ವಭಾವಿಯಾಗಿದ್ದ ಕಾಲಾವಧಿಯಲ್ಲಿ ಧಾರ್ಮಿಕ ಹಾಗೂ ಸಾಮಾಜಿಕ ರಂಗದಲ್ಲಿ ಮಂಕು ಕವಿದುದು ಸ್ಪಷ್ಟವಾಗಿ ಕಾಣಸುತ್ತದೆ. ಈ ಬಗೆಯ ಅನ್ಯಮತಗಳ ಪ್ರತಿಭಟನೆ, ಉಭಯ ಸಂಕಟದಲ್ಲಿರುವ ಸಾಮಾಜಿಕ ಸ್ಥಿತಿ ಒಂದು ರೀತಿಯದಾದರೆ ರಾಜಕೀಯ ರಂಗದಲ್ಲಿ ಉಂಟಾದ ಸ್ಥಿತ್ಯಂತರಗಳು ಮತ್ತೊಂದು ತರವಾಗಿದ್ದವು. ಕ್ರಿ.ಶ. ೧೨೯೪ರ ಹೊತ್ತಿಗೆ ಆರಂಭವಾದ ಅಲ್ಲಾವುದ್ದೀನ ಖಿಲ್ಜಿಯ ದಾಳಿ, ಅನಂತರದ ಮಲೀಕ ಕಾಫರನ ದಾಳಿಯ ಪರಿಣಾಮವಾಗಿ ಕ್ರಿ.ಶ. ೧೩೩೫ರ ಹೊತ್ತಿಗೆ ದಕ್ಷಿಣಭಾರತವೂ ಮಹಮ್ಮದಿಯರ ಆಳ್ವಿಕೆಗೆ ಒಳಪಡುವಂತಾಯಿತು. ಮಹಮ್ಮದ ತುಘಲಕನು ೧೩೨೬ ರಲ್ಲಿ ತನ್ನ ರಾಜಧಾನಿಯನ್ನು ದಿಲ್ಲಿಯಿಂದ ದೇವಗಿರಿಗೆ ಸ್ಥಳಾಂತರಿಸಿದಾಗ ದಕ್ಷಿಣ ಭಾರತವೇ ತಲ್ಲಣಗೊಂಡಿತು. ಹೀಗೆ ಹಿಂದೂಗಳ ಜೀವನವೇ ಗಂಡಾಂತರಕ್ಕೆ ಒಳಗಾದ ಈ ಅವಧಿಯಲ್ಲಿ ಸಾಹಿತ್ಯ ನಿರ್ಮಾಣ ಅಸಾಧ್ಯವಾಗಿತ್ತು.

ಹದಿನಾಲ್ಕನೆಯ ಶತಮಾನ ಅಂದರೆ ಕ್ರಿ.ಶ. ೧೩೩೬ ರಲ್ಲಿ, ಆಧ್ಯಾತ್ಮಿಕ ಹಿನ್ನೆಲೆಯಲ್ಲಿ ಸ್ಥಾಪನೆಗೊಂಡ, ವಿಜಯನಗರದ ಅರಸರಿಂದಾಗಿ, ದಕ್ಷಿಣ ಭಾರತದಲ್ಲಿ ಹೊಸ ಮನ್ವಂತರವೇ ಆರಂಭವಾಯಿತು. ಈ ಸಾಮ್ರಾಜ್ಯದ ಅರಸರು ವಿದ್ಯಾಭಿಮಾನಿಗಳೂ, ಉಜ್ವಲ ಶಿವಭಕ್ತರೂ, ಪರಧರ್ಮ ಸಹಿಷ್ಣುಗಳೂ ಆಗಿದ್ದರು. ಅಂತೆಯೇ ಅವರು ಅಂದಿನ ಜನಜೀವನದ ಸರ್ವಾಂಗೀಣ ಅಭಿವೃದ್ಧಿಗೂ ಶ್ರಮಿಸಿದ್ದು ಗಮನಾರ್ಹ.

ಈ ಕಾಲಾವಧಿಯ ವೀರಶೈವ ಕವಿಗಳು ಮಾತ್ರ ರಾಜಾಶ್ರಯಕ್ಕಾಗಿ ಕಾತರಿಸದೆ ಸ್ವತಂತ್ರವಾಗಿ ಬೆಳೆದು ಸಾಹಿತ್ಯ ಸೇವೆಗೆ ಕಂಕಣಬದ್ಧರಾದರು. "ನಾಲಿಗೆಯನೊಲ್ಲು ಮಾರಿದನೀಶಂಗೆ" ಎಂದು ಉಗ್ಗಡಿಸಿದ ಹರಿಹರನ ಆ ಆದರ್ಶ ಪರಂಪರೆಯನ್ನೇ ಉಳಿದೆಲ್ಲ ಕವಿಗಳು ಪಾಲಿಸಿದರು. ಈ ಶತಮಾನದಲ್ಲಿ ಬಾಳಿದ ವೀರಶೈವ ಕವಿಗಳ ಹಾಗೂ ಅವರು ರಚಿಸಿದ ಕೃತಿಗಳ ಹೆಸರುಗಳು ಇಂತಿವೆ. ೧) ಶಿವಕವಿದೇವ ೨) ಗುರುದೇವ ೩) ಸದಾಶಿವ ೪) ಭೀಮಕವಿ ೫) ಪದ್ಮಣಾಂಕ ೬) ನೀಲಕಂಠ ಶಿವಾಚಾರ್ಯ ೭) ಮಗ್ಗೆಯ ಮಾಯಿದೇವ.

---

೪) ಅ.ನ. ಕೃಷ್ಣರಾಯ ೧೯೪೧ "ವೀರಶೈವ ಸಾಹಿತ್ಯ ಸಮೀಕ್ಷೆ" ಪುಟ ೨೬.

೧) ಶಿವಕವಿದೇವ (೧೩೪೦)

ಈ ಕಾಲಾವಧಿಯ ವೀರಶೈವ ಕವಿಗಳಲ್ಲಿ ಶಿವದೇವನನ್ನೇ ಪ್ರಥಮ ಕವಿಯನ್ನಾಗಿ ಪರಿಗಣಿಸಬೇಕಾಗುತ್ತದೆ. ಏಕೆಂದರೆ ಈತ ಬಸವಪುರಾಣದ ಕರ್ತೃ ಭೀಮ ಕವಿಯ ತಂದೆ. ಈತನ ಕಾಲವು ಸು.೧೩೪೦ ಎಂದು ಊಹಿಸಲಾಗಿದೆ. ಶಿವಕವಿದೇವನ ಕೃತಿಗಳು: ಬಸವಕಥಾ ಬಸವಪುರಾಣ.

೨) ಗುರುದೇವ (೧೩೫೦)

ಗುರುದೇವನು ೧೩೫೦ರಲ್ಲಿ ಬಾಳಿದವ. ಈತನು 'ವೀರಶೈವಾಚಾರ ಪ್ರದೀಪಿಕೆ' ಎಂಬ ಸಂಸ್ಕೃತ ಗ್ರಂಥದಲ್ಲಿ ತನ್ನ ವಂಶಪರಂಪರೆಯನ್ನು ಹೇಳಿಕೊಳ್ಳುತ್ತಾನೆ. ಗುರುದೇವನು ಸು. ೧೧೬೦ ರಲ್ಲಿದ್ದ ಮಲ್ಲಿಕಾರ್ಜುನ ಪಂಡಿತಾರಾಧ್ಯನಿಂದ ಎಳನೆಯ ತಲೆಯವನೆಂದು ತಿಳಿದು ಬರುತ್ತದೆ. ಈತನ ಸ್ಥಳದ ಬಗ್ಗೆ ಗೊತ್ತಾಗಿಲ್ಲ.

ಗುರುದೇವನ ಕೃತಿಗಳು: ಮಹಿಮ್ನ ಸ್ತೋತ್ರ, ಮಲ್ಹಣ ಸ್ತೋತ್ರ, ಅನಾಮಯಸ್ತೋತ್ರ, ಮಲೆಯರಾಜಸ್ತೋತ್ರ ಹಾಗೂ ಭೃಂಗಿಸ್ತವ - ಇವುಗಳ ಕನ್ನಡ ಟೀಕೆ.

೩) ಸದಾಶಿವ (೧೩೫೦)

ಸದಾಶಿವನೆಂಬ ಕವಿಯು ೧೩೫೦ರ ಸುಮಾರಿಗೆ ಬಾಳಿದ ಸಂಗತಿ ತಿಳಿದು ಬರುತ್ತದೆ . ಈ ಕವಿಯ ಹೆಸರು, ಊರುಗಳ ಬಗೆಗೆ ಹೆಚ್ಚೇನೂ ತಿಳಿದಿಲ್ಲ.

ಸದಾಶಿವನ ಕೃತಿಗಳು: ಸಾನಂದಗಣೇಶ್ವರನ ರಗಳೆ.

೪) ಭೀಮಕವಿ (೧೪೦೦)

ಮಹಾಕವಿಯಾದ ಈತನು ಕ್ರಿ. ಶ. ೧೩೬೯ರಲ್ಲಿ ಇದ್ದನೆಂಬುದು ಬಸವಪುರಾಣದ[೫] ೬೦ನೆಯ ಸಂಧಿಯಲ್ಲಿ ಖಚಿತವಾಗಿ ತಿಳಿದು ಬರುತ್ತದೆ. ಈತ ಸಿದ್ಧವಟ ಪುರವಾಸಿ. ಆಂಧ್ರ ಪ್ರದೇಶದ ಶಿವದೇವನ ಮಗ.

ಭೀಮಕವಿಯ ಕೃತಿಗಳು: ಭೀಮಕವೀಶ್ವರ ರಗಳೆ, ಭೃಂಗಿದಂಡಕ, ಬಸವಪುರಾಣ.

೫) ಪದ್ಮಣಾಂಕ (೧೪೦೦)

ಪದ್ಮಣಾಂಕನು ೧೩೮೫ ರಲ್ಲಿ ಬಾಳಿದವನಾಗಿದ್ದು, ತನ್ನ ಕೃತಿಯಾದ 'ಪದ್ಮರಾಜ ಪುರಾಣ'ದಲ್ಲಿ ವಂಶ ಪರಂಪರೆಯನ್ನು ನಿರೂಪಿಸುತ್ತಾನೆ. ಈತ ೧೪ನೆಯ ಶತಮಾನದ ಉತ್ತರಾರ್ಧದಲ್ಲಿ ಕೃತಿ ರಚನೆಗೈದು ೧೫ನೆಯ ಶತಮಾನದ ಪೂರ್ವಾರ್ಧದಲಿಯೂ ಜೀವಿಸಿದುದಾಗಿ ತಿಳಿದುಬಂದಿದೆ. ಈತ ಬೇಲೂರಿನಲ್ಲಿ ಬಾಳಿದವ. ಕೃತಿ: ಪದ್ಮರಾಜಪುರಾಣ.

---

೫) "ಕೋವಿದರು ಕೇಳ್ವೊಳ್ಳಿತೆನಲುಡು
ದೇವನಿಧಿನಯನೇಂದುಸಂಖ್ಯೆಗ
ಳೋವಿ ಶಕವರುಷಂಕಳಾಗಲು ಸೌಮ್ಯವತ್ಸರದ
ಶ್ರಾವಣ ಬಹುಳ ಪಕ್ಷ ದಶಮೀ
ಜೀವವಾರದೊಳಾದಿ ವೃಷಭೇಂ
ದ್ರಾವತಾರದ ಬಸವಚರಿತೆ ಸಮಾಪ್ತವಾಯಿತ್ತು."
ಬಸವ ಪುರಾಣ (೧೯೬೧) (ಸಂ) ಡಾ. ಆರ್.ಸಿ. ಹಿರೇಮಠ, ಸಂಧಿ ೬೦, ಪದ್ಯ ೯೨.

೬) ನೀಲಕಂಠ ಶಿವಾಚಾರ್ಯ (೧೪೦೦)

ನೀಲಕಂಠ ಶಿವಾಚಾರ್ಯನು ಕ್ರಿ.ಶ. ೧೪೦೦ರಲ್ಲಿ ಇದ್ದನೆಂದು ಗೊತ್ತಾಗುತ್ತದೆ. ಈತನ ತಂದೆ ಮಲ್ಲಯ್ಯದೇವ, ತಾಯಿ ಚನ್ನಮಾಂಬೆ. ಈತನ ಊರು ಯಾವುದೆಂಬುದು ತಿಳಿಯದು. ಕೃತಿ: ಕ್ರಿಯಾಸಾರ.

ಈ ಎಲ್ಲ ಸಮಕಾಲೀನಕವಿ ಹಾಗೂ ಶಾಸ್ತ್ರರಚಕರಲ್ಲಿ ಮಗ್ಗೆಯ ಮಾಯಿದೇವ ಕನ್ನಡ ಹಾಗೂ ಸಂಸ್ಕೃತ ಉಭಯಭಾಷೆಗಳಲ್ಲಿ ವೀರಶೈವ ತತ್ತ್ವ ಶಾಸ್ತ್ರಕ್ಕೆ ಗಮನಾರ್ಹಕೊಡುಗೆ ನೀಡಿದ್ದಾನೆ. ಮಾಯಿದೇವನ ಜನ್ಮಸ್ಥಳ, ಕಾಲ, ಗುರುವಂಶಪರಂಪರೆ ಮೊದಲಾದ ವಿಷಯಗಳನ್ನು ಚಾರಿತ್ರಿಕ ವಿಭಾಗದಲ್ಲಿ ವಿವೇಚಿಸಲಾಗಿದೆ. ಈತನ ಕೃತಿಗಳ ವಿವರಣೆಯನ್ನು ಐದನೆಯ ಅಧ್ಯಾಯದಲ್ಲಿ ಅಳವಡಿಸಲಾಗಿದೆ.

೩. ಚಾರಿತ್ರಿಕ ವಿವೇಚನೆ :

ವೀರಶೈವ ತತ್ತ್ವಜ್ಞಾನ ನಿರೂಪಣೆಯಲ್ಲಿ ಮಗ್ಗೆಯ ಮಾಯಿದೇವನಿಗೆ ಸ್ವತಂತ್ರವಾದ ಒಂದು ವ್ಯಕ್ತಿತ್ವವಿದೆ. ಈತನಿಗೆ 'ಮಗ್ಗೆಯ ಮಾಯಿದೇವ' 'ಕಲ್ಯಾಣದ ಮಾಯಿದೇವ' 'ಮಗ್ಗಿ ಮಾಯಿದೇವ' ಎಂಬ ಮುಂತಾದ ನಾಮಾಂತರಗಳಿವೆ. ಈತನಿಗೆ ಸಂಬಂಧಿಸಿದ ಎಲ್ಲ ಕೃತಿಗಳನ್ನು ಪರಿಶೀಲಿಸಲಾಗಿ 'ಮಗ್ಗೆಯ', 'ಮೊಗ್ಗೆಯ' ಎಂಬ ಪದಗಳ ಬಳಕೆಯಬಾಹುಳ್ಯ ಅವುಗಳಲ್ಲಿ ಕಂಡು ಬರುತ್ತದೆ. ಇವುಗಳಲ್ಲಿ ನಾವು ಯಾವುದನ್ನಾದರೂ ಬಳಸಿಕೊಳ್ಳಬಹುದು. ಏಕೆಂದರೆ ಮಾಯಿದೇವನ ಸಾಹಿತ್ಯದಲ್ಲಿ ಈ ಬಗೆಗೆ ಎಲ್ಲಿಯೂ ಖಚಿತವಾಗಿ ಉಲ್ಲೇಖವಿಲ್ಲ.

ಮಾಯಿದೇವನ ಅಂಕಿತನಾಮ ಕಲ್ಯಾಣದ :

ಮಾಯಿದೇವನನ್ನು ಪರಿಚಯಿಸುವ ಸಂದರ್ಭದಲ್ಲಿ ಬಹಳ ಜನ 'ಕಲ್ಯಾಣದ' ಎಂಬ ಉಪನಾಮ ಈತನಿಗಿರುವುದಾಗಿ ಹೇಳಿದ್ದಾರೆ. ಡಾ: ಡಿ.ವ್ಹಿ. ಪುರಾಣಿಕ ಅವರೂ ಸಹ 'ಮಾಯಿದೇವ' ಇದು ಅಂಕಿತನಾಮ ; 'ಕಲ್ಯಾಣದ' ಎಂಬುದು ಅನ್ವರ್ಥಕನಾಮ ಎನ್ನುತ್ತಾರೆ. ಆದರೆ ಮಾಯಿದೇವನು 'ಕಲ್ಯಾಣದ' ಎಂಬುದು, ಅನ್ವರ್ಥಕವಾಗಿರದೆ ಅಂಕಿತ ಅಥವಾ ಮೂಲನಾಮವಾಗಿರುವುದಾಗಿ ಶಿವಾನುಭವ ಸೂತ್ರದ ಪ್ರಥಮಾಧಿಕರಣದ ವಂಶವರ್ಣನೆಯಲ್ಲಿ ಸ್ವತ: ಹೀಗೆ ಹೇಳಿಕೊಂಡಿದ್ದಾನೆ :

ಏತಸ್ಯ ಸಂಗಮೇಶಾರ್ಯವರ್ಯಸ್ಯಾಯಂ ತನೊಭವಃ ।
ನಾಮ್ನಾ ಕಲ್ಯಾಣದಃ ಶ್ರೀಮನ್ಮಾಯಿದೇವ ಇತಿಸ್ಥಿತಃ ॥[೭]

ಎಂದರೆ ಶ್ರೀ ಸಂಗಮೇಶ್ವರ ಗುರುವಿನಿಂದ 'ಕಲ್ಯಾಣದ' ಎಂಬ ಹೆಸರುಳ್ಳ ಮಗ ಹುಟ್ಟಿದ. ಆತನೆ ಮಾಯಿದೇವನೆಂಬ ಹೆಸರಿನಿಂದಲೂ ಪ್ರಸಿದ್ಧನಾದ. ಹೀಗೆ ಮಾಯಿದೇವನು ತನ್ನ ಮೂಲನಾಮ 'ಕಲ್ಯಾಣದ' ಎಂದು ತಾನೇ ಹೇಳಿಕೊಂಡಿದ್ದಾನೆ. ಈ ಸಂದರ್ಭದಲ್ಲಿ ಡಾ: ಡಿ.ವ್ಹಿ. ಪುರಾಣಿಕ ಅವರ ಹೇಳಿಕೆ ಸಮಂಜಸವಾದುದಲ್ಲ.

ಮಾಯಿದೇವನು ತನ್ನ ಉಭಯನಾಮಗಳ ನಿರ್ವಚನ ಕುರಿತು ಹೀಗೆ ಹೇಳಿದ್ದಾನೆ.

ಮಾಹೇಶಾನಾಂ ಸ್ವಭಕ್ತಾನಾಂ ಕಲ್ಯಾಣಪದಕಾಂಕ್ಷಿಣಾಂ ।
ದದಾತಿ ನಿತ್ಯಕಲ್ಯಾಣಂ ತೇನ ಕಲ್ಯಾಣದಃ ಶ್ರುತಃ ॥[೮]

---

೭. ಶಿವಾನುಭವಸೂತ್ರಂ ಪ್ರಥಮಾಧಿಕರಣ. ಶ್ಲೋಕ ೧೮

೮. ಅದೇ - ಶ್ಲೋಕ ೧೯

ಎಂದರೆ, ಕಲ್ಯಾಣ ಪದಕಾಂಕ್ಷಿಗಳಾದ ಮಾಹೇಶ್ವರ ಭಕ್ತರಿಗೆ ನಿತ್ಯ ಕಲ್ಯಾಣನವನ್ನುಂಟು ಮಾಡುವುದರಿಂದ 'ಕಲ್ಯಾಣದ' ಎಂಬ ಹೆಸರಿನಿಂದ ಪ್ರಸಿದ್ಧನಾದನು ಎಂದು ಇಲ್ಲಿ ತನ್ನ ಮೂಲನಾಮದ ಅರ್ಥವ್ಯಾಪ್ತಿಯನ್ನು ಪ್ರಸ್ತಾಪಿಸುತ್ತಾನೆ. ಮಾಯಿದೇವ ಎಂಬ ಪರ್ಯಾಯನಾಮದ ಬಗೆಗೆ ಹೀಗೆ ಹೇಳಿದ್ದುಂಟು:

ಮಾಯಯಾ ಕಥ್ಯತೇ ಮಾಯೀಮಾಯೀ ವಿಷ್ಣುರಿತಿ ಸ್ಮೃತಃ ।
ಮಾಯಿನೋ ಯಃ ಪರೋ ದೇವೋ ಮಾಯಿದೇವಸ್ಸ ಉಚ್ಯತೇ ॥[೮]

ಮಾಯಿಯೆಂದರೆ ವಿಷ್ಣು. ಮಾಯಿಯಾದ ವಿಷ್ಣುವಿಗಿಂತಲೂ ಶ್ರೇಷ್ಠನಾದವ ಶಿವ. ಆದುದರಿಂದ ಮಾಯಿದೇವನೆಂಬ ಶಿವಪರ್ಯಾಯ ನಾಮವೂ ಆತನಿಗಿದ್ದಿತು ಎಂದು ಹೇಳಿದ್ದಾನೆ. ಶ್ಲೋಕದ ಕೊನೆಯಲ್ಲಿ ಬರುವ "ಮಾಯಿದೇವಃ+ಸಃ+ಉಚ್ಯತೇ" ಎಂಬ ಪದಸಮೂಹದಿಂದಲೂ 'ಮಾಯಿದೇವ' ಎಂಬ ಪದ ಪರ್ಯಾಯ ಸೂಚಕವಾಗಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ.

ತಸ್ಮಾತ್ಕ 'ಲ್ಯಾಣದಃ ಶ್ರೀಮಾನ್ ಮಾಯಿದೇವಶ್ಶಿವಃ ಸ್ವಯಂ ।
ತಸ್ಮಾಸ್ಯ ಪರಮೇಶಸ್ಯ ನಾಮಾಂಕೋಽಯಂ ಶಿವಾತ್ಮಕಃ ॥[೯]

ಕಲ್ಯಾಣದನೆಂಬ ಹೆಸರಿನ ಅವನು ಶಿವಪರ್ಯಾಯ ನಾಮದ ಮಾಯಿದೇವನೆಂಬ ಹೆಸರಿಗೆ ತಕ್ಕಂತೆ ಶಿವಸ್ವರೂಪಿಯಾಗಿದ್ದ. 'ತಸ್ಮಾತ್ + ಕಲ್ಯಾಣದಃ + ಶ್ರೀಮನ್‌ಮಾಯಿದೇವಃ' ಎಂಬ ಈ ಪದಗಳೂ ಇಲ್ಲಿ ಗಮನಾರ್ಹವಾಗಿವೆ.

ಸತ್ಯಶುದ್ಧಶಿವಾದ್ವೈತವಿದ್ಯಾತಂತ್ರ ಸ್ವತಂತ್ರಧೀಃ ।
ಕಲ್ಯಾಣದಾಹ್ವಯಃ ಶ್ರೀಮಾನ್ ಮಾಯಿದೇವಮಹಾಪ್ರಭುಃ ॥[೧೦]

'ಕಲ್ಯಾಣದ' ಎಂದು ನಾಮಾಂಕಿತನಾದ ಮಾಯಿದೇವ ಪ್ರಭುವು, ಸತ್ಯಶುದ್ಧ ಶಿವಾದ್ವೈತ ಸಿದ್ಧಾಂತದಲ್ಲಿ ಸ್ವತಂತ್ರ ಬುದ್ಧಿಶಕ್ತಿಯಿಂದ ಪ್ರತಿಭಾಶಾಲಿಯಾಗಿದ್ದನು.

ಈ ಶ್ಲೋಕಗಳ ವಿವರಣೆಯಿಂದ ಮಾಯಿದೇವನ ಮೂಲನಾಮ ಅಥವಾ ಅಂಕಿತನಾಮವು, 'ಕಲ್ಯಾಣದ' ಎಂಬುದು ಸ್ಪಷ್ಟವಾಗುತ್ತದೆ.

ಇಂಥ ಮಾಯಿದೇವನು ವೀರಶೈವ ಮತಾವಲಂಬಿಯಾಗಿದ್ದು, ಸ್ವಮತದ ಆತ್ಮವಿದ್ಯೆಯಲ್ಲಿ ನಿಷ್ಣಾತನಾಗಿದ್ದ. ಕುಮತವಿಭೇದಿಯಾಗಿ, ಷಟ್‌ಸ್ಥಲಬ್ರಹ್ಮವಾದಿಯಾಗಿ, ಗುರುಚರಣ ನಿಜ ಆರಾಧಕನಾಗಿದ್ದ. ಅಲ್ಲದೆ ಶಿವಮಾರ್ಗಾವರ್ತಿಯಾಗಿ ಅನಾದಿ ಮುಕ್ತಸ್ವರೂಪನಾಗಿದ್ದುದರಿಂದ ಸರ್ವೋತ್ಕೃಷ್ಟನೆನಿಸಿದ್ದನು. ಈ ಎಲ್ಲ ಗುಣಗಳನ್ನು ತಾನೇ ಹೀಗೆ ಹೇಳಿಕೊಂಡದ್ದುಂಟು.

೮. ಅದೇ - ಶ್ಲೋಕ ೨೦

೯. ಶಿವಾನುಭವ ಸೂತ್ರ - ಪ್ರಥಮಾಧಿಕರಣ - ಶ್ಲೋಕ೨೧

೧೦. ಅದೇ ಶ್ಲೋಕ - ೨೨

ಜಯತಿ ಪರಮಶೈವಃ ಸ್ವಾತ್ಮವಿದ್ಯಾಧಿದೈವಃ
ಕುಮತಮತವಿಭೇದೀ ಷಟ್‌ಸ್ಥಲಬ್ರಹ್ಮವಾದೀ ।
ಗುರುಪದನಿಜಭಕ್ತಃ ಕೇವಲೋಽನಾದಿಮುಕ್ತಃ
ಸುಚರಿತಶಿವವರ್ತ್ಮಾ ಮಾಯಿದೇವೋ ಮಹಾತ್ಮಾ ॥[೧೧]

ಮಾಯಿದೇವನ ಕಾಲ

ಮಾಯಿದೇವನ ಕಾಲ ಇಂದಿಗೂ ಸಂದಿಗ್ಧವಾಗಿ ಉಳಿದಿದೆ. ಕೆಲವು ಜನ ವಿದ್ವಾಂಸರು ೧೪೩೦ ರಲ್ಲಿ ಈತ ಇದ್ದುದಾಗಿ ಊಹಿಸುತ್ತಾರೆ. ಈ ಊಹೆಗೆ ಕಾರಣವೆಂದರೆ, ಮಾಯಿದೇವ ತನ್ನ ಸಾಹಿತ್ಯದಲ್ಲಿ ಎಲ್ಲಿಯೂ ತಾನು ಬಾಳಿ ಬದುಕಿದ ಕಾಲ ಕುರಿತು ಉಲ್ಲೇಖಿಸಿಲ್ಲ.

ಮಾಯಿದೇವನು ಬಸವಾದಿಪ್ರಮಥರನ್ನು ಶತಕತ್ರಯದಲ್ಲಿ ಮತ್ತು ಪದ್ಮೆಕೋತ್ತರಶತಸ್ಥಲದಲ್ಲಿ ನೆನೆದಿರುವುದರಿಂದ ಈತನ ಕಾಲ ಹನ್ನೆರಡನೆಯ ಶತಮಾನಕ್ಕಿಂತ ಹಿಂದೆ ಹೋಗಲಾರದು.[೧೨] "ಸಕಲಾಗಮಂಗಳಿಗೆ ನೆಲೆಯೆನಿಸಿ ಪ್ರೌಢನಿಂ ಪೂಜೆಯಂ ಕೊಂಡು"[೧೩] ಎಂಬುದಾಗಿ ವಿರೂಪಾಕ್ಷ ಪಂಡಿತ ಹೇಳಿರುವುದರಿಂದ ಈತ ೧೫೮೪ರ ಪೂರ್ವದಲ್ಲಿ ಬದುಕಿದುದು ಖಚಿತ.

ಇದನ್ನೇ ಅವಲಂಬಿಸಿ ಡಾ: ಡಿ.ವ್ಹಿ.ಪುರಾಣಿಕ ಅವರು ಮಾಯಿದೇವನ ಕಾಲ ೧೪೩೦ ಎಂದು ನಿರ್ಧರಿಸುತ್ತಾರೆ. ಇದನ್ನು ಪುಷ್ಟೀಕರಿಸಲು - ಗುಬ್ಬಿಯ ಮಲ್ಲಣಾರ್ಯ, ತೋಂಟದ ಸಿದ್ಧಲಿಂಗ ಶಿವಯೋಗಿ, ಸಿದ್ಧನಂಜೇಶ, ವಿರೂಪಾಕ್ಷ ಪಂಡಿತ, ಶಾಂತಲಿಂಗದೇಶಿಕ - ಇವರೆಲ್ಲರ ಅಭಿಪ್ರಾಯಗಳನ್ನು ಉಲ್ಲೇಖಿಸಿ, ಕವಿಚರಿತೆಕಾರರ ಅಭಿಪ್ರಾಯವನ್ನು ಅನುಮೋದಿಸಿದ್ದಾರೆ.[೧೪] ಆದರೆ ಶ್ರೀ ಎಚ್. ದೇವೀರಪ್ಪನವರು ಕೈಕೊಂಡ ಮಾಯಿದೇವನ ಕಾಲ ನಿರ್ಣಯ, ಅವರಿಗೆ ತೊಡಕಿನದಾಗಿ ಕಂಡಂತಿದೆ. ಮಾಯಿದೇವನ ಕಾಲ ಕುರಿತು ಶ್ರೀ ಎಚ್. ದೇವೀರಪ್ಪ ಅವರು ಹೇಳುವುದು ಹೀಗೆ : "ವಿರೂಪಾಕ್ಷ ಪಂಡಿತನು ಹೇಳಿರುವಂತೆ ಮಗ್ಗೆಯ ಮಾಯಿದೇವನು ಪ್ರೌಢದೇವರಾಯನಿಂದ ಪೂಜೆಗೊಂಡುದು ನಿಜ. ಆದರೆ ಯಾವ ಪ್ರೌಢದೇವರಾಯನಲ್ಲಿ? ಒಂದನೆಯ ದೇವರಾಯನಿಗೂ ಪ್ರೌಢದೇವರಾಯನೆಂದು ಕರೆಯುತ್ತಿದ್ದರು. ಮಗ್ಗೆಯ ಮಾಯಿದೇವನ ವಿಶೇಷಾರ್ಥ ಪ್ರಕಾಶಿಕೆಗೆ ಟೀಕೆಯನ್ನು ಬರೆದ ಉದ್ಭನೀಶನೇ ಕ್ರಿ. ಶ. ೧೪೫೦ರಲ್ಲಿದ್ದನೆಂದಾದರೆ ಮಾಯಿದೇವ ಆ ಕಾಲಕ್ಕೂ ಹಿಂದಿನವನಾಗಿರಬೇಕಷ್ಟೆ. ಮೂಲಗ್ರಂಥ ಕರ್ತೃವಿನ ಕಾಲಕ್ಕೂ ವ್ಯಾಖ್ಯಾನಕಾರನ ಕಾಲಕ್ಕೂ ಸುಮಾರು ಐವತ್ತು ವರ್ಷಗಳಷ್ಟಾದರೂ ಅಂತರವಿರಬೇಕು ಎಂದು ಸಾಮಾನ್ಯವಾಗಿ ಹೇಳಬಹುದು. ಚೆನ್ನಬಸವ ಪುರಾಣದಲ್ಲಿ ಹೇಳಿರುವುದು ನಿಜವಾಗಿದ್ದರೆ ಮಾಯಿದೇವನು ಒಂದನೆಯ ದೇವರಾಯನಿಂದ "ಪೂಜೆಯಂ ಕೈಕೊಂಡು"ದು. ಒಂದನೆಯ ಪ್ರೌಢದೇವರಾಯ ರಾಜ್ಯವಾಳಿದುದು ಕ್ರಿ. ಶ. ೧೪೦೬ ರಿಂದ ೧೪೨೨ರ ವರೆಗೆ. ಸುಮಾರು ೧೪೧೦ರಲ್ಲಿ ಆತನು ಮಗ್ಗೆಯ ಮಾಯಿದೇವನನ್ನು ಅರಮನೆಗೆ ಬರಮಾಡಿಕೊಂಡು ಆರಾಧಿಸಿರಬೇಕು. ಅಷ್ಟು ಹೊತ್ತಿಗೆ ಮಗ್ಗೆಯ ಮಾಯಿದೇವನು ಅನೇಕ ಕನ್ನಡ ಸಂಸ್ಕೃತ ಗ್ರಂಥಗಳನ್ನು ರಚಿಸಿ ಪ್ರಸಿದ್ಧನಾಗಿರಬೇಕಲ್ಲದೆ ಪರಮಪೂಜ್ಯ ವ್ಯಕ್ತಿಯಾಗಿರಬೇಕು. ಆದುದರಿಂದ ಆತನ

---

೧೧. ಶಿವಾನುಭವಸೂತ್ರಂ, ಅಧಿಕರಣ ೧, ಶ್ಲೋಕ ೨೩.

೧೨. ಶಿವಾಧವ ಶತಕ ಪದ್ಯ ೨,೩,೪

೧೩. ಚನ್ನಬಸವ ಪುರಾಣ, ಸಂಧಿ-೬೩-ಪದ್ಯ-೩೮

೧೪. ಡಾ. ಡಿ.ವ್ಹಿ. ಪುರಾಣಿಕ (೧೯೯೨) ಮಗ್ಗೆಯ ಮಾಯಿದೇವ: ಒಂದು ಅಧ್ಯಯನ ಬೆರಳಚ್ಚು ಪ್ರತಿ ಪುಟ -೨೪

ಕಾಲಾವಧಿಯು ಹದಿನಾಲ್ಕನೆಯ ಶತಮಾನದ ಉತ್ತರಾರ್ಧ ಮತ್ತು ಹದಿನೈದನೆಯ ಶತಮಾನದ ಪ್ರಥಮಪಾದ ಎಂದು ತೀರ್ಮಾನಿಸಬೇಕಾಗುತ್ತದೆ. ಆತನ ಗ್ರಂಥ ರಚನಾ ಕಾರ್ಯ ಹದಿನಾಲ್ಕನೆಯ ಶತಮಾನದಲ್ಲಿಯೇ ಮುಗಿದಿರಬೇಕು."[೧೫]

ಮಗ್ಗೆಯ ಮಾಯಿದೇವನ ವಿಶೇಷಾರ್ಥ ಪ್ರಕಾಶಿಕೆಗೆ ಟೀಕೆ ಬರೆದ ಉದ್ಭನೀಶನ ಕಾಲ ನಿರ್ಣಯಕ್ಕೆ ಶ್ರೀ ಎಚ್. ದೇವೀರಪ್ಪ ಅವರು 'ಶಿವತತ್ವ ಚಿಂತಾಮಣಿ'ಯನ್ನು ಅವಲಂಬಿಸಿದ್ದಾರೆ. ಲಕ್ಕಣ್ಣ ದಂಡೇಶ ನೂತನ ಗಣಂಗಳಲ್ಲಿಯ ಹಲವರ ಹೆಸರು, ಸ್ಥಳ ಹಾಗೂ ಕೈಕೊಂಡ ಕಾಯಕಗಳನ್ನು ನಿರೂಪಿಸುವಾಗ ಗೊರಗೊಡ ಬೊಪ್ಪಯ್ಯನನ್ನು ಸ್ಮರಿಸುತ್ತಾನೆ. ಈತ ಉದ್ಭನೀಶನ ಗುರುವಿನ ತಂದೆ. ಗೊರಗೊಡ ಬೊಪ್ಪಯ್ಯನ ಕಾಲ ಕ್ರಿ.ಶ. ೧೪೦೦ ಎಂದಾಗುತ್ತದೆ. ಹೀಗಾಗಿ ಅವನ ಮಗ ಮಲ್ಲಿಕಾರ್ಜುನ ಹಾಗೂ ಉದ್ಭನೀಶರು ಸಮಕಾಲೀನರಾಗಿರುತ್ತಾರೆ. ಶಿವತತ್ವ ಚಿಂತಾಮಣಿ ರಚಿತವಾದ ಕಾಲದಲ್ಲೇ (೧೪೫೦) ಉದ್ಭನೀಶ, ಮಗ್ಗೆಯ ಮಾಯಿದೇವನ ವಿಶೇಷಾರ್ಥಪ್ರಕಾಶಿಕೆಗೆ ಟೀಕೆ ಬರೆದಿರಬೇಕಾದರೆ, ಮಾಯಿದೇವನ ಕಾಲ ಅದಕ್ಕೂ ಹಿಂದೆ ಇದ್ದಿರಬೇಕೆಂಬ ದೇವೀರಪ್ಪ ಅವರ ತೀರ್ಮಾನ ತರ್ಕಬದ್ಧವಾಗಿದೆ. ಹೀಗೆ ಉದ್ಭನೀಶ ಕ್ರಿ.ಶ. ೧೪೫೦ ರಲ್ಲಿದ್ದಿರಬೇಕು, ಕವಿಚರಿತೆಕಾರರು ಹೇಳುವಂತೆ ೧೫೫೦ ರಲ್ಲಿ ಅಲ್ಲ ಎಂಬುದೂ ಖಚಿತ. ಮೇಲಿನ ಅಭಿಪ್ರಾಯವನ್ನು ಪ್ರಶ್ನಿಸಿ ಡಾ। ಡಿ.ವಿ.ಪುರಾಣಿಕ ಹೀಗೆ ಹೇಳುತ್ತಾರೆ :

"ಶ್ರೀ ಎಚ್. ದೇವೀರಪ್ಪ ಅವರು ಹೇಳುವಂತೆ ವಿಶೇಷಾರ್ಥಪ್ರಕಾಶಿಕೆಗೆ ಟೀಕೆಯನ್ನು ಬರೆದ ಉದ್ಭನೀಶನೇ ಕ್ರಿ.ಶ. ೧೪೫೦ ರಲ್ಲಿದ್ದವನೆಂದಾದರೆ, ಮಾಯಿದೇವ ಆ ಕಾಲಕ್ಕೂ ಹಿಂದಿನವನಾಗಿರಬೇಕು. ಮೂಲ ಗ್ರಂಥಕರ್ತೃವಿನ ಕಾಲಕ್ಕೂ ವ್ಯಾಖ್ಯಾನ ಕಾರನ ಕಾಲಕ್ಕೂ ಸುಮಾರು ಐವತ್ತು ವರ್ಷಗಳಷ್ಟಾದರೂ ಅಂತವಿರಬೇಕು, ಎಂದು ಸಾಮಾನ್ಯವಾಗಿ ಹೇಳಬಹುದೆಂಬ ಅವರ ವಾದ ಅನುಮಾನವೇ ಹೊರತು, ಸತ್ಯವಲ್ಲ. ಏಕೆಂದರೆ ಜಕ್ಕಣಾರ್ಯನ ನೂರೊಂದು ಸ್ಥಲಕ್ಕೆ ಅವನ ಸಮಕಾಲೀನನಾದ ಶ್ರೀ ಗಿರೀಂದ್ರನೇ ವ್ಯಾಖ್ಯಾನ ಮಾಡಿದ ನಿದರ್ಶನವಿರುವಾಗ ಐವತ್ತು ವರ್ಷಗಳಷ್ಟಾದರೂ ಅಂತರವಿರಬೇಕೆಂಬುದು ಅವರ ವೈಯಕ್ತಿಕ ಅಭಿಪ್ರಾಯ. ಇದನ್ನು ಗಮನಿಸಿದಾಗ ವೀರಶೈವ ಧರ್ಮಗ್ರಂಥಗಳು ಇನ್ನೂ ರಚನೆಯಾಗುತ್ತಿದ್ದ ಕಾಲದಲ್ಲಿಯೇ ಅವುಗಳಿಗೆ ವ್ಯಾಖ್ಯಾನ ಬರೆಯಬೇಕೆಂಬ ಸತ್ಸಂಪ್ರದಾಯ ಈ ಕಾಲದಲ್ಲಾದುದು ದೇಶಭಾಷೆಯ ಚರಿತ್ರೆಯಲ್ಲಿಯೇ ನೆನೆಯುವಂಥದಾಗಿದೆ. ಎಚ್. ದೇವೀರಪ್ಪನವರು ಹೇಳುವಂತೆ ಉದ್ಭನೀಶನ ಕಾಲವನ್ನು ೧೪೫೦ ಎಂದಿಟ್ಟುಕೊಂಡರೂ ಕೃತಿರಚನೆಯಾಗುತ್ತಿದ್ದಂತೆಯೇ ಅಥವಾ ಕೃತಿರಚನೆಯಾದ ಕೆಲವೇ ವರ್ಷಗಳಲ್ಲಿ ವಿಶೇಷಾರ್ಥಪ್ರಕಾಶಿಕೆಗೆ ಟೀಕೆ ಬರೆದಿರಬಾರದೇಕೆ ? ಉದ್ಭನೀಶನ ಕಾಲ ೧೫೫೦ ರವರೆಗೆ ಹಿಂದೆ ಸರಿಯುತ್ತಿರುವದರಿಂದ ೧೪೫೦ರನಂತರವೂ ಇಲ್ಲವೆ ಮಾಯಿದೇವನ ತರುವಾಯ ಆ ಕಾರ್ಯ ನೆರವೇರಿಯುವ ಸಾಧ್ಯತೆಯಿದೆ."[೧೬]

ಇಲ್ಲಿ ಗಮನಿಸಬೇಕಾದ ಒಂದು ಅಂಶವೆಂದರೆ ಶ್ರೀ ದೇವೀರಪ್ಪ ಅವರ ಅಭಿಪ್ರಾಯ 'ಅನುಮಾನವೇ ಹೊರತು, ಸತ್ಯವಲ್ಲ' ಎಂದು ತೀರ್ಮಾನಿಸಿದ ಡಾ। ಡಿ.ವ್ಹಿ. ಪುರಾಣಿಕ ಅವರು, ಪುನಃ ಅನುಮಾನಗಳನ್ನೇ ಅವಲಂಬಿಸಿರುವುದು ಆಶ್ಚರ್ಯವೆನಿಸುತ್ತದೆ ? ಒಂದು ವೇಳೆ ಆತ ಇರುವಾಗಲೇ ಉದ್ಭನೀಶ ವಿಶೇಷಾರ್ಥ ಪ್ರಕಾಶಿಕೆಗೆ ಟೀಕೆ ಬರೆದಿದ್ದಾನೆಂದರೂ, ಅದರ ಪೂರ್ವ ಭಾಗವಾದ ಶಿವಾನುಭವ ಸೂತ್ರವು ಮಹತ್ವದ್ದೆಂದು ಪರಿಗಣಿತವಾಗಿರುವಾಗ ವಿಶೇಷಾರ್ಥ ಪ್ರಕಾಶಿಕೆಯನ್ನಷ್ಟೇ ಏಕೆ ಉದ್ಭನೀಶ ಆಯ್ದುಕೊಂಡ ? ಕೃತಿಯ ಕರ್ತೃವಿರುವಾಗ ಆ ಕೃತಿಯಲ್ಲಿ ಅವನ ಎಲ್ಲ ತರ್ಕ-ಅನುಭವ-ಪಾಂಡಿತ್ಯ ಮೊದಲಾದವುಗಳು ಕೃತಿಯ ಪ್ರತಿಯೊಂದು ವಿಷಯ ವಿಶ್ಲೇಷಣೆಯಲ್ಲಿ ಅಡಕವಾಗಿರುತ್ತವೆ. ಉದ್ಭನೀಶ ಆಗ ಇದ್ದವನೆಂದು ಭಾವಿಸಿದರೆ ಮಾಯಿದೇವನ ಶಿವಾನುಭವಸೂತ್ರ ಕೃತಿಗೆ ಟೀಕೆ ಬರೆಯಬೇಕಾಗಿತ್ತು. ಏಕೆಂದರೆ

೧೫. ಎಚ್. ದೇವೀರಪ್ಪ (೧೯೭೪) ಲಕ್ಕಣ್ಣದಂಡೇಶನ ಶಿವತತ್ವ ಚಿಂತಾಮಣಿ, ಪು. ೭೬-೭೭.

೧೬. ಡಾ. ಡಿ.ವ್ಹಿ. ಪುರಾಣಿಕ ಬೆರಳಚ್ಚು ಪ್ರತಿ, ಪು. ೨೫,೨೬.

ಶಿವಾನುಭವಸೂತ್ರವು ತತ್ವಬಾಹುಳ್ಯವುಳ್ಳ ಕೃತಿ. ವಿಶೇಷಾರ್ಥಪ್ರಕಾಶಿಕೆಗಿಂತ ಶಿವಾನುಭವಸೂತ್ರಕ್ಕೆನೇ ಟೀಕೆಯ ಅಗತ್ಯ ಅಧಿಕ. ಎರಡೂ ಸಂಸ್ಕೃತಕೃತಿಗಳಾದರೂ ಶಿವಾನುಭಾವಸೂತ್ರದ ಉತ್ತರಭಾಗ ವಿಶೇಷಾರ್ಥಪ್ರಕಾಶಿಕೆ. ಹೀಗಿರುವಾಗ ಮಾಯಿದೇವನ ಜೀವಿತ ಕಾಲದಲ್ಲಿ ಉಜ್ಜನೀಶ ಟೀಕೆ ಬರೆದಿರಲಾರನೆಂದು ಇದರಿಂದ ಸ್ಪಷ್ಟವಾಗುತ್ತದೆ. ಶ್ರೀ ಎಚ್. ದೇವೀರಪ್ಪ ಅವರ ಊಹೆಯೇ ಇಲ್ಲಿ ಗಟ್ಟಿಯಾಗಿ ನಿಲ್ಲುತ್ತದೆ.

ಪುನಃ ಡಾ: ಡಿ.ವ್ಹಿ.ಪುರಾಣಿಕ ಅವರು, ಒಂದನೆಯ ಪ್ರೌಢದೇವರಾಯ ಶಾಸನದಲ್ಲಾಗಲೀ, ಸಾಹಿತ್ಯದಲ್ಲಾಗಲೀ ವೀರಶೈವನೆಬುದಕ್ಕೆ ಆಧಾರಗಳು ಸಿಗುವದಿಲ್ಲ ಎಂದಿದ್ದಾರೆ. ಆದರೆ ಇದೂ ಅವರ ವೈಯಕ್ತಿಕ ಅಭಿಪ್ರಾಯವಾಗಿದೆ. ಏಕೆಂದರೆ ಒಂದನೆಯ ಪ್ರೌಢದೇವರಾಯನೂ ವೀರಶೈವನಾಗಿದ್ದನೆಂಬುದನ್ನು ಈಗಾಗಲೇ ವಿದ್ವಾಂಸರು ನಿರ್ಣಯಿಸಿದ್ದಾಗಿದೆ. ನಿಖರವಾಗಿ ಎಂ. ರಾಮಾರಾವ[೧೭] ಹೇಳಿರುವದು ಇಲ್ಲಿ ಅತ್ಯಂತ ಗಮನಾರ್ಹ.

'After 1410 A.D. we have very little of the Kalamukh Priests it is possible that the Democratic lingayat sect absorbed the Kalamukhas and they practically disappeared from history".

ಡಾ। ಎಂ. ಚಿದಾನಂದಮೂರ್ತಿಗಳೂ ಸಹ ಮೇಲಿನ ಹೇಳಿಕೆಗೆ ಸಮ್ಮತಿಸುತ್ತ "ಅಂದು ಕಾಳಾಮುಖ, ಪಾಶುಪತಗಳಲ್ಲಿ ಪ್ರಬಲ ವ್ಯತ್ಯಾಸಗಳೇನೂ ಇರಲಿಲ್ಲ. ಆ ಉಭಯ ಪಂಥಗಳೂ ವೀರಶೈವದಲ್ಲಿ ಪರಿವರ್ತನೆ ಹೊಂದಿದ ಕಾಲ ಸರಿ, ಸುಮಾರು ೧೪೧೦-೩೦ರಲ್ಲಿ ಅಥವಾ ಅದಕ್ಕೂ ಹಿಂದೆ ಆರಂಭವಾಗಿ ನಿಧಾನವಾಗಿ ಮುಂದುವರೆದಂತೆ ತೋರುತ್ತದೆ"[೧೮] ಎಂದು ತರ್ಕಿಸಿದ್ದಾರೆ. ಈ ಪುರಾವೆಗಳ ಮೇಲಿಂದ ಸಂಗಮ ಮನೆತನದ ಒಂದನೆಯ ಪ್ರೌಢದೇವರಾಯನೂ ವೀರಶೈವನೇ ಆಗಿದ್ದನೆಂಬಲ್ಲಿ ಸಂಶಯವಿಲ್ಲ. ಇದರಿಂದ ಡಾ। ಡಿ.ವ್ಹಿ. ಪುರಾಣಿಕ ಅವರ ಅಭಿಪ್ರಾಯ ನಿರಾಧಾರವೆಂದು ಹೇಳಬೇಕಾಗುತ್ತದೆ. ಶ್ರೀ ಎಚ್ ದೇವೀರಪ್ಪ ತರ್ಕಿಸಿದಂತೆ ಮಾಯಿದೇವನು ಒಂದನೆಯ ಪ್ರೌಢದೇವರಾಯನ ಕಾಲದಲ್ಲಿಯೇ ಪೂಜೆಗೊಂಡುದುದು ಐತಿಹಾಸಿಕ ಸತ್ಯ.

ವಿಷಯ ಸಂಗ್ರಾಹಕರಾದ ಕವಿಚರಿತೆಕಾರರ ಹೇಳಿಕೆಗಿಂತ ಸಂಶೋಧಕರಾದ ಎಚ್. ದೇವೀರಪ್ಪ ಅವರ ಹೇಳಿಕೆ ತೂಕಬದ್ಧವಾಗಿದೆ.

ಶತಕತ್ರಯದ ಪ್ರಸ್ತಾವನೆಯಲ್ಲಿ ವೈ ವಿರೂಪಾಕ್ಷಯ್ಯ ಇದೇ ವಿಷಯವನ್ನು ಚರ್ಚಿಸುತ್ತಾ ಹೀಗೆ ಹೇಳಿದ್ದಾರೆ. "ವಿರುಪಾಕ್ಷ ಪಂಡಿತರು ಪ್ರೌಢರಾಯನು ಆಳಿದಮೇಲೆ ಅರ್ಧಶತಮಾನದ ಕಾಲದಲ್ಲಿ ವಿಜಯನಗರದಲ್ಲಿದ್ದವರಾದ ಕಾರಣ, ಅವರು ಆ ರಾಜ್ಯದ ಸಂಬಂಧದಲ್ಲಿ ಮಾಡಿರುವ ಉಲ್ಲೇಖಗಳು ನಿಜವಾದುವೆಂದು ಹೇಳಲು ಅಭ್ಯಂತರವಿರುವುದಿಲ್ಲ".[೧೯] ಆದ್ದರಿಂದ ವಿರೂಪಕ್ಷಪಂಡಿತ ಅರ್ಧಶತಮಾನ ವಿಜಯನಗರದಲ್ಲಿ ಬದುಕಿದವನಾದುದರಿಂದ ಅವನೇ ಇಲ್ಲಿ ಪ್ರಬಲಸಾಕ್ಷಿಯಾಗಿದ್ದಾನೆ. ಇನ್ನೂ ಒಂದು ಪ್ರಬಲ ಆಧಾರವೆಂದರೆ, ಮಾಯಿದೇವನ ವಂಶವರ್ಣನೆಯ ವೈಖರಿ. ಅಲ್ಲಿ ಮಾಯಿದೇವನು ತನ್ನ ವಂಶವನ್ನು ವರ್ಣಿಸುವಾಗ, 'ಪುತ್ರಃ', 'ಪುತ್ರಃ' ಎಂಬ ಪದಗಳನ್ನು ವಿಶಿಷ್ಟವಾದ ಅರ್ಥದಲ್ಲಿ

---

೧೭. ವೀರಶೈವಸಾಹಿತ್ಯ ಸಮೀಕ್ಷೆ, (೧೯೭೭) ಸಂ: ಸದಾನಂದ ಕನವಳ್ಳಿ, ಪು. ೯-೧೦.

೧೮. ಅದೇ.

೧೯. ಶ್ರೀ ತೋಂಟದ ಸಿದ್ಧಲಿಂಗದೇಶಿಕ ವಿರಚಿತ ಟೀಕೆ ಮೈಸೂರ ಎಲೆಕ್ಟ್ರಿಕಲ್ ಪ್ರೆಸ್, ಪು. ೪. ಹದಿನೈದನೆಯ ಶತಮಾನ, ಲೇ:ವಿ.ಶಿವಾನಂದ.

ಬಳಸಿದ್ದಾನೆ. ಇದೇ ವಂಶಶೈಲಿಯನ್ನು ಗುರುದೇವನ "ವೀರಶೈವಾಚಾರ ಪ್ರದೀಪಿಕೆ" ಹಾಗೂ ಪದ್ಮಣಾಂಕನ "ಪದ್ಮಪುರಾಣ"ದಲ್ಲಿ ಕಾಣುತ್ತೇವೆ. ಇವರಿಬ್ಬರೂ ಕ್ರಮವಾಗಿ ೧೩೫೦ ಹಾಗೂ ೧೩೮೫ರಲ್ಲಿ ಬಾಳಿದವರು.[೨೦] ಆದುದರಿಂದ ಇಲ್ಲಿ ಮಾಯಿದೇವನೂ ಇವರ ಸಮಕಾಲೀನನೆಂಬುದು ನಿಶ್ಚಿತ. ಅಲ್ಲದೆ ಮಾಯಿದೇವನನ್ನು ಒಂದನೆಯ ಪ್ರೌಢದೇವರಾಯನು ಬರಮಾಡಿಕೊಂಡಾಗ ಆತ ಪ್ರಬುದ್ಧನಾಗಿರಬೇಕು. ಒಂದುವೇಳೆ ಮಾಯಿದೇವನ ವಯಸ್ಸು ಆಗ ೪೫ ಎಂದಿಟ್ಟುಕೊಂಡರೂ ೧ನೇ ದೇವರಾಯ ೧೪೧೫-೧೬ ರಲ್ಲಿ ಬರಮಾಡಿಕೊಂಡಿದ್ದನೆಂದು ಭಾವಿಸಿದರೂ, ಈ ಕಾಲಾವಧಿಗಿಂತ ೪೫ ವರ್ಷ ಹಿಂದೆ ಸರಿದು, ಆಲೋಚಿಸಿದಲ್ಲಿ, ಮಾಯಿದೇವ ೧೩೯೯-೭೦ ರ ಸುಮಾರಿಗೆ ಇದ್ದವನೆಂದು ತಿಳಿದುಬರುತ್ತದೆ. ಅಲ್ಲದೆ ಅವನ ಶತಕತ್ರಯ ಶಿವಾನುಭವಸೂತ್ರ ಮೊದಲಾದ ಸಾಹಿತ್ಯವನ್ನು ಗಮನಿಸಿದರೆ, ಅಲ್ಲಿ ಅಂದಿನ ಸಾಮಾಜಿಕ ಧಾರ್ಮಿಕ ರೀತಿನೀತಿಗಳು , ಯಜ್ಞಯಾಗಗಳು, ಯುಗದ ಅತೀರೇಕ, ಹಾಗೂ ಅಂತರಿಕ ಗಲಭೆಗಳು ಪರಿಚಯಗೊಳ್ಳುತ್ತವೆ. ದಟ್ಟವಾಗಿ ೧೩-೧೪ ನೇ ಶತಮಾನದ ಎಲ್ಲ ಸಮಸ್ಯೆಗಳನ್ನು ಇವು ಪ್ರತಿಬಿಂಬಿಸುತ್ತವೆ. ಮಾಯಿದೇವ ಬಸವಾದಿ ಶರಣರನ್ನು ಮತ್ತೆ ಮತ್ತೆ ನೆನೆಯುವದನ್ನು ಗಮನಿಸಿದರೆ ಮಾಯಿದೇವನ ಸಾಹಿತ್ಯ ಆ ಯುಗದ ಬಗೆಗೆ ಇನ್ನೂ ಏನನ್ನೋ ಹೇಳಬಯಸಿದೆಯನಿಸುತ್ತದೆ.

ಈ ಎಲ್ಲ ಸಾಕ್ಷಾಧಾರಗಳ ಹಿನ್ನೆಲೆಯಲ್ಲಿ ಮಾಯಿದೇವನು ಒಂದನೆಯ ಪ್ರೌಢದೇವರಾಯನಕ್ಕಿಂತ ಸ್ವಲ್ಪ ಹಿಂದೆ ಬಾಳಿಬದುಕಿ ಕೃತಿ ರಚನೆಗೈದು ಸಮಕಾಲೀನ ಕವಿಗಳಲ್ಲಿ ಪ್ರಭಾವಿ ವ್ಯಕ್ತಿಯಾಗಿ ಹೊರಹೊಮ್ಮಿರಬೇಕೆಂಬುದು ಸ್ಪಷ್ಟ. ಮಾಯಿದೇವನ ಅಲೌಕಿಕ ವ್ಯಕ್ತಿತ್ವ ಹಾಗೂ ಅದ್ಭುತ ಪಾಂಡಿತ್ಯ ಒಂದನೆಯ ಪ್ರೌಢದೇವರಾಯನನ್ನು ಬಲವಾಗಿ ಆಕರ್ಷಿಸಿರಬೇಕು. ಅಂತೆಯೇ ಮಾಯಿದೇವನನ್ನು ಸಕಲರಾಜಮರ್ಯಾದೆಯೊಂದಿಗೆ ತನ್ನ ಆಸ್ಥಾನಕ್ಕೆ ಬರಮಾಡಿಕೊಂಡು ಗೌರವಯುತವಾಗಿ ಪೂಜೆಗೈದಿರಬೇಕು.

ಈ ಎಲ್ಲ ಆಧಾರಗಳ ಬಲದಿಂದ ಮಗ್ಗೆಯ ಮಾಯಿದೇವನು ಹದಿನಾಲ್ಕನೆಯ ಶತಮಾನದ ಉತ್ತರಾರ್ಧದಲ್ಲಿ ಹಾಗೂ ಹದಿನೈದನೆಯ ಶತಮಾನದ ಪೂರ್ವಾರ್ಧದಲ್ಲಿ ಬದುಕಿದ್ದನೆಂಬುದು ನಿರ್ವಿವಾದ.

### ಐತಿಹಾಸಿಕ ಐಹೊಳೆ:

ಮಾಯಿದೇವನು ಐಹೊಳೆಯನ್ನು 'ಆರ್ಯಪುರಿ'ಯೆಂದು ಕರೆದಿದ್ದಾನೆ. ಐಹೊಳೆ, ಇಂದಿನ ವಿಜಾಪುರ ಜಿಲ್ಲೆಯಲ್ಲಿ ಮಲಪ್ರಭಾ ನದಿಯ ದಂಡೆಯ ಮೇಲೆ ಇರುವ, ಸುಮಾರು ಮೂರು ಸಾವಿರದಷ್ಟು ಜನಸಂಖ್ಯೆಯನ್ನು ಹೊಂದಿದ ಚಿಕ್ಕ ಹಳ್ಳಿ. ಈ ಹಳ್ಳಿಗೆ ಏನಿಲ್ಲೆಂದರೂ ಸುಮಾರು ೧೫೦೦ ವರ್ಷಗಳ ಇತಿಹಾಸವಿದೆ. ಅದು ತನ್ನ ಇತಿಹಾಸದಲ್ಲಿ ವೈಭವ ಕಂಡದ್ದು, ಸುಮಾರು ೧೩೦೦-೧೪೦೦ ವರ್ಷಗಳ ಹಿಂದೆ. ಸ್ಥಳ ಪುರಾಣವಂತೂ ಅದರ ಪ್ರಾಚೀನತೆಯನ್ನು ಪರಶರಾಮನಕ್ಕಿಂತ ಹಿಂದಕ್ಕೆ ಒಯ್ಯುತ್ತದೆ.

'ಅಯ್ಯಾವೊಳೆ', 'ಆರ್ಯಪುರ' ಇವು ಶಾಸನಗಳಲ್ಲಿ ಕಂಡು ಬರುವ ಈ ಊರಿನ ಹೆಸರುಗಳು. 'ಐವಳ್ಳಿ', 'ಐಹೊಳ್ಳಿ', 'ಐಯ್ಯಾಹೊಳೆ' ಎಂಬ ರೂಪಗಳೂ ಸ್ಥಳೀಯರಲ್ಲಿ ಪ್ರಚಾರದಲ್ಲಿವೆ. ಅಯ್ಯಗಳು, ಗುರುಗಳು ಈ ಊರಿನಲ್ಲಿ ವಾಸಿಸುತ್ತಿದ್ದುದರಿಂದ ಈ ಹೆಸರು ಬಂದಿರಬೇಕೆನಿಸುತ್ತದೆ. 'ಆರ್ಯಪುರ' ಇದರಿಂದಲೇ ಹುಟ್ಟಿದ ಸಂಸ್ಕೃತರೂಪ. ಪರುಶರಾಮ ಕ್ಷಾತ್ರವಧೆ ಪೂರೈಸಿದ ಮೇಲೆ ಇಲ್ಲಿಗೆ ಬಂದು ಮಲಪ್ರಭಾ ನದಿಯಲ್ಲಿ ತನ್ನ ಪರಶುವನ್ನು ತೊಳೆದಾಗ ನದಿಯ ನೀರೆಲ್ಲಾ ಕೆಂಪಾಯಿತು. ಮರುದಿನ ನದಿಗೆ ನೀರು ತರಲು ಹೋದ ಸ್ತ್ರೀಯರು ಕೆಂಪಾದ ನೀರನ್ನು ಕಂಡು 'ಅಯ್ಯಯ್ಯ ಹೊಳೆ' ಎಂದು ಉದ್ಗರಿಸಿದರು. ಅಂದಿನಿಂದ 'ಐಹೊಳೆ' ಎಂಬ ಹೆಸರಾಯಿತು ಎಂದು ಒಂದು ದಂತಕತೆ ಇದೆ. ಆಗಸ್ತ್ಯನಿಂದ ವಾತಾಪಿ

೨೦. ವೀರಶೈವ ಸಾಹಿತ್ಯ ಸಮೀಕ್ಷೆ, ಪು. ೧೭೯.

ಹತನಾದಾಗ, ಅವನ ಸೋದರ ಇಲ್ವಲ, ತಮ್ಮಿಬ್ಬರ ನೆನಪು ಉಳಿಯುವಂತೆ ಅಗಸ್ತ್ಯನನ್ನು ಪ್ರಾರ್ಥಿಸಿದನೆಂದೂ ಅಗಸ್ತ್ಯ ಒಪ್ಪಿದ್ದರಿಂದ, ವಾತಾಪಿ ಬಾದಾಮಿಯಲ್ಲೂ ಇಲ್ವಲ, ಐಹೊಳೆಯ ದಕ್ಷಿಣದಲ್ಲೂ ಗುಡ್ಡವಾಗಿ ಉಳಿದಿದ್ದಾರೆ ಎಂದು ಒಂದು ಐತಿಹ್ಯವಿದೆ. ಇದನ್ನು 'ಪಂಚವಲ್ಲೀ' ಎಂದು ಆಗಮಗಳು ಕರೆದಿವೆ. ಹೀಗೆ ಐಹೊಳೆಯು ಪೌರಾಣಿಕ ವಾಗಿ ಐತಿಹಾಸಿಕವಾಗಿ-ಸಾಂಸ್ಕೃತಿಕವಾಗಿ ಉಲ್ಲೇಖನೀಯ ಮಹತ್ವಪಡೆದದ್ದು ಸ್ಪಷ್ಟವಾಗುತ್ತದೆ.

**ಮಾಯಿದೇವನ ಜನ್ಮಸ್ಥಳ:**

ವ್ಯಕ್ತಿಯ ಬೆಳವಣಿಗೆಯಲ್ಲಿ ಅವನು ಬೆಳೆದು ಬಂದ ಪರಿಸರದ ಪ್ರಭಾವವು ಪ್ರಖರವಾಗಿಯೇ ಇರುತ್ತದೆ. ಇಂಥ ಪರಿಸರ ಐಹೊಳೆಗಿದ್ದುದು ಐತಿಹಾಸಿಕ ಸತ್ಯ. ಯತಿಯೆಂದು ಸ್ತುತಿಸಿಕೊಂಡ ಮಾಯಿದೇವನಿಗೆ ಐಹೊಳೆಯ ಬಗೆಗೆ ಅತಿಯಾದ ವ್ಯಾಮೋಹವಿದೆ. ದಾರ್ಶನಿಕನಾದ ಮಾಯಿದೇವ ಅದನ್ನು ಮನದುಂಬಿ ದರ್ಶನದ ಧಾಟಿಯಲ್ಲಿ ಹೀಗೆ ಅರ್ಘ್ಯಸಿದ್ದಾನೆ.

ಐಕಾಕ್ಷರಾಭಿಧೇಯೋಽಭೊದ್ಯೈಕಾರೇಣೇಶ್ವರಃ ಸ್ವಯಂ ।
ಯತ್ಪುರಂ ವಪುರೈಶ್ವರ್ಯಂ ಪರಂ ಧಾಮ ತದೈಪುರಂ ॥[೨೧]

(ಕವಿಯ) ಚಿತ್ತವೇ ಐಪುರಿ. ಅಲ್ಲಿ ಘನತೇಜದಿಂದ ಉದ್ದಾಮವಾದ ದಿವ್ಯಲಿಂಗವೇ ಸೋಮೇಶ್ವರ ಎಂದು ಈ ಶ್ಲೋಕದ ಭಾವ.

ಮಲಪ್ರಹಾರಿಣೀ ನಾಮ ಗಂಗಾ ತ್ರಿಮಲನಾಶನೀ ।
ತ್ರಿದೀಕ್ಷಾಪಥಗಾತೀರ್ಥಂ ತತ್ತೀರಂ ಕ್ಷೇತ್ರಮೈಪುರೀ ॥[೨೨]

ಅಲ್ಲಿ ಹರಿದ ನದಿ ಬರೀ ನದಿಯಲ್ಲ. ಅದು ಆಣವ ಮಾಯಾ ಕರ್ಮಿಕವೆಂಬ ತ್ರಿಮಲಾಪಹಾರಿಯಾಗಿದೆ.

ತಾಮೈಪುರೀಮಹಂ ವಂದೇ ಭವಪಾಶನಿಕೃಂತನೀಂ।
ಯಸ್ಯಾಂ ಸನ್ನಿಹಿತಃ ಪ್ರಿತ್ಯಾ ಸೋಮಃ ಸೋಮಾರ್ಧಶೇಖರಃ ॥[೨೩]

ಇಂಥ ಭವಪಾಶ ನೀಗಿಸುವ ಪವಿತ್ರವಾದ ನದಿತೀರದಲ್ಲಿ, ಭಕ್ತರ ಮೇಲಿನ ಪ್ರೀತಿಯಿಂದ ಬಂದು ನೆಲಿಸಿದ, ಆ ಸೋಮೇಶ್ವರ ವಾಸಿಸುವ ಐಪುರಿ(ಐಹೊಳೆ)ಯನ್ನು ವಂದಿಸುತ್ತೇನೆಂದು ಪುಳಕಿತನಾಗಿದ್ದಾನೆ ಮಾಯಿದೇವ. ಮೇಲಿನ ವಿವರಣೆಯಿಂದ ಮಾಯಿದೇವನು ಐಹೊಳೆಗಿತ್ತ ಮಹತ್ವ ವ್ಯಕ್ತವಾಗುತ್ತದೆ.

ಮಾಯಿದೇವನ ಕಥೆಯನ್ನು ಹೇಳಿದ ಶಾಂತಲಿಂಗದೇಶಿಕನು (೧೬೭೨) ಈತನ ಹೆಸರಿನ ಆರಂಭದಲ್ಲಿ ಬ ರುವ "ಮಗ್ಗೆ" ಎಂಬುದು ಅವನ ಊರಿನ ಹೆಸರೆಂದು ಹೇಳಿದಂತಿದೆ.[೨೪] 'ಮಗ್ಗೆಯೆಂಬ ಪುರದಲ್ಲಿ ಮಾಯಿದೇವಾಚಾರ್ಯ

---

೨೧. ಶಿವಾನುಭವಸೂತ್ರ-ಪ್ರಥಮಾಧಿಕರಣ-ಶ್ಲೋಕ-೭

೨೨. ಅದೇ-ಶ್ಲೋಕ-೮

೨೩. ಅದೇ-ಶ್ಲೋಕ-೯

೨೪. ಭೈರವೇಶ್ವರ ಕಾವ್ಯದ ಕಥಾಸೂತ್ರ ರತ್ನಾಕರ (ಭಾಗ-೨) ೧೯೭೮ ಸಂ. ಡಾ. ಆರ್.ಸಿ. ಹಿರೇಮಠ, ಪು. ೩೦೮.

ಪ್ರಭುಗಳಿರ್ದು' ಎಂದು ಕಥೆ ಆರಂಭಗೊಳ್ಳುತ್ತದೆ. ಸ.ಸ.ಮಾಳವಾಡ, ಈತನ ಗ್ರಾಮ 'ಐಪುರಿ' ಎಂದು ಊಹಿಸುತ್ತಾರೆ.[೨೫] ಶ್ರೀಯುತರ ಊಹೆಗೆ, ಶಿವಾನುಭವಸೂತ್ರವೇ ಆಧಾರವಾಗಿದೆ. ಆದರೆ ಮಾಯಿದೇವನು ಅದನ್ನು ಎಲ್ಲಿಯೂ ಉಲ್ಲೇಖಿಸಿಲ್ಲ. ಶಿವಾನುಭಸೂತ್ರದಲ್ಲಿ ಮಾಯಿದೇವನು, ತನ್ನ ಗುರುಗಳು ಹುಟ್ಟಿದ ಊರಿನ ಬಗೆಗೆ ಹೇಳಿರುವುದು ನಿಜ. ಆದರೆ ಮಾಯಿದೇವನ ಊರು ಇಂಥದೆ ಎಂದು ಅಲ್ಲಿ ಕಂಡುಬರುವುದಿಲ್ಲ. ಐಹೊಳೆಯನ್ನೇ ಬಗೆಬಗೆಯಾಗಿ ಕೊಂಡಾಡಿದ ಮಾಯಿದೇವನು ಐಹೊಳೆಯವನಾಗಿರಲಿಕ್ಕಿಲ್ಲ. ಏಕೆಂದರೆ, ಅವನ ಸಾಹಿತ್ಯವನ್ನು ಪರಿಶೀಲಿಸಿದಾಗ ಆತ ಪರಿವ್ರಾಜಕ ಸಂನ್ಯಾಸಿಯೆಂತ ಕಂಡು ಬರುತ್ತಾನೆ. ಐಪುರಿ ಅಥವಾ ಐಹೊಳೆಯು, ಮಾಯಿದೇವನ ಗುರುಕ್ಷೇತ್ರವಾದುದರಿಂದ ಅದನ್ನಷ್ಟು ಭಕ್ತಿಭಾವದಿಂದ ಸ್ಮರಿಸಿರಬೇಕು. ಈ ಹಿನ್ನೆಲೆಯಲ್ಲಿ ಶಾಂತಲಿಂಗ ಮೊದಲಾದ ಕವಿಗಳು ಸಂಭೋಧಿಸಿದ 'ಮಗ್ಗೆ' ಅಥವಾ 'ಮೊಗ್ಗೆ' ಎಂಬ ಊರು ಈತನ ಜನ್ಮಸ್ಥಳವೆಂದು ಹೇಳಬೇಕಾಗುತ್ತದೆ.

ಹೀಗೆ ಮಹಾನುಭಾವಿಯಾದ ಮಾಯಿದೇವನು ಮಗ್ಗೆಯಲ್ಲಿ ಜನಿಸಿ, ಐಹೊಳೆಯಲ್ಲಿ ಅಧ್ಯಯನಗೈದು, ಅಲ್ಲಿಯೇ ಸ್ವತಂತ್ರವಾಗಿ ಬೆಳೆದು, ೧ನೇ ಪ್ರೌಢದೇವರಾಯ ಗಮನಿಸಿ, ಗೌರವಿಸುವಷ್ಟು, ಎತ್ತರಕ್ಕೆ ಬೆಳೆದವನಾಗಿದ್ದನೆಂದು ಇದರಿಂದ ವೇದ್ಯವಾಗುತ್ತದೆ.

**ಮಾಯಿದೇವ ಮಠಾಧಿಕಾರಿಯೆ ?**

ಶಿವಾನುಭವಸೂತ್ರದಲ್ಲಿ ಮಾಯಿದೇವನು ತನ್ನ ಅಭಿದಾನದೊಂದಿಗೆ 'ಪ್ರಭು', 'ವಿಭು', 'ಮಹಾತ್ಮ', 'ಶ್ರೀಮಾನ್', ಮುಂತಾಗಿ ಕರೆದುಕೊಂಡಿದ್ದಾನೆ. ಇವುಗಳನ್ನು ಗಮನಿಸಿ ಕೆಲವರು, ಈತನೊಬ್ಬ ಅಧಿಕಾರಿ. ಇಲ್ಲವೆ, ಪುರಪ್ರಮುಖ ಅಥವಾ ನಾಡಿನ ಒಡೆಯ ಇದ್ದಿರಬೇಕೆಂದು ತರ್ಕಿಸಿದ್ದಾರೆ,[೨೬] ಇನ್ನು ಕೆಲವರು, ಈತ ಐಹೊಳೆಯ ಸನಿಹದ 'ಹಿರೇಮಾಗಿ' ಊರಿನ ಹಿರೇಮಠದ ಪಟ್ಟಾಧ್ಯಕ್ಷನೆಂದು ಪ್ರಸ್ತಾಪಿಸಿದ್ದಾರೆ.[೨೭] ಆದರೆ ಈ ಬಗೆಗೆ ಶಿವಾನುಭವಸೂತ್ರದಲ್ಲಿ ಎಲ್ಲಿಯೂ ಉಲ್ಲೇಖವಿಲ್ಲ, ಅವನ ಇತರ ಸಾಹಿತ್ಯದಲ್ಲಿಯೂ ಕೂಡ. ಒಂದು ವೇಳೆ ಆತ ಹಿರೇಮಠದ ಪಟ್ಟಾಧ್ಯಕ್ಷನೇ ಆಗಿದ್ದರೆ ಉಳಿದೆಲ್ಲ ವಿಷಯಗಳೊಂದಿಗೆ ಅದನ್ನೂ ಎಲ್ಲಿಯಾದರು ಹೇಳಿಕೊಳ್ಳಬಹುದಾಗಿತ್ತು. ಡಾ। ಡಿ.ವ್ಹಿ. ಪುರಾಣಿಕ ಅವರು ಈ ಬಗ್ಗೆ ಸಾರ್ಥಕ ಚರ್ಚೆ ಕೈಗೊಂಡಿದ್ದಾರೆಂದಷ್ಟೆ ಹೇಳಬೇಕಾಗುತ್ತದೆ.

**ಮಾಯಿದೇವನ ಇಷ್ಟ ದೈವ ಸೋಮನಾಥ :**

ಶಿವಾನುಭವ ಸೂತ್ರದಲ್ಲಿ ಮಾಯಿದೇವನು, ತನ್ನ ಆರಾಧ್ಯದೈವ 'ಸೋಮನಾಥ'ನೆಂದು ಪದೇ ಪದೇ ಹೇಳುತ್ತಾನೆ. "ಮಹದೈಪುರೀಶ್ವರ" ಎಂಬ ಒಂದು ಶತಕ 'ಸೋಮನಾಥ'ನ ಹೆಸರನ್ನೇ ಹೊಂದಿದೆ[೨೮] ಮಾಯಿದೇವ ಸ್ತುತಿಸಿದ ಸೋಮೇಶ್ವರನೇ ಇಂದು ಐಹೊಳೆಯಲ್ಲಿ ಪೂಜೆಗೊಳ್ಳುತ್ತಲಿರುವ ರಾಮಲಿಂಗೇಶ್ವರ. ಈ ಕ್ಷೇತ್ರ ಅಥವಾ ದೇವಸ್ಥಾನವು ಐಹೊಳೆಯಿಂದ ಎರಡು ಮೈಲು ಅಂತರದಲ್ಲಿದೆ. ಇದನ್ನು ಡಾ। ಡಿ.ವ್ಹಿ. ಪುರಾಣಿಕ ಅವರು ಈಗಾಗಲೇ ಗುರುತಿಸಿದ್ದಾರೆ.[೨೯]

---

೨೫. ಸಾಹಿತ್ಯ ಸಂಗಮ ಪು. ೧೫೬, (೧೯೭೦), ಪ್ರೊ. ಸ.ಸ. ಮಾಳವಾಡ.

೨೬. Mayideva is also styled Prabhu and Vibhu, which may indicate his being an officer or chief, Dr. S.C. Nandimath, (1942) 'A hand book of Veerasaivism', p.45.

೨೭. ಸುಕುಮಾರ ಪತ್ರಿಕೆ (೧೯೭೧) ಪುಟ ೨೪೩ (ಮಾಸಪತ್ರಿಕೆ ಸಂಪುಟ ೧೦;ಸಂಚಿಕೆ ೯)

೨೮. "ಶತಕಮದ್ವೈಪುರ ಪ್ರಭುಪದಾಂಕಿತ" ಮಹದ್ವೈಪುರಶತಕ ಪದ್ಯ ೯.

೨೯. ಅದೇ, ಪುಟ ೨೫.

ಅಲ್ಲದೆ ಶಿವಾನುಭವ ಸೂತ್ರದಲ್ಲಿನ 'ತತ್ತೀರಂ', 'ಪ್ರೀತ್ಯಾ' ಎಂಬ ಎರಡು ಪದಗಳು[೩೦] ಡಾ। ಪುರಾಣಿಕ ಅವರ ಅಭಿಪ್ರಾಯವನ್ನು ಬಲಪಡಿಸುತ್ತವೆ. 'ತತ್ತೀರಂ', ಎಂಬ ಪದವು ಮಲಪ್ರಭ ನಧೀತೀರದಲ್ಲಿರುವ, ರಾಮಲಿಂಗೇಶ್ವರ ದೇವಸ್ಥಾನವನ್ನೇ ಕುರಿತು ಒತ್ತಿ ಹೇಳಿದಂತಿದೆ. 'ಪ್ರೀತ್ಯಾ' ಎಂಬ ಪದ 'ರಾಮ' ಎಂದು ಅರ್ಥವಾಗುತ್ತದೆ. 'ರಮಂತೆಯೋಗಿನಃ ಅಸ್ಮಿನ್' ಎಂಬಲ್ಲಿ ರಾಮ ಎಂಬುದರ ಅರ್ಥ, ಮಾಯಿದೇವ ಬಳಸಿದ 'ಪ್ರೀತ್ಯಾ' ಎಂಬ ಪದದಲ್ಲಿ ಧ್ವನಿತವಾಗುತ್ತದೆ. ಆದ್ದರಿಂದ 'ಪ್ರೀತ್ಯಾ' ಎಂದರೆ 'ರಾಮ', ಈ ರಾಮ ಪದವನ್ನೇ ಮಾಯಿದೇವ 'ಸೋಮ' ಎಂಬ ಅರ್ಥದಲ್ಲಿ ಬಳಸಿಕೊಂಡಿರಬೇಕು.

## ಗುರುವಂಶ ಪರಂಪರೆ :-

ಶಿವಾನುಭವ ಸೂತ್ರದ ಪ್ರಥಮಾಧಿಕರಣದಲ್ಲಿ ಮಾಯಿದೇವ, ತನ್ನ ಗುರುಪರಂಪರೆಯನ್ನು ಹದಿಮೂರು ಶ್ಲೋಕಗಳಲ್ಲಿ ವಿವರಿಸುತ್ತಾನೆ. ಈತನ ಗುರುಪರಂಪರೆ, ಉತ್ಕೃಷ್ಟವಾದದ್ದು. ಕೆಲವೊಮ್ಮೆ, ಅಲ್ಲಿನ ವಿಶೇಷಣಗಳು ಅತಿರೇಕವೆನಿಸುತ್ತವೆ. ಹೀಗಾಗಲು ಮಾಯಿದೇವನಿಗಿದ್ದ ಗುರು ಪರಂಪರೆಯಲ್ಲಿನ ನಿಷ್ಠೆಯೇ ಕಾರಣವಾಗಿರುಬೇಕೆನಿಸುತ್ತದೆ. ಪೂರ್ವಾಶ್ರಮದ ಅಜ್ಜ, ಮುತ್ತಜ್ಜನನ್ನೇ ಸ್ಮರಿಸಿ, ಹೇಳುತ್ತಾನೇನೂ ಎಂಬಂತೆ ಒಮ್ಮೊಮ್ಮೆ ಅಲ್ಲಿ ಅಭಾಸವೂ ಆಗುವುದುಂಟು. ಹಾಗೇನಾದರೂ ಆತನ ಉದ್ದೇಶವಾಗಿದ್ದರೆ, ತಂದೆ-ತಾಯಿ ಮೊದಲಾದವರನ್ನು ಅಲ್ಲಿ ಉಲ್ಲೇಖಿಸಬಹುದಾಗಿತ್ತು. ಪೂರ್ವಾಶ್ರಮವನ್ನು ಅಲ್ಲಿ ನೆನೆಯದೇ ಇರುವುದರಿಂದ, ಈತ ವಿರಕ್ತಾಶ್ರಮಿಯೆಂಬುದಕ್ಕೆ ಪುಷ್ಟಿ ದೊರಕುತ್ತದೆ. ಏಕೆಂದರೆ ಪೂರ್ವಾಶ್ರಮ ನಿರಸನ ಮಾಡಿದ ವಿರಕ್ತಾಶ್ರಮವಾಸಿಗಳಿಗೆ ಹಿಂದಿನ ಸಂಬಂಧವೆಲ್ಲ ಕತ್ತರಿಸಿ ಹೋಗುತ್ತದೆ. ಅವರು ಕೇವಲ ಗುರುವಿನ ಕರಕಮಲ ಸಂಜಾತರು. ಆದುದರಿಂದ ಅವರು ತಮ್ಮ ಕೃತಿಗಳಲ್ಲಿ ಗುರುವಿನ ನಾಮನಿರ್ದೇಶಮಾಡಿ ಕೃತಾರ್ಥರಾಗುತ್ತರೆ. ಇಂತಹದೊಂದು ಸಂಪ್ರದಾಯ ಕನ್ನಡ ಸಾಹಿತ್ಯದಲ್ಲಿ ಸ್ಪಷ್ಟವಾಗಿ ಒಡೆದುಕಾಣುತ್ತದೆ. ಚಾಮರಸನು ಈ ಸಂಪ್ರದಾಯಲ್ಲಿ ತುತ್ತತುದಿಯನ್ನೇರಿ ತನ್ನ ಪ್ರಭುಲಿಂಗಲೀಲೆಯಲ್ಲಿ ತನ್ನ ಹೆಸರನ್ನಾಗಲಿ, ಗುರುವಿನ ಹೆಸರನ್ನಾಗಲಿ ಯಾವುದನ್ನೂ ಹೇಳಿಕೊಂಡಿಲ್ಲ. ಮಾಯಿದೇವನು ಇಷ್ಟುದೂರ ಹೋಗದೆ ಒಂದೆರಡು ಮಾತುಗಳನ್ನು ಹೇಳಿರುವುದರಿಂದ, ಈತನ ಗುರು ಪರಂಪರೆಯ ಚಾರಿತ್ರಿಕ ವಿವೇಚನೆಗೆ ಒಂದಿಷ್ಟು ಚಾಲನೆ ದೊರೆತಂತಾಗಿದೆ.

ಈತನ ಪರಂಪರೆಯಲ್ಲಿ ಬರುವ ಆರು ಜನ ಗುರುಗಳು ಇಂತಿದ್ದಾರೆ ೧) ಉಪಮನ್ಯು ಶಿವಾಚಾರ್ಯ, ೨)ಭೀಮನಾಥ ಪ್ರಭು, ೩) ಕಲೇಶ್ವರ, ೪) ಬೊಪ್ಪನಾಥ ಗುರು, ೫) ಶ್ರೀ ನಾಕರಾಜ, ೬) ಸಂಗಮೇಶ್ವರ.

### ೧) ಉಪಮನ್ಯು ಶಿವಾಚಾರ್ಯ :-

ವಿಷ್ಣುವಿಗೆ ಸ್ವಯಮುಪದೇಶಗೈದ ಉಪಮನ್ಯು ಮುನೀಶ್ವರನೇ ಐವುರಿಯಲ್ಲಿ ಸೋಮನಾಥನ ಅನುಗ್ರಹದಿಂದ ಜನಿಸಿ, ಜ್ಞಾನ ಕ್ರಿಯಾಸಮನ್ವಿತ ತಪೋಬಲದೇಶಿಕನಾಗಿ, 'ಆದಿಗುರು ಉಪಮನ್ಯು ಶಿವಾಚಾರ್ಯ' ಎಂಬ ನಾಮದಿಂದ ಪ್ರಸಿದ್ಧನಾದ. ಈತ ಸಾಕ್ಷಾತ ಶಿವಸ್ವರೂಪನಾಗಿದ್ದನೆಂದು ಮಾಯಿದೇವ ಹೇಳಿದ್ದಾನೆ.

### ೨) ಭೀಮನಾಥ ಪ್ರಭು :-

ಆದಿ ಗುರುವಾದ ಉಪಮನ್ಯು ಶಿವಾಚಾರ್ಯನಿಂದ, ಭೀಮನಾಥ ಪ್ರಭು ಆವಿರ್ಭವಿಸಿದ. ಈತ ಸ್ವಭಾವದಿಂದಲೇ ಸೋಮನಾಥನ ಪಾದಾರವಿಂದದಲ್ಲಿ ಸ್ಥಿರವಾದ ಮನಸ್ಸುಳ್ಳವನಾಗಿ ಆರ್ಯವೇದ್ಯನೆನಿಸಿದ.

---

೩೦. ಶಿವಾನುಭವಸೂತ್ರಂ, ಅಧಿಕರಣ ೧, ಶ್ಲೋಕ ೭- ೮.

೩) ಕಲೇಶ್ವರ:

ಈತ ಭೀಮನಾಥನ ಮಗ. ಮಾಯಿದೇವನಿಗೆ ಈತನ ಬಗ್ಗೆ ಹೆಚ್ಚು ಮಾಹಿತಿ ದೊರೆತಂತಿದೆ. ಅಂತೆಯೇ ಇವನನ್ನು'ವಿದ್ಯಾವಿಲಾಸ ವಿಭವಾಕೃತಿ ಪಾತ್ರಗಾತ್ರಃ ಆಚಾರ್ಯಲಕ್ಷಣ ಪರಿಸ್ಫುಟ ಸಚ್ಚರಿತ್ರಃ' ಎಂದು ಸ್ತುತಿಸುತ್ತಾನೆ.

ಜೀವ ಜಗತ್ತುಗಳನ್ನು ಕುರಿತು ವಿಚಾರ ಮಾಡಿದ ಅನುಭಾವಿಗಳನ್ನು ಆಚಾರ್ಯರು ಎಂದು ಸಿದ್ಧಾಂತಶಿಖಾಮಣಿ ಕರೆದಿದೆ.

ಆಚಿನೋತಿ ಹಿ ಶಾಸ್ತ್ರಾರ್ಥಾನಾಚಾರೇ ಸ್ಥಾಪಯತ್ಯಪಿ ।
ಸ್ವಯಮಾಚರತೇ ಯಸ್ತು ಸ ಆಚಾರ್ಯ ಇತಿಸ್ಮೃತಃ ॥[೩೧]

ಚೆನ್ನಾಗಿ ಶಾಸ್ತ್ರಾಭ್ಯಾಸ ಮಾಡಿ, ಶಿಷ್ಯರಿಗೆ, ಅದನ್ನು ಬೋಧಿಸುವದರ ಮೂಲಕ ಅವರನ್ನು ಆಚಾರವಂತರನ್ನಾಗಿ ಮಾಡಿ, ತಾನೂ ಅದನ್ನು ಅನುಷ್ಠಾನ ಮಾಡುವವನೇ ಆಚಾರ್ಯನೆನಿಸುವನು. ಹೀಗೆ ಆಚಾರ್ಯಲಕ್ಷಣಪರಿಸ್ಫುಟ ಸಚ್ಚರಿತ್ರನಾದ ಕಲೇಶ್ವರ, ಮೇಲಿನವರಿಗಿಂತ ಹೆಚ್ಚು ಪ್ರತಿಭಾನ್ವಿತನಾಗಿ ಕಾಣುತ್ತಾನೆ.

೪) ಬೊಪ್ಪನಾಥ ಗುರು:

ಕಲೇಶ್ವರನ ತರುವಾಯ ಬಂದ ಬೊಪ್ಪನಾಥ ಗುರು, ಶಿವಮತಾಚಾರದಲ್ಲಿ ಕ್ರಿಯಾಶೀಲ ಉಪದೇಶಿಕನಾಗಿ, ಶೃತಿ, ಸ್ಮೃತಿ, ಆಗಮಗಳಲ್ಲಿ ಪರಿಣತನಾಗಿದ್ದ. ಶಿವಾದ್ವೈತ, ಶಿವವ್ರತಗಳಿಂದ ಪರಿಪೂರ್ಣನಾದ ಈ ಬೊಪ್ಪನಾಥ ಗುರು, ಐವುರಿಯಲ್ಲಿಯೇ ವಾಸವಾಗಿದ್ದ.

೫) ಶ್ರೀ ನಾಕರಾಜ:

ಬೊಪ್ಪನಾಥನಿಂದ ಶ್ರೀ ನಾಕರಾಜ ಗುರು ಜನಿಸುತ್ತಾನೆ. ಈತನಿಗಿರುವ ವಿಶೇಷಣಗಳು ಕೊಂಚ ವಿಭಿನ್ನ ಮಾದರಿಯವು. 'ಶ್ರೀಸೋಮೇಶ್ವರಲಿಂಗಭಕ್ತಿಯಜನಧ್ಯಾನೈಕನಿಷ್ಠಾಪರಃ',[೩೨] 'ಶ್ರೀ ವೀರವ್ರತಸತ್ಯಧರ್ಮನಿಯಮಶ್ರದ್ಧಾದಿ ರೂಢಕ್ರಿಯಃ'[೩೩] ಎಂದು ವರ್ಣಿಸಿದ ಕಾರಣ, ಶ್ರೀ ನಾಗರಾಜನು ಮೇಲಿನವರಂತೆ ವಿದ್ವಾಂಸನಾಗಿರದೆ, ಆಚಾರ, ವಿಚಾರ, ವ್ರತ, ಧರ್ಮ, ಶ್ರದ್ಧೆ, ನಿಷ್ಠೆಗಳಲ್ಲಿ ತನ್ನನ್ನು ತೊಡಗಿಸಿಕೊಂಡವನಾಗಿದ್ದನೆಂಬುದು, ಮಾಯಿದೇವನ ವಿವರಣೆಯಿಂದಲೇ ವಿದಿತವಾಗುತ್ತದೆ.

೬) ಸಂಗಮೇಶ್ವರ:

ಶ್ರೀ ನಾಕರಾಜನ ಅನುಗ್ರಹದಿಂದ ಶ್ರೀಸಂಗಮೇಶ್ವರಗುರು ಜನಿಸಿದ. ಈತನನ್ನು 'ಮಹಾಪ್ರಭುದಾರ್ಯವರ್ಯ'[೩೪] ಎಂದು ವರ್ಣಿಸಿದ್ದಾನೆ. 'ಶಿವೈಕಗತಮಾನಸಚಾರುಚೇಷ್ಟಃ'[೩೫] ಎಂದಿರುವುದರಿಂದ, ಈತನಿಗೆ ಶಿವಯೋಗದಲ್ಲಿ ಹೆಚ್ಚಿನಗತಿಯಿದ್ದುದು ಸುಸ್ಪಷ್ಟ.

---

೩೧. ಸಿದ್ಧಾಂತಶಿಖಾಮಣಿ ಪುಟ, ೨೫೧

೩೨. ಶಿವಾನುಭವಸೂತ್ರ, ಅಧಿಕರಣ ೧, ಶ್ಲೋಕ ೧೫

೩೩. ಅದೇ, ಶ್ಲೋಕ ೧೬

೩೪. ಅದೇ, ಶ್ಲೋಕ ೧೭

೩೫. ಅದೇ, ಶ್ಲೋಕ ೧೮

ಮುಂದೆ ಶ್ರೀ ಸಂಗಮೇಶ್ವರನಿಗೆ, ಕಲ್ಯಾಣದ ಎಂಬ ಮಗನು ಜನಿಸಿದ. ಈತನೇ ಗ್ರಂಥ ಕರ್ತೃ ಮಾಯಿದೇವ. ಮೊದಲಿನ ಹೆಸರು ಕಲ್ಯಾಣದ 'ನಾಮ್ನಾ ಕಲ್ಯಾಣದಃ ಶ್ರೀ ಮನ್ಮಾಯಿದೇವ ಇತಿಸ್ಮೃತಃ' ಎಂದು ಸ್ವತಃ ಹೇಳಿಕೊಂಡಿದ್ದಾನೆ.

ಮಾಯಿದೇವನ ಈ ವಂಶವರ್ಣನೆ, ವೀರಶೈವದ ಎರಡು ಪರಂಪರೆಗಳನ್ನು ಸೂಚಿಸುತ್ತದೆ. ಆ ಎರಡು ಪರಂಪರೆಗಳೆಂದರೆ, ಗುರು ಮತ್ತು ವಿರಕ್ತ. ಪೂರ್ವಾಶ್ರಮವನ್ನು ಹೇಳಕೊಳ್ಳದ್ದರಿಂದ ಮತ್ತು "ದೇಶಿಕಃ" ಎಂಬ ಪದ ಪ್ರಯೋಗ ವಾಗಿರುವುದರಿಂದ ಈತ ವಿರಕ್ತನಂತೆ ಕಾಣುತ್ತಾನೆ. ವಿರಕ್ತ ಪರಂಪರೆಯ ಪೂರ್ವಾಶ್ರಮನ್ನು ನೆನೆಯಬಾರದು. ಅದನ್ನು ಈ ಗುರುವಂಶವರ್ಣನೆಯಲ್ಲಿ ಮಾಯಿದೇವ ಆ ಪರಂಪರೆಯನ್ನು ಪಾಲಿಸಿದ್ದಾನೆ. "ದೇಶಿಕಃ" ಎಂಬ ಪದ ಪ್ರಯೋಗವಾಗಿರುವುದರಿಂದ, ಅವನಿಂದ ವರ್ಣಿತರಾದ ಈ ಎಲ್ಲರೂ ನಿರಾಭಾರಿ ಜಂಗಮರೆಂದು ಊಹಿಸಬಹುದು. ಹೇಗೆಂದರೆ, ದೇಶಿಕ ಎನ್ನುವುದಕ್ಕೆ ವಿದ್ವಾಂಸರು "ದಿಶ್ಯತೇ ಅನೇನ ತತ್ವಂ ಇತಿ ದೇಶಿಕಃ" ಎಂದು ಅರ್ಥೈಸುತ್ತಾರೆ. ದೇಶಿಕನೆಂದರೆ ಗುರು, ಮಾರ್ಗದರ್ಶಕ ಎಂದು ಹೇಳಬೇಕಾಗುತ್ತದೆ. ನಿರಾಭಾರಿಗಳು ಮನೆಮಾರು, ಕುಲ, ಕುಟುಂಬಗಳನ್ನು ತೊರೆದು, ದೇಶವನ್ನು ಸಂಚರಿಸುತ್ತ ಶಿವಾನುಭವ ಸಂಪನ್ನರಾಗಿರುವ ಸಂಪ್ರದಾಯವುಂಟು. ಇಂತಹ ನಿರಾಭಾರಿಗಳಿಗೆ 'ದೇಶಿಕ', 'ದೇಶಿಕವರೇಣ್ಯ' ಎಂದು ಕರೆಯವದೂ ಉಂಟು. ಷಡಕ್ಷರದೇವನ ಗುರುಪರಂಪರೆಯಲ್ಲಿ 'ಚಿಕವೀರದೇಶಿಕ ಶಿಖಾಮಣಿ' ಎಂಬ ಉಲ್ಲೇಖವಿದೆ.

"ಯತಿತತಿಚಕ್ರವರ್ತಿರುಚಿರಾಳಮೂರ್ತಿವಿಶಾಲಕೀರ್ತಿಪೂ
ರಿತ ಹರಿದಂತನುಜ್ವಳಗುಣಾವಳಿಕಾಂತನತೀವ ಶಾಂತನಾ
ಶ್ರಿತಜನರಕ್ಷನನ್ವಿತಜಿತಾಕ್ಷನಮೋಘಕೃಪಾಕಟಾಕ್ಷನೂ
ರ್ಜಿತ ಚಿಕವೀರದೇಶಿಕ ಶಿಖಾಮಣಿಮಾಳ್ಕೆಮದಿಷ್ಟ ಸಿದ್ಧಿಯಂ ॥[೩೬]

ಹೀಗೆಯೇ 'ಮುರಿಗೆಯದೇಶಿಕ',[೩೭] 'ಸದಾಶಿವದೇಶಿಕ'[೩೮] ಮೊದಲಾದ ದೇಶಿಕವರೇಣ್ಯರ ಉಲ್ಲೇಖ, ಕನ್ನಡ ಸಾಹಿತ್ಯದೊಳಗೆ, ಅಲ್ಲಲ್ಲಿ ದೊರೆಯುತ್ತದೆ. ವಿರಶೈವವಿರಕ್ತಸಂಪ್ರದಾಯದ ಸ್ವಾಮಿಗಳ ಹೆಸರುಗಳಲ್ಲಿ ಹೆಚ್ಚಾಗಿ ದೇಶಿಕಪದ ಬಾಹುಳ್ಯ ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ಮಾಯಿದೇವ ವಿರಕ್ತ ಸ್ವಾಮಿಯಾಗಿರಬೇಕು. ವಂಶ ವರ್ಣನೆಯಲ್ಲಿ ಮೇಲಿಂದಮೇಲೆ 'ಅವನ ಮಗ ಇವನು', 'ಇವನ ಮಗ ಅವನು' ಎಂದಿರುವುದರಿಂದ ಈತ ಗುರುವರ್ಗದ (ಪುತ್ರವರ್ಗ) ಹಿರೇಮಠದ ಶಿವಾಚಾರ್ಯನಾಗಿರಬಹುದೆಂದು ತಪ್ಪಾಗಿ ಊಹಿಸಿದಂತಿದೆ. ಆ ಬಗೆಯಾಗಿ ಊಹಿಸಲು ಸಾಧ್ಯವಿದೆಯಾದರೂ ಗುರುವರ್ಗದ ಮೂಲಪುರಷರನ್ನು ಅಲ್ಲಲ್ಲಿ ಸ್ಮರಿಸಬಹುದಾಗಿತ್ತು. ಆದರೆ ಮಾಯಿದೇವ, ಶತಕತ್ರಯ ಪದ್ಯೆಕೋತ್ತರಗಳಲ್ಲಿ ಬಸವಾದಿ ಶಿವಶರಣರನ್ನೇ ಅಧಿಕೃತವಾಗಿ ನೆನೆದಿರುವುದು ಗಮನಾರ್ಹವಾಗಿದೆ. ಶತಕತ್ರಯದಲ್ಲಂತೂ, ಬಸವಣ್ಣನವರನ್ನು 'ವೀರಶೈವನಿರ್ಣಯಪರಮಾವತಾರ' ಎಂದು ವರ್ಣಿಸುತ್ತಾನೆ. ಪದ್ಯೆಕೋತ್ತರಶತಸ್ಥಲದ ನಾಂದಿ ಪದ್ಯದಲ್ಲಿ ಬಸವ, ಚನ್ನಬಸವಣ್ಣನವರನ್ನು ಸ್ಮರಿಸಿದ್ದಾನೆ. ಈ ಎಲ್ಲ ಆಧಾರಗಳ ಹಿನ್ನೆಯಲ್ಲಿ ಮಾಯಿದೇವನು ಮತ್ತು ಆತನ ಪರಂಪರೆ ಸಾಭಾರಿಯಾಗಿರದೆ ನಿರಾಭಾರಿಯಾಗಿದೆ ಎಂದು ಹೇಳಬೇಕಾಗುತ್ತದೆ.

---

೩೬. ರಾಜಶೇಖರವಿಳಾಸ, ಪ. ೬.

೩೭. ಡಾ. ಎಂ. ಅಣ್ಣಾಜಪ್ಪ (ಸಂ) (೧೯೪೮) ಅನಾದಿ ವೀರಶೈವ ಸಂಗ್ರಹ, ಪು. ೪.

೩೮. ಸಿದ್ದಲಿಂಗ ಶಿವಯೋಗಿಗಳ ಪ್ರಶಿಷ್ಯ.

ನೆಳಲಿಲ್ಲದ ಕಂಬ ಕುರಿತು:

ಚೆನ್ನಬಸವ ಪುರಾಣದಲ್ಲಿ ಮಾಯಿದೇವನನ್ನು ಕುರಿತು ಬರುವ 'ನಿಜಶಿವಸಮಾಧಿಯಲಿ' ಎಂಬ ಉಲ್ಲೇಖದ ವಿವರಣೆಯು ಶಾಂತಲಿಂದೇಶಿಕನ (೧೭೭೨) 'ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರದಲ್ಲಿ ಇಂತಿದೆ :

"ಮಗ್ಗೆ ಮಾಯಾಚಾರ್ಯರು, ಸಮಸ್ತವಾದಮಂಗೆದ್ದು, ಧನದಾನ್ಯವ ಶಿವಾರ್ಪಣಾಕ್ಕೆ ಸವೆದು, ಅಂಗವಿಶೇಷವನುಳಿದು, ಲಿಂಗೈಕ್ಯವಾಗುವಲ್ಲಿ, ಶಿವಪೂಜೆ ಉಪಕರಣವಂ, ನಿಕ್ಷೇಪವ ಮಾಡಿಯೆಂದು, ಭಕ್ತರಿಗೆ ಪೇಳಿ ಪುರದ ಸೋಮನಾಥನೆಂಬ, ತಮ್ಮಿಷ್ಟಲಿಂಗದಲ್ಲಿ, ಐಕ್ಯವಾಗಲು, ಭಕ್ತರುಗಳು ಹಾಂಗೆ, ನಿಕ್ಷೇಪವಂ ಮಾಡಲು, ಬೆಳಗಾಗಿ ನಾರಸಿಂಹಪುದಿಂದ, ಪರಸಮಯವಾದಿಗಳು ಬಂದು, ಸತ್ಯವುಳ್ಳ ಶರಣಸತ್ತನೆಯೆನಲು, ಭಕ್ತರು ಲಿಂಗೈಕ್ಯವಾದರೆನಲು, ಆಗ ಆರುಹೆಡೆಗೆ ಬಿಲ್ವ ಪತ್ರೆ, ಮೂರು ಹೆಡಗೆ ವಿಭೂತಿ, ಗಡಗೆ ಮಡಿಕೆ ಸಹ ಹೂಣಿಸಿಕೊಂಡು, ಆತನು ಸತ್ತುದಿಲ್ಲವೆ, ಕಿತ್ತು ನೋಡುವ, ಹೆಣ ನಿಲ್ಲದೊಡೆ ಸತ್ತುದು ಸಟೆ, ಇದ್ದಡೆದಿಟವೆಂದು, ಕಿತ್ತು ನೋಡುವಾಗ, ಭಾಂಡಭಾಜನ ಬಿಲ್ವಪತ್ರೆ ವಿಭೂತಿಯೇನೂ ಇಲ್ಲದೆ, ನಿರ್ವಯವಾಗಿರಲು ಚೋದ್ಯಂಬಟ್ಟು, ಜಯಸ್ತಂಭವ ನೋಡುವಾಗ, ಅದು ಬಯಲಾಗಲು, ಮುನ್ನ ಕಂಡ ಜನರು ಕೀರ್ತಿಸುತ್ತಿದ್ದರೂ ........"[೩೯]

ಮೇಲ್ಕಂಡ ವಿವರಣೆಯು ಮಗ್ಗೆಯ ಮಾಯಿದೇವನು ಮಹಾಯೋಗಿಯೂ, 'ಸತ್ಯವುಳ್ಳ ಶರಣ'ನೂ ಆಗಿದ್ದನೆಂಬುದನ್ನು ತೋರಿಸುತ್ತದೆ. ಅಲ್ಲದೆ ಆತನು ಪರವಾದಿಗಳ ಮಾತ್ಸರ್ಯಕ್ಕೂ ಕಾರಣ ನಾಗಿದ್ದಂತೆ ತಿಳಿದು ಬರುತ್ತದೆ. ಆಗ ಸಮಯ ಪರಸಮಯಗಳ ನಡುವೆ ವಿಶೇಷವಾಗಿ ಸಮರಸ್ಪರ್ಧೆಗಳಿದ್ದುದಾಗಿ ತೋರುತ್ತದೆ. ವಿಧ್ಯಾನಗರದಲ್ಲಿ ನೆಳಲಿಲ್ಲದ ಜಯಸ್ತಂಭ ಸ್ಥಾಪಿಸಿರುವುದಾಗಿ ಸಿದ್ಧನಂಜೇಶ (ಸು. ೧೬೦೦) ಹೀಗೆ ಹೇಳಿದ್ದಾನೆ.

"ಗುರುಕರುಣದಿಂ ಲಿಂಗಮಂ ಧರಿಸಿ ಜಂಗಮದ  
ಚರಣವಾರಿ ಪ್ರಸಾದವಂ ಸೇವಿಸುವವರ್ಗೆ  
ನರಕವಿಲ್ಲೆಂದು ವಿದ್ಯಾನಗರದೊಳಗೆ ನೆಳಲಿಲ್ಲದ ಜಯಸ್ತಂಭವ ।  
ಹರುಷದಿಂ ನಿಲಿಸಿದಂ ನಿಜಸಮಾಧಿಯ ಮೇಲೆ  
ಓರಿದು ನೆಳಲಿಲ್ಲದ ಜಯಸ್ತಂಭವಿಕ್ಕಿದಂ  
ಗರುವ ಮಾಯಿದೇವಯ್ಯನೆಂದೊರೆದ ಗುರುರಾಯ ವಿಜಿತಮಾಯ"[೪೦]

ಇದರ ವಿವರಣೆ, ಅದೇ ಭೈರವೇಶ್ವರಕಥಾಮಣಿಸೂತ್ರರತ್ನಾಕರದಲ್ಲಿ ಮೇಲಿನದರಕ್ಕಿಂತ ಸ್ಪಷ್ಟವಾಗಿದೆ.

" ....... ವಾದಕ್ಕೆ ಕರೆಸಲು (ಮಾಯಿದೇವನು) ಬಂದು ವೇದಾಗಮ ಪುರಾಣಗಳಿಂದ ಖಂಡಿಸಲವನೆಂದನು, ಹರಿಹರನು ಒಂದೇ ಅಲ್ಲವೆ, ಭವಿಗಳು ಭಕ್ತರಾಗುವುದಿಲ್ಲವೆಯನಲು, ಶಿವಸಂಸ್ಕಾರಿ ಶಿವಭಕ್ತನಪ್ಪನು, ಅಸಂಸ್ಕಾರಿ, ಜನ್ಮಜನ್ಮದಲಿಭವಿಯಾಗಿ ಪುಟ್ಟುವನೆಂದು ಶಿವಾಗಮದಲ್ಲಿ ತೋರಲು, ವಾದಿ ಮೆಚ್ಚದೆ, ಕೃತಾನುಮಾನಕ್ಕೆ,

---

೩೯. ಭೈರವೇಶ್ವರಕಥಾಮಣಿಸೂತ್ರರತ್ನಾಕರ (೧೯೭೮) ಭಾಗ-೨, ಸಂ. ಡಾ. ಆರ್.ಸಿ. ಹಿರೇಮಠ, ಪು. ೩೯೮-೩೯೯.

೪೦. ಗುರುರಾಜಚಾರಿತ್ರ ಅಧ್ಯಾಯ ೧೨, ಪದ್ಯ.೮

ಕಾರಣಾದೃಷ್ಟವುಳ್ಳಡೆತೋರೆನಲು, ಜಯಸ್ತಂಭವಂ ನೆಟ್ಟು, ಭಕ್ತರಿಗೆ ಭವವುಳ್ಳಡೆ, ನೆಳಲುಂಟು, ಇಲ್ಲದಡೆ ನೆಳಲಿಲ್ಲವೆಂದು, ದೃಷ್ಟವಂ ತೋರಲು, ಭೂಪವುದುಗೋರೆ ಪೊನ್ನನಿತ್ತುವಂದಿಸಿ ಕಳುಹಲು ........ "[೪೧]

ಮೇಲಿನ ಅವತರಣಿಕೆಗಳಲ್ಲಿ ಬಂದಿರುವ ಮಾಯಿದೇವನು ವಾದದ ಸಾಮರ್ಥ್ಯವನ್ನು, ಆತ ನೆಟ್ಟ ಎರಡು ವಿಜಯ ಸ್ತಂಭಗಳನ್ನು ಮತ್ತು ಆತನ ಅಲೌಕಿಕ ಶಕ್ತಿಯನ್ನು ಇತರ ವೀರಶೈವ ಪುರಾಣಕಾರರು ಸಮರ್ಥಿಸಿದ್ದಾರೆ.[೪೨] ಈ ನೆಳಲಿಲ್ಲದ ಕಂಬಗಳು ಯಾವ ಸ್ವರೂಪದವು? ಎಂದು ಗೊತ್ತಾದರೆ, ಅವುಗಳತ್ತ ಗಮನಿಸಲು ಸುಲಭವಾಗುತ್ತದೆ. ಮಾಯಿದೇವನ ಸಮಾಧಿಯ ಸುಳುವು ಇದೇ ಅವತರಣಿಕೆಯಲ್ಲಿ ನಿಹಿತವಾಗಿದೆ. ಅದು 'ಹಂಪಿ' ಅಥವಾ 'ಮಗ್ಗಿ'[೪೩] (ಹಿರಿಮಾಗಿ)ಯಲ್ಲಿ ಇದ್ದಿರಬಹುದೆಂದು ತೋರುತ್ತದೆ. ಕೆಲವರು ಹಂಪಿಯಲ್ಲಿಯೇ ಇದ್ದಿರಬಹುದೆಂದು ತರ್ಕಿಸುತ್ತಾರೆ. ಮಗ್ಗಿಯಲ್ಲಿ ಮಾಯಿದೇವನ ಬಗೆಗೆ ಯಾವ ಅವಶೇಷಗಳು ಕಂಡುಬಂದಿಲ್ಲ. ಐಹೊಳೆಯಲ್ಲಿಯೇ "ಮಾಯಿದೇವನ ಮಠ" ವೆಂದು ಜನ ಈಗಲೂ ಅದಿದ್ದುದನ್ನು ಜನ ತೋರಿಸುತ್ತಾರೆ. ಆದರೆ ಅದೂ ಈಗ ಮಠವೆಂಬಂತೆ ಕಾಣುವುದಿಲ್ಲ. ಅಲ್ಲಿ ಈಗ ಒಂದು ವಿವಿಧೋದ್ದೇಶದ ಜನವಸತಿಯ ಸಂಕೀರ್ಣವನ್ನೇ ಕಾಣುತ್ತೇವೆ.

ನೆಳಲಿಲ್ಲದ ಕಂಭವಿರಲು ಸಾಧ್ಯವೇ? ಒಂದು ವೇಳೆ ಇದ್ದಿರಬಹುದಾದರೂ ಹೊಸಪೇಟೆಯ ಹತ್ತಿರ ಜಂಬುಕೇಶ್ವರ ದೇವಸ್ಥಾನದಲ್ಲಿರುವ 'ಬಿಸಿಲಿಲ್ಲದ ಬಾವಿ'ಯಂತೇನಾದರು ಇದ್ದೀತೆ?. ಏಕೆಂದರೆ, ಅಲ್ಲಿ ಬಾವಿಯೊಂದನ್ನು ಜನ ತೋರಿಸುತ್ತಾರೆ. ಅದಕ್ಕೆ ಬಿಸಿಲು ಬೀಳದಂತೆ ಸುತ್ತಲು ಗೋಡೆಗಳ, ಗುದ್ದುಗಳ ವ್ಯವಸ್ಥೆಯಿದ್ದುದರಿಂದ ಆ ಬಾವಿಗೆ ಬಿಸಿಲು ಬೀಳದಂತೆ ನೋಡಿಕೊಳ್ಳಲಾಗಿದೆಯಷ್ಟೆ. ಹಿಂದೆ ಅಲ್ಲಿ 'ನೆಳಲಿಲ್ಲದ ಮರ' ಇದ್ದುದಾಗಿಯೂ ಜನ ಹೇಳುತ್ತಾರೆ. ಹಂಪಿಯ ವಿರುಪಾಕ್ಷೇಶ್ವರ ದೇವಸ್ಥಾನದಲ್ಲೊಂದು ತಲೆಕೆಳಗಾಗಿ ಕಾಣುವ ಶಿಖರದ ನೆಳಲನ್ನೊಂದು ಇಲ್ಲಿ ನೆನಪಿಗೆ ತಂದುಕೊಳ್ಳಬಹುದು. ಇಂಥದೆ ಬೇರೊಂದು ರೀತಿಯಲ್ಲಿ ಮಾಯಿದೇವನಿಂದ ಸ್ಥಾಪಿಸಲಾದ ನೆಳಲಿಲ್ಲದ ಕಂಬಕ್ಕೆ ಹಿನ್ನಲೆಯಾಗಿರಬೇಕು. ಸಮಾಧಿಯ ಮೇಲೊಂದು 'ನೆಳಲಿಲ್ಲದ ವಿಜಯಸ್ತಂಭ'ದ ಪ್ರಸ್ತಾಪ ಬಂದಿದೆ. ಅದು ಪೌರಾಣಿಕ ಕಲ್ಪನೆಯಾಗಿರಬಹುದು. 'ಯಕ್ಷಾಣುರೂಪೋಬಲಿಃ' ಎಂದು ಹೇಳುವದುಂಟು. ಯಕ್ಷರಿಗನುಗುಣವಾಗಿ ಬಲಿ ಕೊಡುವಂತೆ ಆಗಿನ ಸಂದರ್ಭದಲ್ಲಿ ಪರವಾದಿಗಳ ಅಸೂಯೆ ಬುದ್ಧಿಗೆ ಮಾಯಿದೇವ ತೋರಿದ ಚಮತ್ಕಾರ ಅದಾಗಿರಬಹುದು.

❑

---

೪೧. ಭೈರವೇಶ್ವರಕಥಾಮಣಿಸೂತ್ರರತ್ನಾಕರ (೧೯೬೮) ಭಾಗ-೨, ಸಂ. ಡಾ. ಆರ್.ಸಿ. ಹಿರೇಮಠ, ಪು-೩೯೯.

೪೨. ಗುರುರಾಜ ಚಾರಿತ್ರ-ಸಂಧಿ-೮, ಪದ್ಯ೧೨.

## ಅಧ್ಯಾಯ : ಮೂರು

# ಮಾಯಿದೇವನ ಶಿವಾನುಭವಸೂತ್ರ ಪ್ರತಿಪಾದಿತ 'ಸ್ಥಲ' ತತ್ತ್ವದ ಆಕರಸಾಹಿತ್ಯ

ಈ ಲೋಕದಲ್ಲಿ ಮಾನವನ ಆವಿರ್ಭಾವವಾದಾಗಿನಿಂದ ಜಗದ್ರಹಸ್ಯದ ಬಗೆಗೆ ಅವನ ಕುತೂಹಲ ಕೊನರಿ ಚಿಂತನದ ಸ್ವರ್ಗಗಂಗೆಯು ನಾನಾ ಪಥಗಳಲ್ಲಿ ಹರಿದಿದೆ. ವಿಶ್ವದ ವಿವಿಧ ದೇಶಗಳಲ್ಲಿ ಈ ರೀತಿಯಾದ ಚಿಂತನ ಪ್ರಭಾವಗಳು ಕಂಡಬಂದರೂ ಮುಖ್ಯವಾಗಿ ಎರಡು ಆಲೋಚನಾ ಸರಣಿಗಳನ್ನು ತತ್ವವಿದರು ಗುರುತಿಸಿದುದುಂಟು. 'ಒಂದು ಸರಣಿ' ಪ್ರಧಾನವಾಗಿ ಗ್ರೀಸ್ ದೇಶದ ದಾರ್ಶನಿಕರ ಪ್ರತಿಭೆಯ ಉನ್ಮೇಷದ ಫಲವಾಗಿದ್ದು, ಪಾಶ್ಚಾತ್ಯತತ್ವಶಾಸ್ತ್ರವೆನಿಸಿಕೊಳ್ಳುತ್ತದೆ. 'ಎರಡನೇ ಸರಣಿ' ಭಾರತದ ಪವಿತ್ರಭೂಮಿಯ ಅಣುಗರಾಗಿದ್ದ ಮಹರ್ಷಿಗಳ ದಿವ್ಯಾನುಭಾವದ ಫಲವಾಗಿದ್ದು, ಭಾರತೀಯ ತತ್ವಶಾಸ್ತ್ರವೆನಿಸಿದೆ. ಇದರಲ್ಲಿ ಮುಂದೆ ಬರುವ ಎಲ್ಲ ವಿಷಯಗಳೂ ಸೂತ್ರರೂಪದಲ್ಲಿ ಮಹರ್ಷಿಗಳ ವಾಣಿಯಾದ ವೇದಾಗಮಗಳಲ್ಲಿ ಕಂಡುಬರುತ್ತಿದ್ದು, ಇದೇ ಚಿಂತನೆಯ ಅನೇಕ ಪ್ರಕಾರವಾದ ಪಲ್ಲವಪುಷ್ಪ - ಫಲಗಳು, ವಿವಿಧ ದಾರ್ಶನಿಕ ಗ್ರಂಥಗಳಲ್ಲಿಕಂಡುಬರುತ್ತವೆ. ಈ ಕಾರಣಗಳಿಂದ "ಭಾರತೀಯ ತತ್ವಶಾಸ್ತ್ರ ಅಥವಾ ದರ್ಶನ" ಅಸಂಖ್ಯವಾದ ಅಭಿಪ್ರಾಯಗಳಿಗೂ ಮತಗಳಿಗೂ ಆಶ್ರಯವಾಗಿದೆ. ಎದುರಿಗೆ ಕಾಣುವ ಭೌತಿಕ ಜಗತ್ತು ಮಾತ್ರ ಸತ್ಯ', ಉಳಿದುದೆಲ್ಲ ಕಲ್ಪನೆ ಎನ್ನುವ ಚಾರ್ವಾಕವಾದದಿಂದ ಆರಂಭಿಸಿ ಎದುರಿಗೆ ಕಾಣುವ ಜಗತ್ತೆಲ್ಲ ಮಿಥ್ಯ, ಬ್ರಹ್ಮಮಾತ್ರ ಸತ್ಯ, ಎನ್ನುವ ಅದ್ವೈತದವರೆವಿಗೆ ಲೆಕ್ಕವಿಲ್ಲದಷ್ಟು ಪರಸ್ಪರ ಭೇದಗಳಿಂದ ನಾನಾ ದರ್ಶನಗಳು ಈ ಸರಣಿಯಲ್ಲಿ ಅಳವಟ್ಟಿವೆ.

ಭಾರತೀಯ ದರ್ಶಗಳಿಗೆಲ್ಲ, ಸತ್ಯದ ದರ್ಶನವೇ ಮುಖ್ಯೋದ್ದೇಶವಾದರೂ ಅವು ಜಗತ್ತನ್ನು ವಿಶ್ಲೇಷಿಸಿದ ರೀತಿಗಳು ಭಿನ್ನಭಿನ್ನವಾಗಿವೆ. ಪಾರಿಭಾಷಿಕ ದೃಷ್ಟಿಯಿಂದ ಭಾರತೀಯ ದರ್ಶನಗಳನ್ನು ' ನಾಸ್ತಿಕ - ಆಸ್ತಿಕ ' ಎಂದು ಎರಡು ವಿಧಗಳಾಗಿ ವಿಂಗಡಿಸಬಹುದು. ಚಾರ್ವಾಕ, ಭೌದ್ಧ, ಜೈನ ಸಿದ್ಧಾಂತಗಳನ್ನು ನಾಸ್ತಿಕ ದರ್ಶನಗಳ ಗುಂಪಿನಲ್ಲಿ ಸೇರಿಸಲಾಗಿದೆ. ನ್ಯಾಯ, ವೈಶಿಷಕ, ಸಾಂಖ್ಯ, ಯೋಗ, ಮೀಮಾಂಸಾ ಹಾಗೂ ವೇದಾಂತ ದರ್ಶನಗಳನ್ನು ಆಸ್ತಿಕ ದರ್ಶನಗಳು ಎಂದು ಕರೆಯಲಾಗಿದೆ. ಮೊದಲೇ ತಿಳಿಸಿರುವಂತೆ ಈ ವಿಂಗಡನೆ ಕೇವಲ ಪಾರಿಭಾಷಿಕ.

ವೇದಾಂತದಲ್ಲಿ ಅದ್ವೈತ, ದ್ವೈತ, ವಿಶಿಷ್ಟಾದ್ವೈತ ಹಾಗೂ ಶಕ್ತಿವಿಶಿಷ್ಟಾದ್ವೈತ ಮೊದಲಾದವುಗಳು ಸಮಾವೇಶಗೊಳ್ಳುತ್ತವೆ. ವೇದಾಂತವೆಂದರೆ, ಬ್ರಹ್ಮಸತ್ಯ; ಉಳಿದದ್ದೆಲ್ಲ ಮಿಥ್ಯ ಎಂದು ಅದ್ವೈತ ಸಾಧಿಸಿದರೆ, ವೇದಾಂತ ದರ್ಶನ ಪ್ರತಿಪಾದಿಸುವುದು 'ಪರಬ್ರಹ್ಮದ ಸತ್ಯತ್ವವನ್ನು' ಆತ್ಮಪರಮಾತ್ಮರ ಭೇದವನ್ನು ವೇದಾಂತ ದರ್ಶನ ಎತ್ತಿಹಿಡಿದಿದೆ ಎಂದು ದ್ವೈತಿಗಳು ಘಂಟಾಘೋಷವಾಗಿ ಸಾರುತ್ತಾರೆ. ಜೀವ-ಜಗತ್ತುಗಳು ನಾರಾಯಣ ಎಂಬ ಪರಮಾತ್ಮನ ಶರೀರ ಭೂತವಾದವುಗಳು, ಅವುಗಳಿಂದ ವಿಶಿಷ್ಟನಾದ ಪರಮಾತ್ಮನು ಒಬ್ಬನೇ ಆದುದರಿಂದ ವಿಶಿಷ್ಟಾದ್ವೈತವೇ ವೇದಾಂತ ದರ್ಶನದ ಪರವ ಗುರಿ ಎಂದು ವಿಶಿಷ್ಟಾದ್ವೈತಿಗಳು ವಾದಿಸುತ್ತಾರೆ.

ಸಕಲ ವೇದಗಳ, ಆಗಮಗಳ, ಉಪನಿಷತ್ತುಗಳ ಶಿವಶರಣರ ವಚನಗಳ ತಾತ್ಪರ್ಯ 'ಪರಶಿವ'. ಅವನು ಶಕ್ತಿವಿಶಿಷ್ಟನಾಗಿದ್ದು ಅದ್ವೈತ ಸ್ವರೂಪನಾಗಿದ್ದಾನೆ. ಅವನ ಸೃಷ್ಟಿಯಾದ ಈ ಜಗತ್ತು ಮಿಥ್ಯೆಯಲ್ಲ. ಸಾಧನಾವಸ್ಥೆಯಲ್ಲಿ

ಆತ್ಮನು ಪರಮಾತ್ಮನಿಂದ ಭಿನ್ನವಾದರೂ ಮುಕ್ತಿಯಲ್ಲಿ ಆತ್ಮನು ಪರಶಿವನಲ್ಲಿ ಲೀನವಾಗುವುದರಿಂದ ಆತ್ಮ-ಪರಮಾತ್ಮರ ಐಕ್ಯ ಅಥವಾ ಸಾಮರಸ್ಯವಸ್ಥೆಯಲ್ಲಿ ಅದ್ವೈತವನ್ನು ಅನುಭವಗೋಚರವಾಗಿ ಶರಣನು ಕಂಡುಕೊಳ್ಳುತ್ತಾನೆ ಎಂಬ ತಾತ್ವಿಕ ಹಿನ್ನಲೆಯಲ್ಲಿ ಷಟ್‌ಸ್ಥಲ ದರ್ಶನವು ರೂಪುಗೊಂಡಿತು.

**ಷಟ್‌ಸ್ಥಲದ ಪರ್ಯಾಯಪದ:**

ಮುಖ್ಯವಾಗಿ ಷಟ್‌ಸ್ಥಲದ ಪರ್ಯಾಯ ಪದಗಳು ಮೂರು. ೧) ಶಕ್ತಿವಿಶಿಷ್ಟಾದ್ವೈತ ( ಶಕ್ತಿಶ್ಚ-ಶಕ್ತಿಶ್ಚ-ಶಕ್ತೀ; ತಾಭ್ಯಾಂ ವಿಶಿಷ್ಟೌ-ಶಕ್ತಿವಿಶಿಷ್ಟೌ-ಜೀವೇಶೌ-ತಯೋಃ-ಅದ್ವೈತಂ=ಶಕ್ತಿವಿಶಿಷ್ಟಾದ್ವೈತಂ) ೨) ವಿಶಿಷಾದ್ವೈತ (ವಿಶ್ವಶೇಷಶ್ಚ= ವಿಶೇಷೌ=ಈಶ-ಜೀವೌ, ತಯೋರದ್ವೈತಂ = ವಿಶೇಷಾದ್ವೈತಮ್) ೩) ಶಿವಾದ್ವೈತ (ಶಿವಶ್ಚ-ಶಿವಶ್ಚ-ಶಿವೌ, ತಯೋರದ್ವೈತಂ=ಶಿವಾದ್ವೈತಮ್) - ಈ ಮೂರು ಪರ್ಯಾಯಪದಗಳಲ್ಲಿ 'ಶಿವಾದ್ವೈತವೆಂಬುದೇ ಹೆಚ್ಚು ಬಳಕೆಯಲ್ಲಿದ್ದುದರಿಂದ, ಮಾಯಿದೇವ ತನ್ನ ಶಿವಾನುಭವಸೂತ್ರದ ಪ್ರತಿಯೊಂದು ಅಧಿಕರಣದಲ್ಲಿ ಈ ಪದವನ್ನೇ ಹೆಚ್ಚಾಗಿ ಬಳಸಿರುವದರಿಂದ, ಆತನ ಅಭಿಪ್ರಾಯವನ್ನೇ ಇಲ್ಲಿ ಅನುಸರಿಸುವುದು ಅನಿವಾರ್ಯ. ಆಳವಾಗಿ ಆಲೋಚಿಸಿದರೆ ಇದೇ ಪದ ಸಮಂಜಸವೆನಿಸುತ್ತದೆ.

**ಶಿವಾದ್ವೈತದರ್ಶನ:**

ಶಿವಾದ್ವೈತ ದರ್ಶನವು ದರ್ಶನ ಶಬ್ದದ ನಿಜವಾದ ಅರ್ಥದಲ್ಲಿ ಶ್ರೇಷ್ಠ ದರ್ಶನವಾಗಿದೆ. ಸತ್ಯದ ಅನ್ವೇಷಣೆಯೇ ದರ್ಶನದ ಮುಖ್ಯ ಉದ್ದೇಶವಾದುದರಿಂದ ಪ್ರಪಂಚದ ಸೃಷ್ಟಿಯ ನಿಗೂಢ ರಹಸ್ಯದ ಸತ್ಯವನ್ನು ಕಾಣಲು ಶರಣರು ಏಕಾಗ್ರತೆಯಿಂದ ಪಡೆದ ಅನುಭವದ ಪರಿಪಾಕವೇ ಈ ದರ್ಶನವಾಗಿ ಫಲಿಸಿದೆ. ಸತ್ಯದ ಸಾಕ್ಷಾತ್ಕಾರವು ಸರ್ವಸುಲಭವಲ್ಲ, ಆ ಸಾಕ್ಷಾತ್ಕಾರವನ್ನು ಪಡೆದುಕೊಂಡವರು ಇತರರಿಗೆ ಅದನ್ನು ತಿಳಿಸುವುದು ಹಾಗೂ ಅನುಭವಗೋಚರ ಮಾಡುವುದು ಇನ್ನೂ ಹೆಚ್ಚು ಕಷ್ಟಕರವಾದ ವಿಷಯ. ೧೨ನೇ ಶತಮಾನದಲ್ಲಿ ಕರ್ನಾಟಕದ ಶರಣರು ಈ ಅದ್ವೈತವನ್ನು ಸಾಧಿಸಿದರು. ದರ್ಶನ ಎಂಬುದು ಶಾಸ್ತ್ರಗಳ ಜಟಿಲ ಪರಿಷ್ಕಾರವುಳ್ಳ ಸಂಸ್ಕೃತಗ್ರಂಥಗಳಲ್ಲಿ ಮಾತ್ರ ದೊರೆಯುತ್ತದೆ ಎಂಬ ಭ್ರಾಂತಿಯನ್ನು ಹೋಗಲಾಡಿಸಿ, ಜನಸಾಮಾನ್ಯರ ದಿನನಿತ್ಯದ ಭಾಷೆಯಲ್ಲೂ ದರ್ಶನದ ಶ್ರೇಷ್ಠತಮ ವಿಚಾರ ಲಹರಿಗಳು ಒಡಮೂಡಲು ಸಾಧ್ಯ ಎಂದು ಸಪ್ರಮಾಣವಾಗಿ ನಿರೂಪಿಸಿದರು. ಇವರು ನಿರೂಪಿಸಿದ ತತ್ವಗಳು ವೇದಾಗಮಗಳಿಗೂ ಅವಿರುದ್ಧ, ಶಾಸ್ತ್ರೀಯವಾಗಿಯೂ ಈ ತತ್ವಗಳನ್ನು ಪ್ರತಿಪಾದಿಸಲು ಸಾಧ್ಯ ಎಂಬುದನ್ನು ಇತರ ದಾರ್ಶನಿಕ ವಿದ್ವಾಂಸರಂತೆ ಮಾಯಿದೇವ ಸಂಸ್ಕೃತಗ್ರಂಥವಾದ 'ಶಿವಾನುಭವಸೂತ್ರ'ದ ಮೂಲಕ ಜಗತ್ತಿಗೆ ತಿಳಿಯಪಡಿಸಿದ್ದಾನೆ.

**ವೀರಶೈವ ಸಿದ್ಧಾಂತ ಪ್ರತಿಪಾದಕರು:**

ವೀರಶೈವ ಸಿದ್ಧಾಂತ ಪ್ರತಿಪಾದಕರು ಪೂರ್ವಾಚಾರ್ಯರು. ಅವರಲ್ಲಿ ಮುಖ್ಯರಾದವರು ಐವರು ಆಚಾರ್ಯರು ಎಂದು ಹೇಳಲಾಗಿದೆ. ಸುಪ್ರಸಿದ್ಧ ವೀರಶೈವ ಕವಿಶೇಖರನಾದ ಪಾಲ್ಕುರಿಕೆ ಸೋಮನಾಥ (ಸು. ೧೩೦೦)ನು ರಚಿಸಿದ ಮಲ್ಲಿಕಾರ್ಜುನ ಪಂಡಿತಾರಾಧ್ಯ ಚರಿತ್ರೆಯಲ್ಲಿ ಬರುವ "ಗಣಸಹಸ್ರನಾಮ"ದಲ್ಲಿ ಇವರ ಹೆಸರುಗಳು ಅಂಕಿತವಾಗಿವೆ.

ಮೇಲೆ ಹೇಳಿದ ಆಚಾರ್ಯರ ಕಾಲ ಅನಿರ್ದಿಷ್ಟ. ಅವರು ಬೋಧಿಸಿದ ಸಿದ್ಧಾಂತಗ್ರಂಥಗಳು ಇಂದು ನಮಗೆ ಉಪಲಬ್ಧವಾಗಿಲ್ಲ. ಆದರೂ ಈ ಪೂರ್ವಾಚಾರ್ಯರ ಬಳಿವಿಡಿದು ಬಂದ ನೀಲಕಂಠಭಾಷ್ಯಕರ್ತೃ ನೀಲಕಂಠ ಶಿವಾಚಾರ್ಯ, ಶ್ರೀಕರಭಾಷ್ಯಕರ್ತೃ ಶ್ರೀಪತಿಪಂಡಿತಾರಾಧ್ಯ, ಶಿವಾದ್ವೈತಮಂಜರಿ ಕರ್ತೃ ಸ್ವಪ್ರಭಾನಂದ ಶಿವಾಚಾರ್ಯ, ಸಿದ್ಧಾಂತ ಶಿಖಾಮಣಿ

ಕರ್ತೃ ಶಿವಯೋಗಿ ಶಿವಾಚಾರ್ಯ, ಕ್ರಿಯಾಸಾರ ಕರ್ತೃ ನೀಲಕಂಠ ಶಿವಾಚಾರ್ಯರ ಶ್ರೇಣಿಯಲ್ಲಿ ಮೊಗ್ಗೆಮಾಯಿದೇವ ವಿಭು ಒಬ್ಬನಾಗಿದ್ದಾನೆ.

**ಶಿವಾನುಭವಸೂತ್ರಂ :**

ಮೊಗ್ಗೆ ಮಾಯಿದೇವ, ಶಾಸ್ತ್ರ ಹಾಗೂ ಅನುಭವಗಳಲ್ಲಿ ಬಲ್ಲಿದವನಾದುದರಿಂದ ಶಾಸ್ತ್ರವನ್ನು ತನ್ನ ಅನುಭವಕ್ಕೆ ತಂದುಕೊಂಡು ತಾನೂ ಆಚರಿಸಿ, ಹೆರರಿಗೆ ಉಪದೇಶಿಸಿ ಅನುಭಾವಿಯಾದವನು. ಶಾಸ್ತ್ರಕ್ಕಿಂತ ಮಿಗಿಲಾಗಿ ಅವನಿಗೆ ಅನುಭವವೇ ಹೆಚ್ಚು ಪ್ರಿಯವಾದುದರಿಂದ ಮಾಯಿದೇವನು ತಾನು ಪ್ರತಿಪಾದಿಸುವ ಸಿದ್ಧಾಂತವನ್ನು 'ಶಿವಾನುಭವಸೂತ್ರಂ' ಎಂದು ಹೆಸರಿಸಿದ್ದಾನೆ.

ಸೂತ್ರ ಎಂದರೆ, ಸಂಕ್ಷಿಪ್ತ ವಚನ ಎಂದು ಇಲ್ಲಿ ಅರ್ಥ.[೧] ಹೇಳಬೇಕಾದುದನ್ನು ಸಂಕ್ಷಿಪ್ತವಾಗಿ ನಿಸ್ಸಂದಿಗ್ಧವಾಗಿ ಹೇಳುವುದು ಸೂತ್ರದ ಶೈಲಿ.[೨] ಶಿವಾನುಭವಸೂತ್ರವು ಕಾರಿಕಾರೂಪವಾದ ಸೂತ್ರಗಳಿಂದ ಕೂಡಿದೆ. ಕಾರಿಕಾ ಎಂದರೆ ಪದ್ಯರೂಪ. ವಿಷಯಗಳನ್ನು ಸುಲಭವಾಗಿ ಮುಖಸ್ಥವನ್ನಾಗಿ ಮಾಡಿಕೊಳ್ಳಲು ಪದ್ಯಗಳು ಸೌಕರ್ಯವನ್ನು ಒದಗಿಸುತ್ತವೆ.

ಶಿವಾನುಭವಸೂತ್ರದಲ್ಲಿ ಎಂಟು ಅಧಿಕರಣಗಳೂ ೪೭೩ ಸೂತ್ರಗಳೂ ಇವೆ. ಈ ಕೃತಿಯಲ್ಲಿ ಬರುವ ಪ್ರಕರಣಗಳಲ್ಲಿನ ವಿಷಯಗಳನ್ನು ಹೀಗೆ ನಿರೂಪಿಸಲಾಗಿದೆ:

**ಅಧಿಕರಣಾನುಕ್ರಮಣಿಕೆ :**

| | |
|---|---|
| ೧. ಪಾರಂಪರ್ಯಕ್ರಮ | ೨. ಸ್ಥಲನಿರ್ದೇಶ |
| ೩. ಲಿಂಗಸ್ಥಲನಿರೂಪಣ | ೪. ಅಂಗಸ್ಥಲನಿರೂಪಣ |
| ೫. ಲಿಂಗಾಂಗಸಂಯೋಗವಿಧಿ | ೬. ಸರ್ವಾಂಗಲಿಂಗಸಾಹಿತ್ಯ |
| ೭. ಅರ್ಪಣಸದ್ಭಾವ | ೮. ಕ್ರಿಯಾವಿಶ್ರಾಂತಿ |

ಶಿವಾನುಭವಸೂತ್ರವು ಮೊದಲು ಮೈಸೂರು ಯಜಮಾನ ವೀರಸಂಗಪ್ಪನವರಿಂದ ಮುದ್ರಣಗೊಂಡಿದೆ. ಅಲ್ಲದೆ ೧೯೦೯ನೆಯ ಕ್ರಿಸ್ತಾಬ್ದಿಯಲ್ಲಿ ಸೋಲಾಪುರದ ರಾವಸಾಹೇಬ ಮಲ್ಲಪ್ಪಾ ಬಸಪ್ಪಾ ವಾರದ ಇವರ ಉದಾರ ಆಶ್ರಯದಿಂದಲೂ ಮುದ್ರಿತವಾಗಿದೆ. ಇದೂ ಅಲ್ಲದೆ, ೧೯೫೭ರಲ್ಲಿ ಏಲೂರಿನ ತ್ರಿಪುರಸುಂದರೀ ಮುದ್ರಾಕ್ಷರ ಶಾಲೆಯಲ್ಲಿ ಮುದ್ರಿತವಾಗಿರುವುದನ್ನು, ಪುನಃ ಶ್ರೀ ಮುರುಘಾಮಠ ಧಾರವಾಡ, ೧೯೬೯ರಲ್ಲಿ ಪ್ರಕಾಶಪಡಿಸಿದೆ. ಈ ಕೃತಿಗೆ ಬಳ್ಳಾರಿಯ ಆಸ್ಥಾನವಿದ್ವಾನ್ ಪಂ. ವೈ. ನಾಗೇಶಶಾಸ್ತ್ರಿಗಳು 'ಭಾವಾರ್ಥ ಬೋಧಿನೀ' ಎಂಬ ಟೀಕೆ ಬರೆದಿದ್ದಾರೆ. ಅಲ್ಲದೆ ಮೈಸೂರಿನ

---

೧. ಸಂಜ್ಞಾ ಚ ಪರಿಭಾಷಾ ಚ ವಿಧಿರ್ನಿಯಮ ಏವ ಚ।
ಅತಿದೇಶೋಽಧಿಕಾರಶ್ಚ ಷಡ್ವಿಧಂ ಸೂತ್ರಲಕ್ಷಣಮ್॥
ಅಲ್ಪಾಕ್ಷರಮಸಂದಿಗ್ಧಂ ಸಾರವದ್ ವಿಶ್ವತೀ ಮುಖಮ್।
ಅಸ್ತೋಭಮನವದ್ಯಂಚ ಸೂತ್ರಂ ಸೂತ್ರವಿದೋ ವಿದುಃ॥
ಉದ್ಧೃತ : ಲಘುಸಿದ್ಧಾಂತಕೌಮುದೀ (೧೯೮೩) (ಸಂ) ಡಾ. ಪ್ರಭಾಕರ ಮಿಶ್ರಃ

೨. ಡಾ. ಶಿವಮೂರ್ತಿಸ್ವಾಮಿಗಳು (೧೯೯೪) 'ಗಣಕಾಷ್ಟಾಧ್ಯಾಯಿ ಈಗ ಕಂಪ್ಯೂಟರ್‌ನಲ್ಲಿ', ತರಂಗ, ೯ ಅಕ್ಟೋಬರ್, ಪು. ೫೯.

ಪ್ರಾಚ್ಯವಿದ್ಯಾ ಸಂಶೋಧನಾಲಯದ ವತಿಯಿಂದಲೂ ಈ ಕೃತಿಯನ್ನು ಸಂಸ್ಕೃತ ಲಿಪಿಯಲ್ಲಿ 'ಅನುಭವಸೂತ್ರ' ಎಂಬ ನಾಮಾಂತರದಿಂದ ಡಾ. ಎಚ್.ಪಿ. ಮಲ್ಲೇದೇವರು ೧೯೮೩ರರಲ್ಲಿ ಸಂಪಾದಿಸಿದ್ದಾರೆ.

**ಷಟ್‌ಸ್ಥಲ ಸಿದ್ಧಾಂತ:**

ವೀರಶೈವದರ್ಶನಕ್ಕೆ ಷಟ್‌ಸ್ಥಲ ಸಿದ್ಧಾಂತವೆಂದು ಅಲ್ಲಲ್ಲಿ ಕರೆಯಲಾಗಿದೆ. ಸಿದ್ಧಾಂತವೆಂಬಲ್ಲಿ ಸಿದ್ಧ ಮತ್ತು ಅಂತ ಎಂಬ ಎರಡು ಅಂಗಗಳಿವೆ. ಸಿದ್ಧ ಎಂದರೆ ವಸ್ತುಸ್ವಭಾವಗಳನ್ನು ನಿರ್ಣಯಿಸುವುದು; ಅಂತವೆಂದರೆ ವ್ಯವಸ್ಥೆ. ಸಿದ್ಧಾಂತವೆಂದರೆ ವಸ್ತುಸ್ವಭಾವ ನಿರ್ಣಯಯೋಜನೆ. ಇದನ್ನೇ ತತ್ವಶಾಸ್ತ್ರವೆಂದು ಕರೆಯಲಾಗಿದೆ. ಇಲ್ಲಿ ಒಂದು ಬಗೆಯ ಶಾಸ್ತ್ರೀಯವಾದ ವಸ್ತುಸ್ವಭಾವ ನಿರ್ಣಯತತ್ತ್ವಯೋಜನೆ ಇದ್ದುದರಿಂದ, ಮಾಯಿದೇವನು ಶಿವಾನುಭವಸೂತ್ರದಲ್ಲಿ "ಷಟ್‌ಸ್ಥಲನಿರ್ಣಯ" ಎಂಬ ಪದವನ್ನು ಮೇಲಿಂದ ಮೇಲೆ ಬಳಸುತ್ತಾನೆ. ಈ ನಿರ್ಣಯ ಮೇಲಿಂದ ಮೇಲೆ ನಡೆದಂತಿದೆ. ಏಕೆಂದರೆ ಆಗಮಗಳಲ್ಲಿಯೂ ಈ ಪದ ಪ್ರಯೋಗವಾಗಿದೆ. ೧೨ನೇ ಶತಮಾನದಲ್ಲೂ ಜ್ಞಾನನಿಧಿ ಚನ್ನಬಸವಣ್ಣವರು ಷಟ್‌ಸ್ಥಲ ನಿರ್ಣಾಯಕರಾಗಿದ್ದುದು ಪ್ರಸಿದ್ಧ. ಆ ನಂತರ ಈ ಪದ, ಮಾಯಿದೇವನೊಂದಿಗೆ ಹೆಚ್ಚು ಹೆಚ್ಚು ಬಳಕೆಯಾಗಿದೆ. ಅನೇಕ ವಿದ್ವಾಂಸರು ಮಾಯಿದೇವನನ್ನು 'ಷಟ್‌ಸ್ಥಲ ನಿರ್ಣಾಯಕ' ಎಂದೇ ಸಂಬೋಧಿಸಿದ್ದಾರೆ. ಆದ್ದರಿಂದ ಇಲ್ಲಿ ಷಟ್‌ಸ್ಥಲಸಿದ್ಧಾಂತವೆಂದರೆ ವಸ್ತುಸ್ವಭಾವಗಳನ್ನು ನಿರ್ಣಯಿಸುವ ಯೋಜನೆಯೆಂದು ಹೇಳಬಹುದು. ನಿರ್ಣಾಯಕರೆಂದರೆ, ಆ ಎಲ್ಲ ವಸ್ತುಗಳನ್ನು ಯೋಜಿಸಿ ನಿರ್ಣಯ ಕೈಕೊಂಡವರೆಂದು ಅರ್ಥವಾಗುವುದು.

ಈ ಹಿನ್ನೆಲೆಯಲ್ಲಿ ಮಾಯಿದೇವ, ವೇದಾಗಮ ವಚನಶಾಸ್ತ್ರಾದಿಗಳಲ್ಲಿ ಕೈಕೊಂಡ ನಿರ್ಣಯದ ಫಲವೇ ಈ 'ಶಿವಾನುಭವಸೂತ್ರ'ವೆಂದು ಹೇಳಬೇಕಾಗುತ್ತದೆ.

**ಷಟ್‌ಸ್ಥಲದರ್ಶನವು ಉಪಾಸನಾ ಮಾರ್ಗವೆ ?**

ಷಟ್‌ಸ್ಥಲಮಾರ್ಗವು ವೀರಶೈವರ ಲಿಂಗೋಪಾಸನೆಗಾಗಿ ಯುಕ್ತಿಯುಕ್ತವಾಗಿ ಕಲ್ಪಿಸಿದ ಸಾಧನಾಮಾರ್ಗವೇ ಹೊರತು ಅದೊಂದು ದರ್ಶನವಾಗದು. ಜೀವ-ಜಗತ್ತು-ಈಶ್ವರಸ್ವರೂಪವಿವೇಚನೆಯೇ ದರ್ಶನದ ಗುರಿ. ಅಲ್ಲದೆ ಇವುಗಳಿಗಿರುವ ಪರಸ್ಪರ ಸಂಬಂಧ ಹೇಳುವುದರ ಜೊತೆಗೆ ಬಂಧ, ಬಂಧಕಾರಣ, ಮೋಕ್ಷ, ಮೋಕ್ಷೋಪಾಯ ಎಂಬ ಚತುರ್ವ್ಯೂಹಾತ್ಮಕ ವಿಷಯಗಳ ಪ್ರತಿಪಾದನೆ ಹಾಗೂ ಪೂರ್ವಪಕ್ಷನಿರಸನಪೂರ್ವಕವಾಗಿ ಸಿದ್ಧಾಂತವು ಸ್ಥಾಪಿತವಾಗಿರಬೇಕು. ಷಟ್‌ಸ್ಥಲ ಸಿದ್ಧಾಂತದಲ್ಲಿ ಈ ರೀತಿಯಾದ ನಿರೂಪಣೆಯಿಲ್ಲವೆಂದು ಕೆಲವರ ಗ್ರಹಿಕೆ. ಆದರೆ ಮೇಲಿನ ಎಲ್ಲ ಗ್ರಹಿಕೆಗಳು ಸತ್ಯಕ್ಕೆ ದೂರವಾದವುಗಳು. ಈ ಎಲ್ಲದಕ್ಕೂ ಉತ್ತರವೆಂಬಂತೆ, ಮಾಯಿದೇವನ ಶಿವಾನುಭವಸೂತ್ರಪ್ರತಿಪಾದಿತ ಷಟ್‌ಸ್ಥಲಸಿದ್ಧಾಂತವು ಮೈದಾಳಿದಂತಿದೆ. ಷಟ್‌ಸ್ಥಲಸಿದ್ಧಾಂತವು ಉಪಾಸನೆಯ ಮಾರ್ಗವೆಂಬುದೇನೋ ನಿಜ. ಆದರೆ, ಅದು ಕಾಲ್ಪನಿಕವಲ್ಲ. ಅನುಭವದಿಂದ ನಿರ್ಮಾಣಗೊಂಡ ತತ್ತ್ವಬದ್ಧ ದರ್ಶನವೆಂಬುದು ಮಾಯಿದೇವನ ಶಿವಾನುಭವಸೂತ್ರದಿಂದಷ್ಟೇ ಅಲ್ಲದೆ, ಶರಣಸಾಹಿತ್ಯದ ಅಧ್ಯಯನದಿಂದಲೂ ವೇದ್ಯವಾಗುತ್ತದೆ.[೩] ಇದೂ ಅಲ್ಲದೆ ತರ್ಕನಿಷ್ಠೆಯ ದರ್ಶನಕ್ಕಿಂತ ಅನುಭವಶೀಲ ದರ್ಶನಕ್ಕೆ ಹೆಚ್ಚಿನ ಮಹತ್ವವಿದೆ. ಅದೇ ರೀತಿ ಮತನಿಷ್ಠೆಯ ದಾರ್ಶನಿಕನಿಗಿಂತ ಮಾನವೀಯ ಅಥವಾ ವಸ್ತುನಿಷ್ಠ ದಾರ್ಶನಿಕನಿಗೆ ವಿಚಾರವಾದಿಕೊಟ್ಟ ಮನ್ನಣೆ ಗರಿಷ್ಠವಾದದ್ದು. ಅದೇನೇ ಇದ್ದರೂ ಷಟ್‌ಸ್ಥಲಮಾರ್ಗ ಅನುಭವಾತ್ಮಕ ದರ್ಶನವೆಂಬುದು ಸ್ಪಷ್ಟ.

---

೩. "ಈ ಧರ್ಮಭೂಮಿ ಎನಿಸುವ ಕರ್ನಾಟಕದಲ್ಲಿ ಶಿವಶರಣರು ಮಾನವನ ಅತ್ಯಂತಿಕ ಧ್ಯೇಯ ಸಾಧನೆಯ ದೃಷ್ಟಿಯಿಂದಲೇ ಶಿವಪಥವನ್ನು ಶೋಧಿಸಿ ಸಿದ್ಧಿಯನ್ನು ಪಡೆದರು", ಡಾ. ಆರ್.ಆರ್. ದಿವಾಕರ (೧೯೭೬) 'ಶರಣರ ಅನುಭವ ಅನುಭಾವ ಅನುಭೂತಿ', ಪು. ೨೦.

ಅಲ್ಲದೆ ಇಲ್ಲಿ ಜೀವ (ಅಂಗ) - ಜಗತ್ತು (ಶಿವನಪ್ರಸಾದ) - ಈಶ್ವರ (ಅಂಗ) - ಎಂಬ ತತ್ವತ್ರಯದ ಜಿಜ್ಞಾಸೆಯೂ ನಡೆದಿದೆ. ಈ ಮೂರನ್ನು ಅವಲಂಬಿಸಿಯೇ ಷಟ್‌ಸ್ಥಲ ಸಿದ್ಧಾಂತವು ಪ್ರಾರಂಭಗೊಳ್ಳುತ್ತದೆ. ಇದೂ ಅಲ್ಲದೆ ಶಿವಾನುಭವಸೂತ್ರದ ಉತ್ತರಭಾಗದಲ್ಲಿ ತತ್ವತ್ರಯದ ಪರಸ್ಪರಸಂಬಂಧ ಹಾಗೂ ಸಾಮರಸ್ಯ ಕುರಿತಾದ ದೀರ್ಘ ವಿವೇಚನೆಯಿದೆ. ಷಟ್‌ಸ್ಥಲದರ್ಶನದ ದೃಷ್ಟಿಯಲ್ಲಿ ಆಣವಾದಿ ಮಲತ್ರಯದಿಂದ ಜೀವನು ಬಂಧಿತನಾಗುವುದೇ ಬಂಧ.[೪] ಮಲತ್ರಯಗಳೇ ಬಂಧಕ್ಕೆ ಕಾರಣ. ಲಿಂಗಾಂಗಸಾಮರಸ್ಯದ ಮೂಲಕ ಜೀವ ಶಿವನಾಗುವುದೇ ಮೋಕ್ಷ. ಶಿವದೀಕ್ಷೆಯಿಂದ ಜೀವನು ಮಲತ್ರಯರಹಿತನಾಗಿ ಷಟ್‌ಸ್ಥಲ ಮಾರ್ಗಕ್ಕನುಸರಿಸಿ ಲಿಂಗೋಪಾಸಕನಾಗುವುದೇ ಮೋಕ್ಷೋಪಾಯ. ಹೀಗೆ ಉಳಿದ ದರ್ಶನಗಳಂತೆ ಚತುರ್ವ್ಯೂಹಾತ್ಮಕ ವಿಷಯದ ವಿವೇಚನೆಯೂ ಷಟ್‌ಸ್ಥಲದಲ್ಲಿ ನಡೆದಿದೆ.

### I. ಸ್ಥಲತತ್ವದ ಉಗಮ ಹಾಗೂ ವಿಕಾಸ:

ವಸ್ತುವಿನ ಸತ್ಯಭೂತವಾದ ತಾತ್ತ್ವಿಕಸ್ವರೂಪವು ಯಾವುದರಿಂದ ನೋಡಲು ಸಾಧ್ಯವೋ ಅದುವೇ ದರ್ಶನವೆನಿಸಿದೆ. ಸ್ಥೂಲ ಹಾಗೂ ಸೂಕ್ಷ್ಮ ಪದಾರ್ಥಗಳೆರಡೂ ದರ್ಶನಶಾಸ್ತ್ರದ ವಿಷಯಗಳಾಗಿವೆ. ಶಿವಾನುಭವದ ಪ್ರಾಪ್ತಿಗಾಗಿ ಈ ಉಭಯ ಪದಾರ್ಥಗಳ ವಿಸ್ತೃತ ಜ್ಞಾನವು ಅತ್ಯಗತ್ಯ. ಚೇತನಾಚೇತನಾತ್ಮಕವಾದ ಪ್ರಪಂಚದ ಸೃಷ್ಟಿಸ್ಥಿತಿಲಯಗಳಿಗೆ ಕಾರಣವಾದುದು[೫] ಅಂದರೆ, ಸೃಷ್ಟಿಸ್ಥಿತಿಲಯವೆಂಬ ಚಿತ್ರಕ್ಕೆ ಭಿತ್ತಿ (ಗೋಡೆ)ಯಂತೆ ಆಧಾರವಾಗಿರುವುದು[೬] ಸ್ಥಲವೆನಿಸುತ್ತದೆ. ಸ್ಥಲವೇ ಶಿವನೆಂದು ಶಾಸ್ತ್ರಗಳಲ್ಲಿ ಹೇಳಲಾಗಿದೆ.[೭] ಶಿವ ಹಾಗೂ ಸ್ಥಲ ಪರಸ್ಪರ ಪರ್ಯಾಯ ಶಬ್ದಗಳಾಗಿವೆ. 'ಸ್ಥಲ' ಎಂದರೆ ಅಸ್ತಿತ್ವ ಅಥವಾ ಸತ್ತೆಯೆಂದು ಹೇಳಬಹುದು. ಅದು ಸಮಸ್ತಜಗತ್ತಿಗೆ ಕಾರಣವಾಗಿದೆ. ಜೀವಜಗತ್ತಿನಿಂದ ಅದು ಬೇರೆಯಾಗಿದ್ದರೂ ಎಲ್ಲದರಲ್ಲಿ ವ್ಯಾಪ್ತ ಹಾಗೂ ಅಂತರ್ನಿಹಿತವಾಗಿದೆ. ಮಾನವಬುದ್ಧಿಗೆ ನಿಲುಕದಿದ್ದರೂ ಅದು ಅಜ್ಞೇಯವಲ್ಲ. ಈ ರೀತಿಯಾಗಿ ಸ್ಥಲ ವಿಶ್ವಾತೀತ, ವಿಶ್ವಮಯವಾಗಿದೆ.

---

೪. ಮಲತ್ರಯ : (i) ಆಣವಮಲ (ii) ಮಾಯೀಮಲ (iii) ಕಾರ್ಮಿಕಮಲ ಎಂದು ಮೂರುವಿಧ. ಈ ಮಲಗಳ ಉತ್ಪತ್ತಿ; ಸ್ವರೂಪ, ಸ್ವಭಾವಗಳ ಬಗೆಗೆ ಅಭಿನವ ಗುಪ್ತಪಾದಾಚಾರ್ಯರು ಬಹಳ ಸರಳವಾದ ಸುಂದರವಾದ ವಿವರಣೆಯನ್ನು ನೀಡಿದ್ದಾರೆ.

ತುಷಕಂಬುಕಕಿಂಶಾರುಕಮುಕ್ತಂ ಬೀಜಂ ಯಥಾಂಕುರಂ ಕುರುತೇ ।
ನೈವ ತಥಾಣವಮಾಯಾಕರ್ಮವಿಯುಕ್ತೋಭವಾಂಕುರಂ ಹಿ ಆತ್ಮಾ ॥ (ತಂತ್ರಸಾರ ೫-೭)

ಭತ್ತದ ಕಾಳನ್ನು ಬಿತ್ತಿದಾಗ ಮೊಳಕೆಯಾಗಿ ಪೈರಾಗುತ್ತದೆ. ಪೈರು ಬೆಳೆದು ತೆನೆಯಾಗುವಾಗ, ಎಳೆತೆನೆಯಲ್ಲಿ ಕೇವಲ ಹಾಲು ಕಂಡುಬರುತ್ತದೆ. ಬಲಿತಮೇಲೆ ಮೇಲಿನ ಭಾಗವು ಹೊಟ್ಟಾಗಿಯೂ, ಗರ್ಭದಲ್ಲಿರುವುದು ಅಕ್ಕಿಯಾಗಿಯೂ, ಅಕ್ಕಿಯ ಅಂಶಕ್ಕೂ ಹೊಟ್ಟಿಗೂ ಮಧ್ಯೆ ಇರುವ ಅಂಶವು ತೌಡಿನ ಮುಸುಕಾಗಿಯೂ ರೂಪವನ್ನು ಹೊಂದಿರುತ್ತದೆ. ಈ ತೌಡಿನ ಮುಸುಕು ಎರಡು ರೀತಿಯಾಗಿರುತ್ತದೆ. ಒಂದು ದಪ್ಪ ತೌಡು, ಇನ್ನೊಂದು ತೆಳುವಾದ ಸೂಕ್ಷ್ಮತೌಡು. ಇದನ್ನು ಸಂಸ್ಕೃತದಲ್ಲಿ ತುಷಾ(ಹೊಟ್ಟು) ಕಿಂಶುರಾಕ (ದಪ್ಪತೌಡು) ಕಂಬುಕ (ಸಣ್ಣ ತೌಡು) ಎನ್ನುತ್ತಾರೆ. ತೆನೆ ಬಿಡುವಾಗ ಈ ಮೂರು ಅಂಶಗಳು ಪೈರಿನಲ್ಲಿ ಅಭಿನ್ನವಾಗಿ ಅಡಗಿದ್ದು, ಬಲಿತಾಗ ಈ ಮೂರೂ ಬೇರೆಬೇರೆಯಾಗಿ ತೋರುತ್ತವೆ. ಈ ರೀತಿಯ ಆವರಣದಿಂದಲೇ ಇದು ಮತ್ತೆ ಮೊಳಕೆ ಬರಲು ಸಾಧ್ಯ. ಇದೇ ರೀತಿಯಾಗಿ ಮಲಾವರಣಗಳು ಜನ್ಮಾಂತರವನ್ನುಂಟು ಮಾಡುತ್ತವೆ. ಈ ಮೂರು ಮಲಗಳೂ ಚಿದಾತ್ಮನ ಇಚ್ಛಾ, ಜ್ಞಾನ, ಕ್ರಿಯಾಶಕ್ತಿಗಳನ್ನು ಸಂಕೋಚಗೊಳಿಸುತ್ತವೆ. ಇದೇ ಅಜ್ಞಾನ.

೫. ಯತ್ರಾದೌ ಸ್ಥೀಯತೇ ವಿಶ್ವಂ ಪ್ರಾಕೃತಂ ಪೌರುಷಂ ಯತಃ ।
ಲೀಯತೇ ಪುನರಂತೇ ಚ ಸ್ಥಲಂ ತತ್ಪ್ರೋಚ್ಯತೇ ತತಃ ॥
- ಶಿವಾನುಭವಸೂತ್ರಂ, ಪ್ರಥಮಾಧಿಕರಣ, ಶ್ಲೋಕ ೪.

೬. ತ್ರೈಲೋಕ್ಯ ಸಂಪದಾಲೇಖ್ಯ ಸಮುಲ್ಲೇಖನ ಭಿತ್ತಯೇ ।
ಸಚ್ಚಿದಾನಂದರೂಪಾಯ ಶಿವಾಯ ಬ್ರಹ್ಮಣೇ ನಮಃ ॥ ೧-೧.
ಪ್ರೊ. ಸಂ.ಶಿ. ಭೂಸನೂರಮಠ, (ಸಂ)(೧೯೬೨) ವೀರಶೈವಸಿದ್ಧಾಂತಶಿಖಾಮಣಿ, ಪು. ೨.

೭. 'ಶೇರತೆ ಅಸ್ಮಿನ್ ಭುವನಾನಿ ಇತಿ ಶಿವಃ' ಶಿವಾನುಭವಸೂತ್ರಂ (ಭಾವಾರ್ಥಬೋಧಿನೀ) ಪು. ೧೪.

ಸ್ಥಲದ ಪರಿಕಲ್ಪನೆಯ ಪರಿಪ್ರೇಕ್ಷದಲ್ಲಿ ಕಾಣುವ ಈ ಭೌತಿಕ ಜಗತ್ತಿನ ನೈಜ ಸ್ವರೂಪವೇನು? ಅದು ಚೇತನವೋ ಅಥವಾ ಅಚೇತನವೋ? ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣ ಯಾವುದು ? ಪರಿವರ್ತನಶೀಲ ಜಗತ್ತಿನ ಮೂಲದಲ್ಲಿರುವ ಆ ತತ್ತ್ವ ಯಾವುದು? ಎಂಬ ಪ್ರಶ್ನೆಗಳು ಸಹಜವಾಗಿ ಜಿಜ್ಞಾಸುವಿನ ತಲೆಯಲ್ಲಿ ಸುಳಿಯುತ್ತವೆ.

ಮನುಷ್ಯಬುದ್ಧಿಯೂ ಏಕಪ್ರಕಾರವಾಗಿಲ್ಲ, ಆದುದರಿಂದಲೇ ಎಲ್ಲ ದರ್ಶನಗಳಲ್ಲಿ ಅಧಿಕಾರಭೇದದಿಂದಾಗಿ 'ಶಿವ' ಸಂಬಂಧಧಾರಣೆಗಳು ವಿಭಿನ್ನವಾಗಿವೆ. ಅದನ್ನು ಕೆಲವರು 'ಒಂದು' ಎಂದು ತಿಳಿದು ಅದ್ವೈತವಾದದ ಕಲ್ಪನೆಗೆಳೆಯಬಹುದು. ಇನ್ನು ಕೆಲವರು 'ದ್ವೈತತತ್ತ್ವ'ವೆಂದು ಅಂಗೀಕರಿಸಬಹುದು. 'ಅನೇಕವಾದ'ದ ಸಮರ್ಥಕರೂ ಹಲವರಿದ್ದಾರೆ. ಭಾರತೀಯ ದಾರ್ಶನಿಕ ಚಿಂತನದ ಮೂಲ ವೈದಿಕಸಾಹಿತ್ಯದಲ್ಲಿ ನಿಹಿತವಾಗಿದೆ. ಮೊಟ್ಟಮೊದಲು ವೈದಿಕವಾಙ್ಮಯದಲ್ಲಿಯೇ ಸ್ಥಲತತ್ತ್ವದ ಚಿಂತನ ಉಪಲಬ್ಧವಾಗುತ್ತದೆ. ವೇದವನ್ನೇ ಭಾರತೀಯದರ್ಶನದ ಮೂಲಾಧಾರವೆಂದು ಒಪ್ಪಿಕೊಳ್ಳಲಾಗಿದೆ.

**ಪ್ರಜ್ಞಾಮೂಲ ಹಾಗೂ ತರ್ಕಮೂಲ:**

ವೈದಿಕ ದರ್ಶನದಲ್ಲಿ ಸ್ಥಲತತ್ತ್ವವನ್ನು 'ಸತ್' ಸಂಜ್ಞೆಯಿಂದ ಅಭಿಹಿತಗೊಳಿಸಲಾಗಿದೆ. 'ಸತ್'ದ ವಿಶ್ಲೇಷಣೆಯ ಸಂದರ್ಭದಲ್ಲಿ ಅನುಭವಗಮ್ಯ ವಿಷಯದಪೇಕ್ಷೆಗಿಂತ, ಅನುಭಾವದ ಕರ್ತೃವಿನ ಕಡೆಗೆ ಹೆಚ್ಚು ಗಮನವಿತ್ತಂತಿದೆ. ಋಗ್ವೈದಿಕ ಕಾಲವು ಭಾರತೀಯ ವಿವೇಚಕರಲ್ಲಿನ ಎರಡು ಪ್ರವೃತ್ತಿಗಳನ್ನು ತೆರೆದಿಟ್ಟಿದೆ. ಒಂದು ಪ್ರಜ್ಞಾಮೂಲ ಪ್ರವೃತ್ತಿ, ಇನ್ನೊಂದು ತರ್ಕಮೂಲ ಪ್ರವೃತ್ತಿ. ಪ್ರಜ್ಞಾಮೂಲ ಪ್ರವೃತ್ತಿಯಲ್ಲಿ ಅಂತರ್ಜ್ಞಾನದ ಆಧಾರದ ಮೇಲೆ ತತ್ತ್ವಗಳ ಆಲೋಚನೆ ನಡೆದರೆ, ತರ್ಕಮೂಲ ಪ್ರವೃತ್ತಿಯಲ್ಲಿ ತಾರ್ಕಿಕಬುದ್ಧಿಯ ಉಪಾದೇಯತೆಯನ್ನು ಸ್ವೀಕರಿಸಲಾಗಿದೆ. ಉಪನಿಷದಿಕ ಚಿಂತನಗಳಲ್ಲಿ ಈ ಪ್ರವೃತ್ತಿಗಳ ಸ್ಪಷ್ಟ ನೋಟವಿದೆ. ವೇದ ಪ್ರತಿಪಾದ್ಯ ಕರ್ಮಕಾಂಡ ವಿವೇಚನೆಯಲ್ಲಿ ತರ್ಕಮೂಲ ಪದ್ಧತಿಯ ಪ್ರಯೋಗವನ್ನು ಗುರುತಿಸಬಹುದು. ಇದರಿಂದ ಮೀಮಾಂಸಾಶಾಸ್ತ್ರದ ಉದಯವಾಯಿತು. ಹಾಗೂ ಜ್ಞಾನಕಾಂಡ ಅಥವಾ ಉಪನಿಷತ್ತಿನ ತತ್ತ್ವಜ್ಞಾನದ ಪರ್ಯವಸಾನವು, ಜೀವಬ್ರಹ್ಮದ ಅದ್ವೈತವನ್ನು ಸ್ವೀಕರಿಸುವ ಪ್ರಜ್ಞಾಮೂಲ ಅದ್ವೈತದಲ್ಲಾಯಿತು. ಇದಕ್ಕೆ ವ್ಯತಿರಿಕ್ತವಾಗಿ ಶುದ್ಧತರ್ಕಮೂಲ ಜ್ಞಾನದ ಊಹಾಪೋಹದ ಫಲವಾಗಿ ಕಾಲಾಂತರದಲ್ಲಿ ಪ್ರಕೃತಿ-ಪುರುಷರ ದ್ವೈತವನ್ನು ಸ್ವೀಕರಿಸುವ ಸಾಂಖ್ಯಯೋಗ, ಹಾಗೂ ಯಥಾರ್ಥವಾದಿಗಳಾದ ನ್ಯಾಯ ವೈಶೇಷಿಕ ಸಂಪ್ರದಾಯಗಳು ವಿಕಾಸವಾದವು.

ಕೆಲವು ದಾರ್ಶನಿಕರು ವೇದಗಳನ್ನು ಒಪ್ಪಿಕೊಳ್ಳದೆ ನಿರಪೇಕ್ಷ ಭಾವಾಲಂಬಿಗಳಾಗಿ, ಸ್ವತಂತ್ರಬುದ್ಧಿಯಿಂದ ತತ್ತ್ವಗಳನ್ನು ಸಮೀಕ್ಷಿಸಿದರು. ಚಾರ್ವಾಕರ ಭೌತಿಕವಾದ, ಬೌದ್ಧರ ಅನಾತ್ಮವಾದ, ವಿಜ್ಞಾನವಾದ ಹಾಗೂ ಶೂನ್ಯವಾದ ಮತ್ತು ಜೈನರ ಸ್ಯಾದ್ವಾದ - ಇವು ಈ ಪರಂಪರೆಯ ಹಿನ್ನೆಲೆಯಲ್ಲಿ ಬೆಳೆದುಬಂದವು.[೮]

ಭಾರತೀಯ ದರ್ಶನದ ವಿಶ್ಲೇಷಣೆಯು ಎಲ್ಲಿಂದಾದರೂ ಪ್ರಾರಂಭವಾಗಿರಲಿ, ಅದರಲ್ಲಿ "ಸ್ಥಲತತ್ತ್ವ"ವೇ ಮೂಲಾಧಾರವಾಗಿರುವುದು ದೃಷ್ಟಿಗೋಚರವಾಗುತ್ತದೆ. ಏಕೆಂದರೆ ಆತ್ಮ, ಸೃಷ್ಟಿ ಹಾಗೂ ನೈತಿಕತೆಗೆ ಸಂಬಂಧಿಸಿದ ವಿವೇಚನೆ-ಆಧ್ಯಾತ್ಮಿಕ ತತ್ತ್ವದ ಗುರಿಯಾಗಿದೆ.

---

೮. ಬಲದೇವ ಉಪಾಧ್ಯಾಯ (೧೯೪೨) ಭಾರತೀಯದರ್ಶನ, ಪು. ೫೪೨.

**ವೇದೋಪನಿಷತ್ತು ಹಾಗೂ ಗೀತೆಯಲ್ಲಿ ಸ್ಥಲತತ್ತ್ವ:**

ಭಾರತೀಯ ದರ್ಶನದ ಮೂಲಪ್ರವೃತ್ತಿಯು ಮುಖ್ಯವಾಗಿ ಆಧ್ಯಾತ್ಮಿಕವಾಗಿದೆ. ಸಮಸ್ತ ದಾರ್ಶನಿಕಚಿಂತನದ ಮೂಲಬೇರು ವೇದವೇ ಆಗಿದೆ. ವೇದವು ಪ್ರತ್ಯಕ್ಷಕ್ಕೆ ಅಗಮ್ಯ ಹಾಗೂ ಅನುಮಾನಕ್ಕೆ ಅನುದ್ಭಾವಿತವಾಗಿ, ಅಲೌಕಿಕ ಹಾಗೂ ಅತೀಂದ್ರಿಯ ಉಪಾಯಕ್ಕೆ ತಿಳುವಳಿಕೆಯನ್ನು ನೀಡುತ್ತದೆ.[೯]

**೧. ಬಹುದೇವವಾದ:**

ವೈದಿಕಕಾಲದ ಪ್ರಾರಂಭದಲ್ಲಿ ಬಹುದೇವತಾವಾದದ ಮಾನ್ಯವು ಪರಿಲಕ್ಷಿತವಾಗಿದೆ. ದೇವತೆಗಳನ್ನು ಪ್ರಕೃತಿಯ ವಿಭಿನ್ನ ಶಕ್ತಿಗಳ ಶಾಸಕರೆಂದು ಪರಿಗಣಿಸಲಾಗಿದೆ. ಈ ವೈದಿಕ ದೇವತೆಗಳಲ್ಲಿ ಎಲ್ಲರಿಗಿಂತ ಮಹತ್ವದ ದೇವತೆಯೆಂದರೆ ವರುಣ. ಅವನು ಪ್ರಕೃತಿಯ ಹಾಗೂ ನೈತಿಕ ನಿಯಮಗಳ ರಕ್ಷಕನಾಗಿದ್ದಾನೆ. ಇವನನ್ನು ಪರಮ ಈಶ್ವರ-ದೇವರದೇವನೆಂದು ಹೊಗಳಲಾಗಿದೆ. ಸೂರ್ಯ ಮತ್ತು ಪ್ರಕಾಶದ ಅಭಿವ್ಯಕ್ತಿಗೆ ಕಾರಣನಾದ "ಮಿತ್ರದೇವ"ನ ವರ್ಣನೆಯನ್ನು ವರುಣನೊಡನೆಯೇ ಮಾಡಲಾಗಿದೆ.

ವೈದಿಕ ದೇವರಲ್ಲಿ "ಇಂದ್ರ"ನ ಸ್ಥಾನ ಮಹತ್ವದ್ದಾಗಿದೆ. ಈತ ಶತ್ರುಗಳ ಮೇಲೆ ವಿಜಯವಿಧಾತ ದೇವತೆಯಾಗಿದ್ದಾನೆ. ಇಂದ್ರನೊಡನೆ ವಾಯು, ಮರುದ್ಗಣ ಹಾಗೂ ರುದ್ರನ ಸ್ತುತಿಯೂ ಇದೆ. ವಾಯುದೇವತೆ ಸರ್ವವ್ಯಾಪಕನಾಗಿದ್ದಾನೆ. ಮರುದ್‌ಗಣ ಭಯಂಕರ ಬಿರುಗಾಳಿಯ ದೇವತೆಯಾದರೆ, ರುದ್ರ ಭಯಾನಕ ಶಬ್ದೋತ್ಪತ್ತಿಯ ದೇವತೆ ಸೋಮ ಕೂಡ ದೇವತಾ ರೂಪದಲ್ಲಿ ಪ್ರತಿಷ್ಠಿತನಾಗಿದ್ದಾನೆ. ಈತ ಸ್ಫೂರ್ತಿದಾಯಕ ದೇವತೆ. ವೈದಿಕಕಾಲದಲ್ಲಿ "ವಿಷ್ಣು" ದೇವತಾರೂಪ ಪಡೆದರೂ ಅಲಕ್ಷ್ಯಕ್ಕೊಳಗಾಗಿದ್ದಾನೆ. ಸೂರ್ಯ ಪ್ರಕಾಶ ಕೊಡುವ ದೇವತೆ. ರಾತ್ರಿಯ ಸಹೋದರಿ "ಉಷಾ" ಸ್ತ್ರೀದೇವತೆ. ಆದಿತ್ಯರ ತಾಯಿ ಅದಿತಿ ಇವಳದೂ ಅಲ್ಲಿ ವರ್ಣನೆಯಿದೆ. ಋಗ್ವೇದದ ದೇವತೆಗಳಲ್ಲಿ ಅಗ್ನಿಗೆ ಹೆಚ್ಚಿನ ಸ್ಥಾನವಿದೆ. ಯಜ್ಞದ ಹವಿಸ್ಸುಗಳನ್ನು ದೇವತೆಗಳವರೆಗೆ ತಲುಪಿಸುವ ಕಾರ್ಯ ಇವನದು. ಸೌರಜಗತ್ತಿನ ದೇವತೆ 'ಪೂಸನ್'. ಇವನು ಪಶುಗಳ ಸಂರಕ್ಷಕ.

ಈ ರೀತಿಯಾಗಿ ವೇದಗಳಲ್ಲಿ ಅನೇಕ ದೇವೀ ದೇವತೆಗಳ ವರ್ಣನೆಯಿದೆ. ವರುಣ, ಮಿತ್ರ, ಇಂದ್ರ, ವಾಯು, ಮರುದ್, ರುದ್ರ, ವಿಷ್ಣು, ಸೋಮ, ಅಗ್ನಿ, ಉಷಾ, ಅದಿತಿ ಆದಿ ಮುಖ್ಯದೇವತಾಗಣ ವಿಶೇಷವಾಗಿ ವರ್ಣಿಸಲ್ಪಟ್ಟಿದೆ. ಆದುದರಿಂದ ವೈದಿಕ ವಿಚಾರವನ್ನು ನಾವು ಅನೇಕೇಶ್ವರವಾದವೆಂದು ಕರೆಯಬಹುದು. ಆದರೆ ಎಲ್ಲ ದೇವತೆಗಳು ಆ ಒಂದೇ ವಸ್ತುವಿನ ಅನೇಕ ನಾಮರೂಪಗಳೆಂದು ಅಲ್ಲಿಯೇ ಘೋಷಿಸಲಾಗಿದೆ.[೧೦] ವೇದದಲ್ಲಿ ಬಹುದೇವತಾವಾದವು ಮಾನ್ಯವಾಗಿದ್ದರೂ, ಅಲ್ಲಿ ದೇವತೆಗಳಿಗೆ ಪ್ರತ್ಯೇಕವಾದ ಸ್ವಾತಂತ್ರ್ಯಾತ್ಮಕ ಹಕ್ಕನ್ನು ನೀಡಿಲ್ಲವೆಂಬುದಂತೂ ಸ್ಪಷ್ಟವಾಗಿ ಕಂಡುಬರುತ್ತದೆ. ಅಂತಿಮವಾಗಿ ಅವರು ಗೌಣರಾಗುತ್ತಾರೆ. ಒಂದೇ ಆದ ಸ್ಥಲತತ್ವದಲ್ಲಿ ವಿಲೀನರಾಗುತ್ತಾರೆ. ಆದುದರಿಂದ ಕೆಲವಿದ್ವಾಂಸರು ವೇದದ ಏಕತೆಯಲ್ಲಿ ಅನೇಕತೆಯನ್ನು ಪ್ರತಿಪಾದಿಸುವ ವಿಚಾರಕ್ಕೆ ಹೆಚ್ಚಿನ ಮಹತ್ವವಿತ್ತಿದ್ದಾರೆ.

---

೯. "ಶ್ರುತಿಶ್ಚ ನಃ ಪ್ರಮಾಣಮತೀಂದ್ರಿಯಾರ್ಥ ವಿಜ್ಞಾನೋತ್ಪತ್ತೌ", ಬ್ರಹ್ಮಸೂತ್ರ ಶಾಂಕರಭಾಷ್ಯ -೨-೩-೧೧.

೧೦. "ಏಕಂ ಸದ್ ವಿಪ್ರಾ ಬಹುಧಾವದಂತಿ" - ಋಗ್ವೇದ ೧-೬೪-೪೬.

೨. ಏಕೇಶ್ವರವಾದ:

ಋಗ್ವೇದದಲ್ಲಿ ಏಕೇಶ್ವರವಾದವನ್ನು ಸ್ವೀಕರಿಸುತ್ತಾ ಹೀಗೆ ಹೇಳಲಾಗಿದೆ - "ಇದು, ಎಲ್ಲ ಪುರುಷನೇ ಆಗಿದೆ".[೧೧] ವಿಶ್ವವ್ಯಾಪ್ತವಾದ ಏಕೈಕವಾದ ಸ್ಥಲವನ್ನೇ "ಪುರುಷ" ಎಂದಿದ್ದಾರೆ. ಅವನೇ ನಾನಾ ಶರೀರಗಳನ್ನು ಧರಿಸುತ್ತಾನೆ. ಎಲ್ಲ ದೇವತೆಗಳ ನೈಜಸಾರ ಒಂದೇ ಆಗಿದೆ.[೧೨] ದೇವರುಗಳಲ್ಲಿ ಜೀವನಾಸ್ತಿತ್ವವನ್ನು ಪ್ರಧಾನಗೊಳಿಸುವ ತತ್ತ್ವವೆಂದರೆ ಅದೇ ಏಕೈಕ ಸತ್.

ಪ್ರಾರಂಭದಲ್ಲಿ ಸತ್ ಒಂದೇ ಇತ್ತು. ಅದು ನಾನು ಬಹುವಾಗಬೇಕೆಂದು ಇಚ್ಛಿಸಿತು. ತನ್ನ ಆ ಪ್ರಬಲ ಇಚ್ಛೆಯಿಂದ ಅದೇ ಸತ್, ನಾನಾರೂಪಿನಲ್ಲಿ ಪ್ರಕಟಗೊಂಡಿತು. ಈ ಸಂಪೂರ್ಣ ವಿಶ್ವವು ಆ ಪುರುಷನ ರೂಪವೇ ಆಗಿದೆ. ಆ ವಿರಾಟ್‌ಪುರುಷನ ಮನಸ್ಸಿನಿಂದ ಚಂದ್ರ, ಮುಖದಿಂದ ಇಂದ್ರ ಹಾಗೂ ಅಗ್ನಿ, ಪ್ರಾಣದಿಂದ ವಾಯು, ತಲೆಯಿಂದ ದ್ಯುಲೋಕ, ಕಿವಿಗಳಿಂದ ದಿಕ್ಕುಗಳು ಹುಟ್ಟಿಕೊಂಡವು. ಪುರುಷ ಸೂಕ್ತದಲ್ಲಿ ಇವನನ್ನು ಸಾವಿರ ತಲೆ, ಸಾವಿರ ಕಣ್ಣು, ಸಾವಿರ ಮೂಗು, ಕಿವಿ, ಮುಖ, ಬಾಹು, ಪಾದ, ತೊಡೆಗಳುಳ್ಳವನೆಂದು ಕರೆಯಲಾಗಿದೆ.[೧೩]

ವಿಭಿನ್ನ ದೇವತೆಗಳು ಒಂದೇ ವಿಶ್ವವ್ಯಾಪೀ ಸತ್ತೆಯ ವಿಭಿನ್ನ ಅಭಿವ್ಯಕ್ತಿಗಳಾಗಿದ್ದಾರೆ. ಇದೆ ಸತ್ತೆಯೇ ಕಾಲಾನಂತರ"ಬ್ರಹ್ಮ" ಎಂಬ ಅಭಿಧಾನ ಪಡೆಯಿತು. ದ್ಯೌ, ವರುಣ, ಇಂದ್ರ, ಪ್ರಜಾಪತಿ ಮುಂತಾದ ದೇವತೆಗಳ ಪೂರ್ಣರೂಪವು, ಅದ್ವೈತ ತತ್ತ್ವದ ಬ್ರಹ್ಮವಾಗಿದೆ.

ಅಥರ್ವವೇದದಲ್ಲಿ "ಅದ್ವೈತತತ್ತ್ವ"ದ ಪರಿಕಲ್ಪನೆಯಿದೆ. "ಸ್ಕಂಭ-ಸೂಕ್ತ"ದಲ್ಲಿ ಬ್ರಹ್ಮನವ್ಯಾಪಕತೆ ಹಾಗೂ ಆತ್ಮನಿಂದ ಅಭಿನ್ನತೆಯ ಸಿದ್ಧಾಂತವು ಪ್ರತಿಪಾದಿತವಾಗಿದೆ. ಬ್ರಹ್ಮನನ್ನೇ ಅಲ್ಲಿ ಸ್ಕಂಭ (ಆಧಾರ) ಎಂದಿದ್ದಾರೆ. "ಸ್ಕಂಭ" ಇದು ಕಾರಣ[೧೪] ಇದರಲ್ಲಿ ಭೂಮಿ, ಅಂತರಿಕ್ಷಗಳು ಸಮಾಹಿತವಾಗಿವೆ. ಅಗ್ನಿ, ಚಂದ್ರ, ಸೂರ್ಯ, ವಾಯುಗಳ ಉಗಮ ಸ್ಕಂಭದಿಂದಲೇ.[೧೫] ಅದು ಭೂತ, ಭವಿಷ್ಯತ್, ವರ್ತಮಾನದ ಅಧೀಶ್ವರ.[೧೬] ಆ ಅದ್ವೈತ"ಸ್ಕಂಭ" (ಬ್ರಹ್ಮ) ವಿಶ್ವದ ಆತ್ಮವಾಗಿದೆ. ಸಮಸ್ತವಿಶ್ವದಲ್ಲಿ ಇದುವೇ ಶಕ್ತಿರೂಪವಾಗಿ ಅಂತರ್ನಿಹಿತವಾಗಿದೆ. ಇದು ಪ್ರಕೃತಿಯ ಮೂಲ. ವಿಶ್ವದ ಎಲ್ಲ ಪದಾರ್ಥಗಳಲ್ಲಿ ಜೀವಶಕ್ತಿಯಾಗಿ ಹುದುಗಿ ಎಲ್ಲದಕ್ಕೂ ಸಂಚಾಲನೆ ನೀಡುವ ಸರ್ವೋಚ್ಚ ಸತ್ತೆ ಎನಿಸಿದೆ. ಈ ಸ್ಥಲತತ್ತ್ವವು

---

೧೧. "ಪುರುಷ ಎ ವೇದಂ ಸರ್ವಂ ಯದ್‌ಭೂತಂ ಯಚ್ಚಭಾವ್ಯಮ್", ಋಗ್ವೇದ ೧೦-೯೦.

೧೨. "ಮಹದ್ ದೇವಾನಾಂ ಸುರತ್ವಮೇಕಮ್" -೩-೨೫-೧೪.

೧೩. ಸಹಸ್ರಶೀರ್ಷಾ: ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ ।
ಸಭೂಮಿಂ ವಿಶ್ವತೋ ವೃತ್ವಾऽತ್ಯತಿಷ್ಠದ್‌ದಶಾಂಗುಲಮ್ ।
- ಪುರುಷಸೂಕ್ತ -೧೦-೯೦-೧.

೧೪. ಪುರುಷ-ಸೂಕ್ತ, ೧೦-೯೦-೧. ಅಥರ್ವವೇದ -೧೦-೭-೧೨.

೧೫. ಅದೇ, ೧೦-೭-೩೫.

೧೬. ಅದೇ, ೧೦-೮-೧.

ಅಲಭ್ಯವಲ್ಲ, ಅಗಮ್ಯವಲ್ಲ ಹಾಗೂ ಅದ್ಭುತಪದಾರ್ಥವೇನಲ್ಲ. ಆದರೆ, ಜೀವನು ತನ್ನ ಅಂತರಂಗದಲ್ಲಿ ಇದನ್ನು ಅಂತರ್ಯಾಮಿರೂಪಿನಲ್ಲಿ ಅನುಭವಿಸುತ್ತಾನೆ. "ಸ್ಕಂಭ"ವು ಆತ್ಮದೊಡನೆ ಅಭಿನ್ನವಾದ ಐಕ್ಯತೆಯಿಂದಿದೆ.[೧೭]

ಈ ರೀತಿಯಾಗಿ ವೇದದಲ್ಲಿ ವಿಭಿನ್ನ ದೇವತೆಗಳ ಸ್ವರೂಪವರ್ಣನೆಯು ಪ್ರಾರಂಭಗೊಂಡು ಅಂತ್ಯದಲ್ಲಿ ಒಂದೇ ತತ್ತ್ವಕ್ಕೆ ಬಂದು ನಿಲ್ಲುತ್ತದೆ. ಆದುದರಿಂದ ಅನೇಕೇಶ್ವರವಾದವು ಅಂತಿಮನಿರ್ಣಯವಾಗಿರದೆ ಏಕೇಶ್ವರವಾದಕ್ಕೆ ಬದ್ಧವಾಗಿದೆ. ಅನೇಕೇಶ್ವರವಾದಕ್ಕೆ ಧಾರ್ಮಿಕಚೈತನ್ಯವು ವಿರೋಧವಾಗಿದೆ.[೧೮]

**ಸೃಷ್ಟಿವಿಚಾರ:**

ಜಗತ್ತಿನ ಉತ್ಪತ್ತಿ ವಿಷಯವಾಗಿ ವೇದಗಳಲ್ಲಿ ವಿಭಿನ್ನವಿಚಾರಧಾರೆಗಳು ಉಲ್ಲಿಖಿತವಾಗಿವೆ. ಅಲ್ಲಿ ಜಗತ್ತು ಸತ್ಯವಾಗಿದೆ. ಅದು ಈಶ್ವರ ನಿರ್ಮಿತ. ಋಗ್ವೇದದ ನಾಸದೀಯ ಸೂಕ್ತ[೧೯]ದಲ್ಲಿ ಸೃಷ್ಟಿಕ್ರಿಯೆಯ ವ್ಯಾಪಕವರ್ಣನೆಯಿದೆ. ಸೃಷ್ಟಿಯ ಆದಿಯಲ್ಲಿ ಅಸತ್, ಸತ್, ಅಂತರಿಕ್ಷ ಇವಾವೂ ಇದ್ದಿರಲಿಲ್ಲ. ಮೃತ್ಯುಕೂಡ ಇಲ್ಲದಿದ್ದಾಗ ಕೇವಲ "ಸತ್" ಒಂದೇ ಇತ್ತು. ಎಲ್ಲ ಕಡೆ ಅಂಧಕಾರ, ನೀರಿದ್ದರೂ ಪ್ರಕಾಶವಿದ್ದಿಲ್ಲ. ತಪಸ್ಸಿನಿಂದ ಆ "ಒಂದರ" ಉತ್ಪತ್ತಿಯಾಯಿತು. ತಪಸ್ಸು ಒಂದು ಅವ್ಯಕ್ತವಾದ ಚೇತನವಾಗಿತ್ತು. ಇದರಿಂದಲೇ ಜ್ಞಾನಶಕ್ತಿ, ಇಚ್ಛಾಶಕ್ತಿ ಮತ್ತು ಕ್ರಿಯಾಶಕ್ತಿಗಳು ಅಭಿವ್ಯಕ್ತವಾಗುತ್ತವೆ. ಯಜುರ್ವೇದದ ಪುರುಷ ಸೂಕ್ತ[೨೦]ವು ಒಂದು ವ್ಯಾಪಕಶಕ್ತಿಯ ಉತ್ಪತ್ತಿಯನ್ನು ಹೇಳುತ್ತದೆ. ಇದು ಅದ್ವಿತೀಯ, ಸರ್ವವ್ಯಾಪಕ, ಅವ್ಯಕ್ತ ಹಾಗೂ ಅದ್ವೈತ(ಏಕ)ವಾಗಿದೆ. ಅದನ್ನೇ ಋಗ್ವೇದದಲ್ಲಿ ಅಭಯಂ, ಜ್ಯೋತಿ, ಪರಾತ್ಪರ ಮುಂತಾಗಿ ಕರೆಯಲಾಗಿದೆ. ಈ ರೀತಿಯಾಗಿ ಸೃಷ್ಟಿವಿಚಾರಕ್ಕೆ ಏಕೇಶ್ವರವಾದೀ ಅಭಿಪ್ರಾಯವು ಸಬಲವಾದ ಆಧಾರವಾಗಿದೆ. ಇದೊಂದೇ ಪರಮಶ್ರೇಷ್ಠವಾದ ತತ್ತ್ವ. ಈ ಬಯಲು ಗಳಿಕೆಯಿಂದಲೇ ದುಃಖ ನಿವೃತ್ತಿಯಾಗುತ್ತದೆ.[೨೧]

**೩. ಉಪನಿಷತ್ತಿನ ಅದ್ವೈತವಾದ:**

ವೇದಗಳಲ್ಲಿ ಪ್ರತಿಪಾದಿತವಾದ ವಿಚಾರಗಳ ಕ್ರಮವಿಕಾಸವು ಉಪನಿಷತ್ತುಗಳಲ್ಲಿ ಅರ್ಥಪಡೆದಿದೆ. ಔಪನಿಷದಿಕ ಮುಖ್ಯವಿಷಯ 'ಪರಾವಿದ್ಯೆ' ಹಾಗೂ ಅದರ ಗುರಿ ಸತ್ಯಾನ್ವೇಷಣೆ. "ಪುರುಷಸೂಕ್ತ"ದಲ್ಲಿ ಅಸ್ಪಷ್ಟವಾಗಿದ್ದ ಆ ಒಂದು ಸಾರ್ವಭೌಮದ ಮಾನ್ಯತೆಯು, ಉಪನಿಷತ್ತಿನಲ್ಲಿ ವ್ಯಾಪಕಬ್ರಹ್ಮರೂಪಾಗಿ ವಿಕಾಸಹೊಂದಿದೆ. ಬ್ರಹ್ಮವಿದ್ಯೆಯನ್ನು ಸರ್ವವಿದ್ಯೆಯ ಆಧಾರವೆಂದು ಸ್ತುತಿಸಲಾಗಿದೆ.[೨೨] ಯಥಾರ್ಥವಾದ ಸತ್ಯ, ವಿಚಾರಕ್ಕೆ ಅತೀತವಾಗಿದೆ. ಆತ್ಮ ಮತ್ತು ಜ್ಞಾನ ಏಕಾಕಾರವಾಗುವ ತೂರ್ಯಾವಸ್ಥೆಯಲ್ಲಿಯೇ, ಆ ಅವ್ಯಹಿತ ಚೈತನ್ಯವನ್ನು ಅನುಭವಿಸಬಹುದೆಂದು ಹೇಳಲಾಗಿದೆ.

---

೧೭. ಅಕಾಮೋಧೀರಃ ಅಮೃತಃ ಸ್ವಯಂಭೂ ರಸೇನ ತೃಪ್ತೋ ನ ಕುತಶ್ಚನೋನಃ ।
ತಮೇವ ವಿದ್ವಾನ್ ನ ವಿಭಾಯಮೃತ್ಯೋರಾತ್ಮಾನಂ ಧೀರಮಜರಂ ಯುವಾನಮ್ ॥
- ಅಥರ್ವವೇದ, ೧೦-೮-೪೪.

೧೮. Dr. Radhakrishnan (1969) Indian Philosophy (vol.9) p. 91.

೧೯. ಋಗ್ವೇದ, ೧೦-೧೨೯.

೨೦. ಯಜುರ್ವೇದ, ೧೬ನೇ ಅಧ್ಯಾಯ.

೨೧. ತಮೇವ ವಿದಿತ್ವಾऽತಿಮೃತ್ಯುಮೇತಿ ನಾನ್ಯಃ ಪಂಥಾವಿದ್ಯತೇऽಯನಾಯ, ಯಜುರ್ವೇದ.

೨೨. ಸ ಬ್ರಹ್ಮವಿದ್ಯಾಂ ಸರ್ವವಿದ್ಯಾಪ್ರತಿಷ್ಠಾಮಥರ್ವಾಯ ಜ್ಯೇಷ್ಠಪುತ್ರಾಯ ಪ್ರಾಹ, ಮುಂಡಕೋಪನಿಷತ್-೧-೧.

ಪರಬ್ರಹ್ಮ - ಅಪರಬ್ರಹ್ಮ:

ಉಪನಿಷತ್ತುಗಳಲ್ಲಿ ಬ್ರಹ್ಮನ ಎರಡು ರೂಪಗಳ ವರ್ಣನೆಯಿದೆ. ಪರಬ್ರಹ್ಮ ಮತ್ತು ಅಪರಬ್ರಹ್ಮ. ಪರಬ್ರಹ್ಮ ನಿರ್ಗುಣ, ನಿರ್ವಿಶೇಷ ಮತ್ತು ನಿಷ್ಪ್ರಪಂಚನಾಗಿದ್ದಾನೆ. ಅವನು ಕಾರ್ಯ ಕಾರಣ ಹಾಗೂ ದೇಶಕಾಲಾದಿಗಳಿಂದ ಅತೀತನಾಗಿದ್ದಾನೆ. ಅವನು ನಿರ್ವಿಶೇಷನಾಗಿರುವುದರಿಂದ, ಯಾವುದೇ ಲಕ್ಷಣಕ್ಕೆ ಲಕ್ಷಿತನಾಗಲಾರ. ಪರಬ್ರಹ್ಮ ಏಕ, ನಿರ್ವಿಕಲ್ಪಕ, ನಿಷ್ಕ್ರಿಯ, ಶಾಂತ, ಅವ್ಯಯ, ಅನಾದಿ, ಅನಂತ, ಅನಿರ್ವಚನೀಯ, ಅಕ್ಷರ ಹಾಗೂ ಎಲ್ಲದರ ಆತ್ಮವಾಗಿದ್ದಾನೆ. ಅವನು ಅಜ, ನಿತ್ಯ ಹಾಗೂ ಶಾಶ್ವತನಾಗಿದ್ದಾನೆ.[೨೩] ಅವನು ಅವ್ಯಯ, ವಿಭು ಹಾಗೂ ಅತ್ಯಂತ ಸೂಕ್ಷ್ಮನಾಗಿದ್ದಾನೆ. ಬೃಹದಾರಣ್ಯಕೋಪನಿಷತ್ತಿನಲ್ಲಿ ಅವನು ಅಸ್ಥೂಲ, ಅನಣು, ಅಹ್ರಸ್ವ ಹಾಗೂ ಅದೀರ್ಘನಾಗಿದ್ದಾನೆಂದು ಹೇಳಲಾಗಿದೆ.[೨೪] ಮಾಂಡುಕ್ಯೋಪನಿಷತ್ತಿನಲ್ಲಿ ಅವನಿಗೆ ಅದೃಶ್ಯ, ಅವ್ಯವಹಾರ್ಯ, ಅಗ್ರಾಹ್ಯ, ಅಲಕ್ಷಣ, ಶಿವ, ಶಾಂತ ಹಾಗೂ ಅದ್ವೈತಾತ್ಮನೆಂದು ಕರೆಯಲಾಗಿದೆ.[೨೫] ಪರಬ್ರಹ್ಮನಲ್ಲಿ ಯಾವುದೇ ಪ್ರಕಾರದ ಪರಿವರ್ತನೆಯಾಗಲಾರದು. ಅವನಲ್ಲಿ ಭೇದ, ದ್ವೈತ ಹಾಗೂ ನಾನಾತ್ವಗಳಿರಲಾರವು. ಜ್ಞಾತೃ ಜ್ಞಾನ ಹಾಗೂ ಜ್ಞೇಯದ ಭೇದವೂ ಅವನಲ್ಲಿಲ್ಲ. ಅವನೇ ಸಾಕ್ಷೀ ವಿಜ್ಞಾತೃ ಹಾಗೂ ದೃಷ್ಟಾ ಆಗಿದ್ದಾನೆ. ಅವನ ಜ್ಞಾನ ಅಂತಃಪ್ರಜ್ಞೆಯಿಂದಾಗುತ್ತದೆ. ಪರಬ್ರಹ್ಮನ ವರ್ಣನೆ 'ನೇತಿ ನೇತಿ' ಎಂಬುದರೊಂದಿಗೆ ಮುಕ್ತಾಯವಾಗುತ್ತದೆ.[೨೬] ಶಂಕರಾಚಾರ್ಯರು ತಮ್ಮ ಅದ್ವೈತವೇದಾಂತದಲ್ಲಿ ಈ ನಿರ್ಗುಣಬ್ರಹ್ಮನನ್ನು ಸ್ಪಷ್ಟವಾಗಿ ವರ್ಣಿಸಿದ್ದಾರೆ.

"ಅಪರಬ್ರಹ್ಮ"ನು ಸಗುಣ, ಸವಿಶೇಷ ಮತ್ತು ಸಪ್ರಪಂಚನಾಗಿದ್ದಾನೆ. ಅವನು ಮೂರ್ತ. ಸವಿಶೇಷಭಾವದಲ್ಲಿ ಗುಣ, ಚಿಹ್ನ, ಮತ್ತು ವಿಶೇಷಗಳ ಸತ್ತೆಯಿದ್ದೇ ಇರುತ್ತದೆ. ಅಪರಬ್ರಹ್ಮನಿಗೆ ಈಶ್ವರ ಎಂದಿದ್ದಾರೆ. ಅವನು ಜಗತ್ತಿನ ಕರ್ತೃ. ಛಾಂದೋಗ್ಯೋಪನಿಷತ್ತಿನಲ್ಲಿ ಅವನಿಗೆ "ತಜ್ಜಾಲನ"[೨೭] ಎಂಬ ವಿಶಿಷ್ಟಪದ ಪ್ರಯೋಗಿಸಲಾಗಿದೆ. ಈ ಜಗತ್ತಿನ ಸೃಷ್ಟಿ ಬ್ರಹ್ಮ (ತಜ್ಜ)ನಿಂದಾಗಿದೆ. ಈ ಕಾರಣದಿಂದಾಗಿ ಅಲ್ಲಿ ಅವನು (ತದನ) ಇರುತ್ತಾನೆ. ಮತ್ತೆ ಪುನಃ ಅದರಲ್ಲಿಯೇ (ತಲ್ಲ) ವಿಲೀನನಾಗುತ್ತಾನೆ. ತೈತ್ತಿರೀಯೋಪನಿಷತ್ತಿನಲ್ಲಿ ವಿಶ್ವದ ಸೃಷ್ಟಿ, ಸ್ಥಿತಿ, ಹಾಗು ಸಂಹಾರಕ್ಕೆ ಕಾರಣ ಬ್ರಹ್ಮನೇ ಆಗಿದ್ದಾನೆ[೨೮] ಅವನ ಆಜ್ಞೆಯಿಂದಲೇ ಪ್ರಾಕೃತಿಕಶಕ್ತಿಗಳು ಕಾರ್ಯಮಾಡುತ್ತವೆ. ಅವನು ಸರ್ವಭೂತಾತ್ಮನು, ಹಾಗು ಅಂತರ್ಯಾಮಿಯು ಆಗಿದ್ದಾನೆ. ಅವನು ಕರ್ಮಗಳ ಅಧಿಷ್ಠಾತಾ (ಆಶ್ರಯ) ಸರ್ವಕರ್ಮಾ, ಸರ್ವಧರ್ಮಾ, ಸರ್ವಕಾಮಾ, ಸರ್ವಗಂಧ ಹಾಗೂ ಸರ್ವರಸ ಎಂಬ ಪದ ಪ್ರಯೋಗಗಳು ಅವನಿಗಾಗಿವೆ. ಅವನು ಪರಮಗತಿ ಹಾಗು ಮಾಯಾಶಕ್ತಿ ಸಹಿತ. "ಇತಿ ಇತಿ " ಎಂದು ಆ ಪರಬ್ರಹ್ಮನನ್ನು ಗುರುತಿಸಲಾಗಿದೆ. ಆದರೆ ಸಗುಣ ನಿರ್ಗುಣ ಅಥವಾ

---

೨೩. ಕಠೋಪನಿಷದ್ -೧-೨-೨೮.

೨೪. "ನಿತ್ಯಂ ವಿಭುಂ ಸರ್ವಗತಂ ಸುಸೂಕ್ಷ್ಮಂ", ಮುಂಡಕೋಪನಿಷದ್ -೧-೧-೬.

೨೫. ಬೃಹದಾರಣ್ಯಕೋಪನಿಷದ್, ೩-೮-೮, ಮಾಂಡುಕೋಪನಿಷದ್, ೧-೭.

೨೬. "ಸ ಎವ ನೇತಿ-ನೇತಿ ಆತ್ಮಾ", ಬೃಹದಾರಣ್ಯಕೋಪನಿಷತ್, ೪-೪-೨೨.

೨೭. "ತಜ್ಜಲಾನಿತಿ ಶಾಂತ ಉಪಾಸೀತ", ಛಾಂದೋಗ್ಯೋಪನಿಷತ್, ೩-೧೪-೯.

೨೮. "ಯತೋವಾ ಇಮಾನಿ ಭೂತಾನಿ ಜಾಯಂತೇ। ಯೇನ ಜಾತಾನಿ ಜೀವಂತಿ। ಯತ್ ಪ್ರಯಂತ್ಯಭಿಸಂವಿಶಂತಿ। ತದ್ವಿಜಿಜ್ಞಾಸಸ್ವ। ತದಬ್ರಹ್ಮೇತಿ । ತೈತ್ತಿರೀಯೋಪನಿಷತ್, ಭೃಗುವಲ್ಲಿ ೩. ಅನುವಾಕ ೧.

ಸೋಪಾಧಿಕ ನಿರೂಪಾಧಿಕ ಎಂಬ ಭೇದ ಪ್ರಕಾರಗಳು ಬ್ರಹ್ಮನಲ್ಲಿ ಇಲ್ಲವೇ ಇಲ್ಲ. ಎರಡೂ ಒಂದೇ ಪರಬ್ರಹ್ಮನ ಎರಡು ಪಕ್ಷಗಳು. ಒಂದೇ ಮಂತ್ರ ಎರಡು ವಿಧವಾದ ಪದಗಳ ಮೂಲಕ ನಿರ್ಗುಣ ಹಾಗು ಸಗುಣ ಬ್ರಹ್ಮನನ್ನು ವರ್ಣಿಸುತ್ತವೆ.[೨೯]

ಬ್ರಹ್ಮ ಮತ್ತು ಜಗತ್ತಿನ ಸ್ವರೂಪ ಹಾಗೂ ಸೃಷ್ಟಿರಚನೆಯ ವಿಷಯದಲ್ಲಿಯೂ ಇದೇ ಪ್ರಕಾರವಾಗಿ ಮಾಯಾವಾದ ಅಥವಾ ವಿವರ್ತವಾದ ಹಾಗೂ ಸತ್ಕಾರ್ಯವಾದ ಅಥವಾ ಪರಿಣಾವಾದ ಸಿದ್ಧಾಂತಗಳು ವಿಕಾಸವಾದವು. ಉಪನಿಷತ್ತುಗಳಲ್ಲಿ ಮಾಯಾವಾದದ ಉಲ್ಲೇಖವನ್ನು ಅಲ್ಲಲ್ಲಿ ನೋಡಬಹುದಾಗಿದೆ.[೩೦] ಆಚಾರ್ಯಶಂಕರರು ತಮ್ಮ ಅದ್ವೈತವಾದದಲ್ಲಿ ಮಾಯೆಯೊಂದನ್ನು ಕಲ್ಪಿಸಿದ್ದಾರೆ. ಮಾಯೆ ಸದಸದ್ವಿಲಕ್ಷಣವಾಗಿದೆ. ಅನಿರ್ವಚನೀಯ ಹಾಗೂ ಮಿಥ್ಯಾ ಆಗಿದೆ. ಜಗತ್ತು ಬ್ರಹ್ಮನ ವಿವರ್ತವಾಗಿದೆ. ಅಂಧಕಾರದಲ್ಲಿ ಹಗ್ಗವೇ ಹಾವಾಗಿ ತೋರುವಂತೆ ಮಾಯೆಯ ಆವರಣದಿಂದಾಗಿ ಬ್ರಹ್ಮವೇ ತನ್ನ ಮೂಲಸ್ವರೂಪವನ್ನು ಕಳೆದುಕೊಂಡು ಜಗತ್ತಾಗಿ ತೋರುತ್ತದೆ. ಪರಿಣಾಮವಾದದ ಅನುಸಾರವಾಗಿ ಸಮಸ್ತವಿಶ್ವವು ಬ್ರಹ್ಮನಲ್ಲಿ ಅಂತರ್ನಿಹಿತವಾಗಿದೆ. ಬೀಜವನ್ನು ಒಡೆದು ನೋಡಿದಾಗ ಅದರಲ್ಲಿ ಏನೂ ಕಾಣದಂತೆ, ಬ್ರಹ್ಮನಲ್ಲಿ ಚರಾಚರವೆಲ್ಲ ನಿಹಿತವಾಗಿದ್ದರೂ ಪ್ರತ್ಯಕ್ಷಕ್ಕೆ ಅಗೋಚರವಾಗಿದೆ. ಸಮಸ್ತಜಗತ್ತಿನ ಹೇತುಭೂತಪ್ರಕಾಶ ಬ್ರಹ್ಮವೇ ಆಗಿದೆ. ಅದರ ಪ್ರಕಾಶದಿಂದ ಸೂರ್ಯ, ಚಂದ್ರರು ಪ್ರಕಾಶಿತರಾಗುತ್ತಾರೆ.[೩೧]

ಜಗತ್ತಿನ ಉಪಾದಾನ ನಿಮಿತ್ತ ಕಾರಣಗಳೆರಡೂ ಬ್ರಹ್ಮವೇ. ಜೇಡರ ಹುಳು ತನ್ನ ಶರೀರಾಂಶದಿಂದ ಬಲೆಹೆಣೆದು ಪುನಃ ತನ್ನಲ್ಲಿಯೇ ಅದನ್ನು ಸಮಾಹಿತಗೊಳಿಸಿಕೊಳ್ಳುವಂತೆ, ಪೃಥ್ವಿಯಿಂದ ಔಷಧಿಗಳು ಹಾಗೂ ಪುರುಷನಿಂದ ಕೇಶಾದಿಗಳು ಉತ್ಪನ್ನವಾಗುವಂತೆ ನಿತ್ಯಬ್ರಹ್ಮನಿಂದ ಈ ವಿಶ್ವವು ಉತ್ಪನ್ನವಾಗುತ್ತದೆ.[೩೨] ಪರಬ್ರಹ್ಮ ಸತ್ಯ, ಜ್ಞಾನ ಮತ್ತು ಅನಂತನಾಗಿದ್ದಾನೆ.[೩೩] ಅವನು ವಿಜ್ಞಾನ ಮತ್ತು ಆನಂದರೂಪನೂ ಆಗಿದ್ದಾನೆ. ಬ್ರಹ್ಮಜ್ಞಾನವೇ ಉಪನಿಷತ್ತುಗಳ ಗುರಿ. ಜ್ಞಾನದ ಹೊರತು ಇನ್ನುಳಿದ ಜ್ಞಾನಗಳಿಗೆ ಅಸ್ತಿತ್ವವಿಲ್ಲ.[೩೪] ವಸ್ತುತಃ ಆತ್ಮಜ್ಞಾನ ಬ್ರಹ್ಮಜ್ಞಾನವೇ ಆಗಿದೆ, ಬ್ರಹ್ಮಜ್ಞಾನವು ಆತ್ಮಜ್ಞಾನವೇ ಆಗಿದೆ. ಉಪನಿಷತ್ತುಗಳು ಆತ್ಮ ಮತ್ತು ಬ್ರಹ್ಮನಲ್ಲಿ ತಾದಾತ್ಮ್ಯತೆಯನ್ನು ಸಾರಿವೆ. ಶ್ವೇತಾಶ್ವತರೋಪನಿಷತ್ತಿನಲ್ಲಿ ಬ್ರಹ್ಮ ಮತ್ತು ಆತ್ಮದ ರಹಸ್ಯವನ್ನು ಕುರಿತು ಹೀಗೆ ಚರ್ಚಿಸಲಾಗಿದೆ. ಸಮಸ್ತ ಪ್ರಾಣಿಗಳಲ್ಲಿ ಒಬ್ಬನೇ ಆದ ದೇವನು ಸರ್ವವ್ಯಾಪಕನು ಮತ್ತು ಎಲ್ಲ ಭೂತಗಳ ಅಂತರಾತ್ಮ ಹಾಗೂ ಕರ್ಮಗಳ ಅಧೀಕ್ಷಕ, ಸರ್ವಸಾಕ್ಷಿ, ಎಲ್ಲದರಲ್ಲಿಯೂ ಚೈತನ್ಯ ಪ್ರದಾಯಕನಾಗಿ ಶುದ್ಧ ಮತ್ತು ನಿರ್ಗುಣನಾಗಿದ್ದಾನೆ.[೩೫] ಆತ್ಮವನ್ನೇ ಬ್ರಹ್ಮನೆಂದು ಕರೆಯಲಾಗಿದೆ. ಶ್ರವಣ, ಮನನ, ನಿದಿಧ್ಯಾಸದಿಂದ ಬ್ರಹ್ಮೈಕ್ಯ ಸಾಧಿಸಬಹುದಾಗಿದೆ.[೩೬]

---

೨೯. "ಯತ್ತದ ದ್ರೇಶ್ಯಮಗ್ರಾಹ್ಯಮ್ ಅಗೋತ್ರಮ್ ಅವರ್ಣಮ್ ಅಚಕ್ಷು ಪಾಣಿಪಾದಮ್। ಶ್ರೋತಮ್ ತದ ನಿತ್ಯಂ ವಿಭುಂ ಸರ್ವಗತಂ ಸೂಸೂಕ್ಷ್ಮಂ ತದವ್ಯಯಂ ತದ್‌ಭೂತಯೋನಿಂ ಪರಿಪಶ್ಯಂತೀಧೀರಾಃ॥, ಮುಂಡಕೋಪನಿಷದ್, ೧-೧-೬.

೩೦. "ಮಾಯಾಂತು ಪ್ರಕೃತಿಂವಿದ್ಧಿ ಮಾಯಿನಂತು ಮಹೇಶ್ವರಮ್"। ಶ್ವೇತಾಶ್ವತರ ಉಪನಿಷತ್, ೪-೧೦.

೩೧. ಕಠೋಪನಿಷತ್, ೫-೧೫.

೩೨. ಮಾಂಡುಕ್ಯೋಪನಿಷತ್, ೧-೧-೭.

೩೩. "ಸತ್ಯಂ ಜ್ಞಾನಮನಂತಂ ಬ್ರಹ್ಮ ತೈತ್ತರೀಯೋಉನಿಷತ್, ೨-೧.

೩೪. ಮುಂಡಕೋಪನಿಷತ್, ೩-೩-೪.

೩೫. "ಏಕೋ ದೇವಃ ಸರ್ವಭೂತೇಷುಗೂಢಃ ಸರ್ವವ್ಯಾಪೀ ಸರ್ವಭೂತಾಂತರಾತ್ಮಾ।
ಕರ್ಮಾಧ್ಯಕ್ಷಃ ಸರ್ವಭೂತಾಧಿವಾಸಃ ಸಾಕ್ಷೀ ಚೇತಾಕೇವಲೋ ನಿರ್ಗುಣಶ್ಚ।, ಶ್ವೇತಾಶ್ವತರೋಪನಿಷತ್, ೬-೧೧.

೩೬. ಬೃಹದಾರಣ್ಯಕೋಪನಿಷತ್, ೨-೪-೫.

ಆತ್ಮ ಮತ್ತು ಬ್ರಹ್ಮರನ್ನು ಸಚ್ಚಿದಾನಂದಸ್ವರೂಪರೆಂದು ವರ್ಣಿಸಲಾಗಿದೆ. ಛಾಂದೋಗ್ಯೋಪನಿಷತ್ತಿನಲ್ಲಿ ಶರೀರದಲ್ಲಿರುವ ಆತ್ಮವೇ ಬ್ರಹ್ಮನೆಂದು ಹೇಳಲಾಗಿದೆ. ಈ ನಶ್ವರವಾದ ಬಂಧನ ಬಿಡುಗಡೆಯಾಗುತ್ತಿದ್ದಂತೆ ಅದು ಬ್ರಹ್ಮನಲ್ಲಿ ಲೀನವಾಗಿ ಬಿಡುತ್ತದ.[೩೭] ಬೃಹದಾರಣ್ಯಕೋಪನಿಷತ್ತಿನ ಪ್ರಕಾರ ಜೀವ ಮತ್ತು ಅಜೀವದರ ಆತ್ಮ ಈಶ್ವರನೇ ಆಗಿದೆ. ಕಡೆಗೀಲು ಬಂಡೆಗಾಧಾರವಾದಂತೆ ನರಸುರ ಸಮಸ್ತಕ್ಕೆಲ್ಲ ಈಶ್ವರನೇ ಆಧಾರವಾಗಿದ್ದಾನೆ. ಪರಮಾತ್ಮನೇ ಆ ಎಲ್ಲಕ್ಕೂ ಒಡೆಯನಾಗಿದ್ದಾನೆ.[೩೮] ಇದೇ ತತ್ವಕ್ಕೆ "ಭೂಮಾ" ಎನ್ನಲಾಗಿದೆ. ಭೂಮವೇ ಅಮೃತ, ಅಲ್ಪವಾದದ್ದೆಲ್ಲ ಮರ್ತ್ಯ ಮತ್ತು ಅನೃತವಾಗಿದೆ.[೩೯]

### ೪. ಗೀತೆಯಲ್ಲಿ ಪುರುಷೋತ್ತಮವಾದ ಸ್ಥಲತತ್ವ:

ಉಪನಿಷತ್ತುಗಳಲ್ಲಿ ವರ್ಣಿಸಲಾದ (ಬ್ರಹ್ಮನ ವಿಷಯವಾಗಿ) ನಿರ್ಗುಣ ಮತ್ತು ಸಗುಣ ವಿಚಾರಧಾರೆಗಳು ಗೀತೆಯಲ್ಲಿ ಸಗುಣ ಅರ್ಥಾತ್ ಭಕ್ತಿಮಾರ್ಗವಾಗಿ ರೂಪಾಂತರಗೊಂಡಿದೆ. ಜ್ಞಾನ, ಕರ್ಮ, ಭಕ್ತಿಯ ಅದ್ಭುತ ಸಮನ್ವಯವನ್ನು ನಾವು ಭಗವದ್ಗೀತೆಯಲ್ಲಿ ಕಾಣಬಹುದಾಗಿದೆ. ಪ್ರವೃತ್ತಿಯಿಂದ ನಿವೃತ್ತಿಯ ಕಡೆಗೆ ಹೋಗದೆ ಪ್ರವೃತ್ತಿಯಲ್ಲೇ ನಿವೃತ್ತಿಯ ಉಪದೇಶದತ್ತ ನಮ್ಮ ಗಮನ ಸೆಳೆಯುವ ಸರ್ವಾಂಗೀಣ ಪ್ರತಿಪಾದನೆ ಗೀತೆಯಲ್ಲಿದೆ.

ಪ್ರಕೃತಿ ಹಾಗೂ ಆತ್ಮ ಅಥವಾ ಕ್ಷರ ಮತ್ತು ಅಕ್ಷರ ಎಂಬ ಉಭಯ ತತ್ವಗಳ ಪ್ರತಿಪಾದನೆ ಗೀತೆಯಲ್ಲಿದೆ.[೪೦] ಈಶ್ವರನು ಈ ಉಭಯತತ್ತ್ವಕ್ಕೆ ಅತೀತನಾಗಿದ್ದಾನೆ. ಅವನೇ ಪುರುಷೋತ್ತಮ. ಈ ಪುರುಷತತ್ತ್ವವೇ ಸ್ಥಲತತ್ತ್ವ (ಶಿವ). ಅದುವೇ, ಸಚ್ಚಿದಾನಂದ. ಜಗತ್ತಿನ ಮಾತಾದಾತಾಪಿತಾಮಹವಾಗಿದೆ. ಪ್ರಭು, ಸಾಕ್ಷೀ, ಕರ್ತಾ ಮತ್ತು ಶರಣಸ್ಥಲ ಎಲ್ಲ ಅದೇ ಆಗಿದೆ.[೪೧]

ಈಶ್ವರನು ಅನಂತ ಮತ್ತು ಜ್ಞಾನ ಸ್ವರೂಪನಾಗಿದ್ದಾನೆ. ಅವನು ಶಾಶ್ವತನಾಗಿದ್ದಾನೆ. ವಿಶ್ವದ ನೈತಿಕ ವ್ಯವಸ್ಥೆಯ ಶಾಸಕನಾಗಿದ್ದಾನೆ. ಅವನು ಕ್ಷರ ಮತ್ತು ಅಕ್ಷರಕ್ಕೆ ಆಧಾರ. ಅವನೇ ಜೀವಿಗಳ ಶುಭಾಶುಭಕರ್ಮಫಲ ಪ್ರದಾಯಕ. ಅವನು ಸೂಕ್ಷ್ಮ, ಸರ್ವವ್ಯಾಪಕ, ಅನಿರ್ವಚನೀಯ, ಜಗನ್ನಿರ್ಮಾಪಕ, ಪಾಲಕ, ಸಂಹಾರಕನಾಗಿದ್ದರೂ ಭಕ್ತವತ್ಸಲನಾಗಿದ್ದಾನೆ. ಈಶ್ವರಭಕ್ತಿಗೆ ಇಲ್ಲಿ ಹೆಚ್ಚಿನ ಮಹತ್ವಕೊಡಲಾಗಿದೆ. ಭಗವಂತನು ವಿಶ್ವವ್ಯಾಪಿಯಾಗಿದ್ದಾನೆ. ಅವನು ವಿಶ್ವಮಯನಾದರೂ ಅದರ ಅಪೂರ್ಣತೆಗಳಿಂದ ಮುಕ್ತನಾಗಿದ್ದಾನೆ.ಅವನು ಸತ್, ಅಸತ್ ಹಾಗೂ ಇವುಗಳಿಗಿಂತಲೂ

---

೩೭. ಛಾಂದೋಗ್ಯೋಪನಿಷತ್, ೧೪-೪.

೩೮. ಬೃಹದಾರಣ್ಯಕೋಪನಿಷತ್, ೭.

೩೯. ಛಾಂದೋಗ್ಯೋಪನಿಷತ್, ೮-೨೨.

೪೦. ದ್ವಾವಿಮೌ ಪುರುಷೌ ಲೋಕೆ ಕ್ಷರಶ್ಚಾಕ್ಷರ ಏವಚ, ಗೀತಾ, ೧೫-೧೬, ಪು. ೭೭೦. (ಅನುವಾದಕರು) ಶ್ರೀಸಚ್ಚಿದಾನಂದ ಸರಸ್ವತಿಸ್ವಾಮಿಗಳು (೧೯೮೯) ಶ್ರೀಮದ್ಭಗವದ್ಗೀತಾಭಾಷ್ಯ.

೪೧. "ಪಿತಾಹಮಸ್ಯ ಜಗತೊ ಮಾತಾ ಧಾತಾ ಪಿತಾಮಹ:।
X X X X X X X X X X X X X
ಗತಿರ್ಭರ್ತಾ ಪ್ರಭು: ಸಾಕ್ಷೀ ನಿವಾಸ: ಶರಣಂ ಸುಹೃತ್ ।",
ಗೀತಾ ೯, ೧೭, ೧೮.

ಅತೀತನಾಗಿದ್ದಾನೆ.[೪೨] ಈಶ್ವರನಲ್ಲಿ ಎಲ್ಲ ವಿರೋಧಿಗುಣ ಸಮನ್ವಯವಾಗುವುದರಿಂದ ಮೇಲಿನ ವರ್ಣನೆಗಳಲ್ಲಿ ಯಾವುದೇ ವಿಧವಾದ ವಿರೋಧವಿಲ್ಲ. ಈ ವಿಧವಾದ ವರ್ಣನೆಯಿಂದ ಈಶ್ವರತ್ವದ ಹಿರಿಮೆಯನ್ನು ಪ್ರದರ್ಶಿಸಲಾಗಿದೆ.

ಗೀತೆಯಲ್ಲಿ ಸಗುಣ ಈಶ್ವರನೊಂದಿಗೆ ಅವತಾರವಾದಕ್ಕೂ ಅವಕಾಶ ದೊರಕಿದೆ. ಈಶ್ವರನು ತನ್ನ ಶಕ್ತಿಯಿಂದ ಮಾನವಸ್ತರದವರೆಗೆ ತನ್ನನ್ನು ಪ್ರಕಟಗೊಳಿಸಿಕೊಳ್ಳುತ್ತಾನೆ. ಮಾಯಾಶಕ್ತಿಯಿಂದ ಅವನು ತನ್ನ ಅನಂತತೆ ಮತ್ತು ವ್ಯಾಪಕತೆಯನ್ನು ಸೀಮಿತಗೊಳಿಸಿ ಶರೀರಧಾರಿಯಾಗುತ್ತಾನೆ. ಧರ್ಮಕ್ಕೆ(ಹಾನಿ) ಕುಂದೊದಗಿದಾಗ ಮತ್ತು ಅಧರ್ಮಬುದ್ಧಿ ಹೆಚ್ಚಿದಾಗ, ಇವುಗಳ ವಿನಾಶಕ್ಕೆ ಈಶ್ವರನು ಅವತರಿಸುತ್ತಾನೆಂದು ಗೀತೆ ಹೇಳುತ್ತದೆ.[೪೩]

ಪರಮಾತ್ಮನು ಸಮಸ್ತಜಗತ್ತಿನಲ್ಲಿ ಸೂಕ್ಷ್ಮರೂಪವಾಗಿ ವ್ಯಾಪ್ತನಾಗಿದ್ದರೂ ಜಗತ್ತು ಅವನ ಒಂದು ಅಂಶ ಮಾತ್ರ. ಈಶ್ವರನು ಅಂತಸ್ಥನೂ ಹೌದು. ಅದಕ್ಕಿಂತ ಅತೀತನೂ ಹೌದು. ಜಗತ್ತಿಗೆ ಉಪಾದಾನ ಕಾರಣ ಪ್ರಕೃತಿಯಾದರೆ ನಿಮಿತ್ತಕಾರಣ ಈಶ್ವರನಾಗಿದ್ದಾನೆ. ಹೀಗಿದ್ದರೂ ಈಶ್ವರನೇ ಪ್ರಕೃತಿಯ ನಿರ್ದೇಶಕ. ಪರಾ ಮತ್ತು ಅಪರಾ ಇವು ಪ್ರಕೃತಿಯ ಎರಡು ಪಕ್ಷಗಳು. ಪರಾ ಚೇತನವಾದರೆ, ಅಪರಾ ಅಚೇತನವಾಗಿದೆ. ಇವೆರಡೂ ಈಶ್ವರನ ಶಕ್ತಿಗಳಾಗಿವೆ. ಪ್ರಕೃತಿಗೆ ಮಾಯೆ ಎಂದು ಹೇಳಲಾಗಿದೆ. ಅದು ಸತ್ವ, ರಜ, ತಮ - ಎಂದು ತ್ರಿಗುಣಸ್ವರೂಪ. ಮಾಯೆ ಈಶ್ವರನ ಯಥಾರ್ಥಶಕ್ತಿಯಾಗಿರುವುದರಿಂದ ಅದು ವಿವರ್ತ(ಭ್ರಮೆ)ವಲ್ಲ.[೪೪] ಆತ್ಮವು ಅಜರ ಅಮರವೂ ಆಗಿದೆ. ಜೀವ ಈಶ್ವರನ ಸನಾತನ ಅಂಶವಾಗಿದೆ. ಆತ್ಮ ಶರೀರದ ಮೊದಲೂ ಇತ್ತು, ಆಮೇಲೂ ಇರುವುದು. ಕೇವಲ ಶರೀರದ ಪರಿವರ್ತನೆಯಾಗುತ್ತದೆ. ಆತ್ಮವು ಗುಣ ಮತ್ತು ಅದರ ವೃತ್ತಿಗಳಿಗಿಂತ ಅತೀತ, ತಟಸ್ಥ, ದ್ರಷ್ಟಾ ಆಗಿದೆ. ಜ್ಞಾನವು ಆತ್ಮದ ಸಾರವಾಗಿದೆ.

ಗೀತೆಯಲ್ಲಿ ಸ್ಥಲತತ್ತ್ವವನ್ನು ವಿಶ್ವಾತೀತ ಮತ್ತು ವಿಶ್ವಮಯವೆಂದು ಹೇಳುವಲ್ಲಿ ಅನಿವಾರ್ಯತೆ ಎದ್ದು ಕಾಣಿಸುತ್ತದೆ. ಏಕೆಂದರೆ ಸ್ಥಲತತ್ತ್ವವನ್ನು ಕೇವಲ ವಿಶ್ವಾತೀತವೆಂದು ಸ್ವೀಕರಿಸಿದ್ದೇ ಆದರೆ ಆತ್ಮನಿಗೆ ಅದು ಅಜ್ಞೇಯವಾಗಿ ಬಿಡುತ್ತದೆ. ಅದಕ್ಕೆ ಜೀವಿಗಳ ಕಷ್ಟ ಸುಖದ ಜ್ಞಾನವಾಗದೇ ಹೋಗುತ್ತದೆ. ಇಂಥ ಈಶ್ವರನು ಭಕ್ತರಿಗೆ ಅಸಹಾಯಕನಾಗುತ್ತಾನೆ. ಒಂದುವೇಳೆ ವಿಶ್ವಮಯವೆಂದರೆ ಜಗತ್ತಿನ ದೋಷ, ಅಶುದ್ಧತೆಗಳೆಲ್ಲ ಈಶ್ವರನಿಗೂ ಬಂದುಬಿಡುತ್ತವೆ. ಇದರಿಂದ ಜೀವ ಮತ್ತು ಈಶ್ವರನಲ್ಲಿ ಭೇದವೇ ಉಳಿಯದು. ಆದುದರಿಂದ ಸ್ಥಲತತ್ತ್ವವನ್ನು ವಿಶ್ವೋತ್ತೀರ್ಣ ಮತ್ತು ವಿಶ್ವಮಯವೆಂದು ಕರೆಯಬೇಕಾಗುತ್ತದೆ. ಸ್ಥಲತತ್ತ್ವದ ಈ ಉಭಯ ಸ್ವರೂಪಗಳಲ್ಲಿ ತಾದಾತ್ಮ್ಯ ಸಂಬಂಧವಿದೆ.

ಗೀತೆಯಲ್ಲಿ ಔಪನಿಷದಿಕ ಬ್ರಹ್ಮವಾದ, ಸಾಂಖ್ಯ ಸಮ್ಮತವಾದ ಪ್ರಕೃತಿ-ಪುರುಷವಾದ, ಹಾಗೂ ಭಗವದ್ಧರ್ಮಾಭಿಮತವಾದ ಈಶ್ವರವಾದದ ಬೃಹತ್ ಸಮನ್ವಯವು ಕಂಡುಬರುತ್ತದೆ. ಗೀತೆಯಲ್ಲಿ ವರ್ಣಿತವಾದ ಸ್ಥಲತತ್ವದ ಸ್ವರೂಪವು ಅವ್ಯಯ ಹಾಗೂ ವಿಶ್ವಾತೀತವಾಗಿದೆ.

---

೪೨. "ಸದಸತ್ ತತ್ಪರಂ ಯತ್", ಗೀತಾ ೧೧-೩೭.

೪೩. "ಯದಾಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್", ಗೀತಾ ೪-೭.

೪೪. "ಮಮೈವಾಂಶೋ ಜೀವಲೋಕೆ ಜೀವಭೂತಃ ಸನಾತನಃ", ಗೀತಾ ೧೫-೭.

ಗೀತೆಯಲ್ಲಿ ಪರಮಾತ್ಮನಿಗೆ ಶಿವ, ರುದ್ರ, ಸ್ಥಲ, ಲಿಂಗ ಎಂಬ ಪದಗಳನ್ನೇ ಉಪಯೋಗಿಸಿಲ್ಲ. ಪರಮಾತ್ಮನಿಗೆ ಶಕ್ತಿವೈಶಿಷ್ಟ್ಯವನ್ನೇ ತಿಳಿಸಿಲ್ಲ. ಷಟ್‌ಸ್ಥಲಸಂಪ್ರದಾಯವೇ ಇಲ್ಲಿ ಬಂದಿಲ್ಲ ಎಂಬ ವಾದವನ್ನು ಕೆಲವರು ಮುಂದಿಟ್ಟರೂ ವೀರಶೈವಸಿದ್ಧಾಂತ ಮತ್ತು ಗೀತೆ ಒಂದೇ ಅಭಿಪ್ರಾಯವನ್ನು ತಾಳಿದ ಅಂಶವನ್ನು ನಾವು ಸಂಕ್ಷಿಪ್ತವಾಗಿ ಹೀಗೆ ವಿವರಿಸಬಹುದು.

ವಿಚಿತ್ರಶಕ್ತಿಯುಳ್ಳ ಪರಮಾತ್ಮನೇ ಜಗದಾಕಾರನಾಗಿ ಪರಿಣಮಿಸುವನೆಂಬುದೇ ವೀರಶೈವಸಿದ್ಧಾಂತ. ಏಕೈಕನಾದ, ಶಿವನೇ ಸಹಜಸ್ಥಿತಿಯಲ್ಲಿ ಕೇವಲನಾಗಿದ್ದು ಅನೇಕ ಬಗೆಯಾಗಿ ಪರಿಣಮಿಸಿರುವಾಗ ಅವನಿಗೂ ಜಗತ್ತಿಗೂ ಭೇದಾಭೇದಗಳನ್ನೇ ಅಂಗೀಕರಿಸಬೇಕು. ಒಂದೇ ಮಣ್ಣು ಮುದ್ದೆ, ಮಣ್ಣಾಗಿದ್ದುಕೊಂಡೇ ಗಡಿಗೆ ಮೊದಲಾದ ರೀತಿಗಳಲ್ಲಿ ಪರಿಣಮಿಸುತ್ತದೆ. ಎಲ್ಲವೂ ಮಣ್ಣೇ ಆಗಿರುವುದು ಸತ್ಯವೆನಿಸಿದಂತೆಯೇ ಗಡಿಗೆ ಮೊದಲಾದ ಪಾತ್ರಗಳೂ ಅರ್ಥಕ್ರಿಯಾಕಾರಿಯಾದುದರಿಂದ ಸತ್ಯವೆನಿಸಿವೆ. ಮುಚ್ಚಳದಿಂದ ಆಗುವ ಕೆಲಸ ಗಡಿಗೆಯಿಂದ ಆಗುವುದಿಲ್ಲ. ಹೀಗೆ ಒಂದೊಂದೂ ವಿಲಕ್ಷಣವೇ ಆಗಿವೆ. ಆದರೆ ಎಲ್ಲದರಲ್ಲೂ ಮಣ್ಣು ಒಂದೇ ಆಗಿರುವದರಿಂದ ಆ ರೂಪದಿಂದ ಅಭೇದವೂ ಇದೆ. ಹೀಗೆ ಒಬ್ಬ ಪರಶಿವನೇ ಚಿದ್ರೂಪದಲ್ಲೂ ಅಚಿದ್ರೂಪದಲ್ಲೂ ಪರಿಣಮಿಸಿರುವುದರಿಂದ ಭೇದವೂ ಸ್ವಾಭಾವಿಕವೆನಿಸುತ್ತದೆ. ಮೂಲಸ್ಥಿತಿಯಲ್ಲೂ, ಮುಕ್ತಿದಶೆಯಲ್ಲೂ ಅಭೇದವೂ ಸ್ವಾಭಾವಿಕವೇ ಆಗಿದೆ. ಆದುದರಿಂದ ಜೀವಬ್ರಹ್ಮರಿಗೆ ಸಂಸಾರದಶೆಯಲ್ಲಿ ಭೇದವೂ, ಮುಕ್ತಿದಶೆಯಲ್ಲಿ ಅಭೇದವೂ ಹೊಂದುವುದರಿಂದ ಕಾಲಭೇದದಿಂದ ಭೇದ ಅಭೇದಗಳೆರಡೂ ಹೊಂದುತ್ತವೆ. ಭಕ್ತಸ್ಥಿತಿಯಲ್ಲಿ ಭೇದ ಮತ್ತು ಐಕ್ಯಸ್ಥಿತಿಯಲ್ಲಿ ಅಭೇದ ಹೀಗೆ ಭೇದಾಭೇದಗಳೆರಡನ್ನೂ ವೀರಶೈವಸಿದ್ಧಾಂತವು ಒಪ್ಪಿಕೊಂಡಿದೆ. ಎಲ್ಲರೂ ಶಕ್ತಿವೈಶಿಷ್ಟ್ಯದಿಂದಲೇ ಪರಮಾತ್ಮನಿಂದ ಸಹಜವಾಗಿ ಭಿನ್ನರಾಗಿರುತ್ತಾರೆ. ಆದರೂ ಪರಮಾತ್ಮನ ಅಂಶರೆನಿಸಿದ ಜೀವರು ಅವನ ಉಪಾಸನೆಯಿಂದ ಅವನೊಡನೆ ಬೆರೆತು ಶಕ್ತಿವಿಕಾಸವನ್ನು ಹೊಂದಬಹುದೆಂಬುದೇ ಷಟ್‌ಸ್ಥಲಸಿದ್ಧಾಂತದ ಉದ್ದೇಶವಾಗಿದೆ.

ಗೀತೆಯಲ್ಲಿ ಜೀವನನ್ನು ಪರಮಾತ್ಮನ ಅಂಶನೆಂದು ತಿಳಿಸಿದೆ. ಜೀವನಿಗೂ ಪರಮಾತ್ಮನಿಗೂ ವಾಸ್ತವವಾಗಿ ಐಕ್ಯಸ್ಥಿತಿಯನ್ನೂ, ಅಂಶಾಂಶಿಭಾವವನ್ನು ಪ್ರತಿಪಾದಿಸಲಾಗಿದೆ. ಅಂಶಾಂಶಿಗಳಿಗೆ ಭೇದಾಭೇದಮತವೇ ಸಮ್ಮತವೆನಿಸಿದೆ. ಆದ್ದರಿಂದ ಜೀವಬ್ರಹ್ಮರಿಗೆ ಭೇದಾಭೇದಗಳನ್ನೇ ಕಾಲಭೇದದಿಂದ ಗೀತೆಯು ತಿಳಿಸಿದೆ. ಹೀಗೆ ಭಿನ್ನವಾದ ವಸ್ತುಗಳಲ್ಲೂ ತಾನೇ ಇರುವೆನೆಂದೂ ಎಲ್ಲವೂ ತಾನೇ ಆಗಿರುವುದೆಂದೂ ಪರಮಾತ್ಮನು ಸ್ಪಷ್ಟವಾಗಿ ತಿಳಿಸಿದ್ದಾನೆ. ಹೀಗೆ ಜಗದ್ಬ್ರಹ್ಮಗಳಿಗೆ ಕಾಲಭೇದದಿಂದಲೂ, ಅವಸ್ಥಾಭೇದದಿಂದಲೂ ಭೇದಾಭೇದಗಳೆರಡೂ ಹೊಂದುವುದರಿಂದ ಗೀತೆಯು ಭೇದಾಭೇದಸಿದ್ಧಾಂತಕ್ಕೆ ತುಂಬ ಅನುಕೂಲವಾಗಿದೆ. ಜೀವರು ಭಗವಂತನಿಗೆ ಸಂಬಂಧಪಟ್ಟಿದ್ದು ಪ್ರಕೃತಿಯಿಂದ ಭಿನ್ನರಾಗಿದ್ದುದರಿಂದ ಮತ್ತೆ ಭಕ್ತಿಯ ಪ್ರಭಾವದಿಂದ ಭಗವಂತನಲ್ಲಿ ಸೇರಲಿಕ್ಕೆ ಸಾಧ್ಯವಿರುವ ಪ್ರಯುಕ್ತ ಗೀತೆಯ ಯೋಗವು ಸಹಜವಾಗಿ ಷಟ್‌ಸ್ಥಲಕ್ಕೆ ಹೊಂದಿಕೊಳ್ಳುತ್ತದೆ. ಅಂತೆಯೇ ಲೋಕಾನುಭವಕ್ಕೂ ಸಮಂಜಸವೆನಿಸಿದೆ. ಪರಮಾತ್ಮನಿಗೂ ಅವನ ಅಂಶನಾದ ಜೀವನಿಗೂ ಇರುವ ಶಕ್ತಿವೈಶಿಷ್ಟ್ಯವನ್ನು ಗೀತೆಯಲ್ಲಿ ಅಲ್ಲಲ್ಲಿ ನೋಡಬಹುದು. ವಿದ್ವಾನ್ ಡಾ. ಟಿ.ಜಿ. ಸಿದ್ಧಪ್ಪಾರಾಧ್ಯರು ತಮ್ಮ 'ಭಗವದ್ಗೀತಾವೀರಶೈವಭಾಷ್ಯ"ದ ಭೂಮಿಕೆಯಲ್ಲಿ ಮಾನವ ಕಲ್ಯಾಣಕ್ಕಾಗಿಯೇ ಗೀತೆ ವಚನಶಾಸ್ತ್ರ ಇವೆರಡೂ ಹೊರಟಿವೆ"[೪೫] ಎಂದು ಹೇಳಿದ ಮಾತು ಈ ಸಂದರ್ಭದಲ್ಲಿ ಗಮನಾರ್ಹ.

---

೪೫. ಡಾ. ಟಿ.ಜಿ. ಸಿದ್ಧಪ್ಪಾರಾಧ್ಯ (೧೯೬೫) ಭಗವದ್ಗೀತಾವೀರಶೈವಭಾಷ್ಯ, ಪು. ೧೮.

ಮಾಯಿದೇವನ ಆಕರಸಾಹಿತ್ಯ:

ಮಾಯಿದೇವನು ಶಿವಾನುಭವಸೂತ್ರದ ಪ್ರಥಮಾಧಿಕರಣದಲ್ಲಿ ಷಟ್‌ಸ್ಥಲ ನಿರ್ಣಯಕ್ಕೆ ಆಧಾರವಾದ ಆಕರಸಾಹಿತ್ಯದ ಬಗೆಗೆ ಸುದೀರ್ಘವಾದ ವಿವರಣೆ ನೀಡಿದ್ದಾನೆ. ಅದರಲ್ಲಿಯೇ ವಾತುಲೋತ್ತರ ತಂತ್ರದಲ್ಲಿನ "ತಂತ್ರೋತ್ತರ ಪ್ರದೀಪ"ವೆಂಬುದು ಬಹಳ ಮುಖ್ಯವಾದದ್ದೆಂದು ಹೇಳಿದ್ದಾನೆ. ಜೊತೆಗೆ ಶ್ರುತಿ, ಸ್ಮೃತಿ, ಇತಿಹಾಸ, ಶಿವಧರ್ಮಾದಿ ಶಾಸ್ತ್ರಗಳು, ಶಿವಾಗಮಗಳು, ಉಪನಿಷತ್ ವಾಕ್ಯಗಳು, ಪುರಾಣಗಳ ಉತ್ತರಭಾಗಗಳು, ಗೀತಾದಿಗಳಸಾರ ಹಾಗೂ ಪುರಾತನ ಹೇಳಿಕೆಗಳಲ್ಲಿ ಷಟ್‌ಸ್ಥಲವನ್ನು ನಿರ್ಣಯಿಸಿರುವುದಾಗಿ ಹೇಳಿಕೊಂಡಿದ್ದಾನೆ. ಇವೂ ಅಲ್ಲದೆ ಗುರೂಕ್ತಿ, ಸ್ವಾನುಭಾವ ಹಾಗೂ ತರ್ಕ ಬಹುಮುಖ್ಯವೆಂದು ಪ್ರಸ್ತಾಪಿಸಿದ್ದಾನೆ.[೪೬]

ಇವುಗಳನ್ನು ಒಂದೊಂದಾಗಿ ಪರಿಚಯಿಸಿ, ಇವುಗಳಲ್ಲಿ ಮಾಯಿದೇವ ಸ್ವೀಕರಿಸಿದ ಮೂಲಾಂಶಗಳನ್ನು ಈ ಕೆಳಗಿನಂತೆ ಗುರುತಿಸಲಾಗಿದೆ.

ವೈದಿಕ ರುದ್ರಶಿವರಲ್ಲಿ ಸ್ಥಲ:

ಮಾಯಿದೇವನು "ಸ್ಥಲಂ ನಾಮ ಪರಂ ತತ್ತ್ವಂ ಶಿವರುದ್ರಾದಿ ಸಂಜ್ಞಕಂ"[೪೭] ಎಂದಿರುವುದರಿಂದ "ಸ್ಥಲ" ಎಂಬಲ್ಲಿಶಿವರುದ್ರರು ಸಮಾವೇಶಗೊಳ್ಳುತ್ತಾರೆ. ರುದ್ರನಿಂದ ಶಿವ ಆಗುವ ಸಂದರ್ಭ ವೇದೋಪನಿಷತ್ತುಗಳಲ್ಲಿ ಕುತೂಹಲಕರವಾಗಿದೆ.

ಆರ್ಯರ ಅತ್ಯಂತ ಪ್ರಾಚೀನ ಕೃತಿಯೆಂದು ಹೇಳಲಾದ ಋಗ್ವೇದದಲ್ಲಿ ರುದ್ರನ ವಿಚಾರ ಬರುತ್ತದೆ. ಅವನು ಅಲ್ಲಿ ಭಯಂಕರ ದೇವತೆಯಾಗಿ ವರ್ಣಿತನಾಗಿದ್ದಾನೆ. ಅವನನ್ನು ಅಲ್ಲಿ ಹೀಗೆ ವರ್ಣಿಸಲಾಗಿದೆ.

---

೪೬. ಕಾಮಿಕಾದ್ಯಾವಾತುಲಾಂತಾಶ್ಶಿವೇನೋಕ್ತಾಶ್ಶಿವಾಗಮಾಃ ।
ತೇಷು ವಾತುಲಸಂಜ್ಞೋಽಯಂ ಸರ್ವೋತ್ಕೃಷ್ಟೋ ಮಹಾಗಮಃ ॥
ವಾತುಲಾಖ್ಯೇಮಹಾತಂತ್ರೇ ಪೂರ್ವೋತ್ತರ ವಿಭೇದತಃ ।
ಭಾಗದ್ವಯ ಸಮಾಖ್ಯಾತಂ ತಸ್ಮಿನ್ನುತ್ತರನಾಮನಿ ॥
ತಂತ್ರೋತ್ತರ ಪ್ರದೀಪಾಖ್ಯಂ ಶಿವಸಿದ್ಧಾಂತತಂತ್ರಕಂ ।
ಅಸ್ತಿ ತತ್ರಾಹ ದೇವೇಶೋ ದೇವ್ಯೆ ಷಟ್‌ಸ್ಥಲನಿರ್ಣಯಂ ॥
ಶ್ರುತಿಸ್ಮೃತೀತಿಹಾಸ್ಯೈಶ್ಚ ಶಿವಧರ್ಮಾದಿಶಾಸ್ತ್ರಕೈಃ ।
ಕಥ್ಯತೇ ಶಿವಸಿದ್ಧಾಂತತಂತ್ರಂ ಷಟ್‌ಸ್ಥಲನಿರ್ಣಯಂ ॥
ಶಿವಾಗಮೈಃ ಶಿವಾದ್ವೈತರಹಸ್ಯೈಃ ಪಾರಮಾರ್ಥಿಕೈಃ ।
............................................ ॥
ಸರ್ವೈರುಪನಿಷದ್ವಾಕ್ಯೈಃ ಪುರಾಣೈರುತ್ತರಾರ್ಧಕೈಃ ।
............................................ ॥
ಗೀತಾಸಾರೈಃ ಸಮಸ್ತೈಶ್ಚ ಪುರಾತನಮಹಾಮತೈಃ ।
............................................ ॥
ಗುರೂಕ್ತ್ಯಾಸ್ವಾನುಭೂತ್ಯಾ ಚ ತರ್ಕತಶ್ಚ ಪ್ರಮಾಣತಃ ।
............................................ ॥
ಶಿವಾನುಭವಸೂತ್ರಂ, ಅಧಿಕರಣ ೧, ಶ್ಲೋಕ ೨೫-೩೨.

೪೭. ಶಿವಾನುಭವಸೂತ್ರಂ ಅಧಿಕರಣ ೨, ಶ್ಲೋಕ ೧೨.

ಆತೇ ಪಿತರ್ಮರುತಾಂ ಸುಮ್ನಮೇತುಮಾನಃ ಸೂರ್ಯಸ್ಯ ಸದೃಶೋ ಯುಯೋಥಾಃ ।
ಅಭಿನೋ ವೀರೋ ಅರ್ವತಿಕ್ಷಮೇತ ಪ್ರಜಾಯೇಮಹಿರುದ್ರ ಪ್ರಜಾಭಿಃ ॥[೪೮]

"ಎಲೈ ಮರುತ್ತಗಳ ತಂದೆಯೇ! ನಿನ್ನ ಕೃಪೆ ನಮಗಾಗಲಿ. ನಮ್ಮನ್ನು ಸೂರ್ಯಸಂದರ್ಶನದಿಂದ ದೂರ ಸರಿಸಬೇಡ. ವೀರರುದ್ರನು ನಮ್ಮನ್ನು ಸಮರ್ಥರನ್ನಾಗಿ ಮಾಡಲಿ. ನಾವು ಪ್ರಜೆಗಳ ಮೂಲಕ ಸಂವರ್ಧಿತರಾಗೋಣ."

ತ್ವಾದತ್ತೇಭೀರುದ್ರಶಾಂತಮೇಭಿಃ ಶತಂ ಹಿಮಾಅಶೀಯಭೇಷಜೇಭಿಃ ।
ವ್ಯಸ್ಮದ್ದ್ವೇಷೋವಿತರ ವ್ಯಂಹೋ ವ್ಯಮೀವಾಶ್ಚಾತಯಸ್ವಾವಿಷೂಚಿಃ ॥[೪೯]

"ಎಲೈ ರುದ್ರನೇ! ನಿನ್ನಿಂದ ನೀಡಲಾದ ಗುಣಕಾರಿಯಾದ ಔಷಧಿಗಳ ಮೂಲಕ ನಾವು ನೂರು ವರ್ಷ ಬಾಳುವಂತಾಗಲಿ. ನಮ್ಮ ದ್ವೇಷಗಳನ್ನು, ದುಃಖಗಳನ್ನು ದೂರಮಾಡು. ರೋಗಗಳನ್ನು ದೂರಗೊಳಿಸು".

ಶ್ರೇಷೋಜಾತಸ್ಯರುದ್ರಶ್ರೀಯಾಸಿತವಸ್ತವಸ್ತಾವಜ್ರಬಾಹೋ ।
ಪರ್ಷಿಣಃ ಪಾರಮಂಹಸಃ ಸ್ವಸ್ತಿವಿಶ್ವಾಅಭೀತೀರಪಸೋಯುಯೋಧೀ ॥[೫೦]

"ಎಲೈ ರುದ್ರನೇ! ನಿನ್ನ ಶ್ರೀಮಂತ ಯಶಸ್ಸಿನ ಕಾರಣ ನೀನು ಸರ್ವರಲ್ಲಿ ಶ್ರೇಷ್ಠನು. ಬಲವಂತರಲ್ಲಿ ಸರ್ವೋತ್ತಮನು. ಎಲೈ ವಜ್ರದಂಥ ಬಾಹುಗಳುಳ್ಳವನೇ ನಮ್ಮನ್ನು ದುಃಖದಿಂದ ಪಾರುಮಾಡು. ಸರ್ವರೀತಿಯ ಶಾರೀರಿಕ ವ್ಯಾಧಿಗಳಿಂದ ಮುಕ್ತಮಾಡು".

ಹೀಗೆ ವೇದದ ಪ್ರಥಮ ಸೂಕ್ತಗಳಲ್ಲೇ ಕಾಣುವ, ಬಿರುಗಾಳಿ, ಸಿಡಿಲು ಮುಂತಾದ ವಿಧ್ವಂಸಕ ಶಕ್ತಿಗಳೇ ಮೂರ್ತಿವೆತ್ತಂತಿರುವ ರುದ್ರನ ಕಲ್ಪನೆಯಿಂದಲೇ ಶಿವನ ಕಲ್ಪನೆ ಪ್ರಾರಂಭವಾಗಿದೆ. ರುದ್ರ ಎನ್ನುವ ಪದದ ಅರ್ಥವೇ"ಗರ್ಜಿಸುವವನು" ಎಂದು.[೫೧] ಋಗ್ವೇದದಲ್ಲಿ ಈತನನ್ನು ಕುರಿತ ಸೂಕ್ತಗಳು ಬಹಳ ಕಡಿಮೆ. "ಶಿಶ್ನದೇವ"[೫೨] ಎಂದು ಎರಡು ಸ್ಥಾನಗಳಲ್ಲಿ ಅವನನ್ನು ಸಂಬೋಧಿಸಲಾಗಿದೆ. ಈ ಪದ ಆರ್ಯ-ಅನಾರ್ಯ ನಡುವೆ ನಡೆದ ಘರ್ಷಣೆಯಿಂದಾಗಿ ಉತ್ಪನ್ನವಾದದ್ದೆಂದು ವಿದ್ವಾಂಸರು ಊಹಿಸಿದ್ದಾರೆ.[೫೩] ಅನಾರ್ಯರು (ದ್ರಾವಿಡರು) ಶಿವಲಿಂಗ ಆರಾಧಕರಾಗಿದ್ದರೆಂದು ಕಂಡುಬರುತ್ತದೆ. ಋಗ್ವೇದದಲ್ಲಿ "ವೀರಾಃ ಸಿಂಧುಪುತ್ರಾಃ" ಎಂದಿರುವುದರಿಂದ "ವೀರಶೈವ" ಪದಕ್ಕೆ ಅಲ್ಲಿಯೇ ಮೂಲ ಹುಡುಕಲು ಕೆಲವರು ಯತ್ನಿಸಿದ್ದಾರೆ.[೫೪] ಋಗ್ವೇದದಲ್ಲಿ ರುದ್ರನಿಗೆ ಗೌಣಸ್ಥಾನವಿದೆ. ಒಮ್ಮೆ ಸೋಮನ

---

೪೮. ನಾಲ್ಕುವೇದಗಳು (೧೯೮೯) ಶೇಷನವರತ್ನ, ಪು. ೧೯೧-೯೪.

೪೯. ಅದೇ.

೫೦. ಅದೇ.

೫೧. ಎಮ್. ಹಿರಿಯಣ್ಣ (೧೯೭೧) ಭಾರತೀಯ ತತ್ತ್ವಶಾಸ್ತ್ರದ ಮೂಲಾಂಶಗಳು, ಅನುವಾದ: ಡಾ. ಕೆ.ಬಿ. ರಾಮಕೃಷ್ಣರಾವ್, ಪು ೨೮.

೫೨. ಋಗ್ವೇದ ೭-೨೧ ಹಾಗೂ ೧೦-೧೦-೯೯.

೫೩. ಟಿ.ಎನ್. ಮಲ್ಲಪ್ಪ (೧೯೮೧) ಲಿಂಗತತ್ವದ ಉಗಮ ಮತ್ತು ವಿಕಾಸ, ಪು. ೫೭೮.

೫೪. ಡಾ. ವಿ. ಶಿವಾನಂದ (೧೯೯೧) ೧೨ನೇ ಶತಮಾನದ ಪೂರ್ವದ ಶೈವಧರ್ಮದಲ್ಲಿ ವೀರಶೈವ ಕುರುಹುಗಳು, ವಿಶ್ವಪ್ರಭೆ, ಸಂಪುಟ ೩, ಪು. ೫೫

ಜೊತೆಗೆ ಇನ್ನೊಮ್ಮೆ ಅಗ್ನಿಯ ಜೊತೆಗೆ ಈತ ವರ್ಣಿತನಾಗಿದ್ದಾನೆ. ಅಗ್ನಿಯೊಂದಿಗಿದ್ದ ವರ್ಣನೆ ರೌದ್ರಮಯವಾದರೆ, ಸೋಮನೊಂದಿಗೆ ಶಾಂತವಾಗಿ ವರ್ಣಿತನಾಗಿದ್ದಾನೆ. ಆದರೂ ಋಗ್ವೇದದಲ್ಲಿ ೭೫ ಸಾರ ರುದ್ರ, ಉಲ್ಲೇಖಗೊಂಡಿದ್ದಾನೆ.

ಋಗ್ವೇದದಲ್ಲಿ ಬರುವ ರುದ್ರನನ್ನು ಸಾಯಣರು ತಮ್ಮ ಭಾಷ್ಯದಲ್ಲಿ ಶಬ್ದ ಮೂಲ ಹಿಡಿದು ಆರು ಬಗೆಯಾಗಿ ಅರ್ಥಮಾಡಬಹುದೆಂದು ಹೇಳುತ್ತಾರೆ.[೫೫] 'ರುದ್ರ' ಪದವನ್ನು ವಿದ್ವಾಂಸರು ವಿವಿಧ ರೀತಿಯಲ್ಲಿ ಅರ್ಥೈಸಿದ್ದಾರೆ. ಚೀರಾಡು ಅಥವಾ ಅಳು ಅಥವಾ ಅಳಿಸುವವ ಎಂದೆಲ್ಲ ಅರ್ಥ ರುದ್ರ ಪದಕ್ಕಿವೆ. ಬೃಹದ್ದೇವತಾ ಪ್ರಕರಣದಲ್ಲಿ ಹೀಗೆ ಹೇಳಲಾಗಿದೆ. "ಮಾನವರ ಹಿತಕ್ಕಾಗಿ ವಿದ್ಯುತ್ ಸಹಿತ ಮಳೆಗರಿಯುತ್ತ ಅಂತರಿಕ್ಷದಲ್ಲಿ ಗರ್ಜಿಸುವವನನ್ನು ನಾಲ್ವರು ಋಷಿಗಳು ರುದ್ರನೆಂದು ಸ್ತುತಿಸಿದರು.[೫೬]

ರುದ್ರನಿಗೆ ಪಶುಗಳ ಒಡೆಯ ಅಥವಾ ದೇವತೆಯೆಂದು ಕರೆಯಲಾಗಿದೆ.[೫೭] ಅವನು ಅದ್ಭುತವಾದುದನ್ನು ಸೃಷ್ಟಿಮಾಡುವವ.[೫೮] ಬಾಣಗಳನ್ನು ಬಿಡುವಲ್ಲಿ ಅವನು ಕುಶಲಿಗ. ದಾರುಣ ಪಶುಗಳಂತೆ ಅವನು ವಿನಾಶಕ. ಅವನಿಗೆ ಅಲ್ಲಿಯೇ ತ್ರಯಂಬಕನೆಂದೂ ಕರೆಯಲಾಗಿದೆ.[೫೯] ರುದ್ರನ ಭೌತಿಕ ಶರೀರದ ಕಲ್ಪನೆಯೂ ಅಲ್ಲಿದೆ. ಅವನಿಗೆ ಕೈಗಳು, ಭುಜಗಳು, ವಿಶಾಲವಾದ ಎದೆ, ಸುಂದರವಾದ ತುಟಿಗಳು ಇವೆ. ಅವನ ಬಣ್ಣ ಕಂದೀವರ್ಣದ್ದು,[೬೦] ಅವನು ಬಂಗಾರದಂತೆ ಹೊಳೆಯುತ್ತಾನೆ. ಅವನ ಕೈಗಳಲ್ಲಿ ಬಾಣಗಳಿವೆ. ಇದರಿಂದ ಮನುಷ್ಯರು ಹಾಗೂ ಪಶುಗಳು ಭಯಭೀತರಾಗುತ್ತಾರೆ.[೬೧] ಅವನು ಸಾವಿಗೂ ಬದುಕಿಗೂ ಒಡೆಯನಾಗಿದ್ದಾನೆ. ಅವನು ಮಾನವರನ್ನು ಮೃತ್ಯುಭಯದಿಂದ ದೂರಗೊಳಿಸುತ್ತಾನೆ. ಅವರಿಗೆ ದೀರ್ಘವಾದ ಬದುಕನ್ನು ನೀಡುತ್ತಾನೆ. ಇದೇ ವಿಶೇಷತೆಯಿಂದಾಗಿ ಅವನನ್ನು "ಮೃತ್ಯುಂಜಯ" ಎಂದು ಕಲ್ಪಿಸಲಾಗಿದೆ.

ಋಗ್ವೇದದಲ್ಲಿ ರುದ್ರನಿಗೆ ಅಲ್ಲಲ್ಲಿ "ಶಿವ" ಎಂಬ ಶಬ್ದ ಪ್ರಯೋಗವಾಗಿದೆ.[೬೨] ಆದರೆ ಆಗಮಿಕದರ್ಶನಗಳಲ್ಲಿದ್ದ ಅರ್ಥವ್ಯಾಪ್ತಿ ಅದಕ್ಕಿಲ್ಲ. ಅಂದರೆ ಆಗಮಗಳಲ್ಲಿ ಶಿವನನ್ನು ಪರಮೋನ್ನತ ಅರ್ಥದೊಂದಿಗೆ ಕಲ್ಪಿಸಲಾಗಿದೆ. ಅದನ್ನಿಲ್ಲಿ ಭಾವಿಸುವಂತಿಲ್ಲ. ಋಗ್ವೇದದಲ್ಲಿ ಶಿವನನ್ನು ಕೇವಲ ಶಾಬ್ದಿಕವಾಗಿ "ಕಲ್ಯಾಣಕಾರಿ" ಎಂದು ಗ್ರಹಿಸಲಾಗಿದೆ. ಅವನಿಗೆ ಸ್ವತಂತ್ರವಾದ ಅಸ್ತಿತ್ವ ಅಲ್ಲಿಲ್ಲ. ಆದರೆ ಆಗಮಗಳಲ್ಲಿ ಅವನೇ ಎಲ್ಲ ದೇವಾನುದೇವತೆಗಳ ಸಂಚಾಲಕನಾಗಿದ್ದಾನೆ. ಋಗ್ವೇದದಲ್ಲಿಯ ರುದ್ರ ಕೇವಲ ಇಚ್ಛೆಗಳನ್ನು ಈಡೇರಿಸುವವ, ಹಾಗೂ ಯಥೇಷ್ಟವಾಗಿ ಅನ್ನ-ಧನ-ಧಾನ್ಯಗಳನ್ನು ನೀಡುವವ, ಮತ್ತು ಪರಮ ಮಂಗಲಕಾರಿಯಾಗಿದ್ದಾನಷ್ಟೆ.

ರುದ್ರನಿಗೆ 'ಶರ್ವ' ಎಂದು ಇನ್ನೊಂದು ಹೆಸರಿದೆ. 'ಶರ್ವ' ಶಬ್ದವು 'ಸರು' ಎಂಬುದರಿಂದಾಗಿದೆ. ಇದರ ಅರ್ಥ ತೀಕ್ಷ್ಣ ಅಥವಾ ಹರಿತ ಎಂದಾಗುತ್ತದೆ. ಇದು ಶಿವಸ್ವರೂಪದ ಭಯಂಕರಾವಸ್ಥೆ. ಅಗ್ನಿ, ರುದ್ರ ಮತ್ತು ಶರ್ವ -

---

೫೫. ಶಂ. ಭಾ. ಜೋಶಿ (೧೯೭೨) ಶಿವರಹಸ್ಯ, ಪು. ೯.

೫೬. "ಅರೋದೀದಂತರಿಕ್ಷೆಯದ್ ವಿದ್ಯುದ್‌ವೃಷ್ಟಿಂದದನ್ನೃಣಾಮ್ |
ಚತುರ್ಭಿಋಷಿಸ್ತೇನ ರುದ್ರ ಇತ್ಯಭಿಃ ಸಂಸ್ತುತ || ಬೃಹದ್‌ದೇವತಾ, ೨-೩೪.

೫೭. ಋಗ್ವೇದ, ೧೦-೬೧-೩.

೫೮. Devasenapati, V.A. (1974) Saivasiddhanta, p. 52.

೫೯. "ತ್ರಯಂಬಕಂ ಯಜಾಮಹೆ ಸುಗಂಧಿಂ ಪುಷ್ಟಿಂವರ್ಧನಂ", ಋಗ್ವೇದ, ೭-೫೯.

೬೦. ಋಗ್ವೇದ, ೨-೩೩-೩.

೬೧. ಋಗ್ವೇದ, ೧-೧೧೪-೬.

೬೨. ಋಗ್ವೇದ, ೨-೩೩-೩.

ಇವು ತತ್ವತಃ ಒಂದೇ ಶಕ್ತಿಯ ಮೂರು ಅವಸ್ಥೆಗಳು.[೬೩] ಯಮನೊಂದಿಗೆ ಶರ್ವನನ್ನು ಸ್ತುತಿಸಲಾಗಿದೆ.[೬೪] ಆದರೆ ಹೆಚ್ಚಾಗಿ'ಶರ್ವ'ನೊಂದಿಗೆ 'ಭವ'ನ ವರ್ಣನೆಯು ಕಂಡು ಬರುತ್ತದೆ. ಶರ್ವ ಸಂಹಾರಕ. ಭವ ಶಾಸಕ[೬೫] ಭವನು ಭೂಮಿ ಹಾಗೂ ಸ್ವರ್ಗದ ಶಾಸಕ ಹಾಗೂ ನೈತಿಕ ನಿಯಮಗಳ ಸಂಚಾಲಕನಾಗಿದ್ದಾನೆ.

ತೈತ್ತರೀಯ ಸಂಹಿತೆಯ[೬೬] ಹೊತ್ತಿಗೆ ರುದ್ರನ ಸ್ವರೂಪದಲ್ಲಿ ಪ್ರಗತಿಯಾಯಿತು. ಅವನು ಆಗ ಸ್ವತಂತ್ರದೇವತೆಯಂತೆ ಪ್ರತಿಷ್ಠಿತನಾದ. ಅವನನ್ನು ಅಲ್ಲಿ ಸಾವಿರ ಕಣ್ಣುಳ್ಳವ, ಬೆಂಕಿಯಂತಹ ಬಣ್ಣ ಉಳ್ಳವ, ನೀಲೀಕುತ್ತಿಗೆಯುಳ್ಳವನೆಂದು ವರ್ಣಿಸಲಾಗಿದೆ. ರುದ್ರನಿಗೆ ನೂರಾರು ಆಕಾರಗಳಿವೆ. ಅವನು ಸರ್ವಜ್ಞ, ಅವನು ಎಲ್ಲ ಜೀವಿಗಳನ್ನು ಹಾಗೂ ಎಲ್ಲ ಪದಾರ್ಥಗಳನ್ನು ನೋಡುತ್ತಾನೆ. ರುದ್ರನಿಂದಲೇ ಜಗತ್ತಿಗೆ ಅಸ್ತಿತ್ವವಿದೆ. ಅವನು ಧ್ವನಿ-ಪ್ರತಿಧ್ವನಿ ಎರಡೂ ಆಗಿದ್ದಾನೆ. ಅವನು ವಿಶ್ವವ್ಯಾಪಕನಾಗಿದ್ದಾನೆ. ವಾಯವೀ ಸಂಹಿತೆಯಲ್ಲಿ ರುದ್ರನ ನಾಯಿಗಳ ಪ್ರಸ್ತಾಪ ಬಂದಿದೆ. ಅವು ಬಾಯ್ತೆರೆದು ಬೊಗಳುತ್ತವೆ, ಅತ್ತಿತ್ತ ತಿರುಗುತ್ತಿರುತ್ತವೆ. ಅವುಗಳಿಗೆ ದೊರೆತ ಆಹಾರವನ್ನು ಅವು ಹಲ್ಲಿನಿಂದ ನುರಿಸದೆ ನುಂಗಿಬಿಡುತ್ತವೆ. ಬಹುಶಃ ರುದ್ರನನ್ನು 'ಭೈರವ' ರೂಪದಲ್ಲಿ ಇಲ್ಲಿ ಕಲ್ಪಿಸಿದಂತಿದೆ. ಭೈರವನ ಮೂಲಕಲ್ಪನೆ ಇಲ್ಲಿಂದಲೇ ಪ್ರಾರಂಭಗೊಂಡಂತಿದೆ. ಭೈರವನ ವಾಹನವನ್ನು ನಾಯಿಯೆಂದೇ ಪ್ರದರ್ಶಿಸಲಾಗುತ್ತದೆ.[೬೭]

ವಾಯವೀ ಸಂಹಿತೆಯಲ್ಲಿ 'ರುದ್ರ'ನಿಗೆ ಶಿವ ಮತ್ತು ಶಂಕರ ಎಂದು ಸಂಬೋಧಿಸಲಾಗಿದೆ. "ಶಿವನೆಂದರೆ ನೀನೇ. ನೀನು ವೈದ್ಯ. ವನ್ಯಜೀವಿಗಳ, ಮನುಷ್ಯರ, ಕುದುರೆ ಮುಂತಾದವುಗಳ ರಕ್ಷಕನಾಗಿರುವ ಹಾಗೂ ಪಶುಗಳಿಗೆ ಶುಭಕಾರಿಯಾಗಿರುವ"[೬೮] ಎಂದು ಅವನನ್ನು ಸ್ತುತಿಗೈಯ್ಯಲಾಗಿದೆ. ಯಜುರ್ವೇದದಲ್ಲಿ ರುದ್ರನ ಕಲ್ಪನೆ ಪೂರ್ಣವಾಗಿ ಪರಿವರ್ತನೆಗೊಂಡಿತು. ರುದ್ರನ ಎಲ್ಲ ವರ್ಣನೆಗಳು ಶಿವನಲ್ಲಿ ಕ್ರಮೇಣ ಸಮಾವೇಶವಾಗತೊಡಗಿದವು. ರುದ್ರನನ್ನು ಶಿವನೆಂದೇ ವರ್ಣಿಸುವಂತಾಯಿತು. ಆಗ ಅವನನ್ನು ಸಹಸ್ರಾಕ್ಷ,[೬೯] ಹಿರಣ್ಯಬಾಹು[೭೦] ಮುಂತಾಗಿ ಕರೆಯಲಾಯಿತು.

ಅಥರ್ವವೇದದಲ್ಲಿ ರುದ್ರನನ್ನು ಸ್ತುತಿಸುತ್ತಾ ಹೀಗೆ ಹೇಳಲಾಗಿದೆ. "ಎಲೈ! ಸರ್ವನೆ ನನ್ನನ್ನು ಸುಖಿಗೊಳಿಸು. ಎಲ್ಲ ದೃಷ್ಟಿಯಿಂದ ನನ್ನನ್ನು ರಕ್ಷಿಸುವಂಥವನಾಗು. ಎಲೈ! ಪಶುಪತಿಯೆ, ನಿನಗೆ ವಂದಿಸುತ್ತೇನೆ. ನಿನ್ನ ತೀಕ್ಷ್ಣವಾದ ಬಾಣಗಳನ್ನು ನನ್ನ ಮೇಲೆ ಬಿಡಬೇಡ. ನೀನು ನಮ್ಮ ದ್ವಿಪದ ಮತ್ತು ಚತುಷ್ಪದಗಳನ್ನು ಕೊಲ್ಲಬೇಡ".[೭೧]

ಈ ರೀತಿಯಾಗಿ ರುದ್ರನ ಸ್ವರೂಪವು ಅನೇಕ ವಿಧವಾದ ವಿರೋಧಗಳೊಂದಿಗೂ ಒಂದು ಅದ್ಭುತ ಸಮನ್ವಯ ದರ್ಶನದ ನೋಟ ಅಲ್ಲಿ ಗೋಚರವಾಗುತ್ತದೆ. ವೈದಿಕಕಾಲದಿಂದ ಉಪನಿಷತ್ಕಾಲದವರೆಗೆ ರುದ್ರನ ಸ್ವರೂಪಿನಲ್ಲಿ

---

೬೩. ಋಗ್ವೇದ, ೧-೧೧೪-೭.

೬೪. ಅದೇ, ೧೦-೧೦-೧೩.

೬೫. ಅದೇ, ೬-೯೩-೧.

೬೬. ತೈತ್ತಿ - ಸಂ - ೧-೫, ೩-೪.

೬೭. "ನಮಃ ಶ್ವಭ್ಯಃ ಶ್ವಪತಿಭ್ಯಃ ವೋನಮೋನಮೋಭವಾಯಚ ರುದ್ರಾಯ ಚ ನಮಃ", ವಾಯವೀಸಂಹಿತಾ, ೧೬-೨೮.

೬೮. ವಾಯುಸಂಹಿತಾ, ೩-೫೯-೬೩.

೬೯. ಶುಕ್ಲಯಜುರ್ವೇದಃ ರುದ್ರಾಷ್ಟಾಧ್ಯಾಯೀ, ೫-೭.

೭೦. ಅದೇ, ೫-೧೬.

೭೧. ಶ್ವೇತಾಶ್ವತರೋಪನಿಷತ್, ೩-೧೧.

ಅಥರ್ವಶಿರೋಪನಿಷತ್ತಿನಲ್ಲಿ ರುದ್ರನನ್ನು ಶಿವ ಹಾಗೂ ಬ್ರಹ್ಮನೆಂದು ಕಲ್ಪಿಸಲಾಗಿದೆ. ಅವನು ಪರಬ್ರಹ್ಮ, "ಯಾವನು ಬ್ರಹ್ಮನೋ ಅವನು ಏಕ, ಯಾವನು ಏಕನೋ ಅವನೇ ರುದ್ರ, ಯಾವನು ರುದ್ರನೋ ಅವನೇ ಈಶಾನ, ಯಾವನು ಈಶಾನನೋ ಅವನೇ ಭಗವಂತನಾದ ಮಹೇಶ್ವರ"[೭೯] ಎಂದಿದೆ.

ಆದ್ದರಿಂದ ವೈದಿಕಕಾಲದಲ್ಲಿ ಉಗ್ರನಾಗಿದ್ದ ರುದ್ರನು ಪರವರ್ತೀಕಾಲದಲ್ಲಿ ಪರಮಕಲ್ಯಾಣಕಾರಿಯೆಂದೂ ಶಿವಸ್ವರೂಪಿಯೆಂದೂ ಪರಿವರ್ತಿತನಾದ. ಶರ್ವ, ಭವ, ಮುಂತಾದ ವಿಶೇಷಣಗಳು ಗೌಣವಾಗಿ ಶಿವ, ಶಂಭು, ಮಹಾದೇವ, ಪರಮೇಶ್ವರ, ಪರಮತತ್ತ್ವ ಮೊದಲಾದ ರೂಪಗಳು ಪ್ರತಿಷ್ಠಿತಗೊಂಡವು. ಶಿವನು ವಿಶ್ವಾಸ ಅಥವಾ ಶುದ್ಧಹೃದಯದಿಂದ ಒಲಿಯುತ್ತಾನೆಂದು ಉಪನಿಷತ್ತುಗಳು ಹೇಳುತ್ತವೆ. ಶಿವಜ್ಞಾನ ಪ್ರಾಪ್ತಿಯಾದ ನಂತರ ಆಂತರಿಕವಾಗಿ ನಿತ್ಯತೃಪ್ತಿ ದೊರೆಯುವುದಾಗಿ ಅವು ಸಾರಿವೆ.[೮೦]

ಒಟ್ಟಿನಲ್ಲಿ ಹೇಳುವುದಾದರೆ, ಭಾರತದಲ್ಲಿ ಶಿವ ಮತ್ತು ವಿಷ್ಣು ಇವರಿಬ್ಬರೇ ಬಹಳ ಪ್ರಮುಖ ದೇವತೆಗಳಾಗಿ ಉಳಿಯುತ್ತಾರೆ. ಹೆಚ್ಚಾಗಿ ಪುರಾಣಗಳೂ ಈ ಇಬ್ಬರನ್ನೇ ಮುಂದುಮಾಡಿಕೊಂಡು ಬೆಳೆದಿವೆ. ಕೆಲವು ಪುರಾಣಗಳು ವಿಷ್ಣುವನ್ನು ಪ್ರಧಾನದೇವತೆಯಾಗಿ ಸ್ವೀಕರಿಸಿದರೆ, ಇನ್ನು ಕೆಲವು ಶಿವನಿಗೆ ಪಟ್ಟಗಟ್ಟಿವೆ. ಅವರಿಬ್ಬರನ್ನು ಅವು ಪರಬ್ರಹ್ಮ, ಪರಮ ಅಧಿಷ್ಠಾನವೆಂದು ಚಿತ್ರಿಸಿವೆ. ಕೆಲವೊಮ್ಮೆ ಇವರಿಬ್ಬರಲ್ಲೂ ಸಾಮರಸ್ಯ ತರಲು 'ಹರಿಹರ' ಎಂದು ಒಂದೇ ತತ್ತ್ವದಲ್ಲಿ ಶ್ರದ್ಧೆಯನ್ನು ಕೇಂದ್ರೀಕರಿಸಲು ಅಲ್ಲಲ್ಲಿ ಪ್ರಯತ್ನಿಸಿದುದನ್ನು ಕಾಣಬಹುದಾಗಿದೆ.

ಆಗಮಿಕ ಪರಂಪರೆಯಲ್ಲಿ ಸ್ಥಲತತ್ತ್ವ :

ಭಾರತೀಯ ದರ್ಶನವು ಕೇವಲ ವೈದಿಕಪರಂಪರೆಗಷ್ಟೇ ಸೀಮಿತಗೊಳ್ಳದೆ ಆಗಮಿಕ ಧಾರೆಯಲ್ಲಿಯೂ ಮಹತ್ವದ ಸ್ಥಾನಪಡೆದಿದೆ. ಆಗಮಿಕಪರಂಪರೆಯ ಸಮಾವೇಶವಿಲ್ಲದಿದ್ದರೆ ಭಾರತೀಯ ದರ್ಶನದ ವಿಚಾರವು ಅಪೂರ್ಣವಾಗಿಯೇ ಉಳಿಯುತ್ತದೆ. ಏಕೆಂದರೆ ವೇದಾಗಮಗಳು ಒಂದೇ ದೇಹದ ಎರಡು ಅಭಿನ್ನ ಮುಖಗಳು.

ವೇದ, ಜ್ಞಾನಕ್ಕೆ ಪ್ರಾಧಾನ್ಯತೆಯನ್ನು ಕೊಟ್ಟಿದೆ. ಆದರೆ ಆಗಮ, ಇಚ್ಛೆ, ಕ್ರಿಯೆ ಹಾಗೂ ಭಾವನೆಗಳಿಗೆ ಮಹತ್ವವಿತ್ತಿದೆ. ಇಚ್ಛೆ ಮತ್ತು ಕ್ರಿಯೆಗಳನ್ನು ಜ್ಞಾನದ ಹಿನ್ನಲೆಯಲ್ಲಿ ವಿಶ್ಲೇಷಿಸಲಾಗಿದೆ. ಆಗಮಿಕದರ್ಶನದಲ್ಲಿ ಸ್ವಾತಂತ್ರ್ಯ ಹಾಗೂ ಪೂರ್ಣತ್ವದ ಪ್ರತ್ಯಯಕ್ಕೆ ವಿಶೇಷವಾದ ಒತ್ತುಕೊಡಲಾಗಿದೆ. ಇದು ಸರ್ವಸಮಾವೇಶ, ಸರ್ವಸಂಗ್ರಾಹ್ಯ, ಸರ್ವವ್ಯಾಪಕ ಹಾಗೂ ಸರ್ವಜ್ಞ - ಪ್ರತ್ಯಯದ ಬಗೆಗೆ ವಿಶೇಷವಾದ ವಿವೇಚನೆ ಮಾಡಿದೆ. ವೇದದಲ್ಲಿನ ಪೂರ್ಣತ್ವವೆಂದರೆ, ಸಂಭಾವ್ಯದೊಂದಿಗೆ ಸ್ವಾತಂತ್ರ್ಯ, ಅಂದರೆ ಸೀಮಿತತೆಗಳ ನಿಷೇಧವಿದ್ದುದನ್ನು ಅಲ್ಲಿ ಕಾಣುತ್ತೇವೆ. ಆಗಮದಲ್ಲಿ ಚಿತ್‌ಶಕ್ತಿಯ ಸ್ವಾತಂತ್ರ್ಯದಲ್ಲಿ ಸೀಮಿತ ಮತ್ತು ಅಸೀಮಿತ ಅಥವಾ ಸಾಪೇಕ್ಷ ಹಾಗೂ ನಿರಪೇಕ್ಷಗಳ ಪೂರ್ಣಸಮನ್ವಯವನ್ನು ಕಾಣಬಹುದು. ಶೈವಪರಂಪರೆಯಲ್ಲಿ ಅವಾಸ್ತವಿಕ ಅಥವಾ ಮಿಥ್ಯೆಯಂತಹ ವಿಚಾರಕ್ಕೆ ಮಹತ್ವವಿಲ್ಲ. ಎಲ್ಲವೂ ಅನಂತ ಚೈತನ್ಯದ ಪ್ರಕಾಶವಲ್ಲದೆ ಅಲ್ಲಿ ಯಾವುದೇ ಅನ್ಯ ವಸ್ತುವಿನ ನಿಷೇಧಕೂಡ ಕಂಡು ಬರುವುದಿಲ್ಲ.[೮೧] ಇದಕ್ಕೆ

೭೯. "...... ಯತ್ ಪರಂ ಬ್ರಹ್ಮ ಸ ಏಕಃ ಯ ಏಕಃ ಸ ರುದ್ರಃ ಯೊ
ರುದ್ರೋ ಸಃ ಈಶಾನಃ, ಯಃ ಈಶಾನಃ ಸ ಭಗವಾನ ಮಹೇಶ್ವರಃ" । ಅಥರ್ವಶಿರೋಪನಿಷತ್, ೩.

೮೦. ಶ್ವೇತಾಶ್ವತರೋಪನಿಷತ್, ೪-೧೪, ೧೬, ೧೭.

೮೧. ಈಶ್ವರಪ್ರತ್ಯಭಿಜ್ಞಾ ವಿಮರ್ಶಿನೀ ೧-೧ (ಭೂಮಿಕಾ) (೧೯೮೪) (ಅನು) ಕೃಷ್ಣಾನಂದಸಾಗರ.

ವಿರುದ್ಧವೆಂಬಂತೆ ಅದ್ವೈತವೇದಾಂತದಲ್ಲಿ ಜಗನ್ಮಿಥ್ಯತ್ವದ ವಿಶೇಷ ವರ್ಣನೆಯಿದೆ. ನಿಜವಾಗಿ ವೇದದ ವಿಚಾರ ನಿಂತಲ್ಲಿಂದ ಆಗಮದ ವಿಚಾರಗಳು ಪ್ರಾರಂಭಗೊಳ್ಳುತ್ತವೆ. ಆದ್ದರಿಂದ ವೇದವನ್ನು ಸಾಮಾನ್ಯ, ಆಗಮವನ್ನು ವಿಶೇಷವೆಂದು ಪರಿಗಣಿಸಲಾಗಿದೆ. ಆಗಮ ಸಾಹಿತ್ಯದ ಬಗೆಗೆ ಡಾ. ಎಸ್.ಎನ್. ದಾಸಗುಪ್ತಾರ ಅಭಿಪ್ರಾಯ ಹೀಗಿದೆ : "ತಂತ್ರ ಸಾಹಿತ್ಯದ ವಿಶೇಷಾಂಶವೆಂದರೆ, ಅದು ವೇದಕಾಲದಿಂದ ಬಂದ ಭಾರತೀಯ ಸಂಸ್ಕೃತಿಯನ್ನು ಹಾಗೂ ಅದರ ಪರಿಣಾಮಗಳನ್ನು ರಕ್ಷಿಸಿದೆ; ಅವುಗಳನ್ನು ಸಮನ್ವಯಗೊಳಿಸಲು ತನ್ನದೇ ಆದ ರೀತಿಯಲ್ಲಿ ಪ್ರಯತ್ನಿಸಿದೆ".[೮೨] ಭಾರತೀಯದರ್ಶನ ಪರಂಪರೆಯಲ್ಲಿ ಸ್ಥಲತತ್ವದ ಬಗ್ಗೆ ಹುಟ್ಟಿಕೊಂಡಿದ್ದ ಹಲವಾರು ದೋಷ ಹಾಗೂ ಅಪೂರ್ಣತೆಗಳು ಆಗಮಿಕಪರಂಪರೆಯಲ್ಲಿ ಸ್ವೀಕರಿಸಿದ "ಪರಶಿವ" ಕಲ್ಪನೆಯಲ್ಲಿ ಪರಿಮಾರ್ಜಿತಗೊಳಿಸಲು ಯತ್ನಿಸಿದಂತಿದೆ. ಏಕೆಂದರೆ ಏಕೈಕವಾದ ಪರಶಿವತತ್ತ್ವದಿಂದಾಗಿ ಈ ವಿಶ್ವವೆಲ್ಲ ನಿಯಂತ್ರಿತವಾಗಿದೆ ಎಂದು ನಿರ್ಧರಿಸಿದ ಆಗಮಿಕ ಪರಂಪರೆ ಎಲ್ಲ ವೈರೂಧ್ಯಗಳನ್ನು ಸಮನ್ವಯಗೊಳಿಸಿತು.

ಆಗಮಗಳನ್ನು ಕೆಲವೆಡೆ ತಂತ್ರಗಳೆಂದೂ ಸಂಬೋಧಿಸಲಾಗಿದೆ. 'ತಂತ್ರ' ಎಂಬ ಶಬ್ದವನ್ನು ಸಂಸ್ಕೃತವಾಙ್ಮಯದಲ್ಲಿ ಅನೇಕ ಅರ್ಥಗಳಲ್ಲಿ ಬಳಸುತ್ತಾರೆ. ಉದಾಹರಣೆಗಾಗಿ ಸಿದ್ಧಾಂತ, ಪ್ರಧಾನ, ಶಾಸ್ತ್ರಭೇದ, ಶ್ರುತಿಯ ಒಂದು ಭಾಗ, ಕರ್ತವ್ಯಕರ್ಮ, ಹೀಗೆ, ತಂತ್ರವು ವ್ಯಾಪಕಾರ್ಥದಲ್ಲಿ ಬಳಕೆಗೊಂಡಿದೆ.

ತಂತ್ರವು 'ತನ್' (ಹರಡುವುದು,[೮೩] ವಿಸ್ತಾರ) ಎಂಬ ಧಾತುವಿನಿಂದ ಉತ್ಪನ್ನವಾಗಿದೆ. ಅಜಿತಾಗಮದಲ್ಲಿ ತಂತ್ರ ಎನ್ನುವ ಪದವನ್ನು ತತ್ತ್ವ ಮತ್ತು ತಂತ್ರಗಳಿಗೆ ಸಂಬಂಧ ಪಟ್ಟ ಜ್ಞಾನವನ್ನು 'ಹರಡು' ಅಥವಾ 'ವಿಸ್ತರಿಸು' ಎಂಬ ಅರ್ಥದಲ್ಲಿಯೂ, ಶಕ್ತಿ ಮತ್ತು ರಕ್ಷಣೆಯನ್ನು ಕೊಡುವಂಥದ್ದು ಎಂಬ ಅರ್ಥದಲ್ಲಿಯೂ ಉಪಯೋಗಿಸಲಾಗಿದೆ. ಸರ್ ಜಾನ್ ವುಡ್ರೋಫ್ ಅವರ ಅಭಿಪ್ರಾಯದಂತೆ, "ತಂತ್ರ ಎಂದರೆಒಂದು ರೀತಿಯ ಮತೀಯ ಧರ್ಮಗ್ರಂಥ"[೮೪] "ಈಗ ಅದು ಕೇವಲ ಶಾಕ್ತಾಗಮಗಳಿಗೆ ಮಾತ್ರ ಬಳಕೆಯಾಗುತ್ತಿದೆ". ಆಸಮಂತಾತ್ ಗಮಯತೀತ್ಯಾಗಮಃ' ಎಂದು ಆಗಮ ಶಬ್ದಕ್ಕೆ ವ್ಯುತ್ಪತ್ತಿಯನ್ನು ಹೇಳಲಾಗಿದೆ. ಪರಂಪರೆಯಿಂದ ಬಂದ ಗ್ರಂಥಗಳು ಎಂಬ ಅರ್ಥವನ್ನು 'ಆಗಮ' ಎಂಬ ಮಾತು ಸೂಚಿಸುವುದು ಅವುಗಳ ಪ್ರಾಚೀನತೆಗೆ ಸಾಕ್ಷಿಯಾಗಿದೆ. ಸಂಪ್ರದಾಯಗಳು ಆಗಮ ಶಬ್ದವನ್ನು ಹೀಗೆ ಗ್ರಹಿಸಿವೆ: "ಆ"=ಪಾಶ, "ಗ"=ಪಶು ಅಥವಾ ಜೀವ ಮತ್ತು "ಮ" ಪತಿ. ಪ್ರಮುಖ ಆಗಮಗಳೆಂದರೆ ಮೂರು. ಶೈವ, ಶಾಕ್ತ ಹಾಗೂ ವೈಷ್ಣವ ಶಿವಾಗಮಗಳು ಶೈವಧರ್ಮವನ್ನು ಶಾಕ್ತ ಆಗಮಗಳು ಶಾಕ್ತಧರ್ಮವನ್ನು, ವೈಷ್ಣವಾಗಮಗಳು ವೈಷ್ಣವ ಧರ್ಮವನ್ನು ಬೋಧಿಸುತ್ತವೆ. ಇವುಗಳ ಸಂಖ್ಯೆ ಮತ್ತು ಕಾಲದ ವಿಚಾರದಲ್ಲಿಯೂ ಭಿನ್ನಾಭಿಪ್ರಾಯಗಳಿವೆ. ಶಿವಾಗಮಗಳು[೮೫] ನೂರೆಂಟು (೧೦೮), ಶಾಕ್ತಾಗಮಗಳು ಎಪ್ಪತ್ತೇಳು, ಮತ್ತು ಪಾಂಚರಾತ್ರಗಳು ಇಪ್ಪತ್ತೆಂಟು ಇವೆಯೆಂಬುದಾಗಿ ಹೇಳಲಾಗುತ್ತದೆ.

---

೮೨. Sri Ashutosh mookerjee silver jublee volumes, ಸಂಪುಟ-೩, ಭಾಗ-೧, ಪು. ೨೫೪, ಉದ್ಧೃತ, ಶಿವಾಗಮಸೌರಭ, ಪು. ೧೭ (೧೯೮೬) ಸಂ. ಎಂ.ಜಿ. ನಂಜುಂಡಾರಾಧ್ಯ.

೮೩. ತನೋತಿ ವಿಪುಲಾನರ್ಥಾನ್ ತತ್ತ್ವಮಂತ್ರಸಮಾಶ್ರಿತಾನ್।
ತ್ರಾಣಂ ಚ ಕುರುತೇ ಪುಂಸಾಂ ತೇನ ತಂತ್ರಮಿತಿ ಸ್ಮೃತಮ್ ।, ಅಜಿತಾಗಮ, ಸಂಪುಟ ೧, ಕ್ರಿಯಾಪದ, ಪಟಲ ೧, ಪದ್ಯ ೧೧೫, ಪು. ೧೦. Ed. by Vidwan N.R. Bhatt, 1964.

೮೪. Shakti and Shakta, (1929) Sri John Woodroffee, p.31.

೮೫. ಡಾ. ಎಚ್. ತಿಪ್ಪೇರುದ್ರಸ್ವಾಮಿ (೧೯೮೫) ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪು. ೬೦.

ನೂರೆಂಟು ಶಿವಾಗಮಗಳಲ್ಲಿ ಇಪ್ಪತ್ತೆಂಟು ಬಹಳ ಪ್ರಮುಖವಾದವುಗಳೆಂದೂ ಆದರಲ್ಲಿಯೂ ಹತ್ತು ಸಾಕ್ಷಾತ್ ಶಿವಪ್ರಣೀತಗಳೆಂದೂ ಹೇಳಲಾಗಿದೆ.[೮೬]

ಶೈವಾಗಮಿಕ ಪರಂಪರೆಯಲ್ಲಿ ಸ್ಥಲತತ್ತ್ವವನ್ನು "ಪರಶಿವ" ಎಂದು ಕರೆಯಲಾಗಿದೆ. ಪರಶಿವ ಶಬ್ದದಲ್ಲಿ ಶಿವಶಕ್ತಿಯರ ಸಾಮರಸ್ಯ ಅಥವಾ ಪೂರ್ಣತ್ವದ ಸ್ಥಿತಿಯು ಅಡಕವಾಗಿದೆ.

ಶಿವ ಹಾಗು ಶಕ್ತಿಗೆ ಕ್ರಮವಾಗಿ "ಪ್ರಕಾಶ" ಹಾಗೂ "ವಿಮರ್ಶ" ಎನ್ನಲಾಗಿದೆ. ಪ್ರಕಾಶ-ಜ್ಞಾನದ ಹಾಗೂ ವಿಮರ್ಶ-ಕ್ರಿಯೆಯ ಪ್ರತಿನಿಧಿಗಳು. ಇವೆರಡು ಅವಿನಾಭಾವ ಸಂಬಂಧದಿಂದಿರುತ್ತವೆ. ಒಂದರ ಅಭಾವದಲ್ಲಿ ಮತ್ತೊಂದರ ಕಲ್ಪನೆ ಅಸಾಧ್ಯ.[೮೭]

ಶಿವನು ಕಾಲಾತೀತ, ಅನಂತ ಹಾಗೂ ಸರ್ವಜ್ಞ, ಅವನೇ ಜಗತ್ತಿಗೆ ಮೂಲಕಾರಣ. ಶಕ್ತಿಯ ಸಹಾಯದಿಂದ ಜಗತ್ತನ್ನು ನಿರ್ಮಿಸುತ್ತಾನೆ. ಶಿವನಲ್ಲಿ ಅಂತರ್ನಿಹಿತವಾದ ಶಕ್ತಿಯೇ ಚೇತನಾತ್ಮಕ ಶಿವನ ಹಾಗೂ ಜಡಾತ್ಮಕವಾದ ಜಗತ್ತಿನ ನಡುವೆ ಮಧ್ಯಸ್ತಿಕೆಯನ್ನು ವಹಿಸಿಕೊಳ್ಳುತ್ತದೆ. ಶಿವನು ಜೀವಿಗಳ ಬಂಧ-ಮೋಕ್ಷಗಳಿಗೆ ಕಾರಣನಾಗಿದ್ದಾನೆ. ಶಕ್ತಿಗೆ ಇಲ್ಲಿ "ಮಾಹೇಶ್ವರಿ" ಎಂದು ಸಂಬೋಧಿಸಲಾಗಿದೆ. ಪರಶಿವ ಅದ್ವಿತೀಯ, ಅಪ್ರಮೇಯ, ಅನಿರ್ದೇಶ್ಯ, ಸೂಕ್ಷ್ಮ, ನಿತ್ಯ, ಅವ್ಯಯ ಹಾಗೂ ಧ್ರುವ.[೮೮] ಅವನು ವಿಕಲ್ಪರಹಿತ, ಜ್ಞಾನರೂಪ ಹಾಗೂ ಆನಂದಮಯ. ಆದರೆ ಅವನು ವಿಕಲ್ಪಗಳನ್ನೆಲ್ಲ ತನ್ನಲ್ಲಿರುವ ಶಕ್ತಿಯ ಮೂಲಕ ಸಾಕಾರವಾಗಿಸಬಲ್ಲ[೮೯] ಶಿವನು ತನ್ನ ಶಕ್ತಿಯಿಂದ ಪಂಚಕೃತ್ಯಗಳನ್ನು ಈಡೇರಿಸಿಕೊಳ್ಳುತ್ತಾನೆ.

ಆಗಮಿಕ ಪರಂಪರೆಯಲ್ಲಿ ಮುಖ್ಯವಾದ ವೈಶಿಷ್ಟ್ಯವನ್ನು "ಶಕ್ತಿ" ತತ್ವದಲ್ಲಿ ಕಾಣುತ್ತೇವೆ. ಅದ್ವೈತದಲ್ಲಿ ಶಕ್ತಿಯ ಪರಿಕಲ್ಪನೆಯಿಲ್ಲ, ಬ್ರಹ್ಮನು ಶುದ್ಧ ಜ್ಞಾನ ಹಾಗೂ ಪ್ರಕಾಶರೂಪನಾದುದರಿಂದ ಅವನಲ್ಲಿ ಕ್ರಿಯೆಯ ಸಮಾವೇಶವಾಗದು. ಏಕೆಂದರೆ ಕ್ರಿಯೆಯನ್ನು ಅಲ್ಲಿ ಅಪೂರ್ಣತೆಯ ಅರ್ಥದಲ್ಲಿ ಬಳಸಿಕೊಳ್ಳಲಾಗಿದೆ. ಬ್ರಹ್ಮನು ಪೂರ್ಣನಾದ್ದರಿಂದ ಅವನಿಗೆ ಯಾವುದಕ್ಕೂ ಕೊರತೆಯಿಲ್ಲ. ಆದುದರಿಂದ ಅವನಿಗೆ ಕ್ರಿಯೆಯ ಅವಶ್ಯಕತೆ ಇರಬೇಕಾಗಿಲ್ಲ. ಆದರೆ ಆಗಮಿಕ ಪರಂಪರೆಯಲ್ಲಿ ಶಕ್ತಿಯು ಕ್ರಿಯೆಯ ರೂಪ. ಅದು ಅಪೂರ್ಣತೆಯ ದ್ಯೋತಕವಾಗಿರದೆ ಪೂರ್ಣತೆಯ ಪ್ರತೀಕವಾಗಿದೆ. ಕ್ರಿಯೆಯು ಪೂರ್ಣಶಿವನ ಆನಂದದ ಸಹಜವಾದ ಉಚ್ಛಲನವಾಗಿದೆ. ಶಕ್ತಿಯು ಅವನ ಸ್ವರೂಪ.

---

೮೬. ಶೈವಾಗಮಗಳೆಲ್ಲವೂ ಜ್ಞಾನ, ಯೋಗ, ಕ್ರಿಯಾ, ಚರ್ಯ, ಎಂಬ ನಾಲ್ಕು ವಿಷಯಗಳನ್ನು ವಿವರಿಸುತ್ತವೆ. ಜ್ಞಾನಪ್ರಕರಣವು ತತ್ತ್ವವನ್ನು ತಿಳಿಯಪಡಿಸುವ ಪ್ರಮಾಣಗಳನ್ನು ನೈತಿಕಧರ್ಮವನ್ನು ತೋರಿಸುತ್ತದೆ. ಯೋಗಪಾದವು ಮೋಕ್ಷವನ್ನು ಸಾಧಿಸುವ ಅಭ್ಯಾಸಗಳನ್ನು ತೋರಿಸುತ್ತದೆ. ಕ್ರಿಯಾಭಾಗವು ದೇವಾಲಯ ನಿರ್ಮಾಣ, ವಿಗ್ರಹಗಳ ರಚನೆಗಳನ್ನು ವಿವರಿಸುತ್ತದೆ. ಚರ್ಯಾಪಾದವು ಆಚಾರಸಂಪ್ರದಾಯಗಳನ್ನು ವ್ರತನಿಯಮಗಳನ್ನು ಹೇಳುತ್ತದೆ.

೮೭. "ತತ್‌ಸ್ವರೂಪಂ ಭವಸ್ಯ ಶಿವಸ್ಯ ಪರಮಾತ್ಮನಃ ।
ಚಿದ್ರೂಪಮಾತ್ಮನೊ ರೂಪಂ ದಿಕ್ಕ್ರಿಯಾಶಕ್ತಿಲಕ್ಷಣಮ್" ।
ತಂತ್ರಸಾರ (೧೯೩೮) (ವ್ಯಾಖ್ಯಾಕಾರ) ಭಟ್ಟಾಚಾರ್ಯ ಶ್ರೀಕೃಷ್ಣಾನಂದವಾಗೀಶ ಚೌಖಂಬಾ ಸಂಸ್ಕೃತಸೀರೀಜ ವಾರಾಣಸೀ.

೮೮. ಅಪ್ರಮೇಯಮನಿರ್ದ್ದೇಶ್ಯಮನೌಪಮ್ಯಮನಾಮಯಮ್ ।
ಸೂಕ್ಷ್ಮಂ ಸರ್ವಗತಂ ನಿತ್ಯಂ ಧ್ರುವಮವ್ಯಯಮೀಶ್ವರಮ್ ॥
ಅದೇ, ಸ್ವಾಯಂಭುವಾಗಮ, ಪಟಲ ೩, ಮಂತ್ರ ೧೨.

೮೯. ವಿಕಲ್ಪರಹಿತಂ ತತ್ವಂ ಜ್ಞಾನಮಾನಂದಮವ್ಯಯಮ್ ।
ತಥಾಪಿ ಮಾಯಯಾ ತಸ್ಯ ನಾಮರೂಪೇ ಪ್ರಕಲ್ಪಿತೇ ।
ಸ್ಕಂದ-ಪುರಾಣ-ಸೂತಸಂಹಿತೆ ೩೩.

ಅಭೇದ, ಭೇದಾಭೇದ ಹಾಗೂ ಶಿವಾದ್ವೈತ, ತ್ರಿವಿಧದೃಷ್ಟಿಕೋನದಿಂದ ಹಿನ್ನೆಲೆಯಲ್ಲಿ ಆಗಮಗಳನ್ನು ಮೂರು ವಿಧವಾಗಿ ವಿಭಜಿಸಲಾಯಿತು. ಇವುಗಳ ಆಧಾರದ ಮೇಲೆ ಅನೇಕ ಸಂಪ್ರದಾಯಗಳು ಹುಟ್ಟಿಕೊಂಡವು. ಅವುಗಳಲ್ಲಿ ಅಭೇದವಾದ ಅಥವಾ ಅದ್ವೈತವಾದ (ಕಾಶ್ಮೀರಶೈವದರ್ಶನ) ಭೇದಾಭೇದ (ಶೈವಸಿದ್ಧಾಂತ) ಹಾಗೂ ಶಿವಾದ್ವೈತ (ವೀರಶೈವದರ್ಶನ) - ಇವು ಪ್ರಮುಖವಾಗಿವೆ.[೯೦] ಸೈದ್ಧಾಂತಿಕ ವಿಭಿನ್ನತೆಯಿಂದಾಗಿ ಈ ಮೂರೂ ದರ್ಶನಗಳಲ್ಲಿ ಶಿವ, ಜೀವ ಹಾಗೂ ಜಗತ್ತಿನ ನಡುವೆ ಮೇಲ್ನೋಟಕ್ಕೆ ಸಮಾನತೆ ಕಂಡುಬಂದರೂ ಅವುಗಳಲ್ಲಿ ಪರಸ್ಪರ ಸೂಕ್ಷ್ಮವಾದ ವ್ಯತ್ಯಾಸಗಳು ಇದ್ದೇ ಇವೆ. ಆದರೆ ಮೂರೂ ದರ್ಶನಗಳಲ್ಲಿ "ಪರಶಿವನನ್ನು ಸಮಾನ ದೃಷ್ಟಿಕೋನದಿಂದ ಕಾಣಲಾಗಿದೆ. ಮೂರರಲ್ಲಿಯೂ ಅವನು ವಿಮರ್ಶಾಶಕ್ತಿಸಮೇತ, ಜ್ಞಾನಸ್ವರೂಪ, ಮತ್ತು ಕ್ರಿಯಾರೂಪ ಎನಿಸಿದ್ದಾನೆ.

ಆಗಮಗಳಲ್ಲಿ ವೀರಶೈವಧರ್ಮದ ಪ್ರಸ್ತಾಪವಿಲ್ಲ. ಇದ್ದರೂ ಅದನ್ನು ಇತ್ತೀಚೆಗೆ (ವಾರದವರ ನೇತೃತ್ವದಲ್ಲಿ) ಸೇರಿಸಲಾಗಿದೆ. ಶರಣರ ಕಾಲದಲ್ಲಿಯೇ ವೀರಶೈವಧರ್ಮ ಅಸ್ತಿತ್ವಕ್ಕೆ ಬಂದಿತೆಂದು (ಈಗದು ಕೊಂಡುಗುಳಿಕೇಶರಾಜನ ವರೆಗೆ ತಲುಪಿದೆ) ಕೆಲವರು ವಾದಿಸುತ್ತಾರೆ. ಈ ವಾದಕ್ಕೆ ಕಾರಣವಿಲ್ಲದಿಲ್ಲ. ಏಕೆಂದರೆ ಈಗ ಲಭ್ಯವಿರುವ ಆಗಮಗಳಲ್ಲಿ ದೊರೆಯುವ, ವೀರಶೈವಕ್ಕೆ ಸಂಬಂಧಿಸಿದ ವಿಷಯಗಳು, ಒಂದು ವ್ಯವಸ್ಥೆಗೆ ಒಳಪಟ್ಟಿಲ್ಲ. ದೇವತಾರಾಧನೆ, ಶಿವಲಿಂಗ ಪ್ರತಿಷ್ಠಾಪನೆ ಮತ್ತು ದೇವಾಲಯಗಳ ವಸ್ತುವಿನ್ಯಾಸ ಮುಂತಾದ ಈ ವಿಷಯಗಳ ಮಧ್ಯದಲ್ಲಿ ಅಷ್ಟಾವರಣ, ಷಟ್‌ಸ್ಥಲ ಹಾಗೂ ಶೀಲಾಚಾರ ಮೊದಲಾದವುಗಳು ಅಲ್ಲಲ್ಲಿಗೆ ಕಂಡುಬರುತ್ತವೆ.[೯೧] ಈಗ ಲಭ್ಯವಿರುವ ಆಗಮಗಳಲ್ಲಿ ವೀರಶೈವದ ಉಲ್ಲೇಖ ಕಂಡುಬರುತ್ತಿದ್ದರೂ ಅವುಗಳ ಬಗೆಗೆ ಅಚ್ಚುಕಟ್ಟಾದ ಮತ್ತು ವಸ್ತುನಿಷ್ಠವಾದ ಅಧ್ಯಯನ ನಡೆದೇ ಇಲ್ಲವೆಂದು ತೋರುತ್ತದೆ. ವೀರಶೈವಕ್ಕೆ ಸಂಬಂಧ ಪಟ್ಟ ಆಗಮಗಳೆಂದರೆ ಸಾಮಾನ್ಯವಾಗಿ ೧. ಸೂಕ್ಷ್ಮಾಗಮ ೨. ವೀರಾಗಮ ೩. ಪಾರಮೇಶ್ವರಾಗಮ ೪. ಕಾರಣಾಗಮ ೫. ಚಂದ್ರಜ್ಞಾನಾಗಮ ೬. ವಾತುಲಶುದ್ಧಾಗಮ ೭. ಮೃಗೇಂದ್ರಾಗಮ ೮. ಮಕುಟಾಗಮ ೯. ಮಾತಂಗಪಾರಮೇಶ್ವರಾಗಮ ೧೦. ಚಿಂತ್ಯಾಗಮ ೧೧. ಸ್ವಾಯಂಭುವಾಗಮ ಎಂದು ಹತ್ತು ಆಗಮಗಳನ್ನು ಗುರುತಿಸಲಾಗಿದೆ. ಇವು ಈಗ ಪೂರ್ಣವಲ್ಲದಿದ್ದರೂ ಲಭ್ಯವಾಗುತ್ತವೆ. ಇವುಗಳ ಬಗೆಗೆ ಕೆಲವರು ಸಂದೇಹ ತಾಳಿದ್ದಾರೆ. ೧.'ಆಗಮಪರಿಜ್ಞಾನ ಎಂಬ ಕೃತಿಯೊಂದನ್ನು ಶಂಭುಲಿಂಗಸ್ವಾಮಿಗಳು ಬರೆದಿದ್ದಾರೆ. ಇದರಲ್ಲಿ ವೀರಶೈವವನ್ನು ಆಗಮಗಳ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆಯಾದರೂ ಚರ್ಚೆಗೆ ಪ್ರಮಾಣವೊದಗಿಸುವ ಅವು, ಈಗ ಲಭ್ಯವಿರುವ ಗ್ರಂಥಗಳಲ್ಲಿ ದೊರೆಯಲಾರವು. 'ಶಿವಾಗಮ ಸೌರಭ' ಎಂಬ ಕೃತಿ ಒಂದನ್ನು ಜ.ಚ.ನಿ. ಬೆಳ್ಳಿಹಬ್ಬದ ನಿಮಿತ್ತ ಎಂ.ಜಿ.ನಂಜುಂಡಾರಾಧ್ಯರು ಸಂಪಾದಿಸಿದ್ದಾರೆ. ಅದರಲ್ಲಿ ಶೈವ-ವೀರಶೈವ-ಅನುಬಂಧ ಎಂದು ಆಗಮಗಳಲ್ಲಿ ಮೂರು ಭಾಗಗಳನ್ನು ಮಾಡಲಾಗಿದೆ. ೪೨ ಲೇಖನಗಳು, ೮ ಜನ ಲೇಖಕರಿಂದ ಚರ್ಚಿತವಾಗಿವೆ. ಐದುಜನರನ್ನು ಬಿಟ್ಟು ಉಳಿದೆಲ್ಲ ಲೇಖನಗಳನ್ನು ಎಂ.ಜಿ. ನಂಜುಂಡಾರಾಧ್ಯ ಹಾಗು ಜ.ಚನಿ. ಬರೆದಿದ್ದಾರೆ. ಅಲ್ಲಿ ಒಂದು ಉದ್ದೇಶ ಕಂಡುಬರುತ್ತದೆ. ಅದೆಂದರೆ ವೀರಶೈವಧರ್ಮ ಇತ್ತೀಚಿನದಲ್ಲ (ಶರಣರ ಕಾಲದಲ್ಲಿನದು) ಬಹಳ ಪ್ರಾಚೀನವಾದದ್ದು. ಅಲ್ಲಿ ಚರ್ಚಿಸಲಾದ ವಿಷಯಗಳು ಕೆಲವು ಇಂತಿವೆ. ಮಾಯಾವಾದಿಗಳೆಂಬ ಮರಗಳನ್ನು ಕಡಿಯುವುದರಲ್ಲಿ ಕೊಡಲಿಯಂತೆಯೂ, ಬೌದ್ಧಾದಿ ಮತಗಳನ್ನು ಖಂಡಿಸುವಲ್ಲಿ ವಜ್ರಾಯುಧದಂತೆಯೂ, ಜೈನವೆಂಬ ಮದ್ದಾನೆಗೆ ಸಿಂಹದಂತೆಯೂ, ಚಾರ್ವಾಕರೆಂಬ ಮೇಘಕ್ಕೆ ಬಿರುಗಾಳಿಯಂತೆಯೂ, ವೀರಶೈವಮತವೆಂಬ ಸಾಗರವನ್ನು ಉಕ್ಕೇರಿಸುವಲ್ಲಿ ಪೂರ್ಣಚಂದ್ರನಂತೆಯೂ ಇದ್ದು, ದಿಗಂತ ವಿಶ್ರಾಂತ ಕೀರ್ತಿಶಾಲಿಗಳೂ ಆದ ಈ ಪಂಚಾಚಾರ್ಯರು ಸಜ್ಜನಸಮ್ಮತರು (ಪು.೭೪) ಇತ್ಯಾದಿ. ಇದು ಪಾಶುಪತಾಗಮದಲ್ಲಿ

---

೯೦. Pandey, K.C. (1954) Bhaskari, Vol III, p.VI, Introduction, p. 4.

೯೧. ತಂತ್ರಸಂಗ್ರಹ (೧೯೧೪) (ಸಂ) ಶಂಕರೆಪ್ಪ ಅಚ್ಚಪ್ಪ ಟೊಪಗಿ (ವಾತುಲಶುದ್ಧಾಖ್ಯತಂತ್ರ) (ಪು. ೩೧, ೩೩, ೩೪, ೪೫, ೪೭, ೪೮, ೪೯, ೫೦, ೫೧, ೫೩, ೫೪, ೫೫, ೬೧, ೬೨, ೬೫, ೭೦, ೭೧, ಇತ್ಯಾದಿ)

ಬಂದ ವಿಷಯ. ಇಲ್ಲಿ ಪ್ರಸ್ತಾಪಿಸಲಾದ ಧರ್ಮಗಳಿಗಿಂತ ಇದು ಇತ್ತೀಚಿನ ಆಗಮವೆಂದು ಹೇಳಲು ಬೇರೆ ಪ್ರಮಾಣಗಳ ಆಗತ್ಯವಿಲ್ಲ. ವಿಪ್ರರಿಗೆ ಹತ್ತುದಿನ, ಕ್ಷತ್ರಿಯರಿಗೆ ಹನ್ನೆರಡುದಿನ, ವೈಶ್ಯರಿಗೆ ೧೫ ದಿನಗಳು, ಶೂದ್ರರಿಗೆ ಒಂದು ತಿಂಗಳು - ಇದು ಮಕುಟಾಗಯದಲ್ಲಿನ ಸೂತಕಕ್ಕೆ ಸಂಬಂಧಿಸಿದ ವಿಚಾರ. (ಪು. ೧೨೧) ಈ ಅಭಿಪ್ರಾಯ ವೀರಶೈವಕ್ಕೆ ಹೊರತಾದದ್ದು ಎಂಬುದರಲ್ಲಿ ಸಂಶಯವಿಲ್ಲ. ಕೆಲವು ವೀರಶೈವಕ್ಕೆ ಹತ್ತಿರದ ವಿಚಾರಗಳಿದ್ದುದನ್ನು ಅಲ್ಲಗಳೆಯಲಾಗದಿದ್ದರೂ ವಿಷಯದ ಪ್ರಾಮಾಣಿಕತೆಯ ಬಗೆಗೆ ಅಲ್ಲಲ್ಲಿ ಸಂದೇಹಗಳಿಲ್ಲದಿಲ್ಲ. ಉದಾಹರಣೆಗೆ ಅಲ್ಲಮಪ್ರಭು ಹೇಗಿದ್ದ ಮತ್ತು ಆತನ ಬಗೆಗೆ ಇರುವ ಎಲ್ಲ ಕಲ್ಪನೆಗಳು ಸಾಮಾನ್ಯವಾಗಿ ಎಲ್ಲರಿಗೂ ಗೊತ್ತಿವೆ. ಆದರೆ ಆಗಮಗಳಲ್ಲಿ ಅವನದೂ ಪ್ರಸ್ತಾಪವಿದೆಯಂದಾಗ ಯಾರಿಗಾಗಿದರೂ ಆಶ್ಚರ್ಯವಾಗಬಹುದು. ಅದು ಹೀಗಿದೆ :

"ಕಲೌ ಹಿ ತತ್ಪ್ರಭುದೇವಸ್ಯ ಪೀಠಂಕಲ್ಯಾಣ ಪತ್ತನೇ ।
ಶೂನ್ಯಸಿಂಹಾಸನಂ ಚೇತಿ ತದೇವ ಪ್ರಥಿತಂ ಭುವಿ"॥[೯೨]

ಆ ಸಂದರ್ಭ ಕುರಿತು ಎಂ. ನಂಜುಂಡಾರಾಧ್ಯರು ಹೇಳವುದು ಹೀಗೆ.

"ಈ ರೇಣುಕಾದಿ ಪಂಚಾಚಾರ್ಯರ ಜೊತೆಗೆ ಸ್ವಾಯಂಭುವಾಗಮ (ಪಟಲ ೯-೪೭)ದಲ್ಲಿ ಹೇಳಿರುವಂತೆ ಜಟಿನ್‌ಗಳೂ, ಮುಂಡಿಗಳೂ, ಶಿಖಿನ್‌ಗಳೂ ಕಾಷಾಯ ವಸ್ತ್ರಧಾರಿಗಳೂ ಆದ ಪಾಶುಪತ ನಿರಂಜನ ಜಂಗಮ ಮೂರ್ತಿಗಳು ಭಯಾತೀತರಾಗಿ ಅನಾದಿಕಾಲದಿಂದ ಪೂಜ್ಯರೆನಿಸಿರುವ ವಿಷಯವು ಸುಪ್ರಸಿದ್ಧವೇ ಇದೆ. ಆದರೆ ನಾವು ಉದಾಹರಿಸಿರುವ ಸ್ವಾಯಂಭುವಾಗಮ (ನವಮಪಟಲ)ದಲ್ಲಿ ಅದನ್ನು "ಕಲಿಯುಗದಲ್ಲಿ ಕಲ್ಯಾಣಪಟ್ಟಣದಲ್ಲಿ ಪ್ರಭುದೇವರಿಂದ ಶೂನ್ಯಸಿಂಹಾಸನವು ಆರಂಭವಾಯಿತೆಂದು" ಹೇಳಿರುವುದು ಆ ಭಾಗದ ಪ್ರಕ್ಷಿಪ್ತತೆಯನ್ನೇ ಸಮರ್ಥಿಸುತ್ತದೆ ಎಂದು ಭಾವಿಸಬೇಕಾಗಿದೆ".[೯೩]

ಹೀಗೆ ವೀರಶೈವಕ್ಕೆ ಸಂಬಂಧಿಸಿದ ಈ ಆಗಮಗಳಲ್ಲಿ ಕೆಲವರ ಹಸ್ತಕ್ಷೇಪವಾಗಿದೆ ಎಂಬ ಅಭಿಪ್ರಾಯ, ಕೇವಲ ಊಹೆ ಅಥವಾ ಮೊಂಡವಾದವೇನೂ ಅಲ್ಲ.

ಶ್ರೀ ಜ.ಚ.ನಿ. ಕೆಲವು ಆಗಮಗಳನ್ನು ವಿಮರ್ಶಿಸಿದ್ದಾರೆ. ಪಾರಮೇಶ್ವರಾಗಮ ಚಂದ್ರಜ್ಞಾನಾಗಮ ಮುಂತಾದ ಆಗಮಗಳನ್ನು ಸೇರಿಸಿ "ಶಿವಾಗಮಗಳಲ್ಲಿ ವೀರಶೈವ ಸಿದ್ಧಾಂತ"[೯೪] ಎಂಬ ಒಂದು ಸ್ವತಂತ್ರ ಕೃತಿಯನ್ನೇ ಹೊರತಂದಿದ್ದಾರೆ. ಪುನಾರಾವೃತಿಗೊಳ್ಳುವ ಅಲ್ಲಿಯ ವಿಷಯಗಳು ಒಂದು ನಿರ್ದಿಷ್ಟತೆಗೆ ಒಳಗಾಗಿಲ್ಲ. "ಶಿವಾಗಮ ಸೌರಭ"ದ ವಿಷಯವೇ ಅಲ್ಲಿದೆ. ಆಗಮಗಳೂ ಅವೇ ಆಗಿವೆ. ಅಲ್ಲಿ ಶೈವದೊಂದಿಗೆ ಮಿಶ್ರಗೊಂಡ ಕೆಲವು ವಿಚಾರಗಳು ಕಂಡು ಬರುತ್ತವೆ.

ಪಂ. ಕಾಶೀನಾಥ ಶಾಸ್ತ್ರಿಗಳು ಮಕುಟಾಗಮ, ಕಿರಣಾಗಮ, ಚಂದ್ರಜ್ಞಾನಾಗಮ ಎಂದು ಕೆಲವು ಕೃತಿಗಳನ್ನು ೧೯೫೭ ರಲ್ಲಿ ಹೊರತಂದಿದ್ದಾರೆ. ಮತ್ತು ಅವರದೇ 'ತಂತ್ರಸಾರ' ಎಂಬ ಆಗಮಗಳ ಸಂಗ್ರಹ ಕೃತಿಯೊಂದಿದೆ. ಶ್ರೀ ಶಾಸ್ತ್ರಿಗಳ ಸಂಗ್ರಹ ಹಾಗೂ ಸಾಹಿತ್ಯ ವಿಶ್ಲೇಷಣೆ ಕುರಿತು ಡಾ. ಶಿವಕುಮಾರ ಸ್ವಾಮಿಗಳು ಆಕ್ಷೇಪಿಸುತ್ತಾರೆ. ಸಿದ್ಧಾಂತ ಶಿಖಾಮಣಿ

೯೨. ಸ್ವಾಯಂಭುವಾಗಮ ಪಟಲ ೯, ೪೭; ಉದ್ಧೃತ: ಶಿವಾಗಮಸೌರಭ (೧೯೮೭) (ಸಂ) ಎಂ.ಜಿ. ನಂಜುಂಡಾರಾಧ್ಯ(ಪೀಠಿಕೆ) ಪು. xii.

೯೩. ಡಾ. ಎಂ. ಶಿವಕುಮಾರಸ್ವಾಮಿ (೧೯೮೭) ಸಿದ್ಧಾಂತಶಿಖಾಮಣಿ (ಮೂರು ಉಪನ್ಯಾಸಗಳು) ಪು. ೯-೧೧.

೯೪. ಡಾ. ಶ್ರೀ ಜ.ಚ.ನಿ. ಅಧ್ಯಯನಪೀಠ ಮತ್ತು ಸಂಶೋಧನಸಂಸ್ಥೆ, ಸಮಾಜ ರಸ್ತೆ ಬಸವನಗುಡಿ, ಬೆಂಗಳೂರು, ೧೯೮೭.

ಮೂರು ಉಪನ್ಯಾಸಗಳು ಎಂಬ ಕೃತಿಯಲ್ಲಿ ಇವರು ಕೆಲವು ಭಾಗ ಪ್ರಕ್ಷಿಪ್ತವೆಂದು ಬಿಟ್ಟು ಹಾಗೂ ಕೆಲವು ಭಾಗಗಳನ್ನು ಸಮರ್ಥಿಸಿದ್ದುದನ್ನು ಗುರುತಿಸಿ, ವಿಮರ್ಶಿಸಿದ್ದುದನ್ನು ಅಲ್ಲಿ ಅವಲೋಕಿಸಬಹುದು. ಈ ಹಿನ್ನಲೆಯಲ್ಲಿ ಶ್ರೀ ಶಾಸ್ತ್ರಿಗಳಿಂದ ಸಂಗ್ರಹಗೊಂಡ ಆಗಮಗಳಲ್ಲಿ ವಸ್ತುನಿಷ್ಠತೆಯ ಅಭಾವ ಕಾಣಬಹುದಾಗಿದೆ. ಪಂ. ಹೊಳಲಚಂದ್ರಶೇಖರ ಶಾಸ್ತ್ರಿಗಳು[೯೫] ಸಿದ್ಧರಾಮಪ್ಪ ಡಿ. ಪಾವಟೆ,[೯೬] ರಂಗನಾಥ ದಿವಾಕರ,[೯೭] ಹಾಗೂ ಡಾ. ವ್ಹಿ.ಎಸ್. ಕಂಬಿ[೯೮] ಮೊದಲಾದ ವಿದ್ವಾಂಸರು ವೀರಶೈವವನ್ನು ಪ್ರತಿಪಾದಿಸುವ ಆಗಮಗಳ ಬಗೆಗೆ ವಿಶೇಷವಾದ ಗಮನ ಹರಿಸಿದ್ದರೂ ಅದರ ಇನ್ನೊಂದು ಮುಖ ನಮ್ಮನ್ನು ಆಶ್ಚರ್ಯಗೊಳಿಸುತ್ತದೆ. ಅದು ಹೀಗಿದೆ : "ಶೈವಾಗಮಗಳಲ್ಲಿ ವೀರಶೈವ ಧರ್ಮದ ಬಗ್ಗೆ ಅಥವಾ ಷಟ್‌ಸ್ಥಲ ಸಿದ್ಧಾಂತದ ಬಗ್ಗೆ ಅನೇಕ ಉಲ್ಲೇಖಗಳಿಲ್ಲ. ಅಲ್ಲದೆ ದೊರೆತಿರುವ ತೀರ ಸ್ವಲ್ಪ ಭಾಗಗಳೂ ಕೂಡ ವೀರಶೈವ ಷಟ್‌ಸ್ಥಲ ಸಿದ್ಧಾಂತವನ್ನು ೨೮ ಶೈವಾಗಮಗಳು ಉಪದೇಶಿಸುತ್ತವೆಯಂಬ ವಿಚಾರ ಸರಣಿಯನ್ನು ಎತ್ತಿಹಿಡಿಯುವುದಿಲ್ಲ ಶೈವಾಗಮಗಳ ಪೂರ್ವಾರ್ಧಭಾಗಗಳು ಶೈವ ಸಿದ್ಧಾಂತವನ್ನು ಉತ್ತರಾರ್ಧ ಭಾಗಗಳು ವೀರಶೈವ ಸಿದ್ಧಾಂತವನ್ನು ನಿರೂಪಿಸುತ್ತವೆಂಬ ಪ್ರತೀತಿಯುಂಟಾಗಿರುವುದು. ಇದು ಎಷ್ಟರಮಟ್ಟಿಗೆ ಸಮರ್ಥನೀಯವೆಂಬುದನ್ನು ಹೇಳಲಿಕ್ಕೆ ಬರುವಂತಿಲ್ಲ" ಎಂದು ಡಾ. ಶ್ರೀ ನಂದಿಮಠರು ವೀರಶೈವಕ್ಕೆ ೨೮ ಶಿವಾಗಮಗಳ ಪ್ರಾಮಾಣ್ಯವನ್ನು ಅಲ್ಲಗಳೆದಿದ್ದಾರೆ. "....... ಶೈವಾಗಮಗಳು ಕೇವಲ ೨೮ ಇದ್ದರೂ ಈ ಆಗಮಗಳು ಇತ್ತಿತ್ತಲಾಗಿ ಉತ್ತರಭಾಗಗಳಾಗಿ ಸೇರಿಸಲ್ಪಟ್ಟು ವಿಸ್ತರಿಸಲ್ಪಟ್ಟವೆ. ಉದಾಹರಣಾರ್ಥವಾಗಿ ಮೊಗ್ಗೆಯಮಾಯಿದೇವರಿಂದ ಬರೆಯಲ್ಪಟ್ಟ ಅನುಭವಸೂತ್ರ ಗ್ರಂಥವು ವಾತುಲೋತ್ತರ ಆಗಮಗಳಲ್ಲಿ ಸೇರಿಸಲ್ಪಟ್ಟಿದೆ. ಅಲ್ಲದೆ ಶಿವಶರಣ ಪ್ರಮಥರ ವರ್ಣನೆ ಹಾಗೂ ಪ್ರಶಂಸನೆಯೂ ಶೈವಾಗಮಗಳ ಉತ್ತರಭಾಗಗಳಾಗಿ ಬೆಳೆಸಲ್ಪಟ್ಟವೆ" ಎಂದು ಪ್ರೊ.ಎಂ.ಆರ್. ಸಾಖರೆ ಲಿಂಗಧಾರಣ ಚಂದ್ರಿಕೆಯ ಉಪೋದ್ಘಾತದಲ್ಲಿ ಹೇಳಿದ್ದಾರೆ.[೯೯]

ಆದರೆ ಮಾಯಿದೇವನು ಆಗಮಗಳ ಬಗೆಗೆ ವಿಶೇಷವಾದ ಮಹತ್ವ ವ್ಯಕ್ತಪಡಿಸಿದ್ದಾನೆ. ಶಿವಾನುಭವಸೂತ್ರದಲ್ಲಿ ನಿರೂಪಿಸಲಾದ ಷಟ್‌ಸ್ಥಲ ಸಿದ್ಧಾಂತವನ್ನು, ವಾತುಲಾಗಮದ ಉತ್ತರಭಾಗದಲ್ಲಿರುವ ತಂತ್ರೋತ್ತರ ಪ್ರದೀಪವೆಂಬ ಹೆಸರಿನ ಶಿವಸಿದ್ಧಾಂತ್ರಂದಿಂದ ಸಂಗ್ರಹಿಸಿರುವದಾಗಿ ಸ್ವತಃ ಮಾಯಿದೇವನೆ ಹೇಳಿಕೊಂಡುದುದನ್ನು ಹಿಂದೆ ಗಮನಿಸಲಾಯಿತು. ಇದನ್ನೇ ಕೆಲವರು 'ವಾತುಲತಂತ್ರ' "ತಂತ್ರೋತ್ತರ ಪ್ರದೀಪಸಾರ" ಎಂದು ಸಂಗ್ರಹಿಸಿದ್ದಾರೆ.[೧೦೦] ಇದುವೆ ಪ್ರೊ. ಸಾಖರೆಯವರ ಮೇಲಿನ ಹೇಳಿಕೆಯ ಹಿನ್ನೆಲೆಯಾಗಿರಬಹುದೆನಿಸುತ್ತದೆ. ಈ ಸಂದರ್ಭದಲ್ಲಿ ಶ್ರೀ ನಂದಿಮಠರ ಅಭಿಪ್ರಾಯವನ್ನು ಸಮ್ಮತಿಸುವುದೂ ಕಠಿಣ. ಏಕೆಂದರೆ, ಮಾಯಿದೇವನು ಶಿವಾನುಭವಸೂತ್ರದಲ್ಲಷ್ಟೇ ಅಲ್ಲದೆ ಬೇರೆ ತನ್ನ ಕೃತಿಗಳಲ್ಲಿ ಶಿವಾಗಮಗಳನ್ನು ಸಮರ್ಥಿಸಿದ್ದಾನೆ. ಅವು ಹೀಗಿವೆ :

೧. "ವೀರಶಿವಾಗಮೋಕ್ತ ಚಿನ್ಹಾಂಕಿತರಾದವರ್ಗೆ"

೨. "ಇದು ಶಿವಧರ್ಮಮಾರ್ಗಮಿದು ವೀರಶಿವಾಗಮತಂತ್ರದರ್ಥಂ"

---

೯೫. ಚಂದ್ರಶೇಖರ ಹಿರೇಮಠ, ಬಸವತತ್ತ್ವರತ್ನಾಕರ (೧೯೬೦) ಪು. ೧೪೯-೧೬೮. ಅಮೃತವರ್ಷಿಣೀಗ್ರಂಥಮಾಲಾ, ಮೈಸೂರು.

೯೬. Virasaiva Philosophy of the Saivagamas, p. 6, Hubli (1927).

೯೭. ರಂಗನಾಥ ದಿವಾಕರ (೧೯೬೮) ವಚನಶಾಸ್ತ್ರರಹಸ್ಯ, ಪು. ೨೪೯.

೯೮. ಡಾ. ವ್ಹಿ.ಎಸ್. ಕಂಬಿ (೧೯೯೨) ನಿಗಮಾಗಮ ಮತ್ತು ವಚನಾಗಮಗಳ ಶ್ರೌತಾಶ್ರೌತದೃಷ್ಟಿ, ಪು. ೬.

೯೯. ಉದ್ಧೃತ. ಮಹಾನುಭಾವಿ ಶ್ರೀಚನ್ನಮಲ್ಲಿಕಾರ್ಜುನರು (೧೯೭೯) ಸಂ. ಚನ್ನಪ್ಪ ಎರೆಸೀಮಿ, ಪು. ೪೯೧.

೧೦೦. (i) ಪಂ. ವ್ರಜವಲ್ಲಭದ್ವಿವೇದಿ (೧೯೭೦) ತಂತ್ರಸಂಗ್ರಹ (ಭಾಗ ೧) ಸಂಪೂರ್ಣಾನಂದಸಂಸ್ಕೃತ, ವಿಶ್ವವಿದ್ಯಾಲಯ.
(ii) ಎಂ.ಜಿ. ನಂಜುಂಡಾರಾಧ್ಯ (೧೯೮೬) ಶಿವಾಗಮಸೌರಭ, ಪು. ೨೨೯-೨೩೫. ಈ ಎರಡೂ ಕೃತಿಗಳಲ್ಲಿ 'ಶಿವಾನುಭವಸೂತ್ರ'ವು ವಾತುಲತಂತ್ರಸಾರ ಎಂದು ನಾಮಾಂತರಗೊಂಡಿದೆ.

೩. "ನಿರವಧಿಕಂಪ್ರಮಾಣಮಮಲಾಗಮಶ್ಶೈವರಹಸ್ಯವಾಕ್ಯ:......"
೪. "ಸಮಸ್ತಶೈವವಿಮಳಾಗಮಧರ್ಮರಹಸ್ಯವಾಕ್ಯದಿಂ"[೧೦೧]

ಈ ಎಲ್ಲ ಪ್ರಮಾಣಗಳನ್ನು ಗಮನಿಸಲಾಗಿ ವೀರಶೈವಸಿದ್ಧಾಂತಕ್ಕೆ ಶಿವಾಗಮಗಳು ಪ್ರಮಾಣ ಗ್ರಂಥಗಳಾಗಿರುವವೆಂಬುದು ಖಚಿತವಾಗುತ್ತದೆ. ಅಲ್ಲದೆ ಆಗಮಗಳಲ್ಲಿ 'ಸ್ಥಲ' ತತ್ತ್ವವು "ಶಿವ" ಹಾಗೂ "ಲಿಂಗ"ವಾಗಿ ಬೆಳೆದುದು ಈ ವಿವೇಚನೆಯಲ್ಲಿ ಕಂಡುಬರುತ್ತದೆ.

**ಪುರಾಣಗಳಲ್ಲಿ ಶಿವಸ್ಥಲ:**

ದರ್ಶನ ಸತ್ಯೆಯು, ಕ್ಷರ-ಅಕ್ಷರ, ಸತ್-ಅಸತ್, ವ್ಯಕ್ತ-ಅವ್ಯಕ್ತ, ವಿದ್ಯೆ ಹಾಗೂ ಅವಿದ್ಯೆ ಮುಂತಾಗಿ ದ್ವಿವಿಧವಾಗಿ ವಿಭಜಿತವಾಗಿದೆ. ಇವುಗಳೆಲ್ಲದರ ನಿಷ್ಕರ್ಷವೆಂದರೆ, ವಿಶ್ವದ ಮೂಲ ತತ್ತ್ವ ಅವ್ಯಕ್ತವಾಗಿದೆ. ಅದು ಸೃಷ್ಟಿಗನುಸಾರವಾಗಿ ಸ್ವತಃ ವ್ಯಕ್ತರೂಪಧರಿಸುತ್ತದೆ. ಈಶ್ವರನ ಬಗೆಗೆ ತಾಳಿದ ವಿಭಿನ್ನ ಮತ-ಮತಾಂತರಗಳಿಗೆಲ್ಲ ಬುದ್ಧಿ ಅಥವಾ ಭಾವನೆಯೇ ಆಧಾರವಾಗಿದೆ. ಜಗತ್ತಿನಲ್ಲಿ ಇರುವುದು ಒಂದೇ ತತ್ತ್ವ. ಅದನ್ನು ಕುರಿತು ವ್ಯಕ್ತಿ ತನಗೆ ತಿಳಿದಂತೆ ಪರ್ಯಾಲೋಚಿಸುತ್ತಾನೆ. ಪುರಾಣಗಳ ನೋಟವೂ ಈ ಅಭಿಪ್ರಾಯಕ್ಕೆ ಹೊರತಾಗಿಲ್ಲ. ಅದು ತನ್ನದೇ ಆದ ಗ್ರಹಿಕೆಗಳನ್ನು ನಮಗೆ ಒದಗಿಸುತ್ತದೆ.

ಶಿವ ಮಹಾಪುರಾಣ, ಲಿಂಗಪುರಾಣ, ಸ್ಕಂಧಾದಿಪುರಾಣಗಳು ಶಿವನನ್ನು ಪ್ರಧಾನ ದೇವತೆಯೆಂದು ಮನ್ನಿಸಿವೆ. ಪುರಾಣಗಳಲ್ಲಿ ಬರುವ ಶಿವನ ಕಲ್ಪನೆಗೆ ವೈದಿಕರುದ್ರನ ಕಲ್ಪನೆಯೇ ಆಧಾರವಾದಂತಿದೆ. ಪುರಾಣಗಳಲ್ಲಿಯೂ ಶಿವ ಏಕಮೇವಾದ್ವಿತೀಯ ತತ್ತ್ವವಾಗಿದ್ದಾನೆ. ಸಮಸ್ತ ಸಚರಾಚರವು ಆವನಿಂದಲೇ ಸಂಚಲಿಸುತ್ತದೆ. ಪುರಾಣಗಳು ಏಕೇಶ್ವರವಾದವನ್ನು ಪ್ರತಿಪಾದಿಸುತ್ತವೆ. ಅವುಗಳ ಪ್ರಕಾರ ಮಹಾಪ್ರಳಯದಲ್ಲಿ ಚರಾಚರವೆಲ್ಲ ನಷ್ಟವಾದರೂ ಶಿವನೊಬ್ಬನೇ ಉಳಿಯುತ್ತಾನೆ.[೧೦೨] ಅವನಿಂದ ಪುನಃ ಸೃಷ್ಟಿಕಾರ್ಯವಾಗುತ್ತದೆ. ಸೃಷ್ಟಿ, ಸ್ಥಿತಿ, ಲಯಗಳಿಗೆ ಶಿವನೇ ಮೂಲ. ವೇದಗಳಲ್ಲಿ ಸಮಾನಶೀಲರಾದ ಇಂದ್ರ, ಸೋಮ ಹಾಗೂ ಅಗ್ನಿ-ಈ ಮೂವರನ್ನು ರುದ್ರನೊಂದಿಗೆ ಪರಿಗಣಿಸಲಾಗಿತ್ತು ನಂತರ ಬಂದ ಈ ಪುರಾಣಗಳಲ್ಲಿ ಆ ದೇವತೆಗಳು ಶಿವನ ಸೃಷ್ಟಿ ಸ್ಥಿತಿಲಯಗಳಿಗೆ ಸೀಮಿತರಾಗುತ್ತಾರೆ. ಶಿವನು ಪ್ರಕೃತಿಗೆ ಅತೀತ ಮತ್ತು ಅಪರಿವರ್ತನೀಯನಾಗಿದ್ದಾನೆ. ಜ್ಞಾನಸ್ವರೂಪ ಮತ್ತು ಅವಿನಾಶಿಯಾಗಿದ್ದಾನೆ. ತ್ರಿಗುಣಾತೀತನೂ, ಸಚ್ಚಿದಾನಂದನೂ, ಅದ್ವೈತನೂ ಆಗಿದ್ದಾನೆ. ಶಬ್ದಗಳಿಗೆ ಆತ ನಿಲುಕಲಾರ. ವಿಶ್ವದ ಜೀವ ಜಡವೆಲ್ಲ ಅವನಲ್ಲಿಯೇ ವಾಸವಾಗಿದೆ. ಎಲ್ಲದರ ಆಶ್ರಯಸ್ಥಲ ಅಥವಾ ಆಧಾರ ಅವನೇ ಆಗಿದ್ದಾನೆ. ಶಿವನು ಸೃಷ್ಟಿಗೆ ಮೊದಲು ಇದ್ದವ, ಪ್ರಳಯಾನಂತರವೂ ಇರುತ್ತಾನೆ.[೧೦೩] ಅವನು ಅವ್ಯಯ ಅಗ್ರಾಹ್ಯ, ಅಗೋತ್ರ, ಅವರ್ಣ, ಅಪ್ರತಿಷ್ಠಿತ, ನಿತ್ಯ, ಮತ್ತು ವಿಭುವಾಗಿದ್ದಾನೆ.[೧೦೪] ಪುರಾಣಗಳು, ಶಿವನು ನಿರ್ಗುಣನೆಂದು ಹೇಳುವುದರ ಜೊತೆಗೆ ಅವನು ಸಗುಣ ಸ್ವರೂಪನೆಂದೂ ಚಿತ್ರಿಸುತ್ತವೆ.

---

೧೦೧. ಶಿವಾಧವಶತಕ, ವೃತ್ತ. ೧೩, ೪೧, ೪೨, ೯೯.

೧೦೨. "ಏಕೋಽಹಂ ಸಂಸ್ಥಿತೋದೇವೀ ನ ದ್ವಿತೀಯೋಽಸ್ತಿ ಕುತ್ರಚಿತ್"।
ಲಿಂಗಪುರಾಣ ದ್ವಿತೀಯ ಖಂಡ ೪೧.

೧೦೩. ಆಸಂಪ್ರಥಮಮೇವಾಹಂ ವರ್ತ್ತಾಮಿ ಚ ಸುರೇಶ್ವರಾಃ ।
ಭವಿಷ್ಯಾಮಿ ಚ ಲೋಲೊಕೇಽಸ್ಮಿನ್ ಮತ್ತೇನಾನ್ಯೋಽಸ್ತಿಕಶ್ಚನ ॥ ಶಿವಗೀತಾ -೬-೧೦.

೧೦೪. ಲಿಂಗಪುರಾಣ, ೨-೫೬.

ಬ್ರಹ್ಮಾಂಡ ಹಿಡಿದು ಹುಲ್ಲುಕಡ್ಡಿಯವರೆಗೆ ಅವನೇ ಎಲ್ಲ ಆಗಿದ್ದಾನೆ. ನಾನಾತ್ವದ ಕಲ್ಪನೆ ಸುಳ್ಳು ಶಿವನು ಜಗತ್ತಿನ ಸಮಸ್ತವಸ್ತುಗಳಲ್ಲಿ ಅಂತರ್ನಿಹಿತನಾಗಿದ್ದಾನೆ.[೧೦೫] ಅವನು ಸ್ಥೂಲ, ಸೂಕ್ಷ್ಮ ಹಾಗು ಮಹತ್ತಿಗಿಂತ ಮಹತ್ತಾಗಿದ್ದಾನೆ. ವಿಶ್ವಸಾರವೇ ಅವನ ಸ್ವರೂಪ. ಆದರೂ ಅವನು ವಿಶ್ವವಿಕಾರದಿಂದ ಅಲಿಪ್ತ ಮತ್ತು ವಿಶುದ್ಧನಾಗಿದ್ದಾನೆ. ಅವನು ಪುರಾತನ ಪುರುಷ, ಹಿರಣ್ಮಯ, ಈಶ್ವರ ಮತ್ತು ಶಿವರೂಪನಾಗಿದ್ದಾನೆ.[೧೦೬] ಹೀಗೆ ಶಿವನನ್ನು ವಿಶ್ವೋತ್ತೀರ್ಣ ಮತ್ತು ವಿಶ್ವಮಯನೆಂದು ಕಲ್ಪಿಸಲಾಗಿದೆ. ಹೀಗೆ ಎರಡನ್ನು ಸಮೀಕರಿಸಿದ ಪ್ರಯತ್ನ ಪುರಾಣಗಳದ್ದು, ಅವುಗಳ ಪ್ರಕಾರ ಈ ಪ್ರಯತ್ನ ವಿರುದ್ಧವಾದದ್ದೇನಲ್ಲ.[೧೦೭]

ವೈದಿಕಕಾಲದ ಶಿವನಿಗೂ ಪೌರಾಣಿಕ ಕಾಲದ ಶಿವನಿಗೂ ಇರುವ ಅಂತರವೆಂದರೆ, ಶಕ್ತಿವಿಶಿಷ್ಟ ಶಿವನ ಪಾರಮ್ಯ, ಪುರಾಣಗಳಲ್ಲಿ ವಿಶೇಷವಾಗಿ ವರ್ಣಿತವಾಗಿರುವುದನ್ನು ಗುರುತಿಸಬಹುದು ವೈದಿಕ ರುದ್ರನೊಂದಿಗೆ ಶಕ್ತಿಯನ್ನು ಕಲ್ಪಿಸುವಂತಿವಲ್ಲ. ಅಲ್ಲಿ ರುದ್ರನದೊಂದೇ ಪ್ರಸ್ತಾಪವಿದೆ. ಪುರಾಣಗಳೋ ಶಕ್ತಿರಹಿತ ಶಿವನನ್ನು ಕಲ್ಪಿಸಲು ಸಾಧ್ಯವಿಲ್ಲವೆಂದು ಸೂಚಿಸಿವೆ. ಶಕ್ತಿಯೊಡನೆ ಶಿವ ಸಮನ್ವಿತನಾಗಿದ್ದಾನೆ. ಶಿವ ಕೇವಲನಾಗಿದ್ದರೂ ಶಕ್ತಿಯಿಂದಾಗಿ ಅನೇಕನಾಗುತ್ತಾನೆ. ವಿಶ್ವಾತೀತನೆನಿಸಿದರೂ ಶಕ್ತಿಯ ಮಾಧ್ಯಮದಿಂದಾಗಿ ವಿಶ್ವಮಯನಾಗಿದ್ದಾನೆ. ಶರಣರು ಹೇಳಿದ "ಲೀಲೆಯಾದಡೆ ಉಮಾಪತಿ ಲೀಲೆ ತಪ್ಪಿದಡೆ ಸ್ವಯಂಭು", ಎಂಬ ವಚನವನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಶಿವನು ಅದ್ವಿತೀಯ ಸ್ವರೂಪಿನಲ್ಲಿರುವಾಗ, ಈ ವಿಶ್ವವಿಲಾಸಮಯವಾದ, ಅಸಂಖ್ಯರೂಪತಾಳಿದ, ವಿಶ್ವವನ್ನು ಮಂತ್ರವಾದಿಯಂತೆ ಆಟವಾಡಿಸುವ ಪ್ರಕೃತಿದೇವಿಯು ಅವನಲ್ಲಿ ವಿಲೀನವಾಗಿರುತ್ತಾಳೆ. ಶಿವನು ತನ್ನ ಸಂಕಲ್ಪದಿಂದ ಆ ಶಕ್ತಿಯನ್ನು ಸೃಷ್ಟಿಯ ಸಂದರ್ಭದಲ್ಲಿ ಕ್ರಿಯಾನ್ವಿತಗೊಳಿಸಿ, ಅದನ್ನು ವ್ಯಕ್ತಾವಸ್ಥೆಗೆ ತರುತ್ತಾನೆ. ಸೃಷ್ಟಿಯ ಕ್ರಿಯೆಯಲ್ಲಿ ತೊಡಗಿದ ಶಕ್ತಿಯೇ ಮುಂದೆ ಶಿವನನ್ನು ವಿವಿಧರೂಪದಲ್ಲಿ ಪ್ರಕಟಗೊಳಿಸುತ್ತಾಳೆ. ಆಗ ಶಿವನು ವಿವಿಧರೂಪಧರಿಸಿ ತಾನೇ ತನ್ನೊಂದಿಗೆ ಆಟವಾಡುತ್ತಾನೆ.[೧೦೮] ಮಾಯಿದೇವನ ಪ್ರಕಾರ ಸ್ಥಲ ಉಪಾಸಕ ಮತ್ತು ಉಪಾಸ್ಯ ಎರಡೂ ತಾನೇ ಆಗುತ್ತದೆ. ಮತ್ತೆ ಅವೆರಡರಲ್ಲಿ ಭೇದವಿಲ್ಲ ಎಂದು ಹೇಳಿದುದನ್ನು ೫ನೇ ಅಧ್ಯಾಯದಲ್ಲಿ ಗಮನಿಸಬಹುದು. ಇದೇ ಶಕ್ತಿಯಿಂದ ನಿರ್ಗುಣನಾದ ಶಿವ ಸಗುಣನಾಗುತ್ತಾನೆ.[೧೦೯] ಸಗುಣದಿಂದಾಗಿಯೇ ವಿಶ್ವದ ವಿಕಾಸವಾಗುತ್ತದೆ. ಈ ವಿಕಾಸವಾದ ವಿಶ್ವದಲ್ಲಿ ಶಿವ ಶಕ್ತಿಯರು ಸಮಾನರಾಗಿರುತ್ತಾರೆ.[೧೧೦]

ಶಿವನ ಮಾಯೆ ಸಾರ್ವತ್ರಿಕವಾಗಿದೆ. ಅವಳಿಂದಾಗಿ ಸಿದ್ಧಪುರುಷರೂ ಮೋಹಿತರಾಗುತ್ತಾರೆ.[೧೧೧] ಶಿವಪುರಾಣವು ಶಕ್ತಿಗೆ "ಉಮಾ" ಎಂದು ಕರೆದಿದೆ. ಅವಳು ಪರಬ್ರಹ್ಮಮೂಲವಾದ ಪ್ರಕೃತೆಗೆ ಈಶ್ವರಿಯಾಗಿದ್ದಾಳೆ. ಅವಳು ನಿರಾಕಾರಕ್ಕೆ ಆಕಾರವಾಗಿದ್ದಾಳೆ. ಹಾಗೂ ನಿತ್ಯ ಮತ್ತು ಆನಂದಮಯವಾಗಿದ್ದಾಳೆ. ಶಕ್ತಿದೇವಿಯ ಶ್ರೇಷ್ಠತೆಯನ್ನು ಪ್ರದರ್ಶಿಸಲು, ಅವಳು ದೇವತೆಗಳ ಅಹಂಕಾರವನ್ನು ನಾಶಗೊಳಿಸಲು ಹುಟ್ಟಿದವಳೆನ್ನಲಾಗಿದೆ. ಅವಳು ಸಚ್ಚಿದಾನಂದರೂಪಿಣಿ

---

೧೦೫. ಶತರುದ್ರಸಂಹಿತಾ, ೪೧-೧೯.

೧೦೬. ಶಿವಗೀತೆ, ೬-೫೪.

೧೦೭. ರುದ್ರಸಂಹಿತೆ- ಸತೀಖಂಡ, ೨೮-೧೭.

೧೦೮. ಕಲ್ಯಾಣಶಿವಾಂಕ ೭೩.

೧೦೯. ಶತರುದ್ರಸಂಹಿತೆ, ೪೨-೨೧.

೧೧೦. "ಶಿವಶಕ್ತಿ ಸಮುತ್ಪನ್ನೇ ಪ್ರಪಂಚೇಽಸ್ಮಿನ್ವಿಕಲ್ಪ್ಯತೇ"। ಸಿದ್ಧಾಂತಶಿಖಾಮಣಿ, ಪರಿಚ್ಛೇದ ೫, ಶ್ಲೋಕ ೩೩.

೧೧೧. ಶ್ರೀ ಶಿವಮಹಾಪುರಾಣ, ಪು. ೨೮೧-೮೨.

ನಾನೇ ಬ್ರಹ್ಮ ಎಂದಲ್ಲಿ ಅವಳು ದೇವತೆಗಳಿಗೆ ಹೇಳುತ್ತಾಳೆ.[೧೧೨] ಅವಳು ಸರ್ವಾಂತರ್ಯಾಮಿ, ಎಲ್ಲ ಭೂತಗಳಿಗೆ ಸಾಕ್ಷಿಯಾಗಿದ್ದಾಳೆ. ಅವಳು ಪರಬ್ರಹ್ಮ, ಪರಂಜ್ಯೋತಿನಿ ಮತ್ತು ಪ್ರಣವದ್ವಂದ್ವರೂಪಿಣಿ. ನಿತ್ಯ ಹಾಗೂ ಕಾರಣ ಕಾರ್ಯರೂಪಿಣಿ ಅವಳು ಸರ್ವವಿಶ್ವ ವಿಮೋಹಿನಿ[೧೧೩] ಮಂತ್ರವಾದಿಯಂತೆ ಅವಳು ಎಲ್ಲರನ್ನು ಕುಣಿಸುತ್ತಾಳೆ.[೧೧೪] ಅವಳು ಸನಾತನಳು.

ಸ್ಥೂಲ-ಸೂಕ್ಷ್ಮ,ಚೇತನ-ಅಚೇತನ, ಶುದ್ಧ-ಅಶುದ್ಧ ಮುಂತಾದುವೆಲ್ಲ ಅಂತ್ಯದಲ್ಲಿ ಶಿವಶಕ್ತಿಯಲ್ಲಿ ಸಮಾವೇಶವಾಗುತ್ತವೆ ಶಿವ-ಶಕ್ತಿಯರು ಎಂದಿಗೂ ಪರಸ್ಪರ ಬೇರೆಬೇರೆಯಾಗರು. ಅವರು ಚಂದ್ರನಲ್ಲಿ ಚಂದ್ರಿಕೆಯಿರುವಂತೆ ಅವಿನಾಭವ ಸಂಬಂಧ ಹೊಂದಿರುತ್ತಾರೆ. ಶಕ್ತಿರಹಿತ ಶಿವನನ್ನು, ಶಿವರಹಿತ ಶಕ್ತಿಯನ್ನು ಕಲ್ಪಿಸಲು ಬಾರದಷ್ಟು ಅವರು ಅನ್ಯೋನ್ಯವಾಗಿದ್ದಾರೆ.[೧೧೫] ಕಾಣುವ ಜಗತ್ತೆಲ್ಲ ಶಕ್ತಿಯೇ ಆಗಿದೆ. ಪ್ರತ್ಯಕ್ಷವಾಗುವುದೆಲ್ಲ ಶಕ್ತಿಯ ಅಭಿವ್ಯಕ್ತಿಯಾಗಿದೆ.

ಶಿವ ಶಕ್ತಿಯರಿಂದ ಎಲ್ಲ ದೇವತೆಗಳು ಹುಟ್ಟಿದರು. ಶಿವನ ವಾಮಂಗದಿಂದ ಬ್ರಹ್ಮಹುಟ್ಟಿದರೆ, ಅವನ ಬಲ ಭಾಗದಿಂದ ವಿಷ್ಣುವಿನ ಉತ್ಪತ್ತಿಯಾಯಿತು, ಹಾಗೂ ಹೃದಯಸ್ಥಲದಿಂದ ರುದ್ರ ಹುಟ್ಟಿದ. ಈ ಮೂವರು ಶಿವನಾಜ್ಞೆಯಂತೆ ಒಂದೊಂದು ಕಾರ್ಯವಹಿಸಿಕೊಂಡಿದ್ದಾರೆ. ಬ್ರಹ್ಮ ಸೃಷ್ಟಿಮಾಡುವವ, ವಿಷ್ಣು ಸ್ಥಿತಿ (ಪಾಲಕ) ರುದ್ರನದ್ದು ಸಂಹಾರಕಾರ್ಯ.[೧೧೬] ಆದರೆ ಇವರೆಲ್ಲರ ಮೂಲದಲ್ಲಿ ಶಕ್ತಿಯೇ ಕಾರ್ಯನಿರತಳಾಗಿರುತ್ತಾಳೆ ಶಕ್ತಿಯಿಂದಲೇ ಎಲ್ಲವೂ ಸಂಚಾಲಿತವಾಗುತ್ತದೆ. ಶಿವನನ್ನು ಬಿಟ್ಟು ಶಕ್ತಿಯು ಎಂದಿಗೂ ಕದಲಳು. ಶಿವಶಕ್ತಿಯರ ಅವಿನಾಭಾವ ಪ್ರದರ್ಶಿಸಲು ಅರ್ಧನಾರೀಶ್ವರತ್ವವನ್ನು ಪ್ರದರ್ಶಿಸಲಾಗಿದೆ.[೧೧೭] ಅರ್ಧನಾರೀಶ್ವರ ರೂಪಿನಲ್ಲಿ ಅವರು ಸೃಷ್ಟಿಕಾರ್ಯದಲ್ಲಿ ತೊಡಗುತ್ತಾರೆ. ಸೃಷ್ಟಿಯಲ್ಲಿ ಈ ಎರಡುರೂಪಗಳೇ ದೃಷ್ಟಿಗೋಚರವಾಗುತ್ತವೆ. ಯೋಗಮಾರ್ಗದಿಂದಾಗಿ ಶಿವ ತನ್ನರ್ಧಶಕ್ತಿ ಶರೀರದೊಂದಿಗೆ ಆನಂದವನ್ನು ಅನುಭವಿಸುತ್ತಾನೆ. ಶಿವನಿಗೆ ದೇವಿಯ ಕಾರಣದಿಂದಾಗಿ ಈ ಜಗತ್ತನ್ನೆಲ್ಲ ಸೃಷ್ಟಿಸುವಂತಾಯಿತು.[೧೧೮] ಶಿವನ ಅರ್ಧಭಾಗ ಶಿವೆಗೆ ಸಂಬಂಧಿಸಿದರೆ, ಇನ್ನರ್ಧಭಾಗ ಶಿವನಿಗೆ ಸಂಬಂಧಿಸಿದೆ.[೧೧೯] ಶಿವನು ಸರ್ವೋತ್ತಮ ಚೇತನವಾದರೆ, ಶಕ್ತಿ ಆ ಚೇತನದ ಅನುಭೂತಿಯಾಗಿದ್ದಾಳೆ.[೧೨೦] ಶಿವನು ಸೃಷ್ಟಿಗೆ ಮೂಲ ಸೂತ್ರನಾಗಿದ್ದಾನೆ. ಅವನು ಸದಾವಕಾಲ ಆನಂದಾವಸ್ಥೆಯಲ್ಲಿರುತ್ತಾನೆ. ಈ ಆನಂದಾವಸ್ಥೆಯಲ್ಲಿ ಅವನು ಯಾವಾಗಲೂ ನಾಟ್ಯಮಾಡುತ್ತಿರುತ್ತಾನೆ. ಆದ್ದರಿಂದಲೇ ಅವನಿಗೆ "ಮಹಾಯೋಗಿ"ಯೆನ್ನುವುದರ ಜೊತೆಗೆ "ನಟರಾಜ" ಎಂದೂ ಕರೆಯಲಾಗಿದೆ.

---

೧೧೨. ಬ್ರಹ್ಮವಾಹಮಿತಿಸ್ಫುಟಮ್, ಉಮಾಸಂಹಿತಾ ೨೩.

೧೧೩. ಶ್ರೀ ಶಿವಮಹಾಪುರಾಣಮ್, ೫-೪೯-೩೧.

೧೧೪. ಶ್ರೀ ಶಿವಮಹಾಪುರಾಣಮ್, ೫-೪೯-೩೪.

೧೧೫. ಶ್ರೀ ಶಿವಮಹಾಪುರಾಣಮ್, ಪು. ೧೦.

೧೧೬. ಶ್ರೀ ಶಿವಮಹಾಪುರಾಣಮ್, ಪು. ೫೧-೫೨.

೧೧೭. ಲಿಂಗಪುರಾಣ, ೧-೪೧-೭-೯.

೧೧೮. Kramrish, Stella (1967) The Presence of Shiva, p. 231

೧೧೯. ಶ್ರೀ ಶಿವಪುರಾಣ, ೨-೩-೩೩-೧.

೧೨೦. ಲಿಂಗಪುರಾಣ, ೧-೪೧-೯-೧೨.

ಪುರಾಣಗಳಲ್ಲಿ ಶಿವನ ಅನುಗ್ರಹಸ್ವರೂಪಕ್ಕೆ ವಿಶೇಷವಾದ ಒತ್ತುಕೊಡಲಾಗಿದೆ. ಶಿವಮಹಾಪುರಾಣವು ಪ್ರಕೃತಿ ಮತ್ತು ಪುರುಷ ಎಂಬ ದ್ವೈತವನ್ನು ಸ್ವೀಕರಿಸಿದೆ. ಪ್ರಕೃತಿಗೆ ಕ್ಷರ ಹಾಗೂ ಪುರುಷನಿಗೆ ಅಕ್ಷರ ಎಂದು ಅದು ಕರೆದಿದೆ. ಶಿವನು ಅವರೆಡಕ್ಕೂ ಮೂಲನಾಗಿದ್ದಾನೆ. ಅವೆರಡರ ಸಂಚಾಲಕ ಶಿವನೇ ಆಗಿದ್ದಾನೆ.

ಪ್ರಕೃತಿಯಲ್ಲಿ ಕ್ಷೋಭೆ ಉತ್ಪನ್ನವಾದಾಗ ನಾದ ಹುಟ್ಟುತ್ತದೆ. ಅದರಿಂದ ಬಿಂದು, ಬಿಂದುವಿನಿಂದ ಸದಾಶಿವ, ಸದಾಶಿವನಿಂದ ಮಹೇಶ್ವರಿ ಮತ್ತು ಮಹೇಶ್ವರನಿಂದ ಸದ್‌ವಿದ್ಯೆ ಹುಟ್ಟುತ್ತದೆ. ಮಾಯೆಯಿಂದ ಕಾಲ, ನಿಯತಿ, ಕಲೆ, ವಿದ್ಯೆ ಮತ್ತು ರಾಗ ಹಾಗೂ ಸತ್ವ-ರಜ-ತಮಸ್ಸೆಂಬ ಮೂರು ಗುಣಗಳು ಉತ್ಪನ್ನವಾಗುತ್ತವೆ.[೧೨೧] ಶಿವನ ಅನುಗ್ರಹದಿಂದ ಈ ಸೃಷ್ಟಿಯಾಗಿದೆ. ಜೀವಿಗಳ ಉದ್ಧಾರಕ್ಕಾಗಿ ಶಿವನು ಸೃಷ್ಟಿ, ಸ್ಥಿತಿ, ಸಂಹಾರ, ತಿರೋಧಾನ, ಅನುಗ್ರಹಗೈಯುತ್ತಾನೆ. ಇವುಗಳಿಗೆ ಪಂಚಕೃತ್ರ ಎಂದು ಹೆಸರು ಇವು ಅವನ ಕೃಪೆಯ ಫಲಸ್ವರೂಪ.[೧೨೨]

ಪುರಾಣಗಳ ಉದ್ದೇಶ, ಕೇವಲ ದಾರ್ಶನಿಕಮತಗಳ ಪ್ರತಿಪಾದನೆಯಷ್ಟೇ ಆಗಿರದೆ ಧಾರ್ಮಿಕ ಭಕ್ತಿಭಾವಗಳಿಗೂ ಮಹತ್ವದ ಸ್ಥಾನವಿರುವುದನ್ನು ಅವು ನಿರ್ದೇಶಿಸುತ್ತವೆ. ಧಾರ್ಮಿಕ ಭಾವನೆಯನ್ನು ಗಮನದಲ್ಲಿಟ್ಟುಕೊಂಡ ಶೈವ ಪುರಾಣಗಳು, ಶಿವಲಿಂಗದ ಆರಾಧನೆಗೆ ವಿಶೇಷವಾದ ಮಹತ್ವವಿತ್ತಿವೆ. ವಸ್ತುತಃ ಲಿಂಗಪೂಜೆಯು ಶಿವಪೂಜೆಯ ಪ್ರತೀಕವಾಗಿದೆ. ಲಿಂಗಕ್ಕೂ ಮತ್ತು ಶಿವನಿಗೂ ಇರುವ ಸಂಬಂಧವನ್ನು ಪ್ರಕೃತಿ-ಲಿಂಗ ಮತ್ತು ಶಿವ-ಲಿಂಗಿನ್ ಎಂದು ಸಂಬಂಧ ಕಲ್ಪಿಸಿವೆ.[೧೨೩] ಲಿಂಗವೆಂದರೆ ಸ್ಥೂಲವಾದ ಈ ಶರೀರ ಮತ್ತು ಲಿಂಗಿನ್ ಎಂದರೆ ಈ ಸ್ಥೂಲವಾದ ಶರೀರವನ್ನು ಧರಿಸುವವ ಎಂದು ಅರ್ಥೈಸಲಾಗಿದೆ. ಶಿವನು ಲಯಕರ್ತೃವಾದ್ದರಿಂದ ಶಿವನಿಗೆ ಲಿಂಗವೆಂದು ಕರೆದುದಾಗಿ "ಸ್ಕಂದ ಪುರಾಣ"ದಲ್ಲಿ ಹೇಳಲಾಗಿದೆ. ಪ್ರಳಯದಲ್ಲಿ ಎಲ್ಲವೂ ಭಸ್ಮವಾಗಿ ಅವನಲ್ಲಿ ಲೀನವಾದದ್ದು, ಪುನಃ ಸೃಷ್ಟಿಕಾಲದಲ್ಲಿ ಅವನಿಂದಲೇ ಎಲ್ಲ ವಸ್ತುಗಳು ಹುಟ್ಟಿ ಅಸ್ತಿತ್ವ ಪಡೆಯುತ್ತವೆ.[೧೨೪] ಈ ಭೂಮಿಯೆಲ್ಲ ಲಿಂಗಮಯವಾಗಿದೆ. ಜಗತ್ತೆಲ್ಲವೂ ಆ ಲಿಂಗದಲ್ಲಿಯೇ ಇದೆ. ಹೀಗೆ ಲಿಂಗವು ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣವಾಗಿದೆ.[೧೨೫]

ಪುರಾಣಗಳಪ್ರಕಾರ ಶಿವನು ಶ್ಮಶಾನವಾಸಿ ಹಾಗೂ ಗಜಚರ್ಮ ಮತ್ತ ವ್ಯಾಘ್ರಚರ್ಮಧಾರಿಯಾಗಿದ್ದಾನೆ. ಕೊರಳಲ್ಲಿ ರುಂಡಮಾಲೆ, ಶರೀರದಮೇಲೆ ಸರ್ಪಗಳು ಹರಿದಾಡುತ್ತವೆ. ಮಸ್ತಕದಮೇಲೆ ಗಂಗೆ ಹಾಗೂ ಚಂದ್ರರಿದ್ದಾರೆ. ಕೈಗಳಲ್ಲಿ ತ್ರಿಶೂಲ ಡಮರುಗಳಿವೆ. ಈ ಎಲ್ಲ ಶಿವನ ಸಾಮಗ್ರಿಗಳನ್ನು ಪ್ರತೀಕೋಪಾಧಿಯಲ್ಲಿ ಗ್ರಹಿಸಿ, ಅವುಗಳಗೆಲ್ಲ ಒಂದೊಂದು ವಿಶಿಷ್ಟವಾದ ಅರ್ಥಕಲ್ಪಿಸಲಾಗಿದೆ. ವ್ಯಾಘ್ರ ಕಾಮದ ಪ್ರತೀಕ, ಗಜ ಅಭಿಮಾನದ ಪ್ರತೀಕ, ಅವುಗಳ ಚರ್ಮಧರಿಸುವದರ ಪ್ರತೀಕವೆಂದರೆ, ಅವನು ಅವುಗಳ ಮೇಲೆ ವಿಜಯ ಸಂಪಾದಿಸಿದ್ದಾನೆಂದೇ. ರುಂಡಮಾಲೆಗಳು, ಜಗತ್ತಿನ ಸಮಸ್ತ ಪದಾರ್ಥಗಳು ಅವನಲ್ಲಿ ಅಂತರ್ಭೂತವಾಗಿವೆ ಎನ್ನುವುದರ ಪ್ರತೀಕವಾಗಿವೆ. ಅಂದರೆ ಜಡಭೂತಗಳೂ ಅವನ

---

೧೨೧. ಆಗಮಿಕ ಪರಂಪರೆಯಲ್ಲಿಯೂ ಇದೇ ತೆರನಾದ ಸೃಷ್ಟಿಕ್ರಮ ಬಂದಿದೆ. ಅಲ್ಲಲ್ಲಿ ಅಲ್ಪ ಬದಲಾವಣೆ ದೃಷ್ಟಿಗೋಚರವಾಗುತ್ತದಷ್ಟೆ, ನೋಡಿ : ಡಾ. ಎಚ್.ಪಿ. ಮಲ್ಲೇದೇವರು ಸಂಪಾದಿತ ವಾತುಲಶುದ್ಧಾಗಮ(೧೯೮೮) O.R.I. ಮೈಸೂರು, ಪು. ೧೨.

೧೨೨. ಶಿವಮಹಾಪುರಾಣ, ೬-೯-೨೯.

೧೨೩. ಲಿಂಗಪುರಾಣ, ೧-೧೬-೫.

೧೨೪. ಲಿಂಗಪುರಾಣ, ೧-೩-೧.

೧೨೫. "ಲಯನಾಲ್ಲಿಂಗಮುಚ್ಯತೆ" - ಸ್ಕಂದಪುರಾಣ ೧೫.

ಸಂಪರ್ಕದಿಂದಾಗಿ ಚೈತನ್ಯಶೀಲವಾಗಬಲ್ಲವು.[೧೩೬] ಸರ್ಪಗಳು ಜ್ಞಾನ ಮತ್ತು ನಿತ್ಯತೆಯ ದ್ಯೋತಕಗಳಾಗಿವೆ. ಚಂದ್ರನು ಜಿತೇಂದ್ರಿಯತ್ವದ ಪ್ರತೀಕವಾದರೆ, "ಡಮರು" ಶಬ್ದ "ಬ್ರಹ್ಮ"ದ ರೂಪವಾಗಿದೆ. ಅದೇ "ಓಂ"ನ ವ್ಯಂಜಕವಾಗಿದೆ. ಶಿವಲಿಂಗದ ಮುಂದೆ ಕುಳಿತ ನಂದಿಯು ವಿಶ್ವಾಸದ ಪ್ರತೀಕವೆಂದು ಹೇಳಲಾಗಿದೆ.[೧೩೭]

ನಟರಾಜನ ನಾಟ್ಯವೂ ಒಂದು ಪ್ರತೀಕವೇ ಆಗಿದೆ. ಅವನ ನಾಟ್ಯ ಪ್ರಭಾಮಂಡಲದೊಳಗೆ ಕಾಣಸಿಗುತ್ತದೆ. ಪ್ರಭಾಮಂಡಲವು ಮಾಯೆಯ ಸಂಕೇತವಾಗಿದೆ. ಬ್ರಹ್ಮನು ತನ್ನ ಹಸ್ತ ಮತ್ತು ಪಾದಗಳಿಂದ ಅದರಲ್ಲಿ ಶಕ್ತಿಸಂಚಾರ ಮಾಡುತ್ತಿರುತ್ತಾನೆ. ಒಂದು ಕೈಯಲ್ಲಿ ಸೃಷ್ಟಿ ಸೂಚಕ ಡಮರು ಇದ್ದರೆ, ಇನ್ನೊಂದು ಕೈಯಲ್ಲಿ ಸಂಹಾರಸೂಚಕ ಅಗ್ನಿಯಿದೆ. ಅಂದರೆ ಸೃಷ್ಟಿ ಮತ್ತು ಸಂಹಾರಗಳು ಅವನ ಕಾರ್ಯವಾಗಿವೆ. ಎತ್ತಿದ ಪಾದ, ಜೀವನಿಗೆ ಮೋಕ್ಷಕೊಡುವದರ ಸಂಕೇತ. ವರದ ಹಸ್ತ ಅವನ ಶರಣಾಗತಿಗೆ ಪ್ರತೀಕ, ನಡಕ್ಕೆ ಬಿಗಿದ ವಸ್ತ್ರ ದಿಕ್ಕುಗಳ ಪ್ರತೀಕವಾದರೆ, ಕೊರಳಲ್ಲಿರುವ ಸರ್ಪ ಕಾಲನ ಸಂಕೇತವಾಗಿದೆ. ಪ್ರಕೃತಿಯಿಂದುತ್ಪನ್ನವಾಗುವ ಮನಸ್ಸು, ಬುದ್ಧಿ, ಅಹಂಕಾರ ಹಾಗೂ ಪಂಚತನ್ಮಾತ್ರೆಗಳಲ್ಲ ಪ್ರಭಾಮಂಡಲದಲ್ಲಿ ಸುತ್ತುವ ಚಕ್ರದ ಅರಗುಗಳ ದ್ಯೋತಕಗಳಾಗಿವೆ. ಹೀಗೆ ಶಿವನ ವೈಶಿಷ್ಟ್ಯವನ್ನು ಪ್ರತೀಕಗಳೆಂದು ಪರಿಗಣಿಸಲಾಗಿದೆ. ಇದರ ಸಾರಾಂಶವೆಂದರೆ, ಸಂಸಾರದಲ್ಲಿ ಕಂಡುಬರುವ ಅಣುರೇಣುತೃಣ, ಕಾಷ್ಟಗಳೆಲ್ಲದರಲ್ಲಿಯ ಶಕ್ತಿಯೇ, ಶಿವನ ನಾಟ್ಯವಾಗಿದೆ.[೧೩೮] ಎಂದರೆ ಶಿವನಶಕ್ತಿಗೆ ಎಲ್ಲವೂ ಸ್ಪಂದಿಸುತ್ತವೆ ಎಂಬುದೇ ಈ ನಾಟ್ಯದ ಸಮಗ್ರ ಪ್ರತೀಕ.

ಶಿವನ ಅನುಗ್ರಹಮಯವಾದ ಕಲ್ಪನೆಯೊಂದಿಗೆ ಅವನ ರೌದ್ರಮಯ ಕಲ್ಪನೆಯೂ ಇಲ್ಲಿದೆ.[೧೩೯] ಈ ರೌದ್ರ ಕಲ್ಪನೆಗೆ 'ಭೈರವ' ಎಂದು ಕರೆಯಲಾಗಿದೆ. ಮೃತ್ಯು ಕೂಡ ಈತನಿಂದ ಭಯಭೀತನಾಗುತ್ತಾನೆಂದು ಹೇಳಲಾಗಿದೆ. ವೇದದ "ಶರ್ವ"ನನ್ನು ಪುರಾಣಗಳಲ್ಲಿ ಬರುವ ಈ ಶಿವರೂಪಿ ಭೈರವನಿಗೆ ಹೋಲಿಸಬಹುದು.[೧೪೦]

ಪುರಾಣಗಳಲ್ಲಿ ಭಕ್ತಿಗೆ ವಿಶೇಷವಾದ ಸ್ಥಾನವಿದೆ. ಭಕ್ತ ಮತ್ತು ಭಗವಂತರ ಮಧ್ಯದಲ್ಲಿ ಭೇದವಿದ್ದರೂ ಅದು ನಗಣ್ಯವಾಗಿದೆ. ಉಪಾಸ್ಯ ಮತ್ತು ಉಪಾಸಕರ ಮಧ್ಯದಲ್ಲಿ ಇರುವ ಭೇದವು ಪ್ರಾರಂಭಾವಸ್ಥೆಯಲ್ಲಿ ಅನಿವಾರ್ಯವಾಗಿದೆ. ಭಕ್ತನು ಭಗವಂತನ ಉಪಾಸನೆ ಹಾಗೂ ಪೂಜಾದಿ ಬಾಹ್ಯ ಸಾಧನಗಳ ಮೂಲಕ ಕ್ಲೇಶಮಯವಾದ ಸಂಸಾರದಿಂದ ಬಿಡುಗಡೆ ಹೊಂದಲು ಬಯಸುತ್ತಿರುತ್ತಾನೆ. ಆಗ ಅವನು ತನ್ನನ್ನು ಈಶ್ವರನ ಅಧೀನನೆಂದು ಭಾವಿಸುತ್ತಾನೆ. ತಾನು ಅವನ ಸೇವಕ ಅವನು ಪ್ರಭು, ಎಂದು ತಿಳಿಯುತ್ತಾನೆ. ಭಕ್ತಿಯನ್ನು ಬೀಜವೃಕ್ಷನ್ಯಾಯಕ್ಕೆ ಹೋಲಿಸಲಾಗಿದೆ. ಬೀಜವೃಕ್ಷಗಳು ಮಣ್ಣಿನ ವಿಲಾಸಗಳಾಗಿರುವಂತೆ ಶಿವಭಕ್ತಿ ಮತ್ತು ಶಿವಾನುಗ್ರಹಗಳು ಚಿಚ್ಛಕ್ತಿಯ ಅಭಿವ್ಯಕ್ತ ವಿಲಾಸಗಳಾಗಿವೆ. (ಮಾಯಿದೇವನು ಈ ಕಲ್ಪನೆಯನ್ನು ನೇರವಾಗಿ ಪಂಚಮಾಧಿಕರಣದ ಶ್ಲೋಕ ೬೭ ಹಾಗೂ ೬೮ರಲ್ಲಿ ಬಳಸಿಕೊಂಡಿದ್ದಾನೆ.) ದೇಹಧಾರಿಗಳೆಲ್ಲ ಶಿವಭಕ್ತಿಯಿಂದ ಮುಕ್ತರಾಗುತ್ತಾರೆ. "ರುದ್ರ"ನು ಮುಕ್ತಿಯ ಅಧಿದೇವತೆ. ಭಕ್ತರನ್ನು ಅಜ್ಞಾನಾಂಧಕಾರದಿಂದ ಬಿಡುಗಡೆ ಮಾಡುತ್ತಾನೆ.[೧೪೧] ಯೋಗಸಾಧನೆಯಿಂದ ಜೀವನು ಶಿವನಾಗುತ್ತಾನೆ.

---

೧೩೬. ಕಲ್ಯಾಣಶಿವಾಂಕ, ಪು. ೫೬-೫೭, ಮಾಸಪತ್ರಿಕಾ (೧೯೯೦) ಗೀತಾ ಪ್ರೆಸ್, ಗೋರಖ್‌ಪುರ.

೧೩೭. ಕಲ್ಯಾಣಶಿವಾಂಕ, ಪು.೧೧೭, ಅದೇ.

೧೩೮. ಕಲ್ಯಾಣಶಿವಾಂಕ, ಪು. ೩೭೮, ಅದೇ.

೧೩೯. "ರುದ್ರರೂಪೇಣ ಪ್ರಲಯಂ ಕರಿಷ್ಯೇಕಾರ್ಯಮುತ್ತಮಮ್", ರುದ್ರಸಂಹಿತೆ, ಸೃಷ್ಟಿಖಂಡ, ೯-೫೩.

೧೪೦. The Presence of Shiva, p. 265, ಅದೇ.

೧೪೧. ಕೂರ್ಮಪುರಾಣ, ೨-೫-೭.

ಶಿವಪುರಾಣವು ನಾಲ್ಕುವಿಧವಾದ ಮುಕ್ತಿಯನ್ನು ಸ್ವೀಕರಿಸಿದೆ. ೧. ಸಾರೂಪ್ಯ[೧೩೨] ೨. ಸಾಲೋಕ್ಯ ೩. ಸಾನ್ನಿಧ್ಯ (ಸಾಮಿಪ್ಯ) ಮತ್ತು ೪. ಸಾಯುಜ್ಯ ಎಂದು. ಕೆಲವೆಡೆ ಐದು ತರಹದ ಮುಕ್ತಿಯನ್ನು ಪ್ರತಿಪಾದಿಸಲಾಗಿದೆ. ಮೇಲಿನವುಗಳೊಂದಿಗೆ ಕೈವಲ್ಯವೊಂದನ್ನು ಸೇರಿಸಲಾಗಿದೆ. ಇವುಗಳನ್ನು ಕೆಲವು ವೀರಶೈವ ಕೃತಿಗಳಲ್ಲಿ ಕಾಣಬಹುದು. ಆದರೆ ಶರಣರು ಇವೆಲ್ಲವುಗಳನ್ನು ವಿರೋಧಿಸಿದುದಾಗಿ ಕಂಡು ಬರುತ್ತದೆ. (ನೋಡಿ: ಡಾ. ಆರ್.ಸಿ.ಹಿರೇಮಠ (ಸಂ) ಚನ್ನಬಸವಣ್ಣನವರ ವಚನಗಳು, ೧೯೭೧, ವ. ೯೩೯, ಪು.೪೪೫). ಮಾಯಿದೇವನು ಭಕ್ತಿ-ಮುಕ್ತಿಗಳ ಬಗೆಗೆ ಶಿವಾಧವಶತಕದ (೭-೮) ಪದ್ಯಗಳಲ್ಲಿ ಹೀಗೆ ಹೇಳಿದ್ದೇನೆ:

"ಏನೆನಲುಂಟು ಭಕ್ತಿಯಮಹಾತ್ಮತೆಯಂ ಶ್ರುತಿಶಾಸ್ತ್ರಪಂಕ್ತಿ 'ಯೋ
ಗೇನಪರಾ' ಎನುತ್ತಮಳ ಭಕ್ತಿಯ ವೈಭವಮಂಪೊಗಳ್ವು ಸ
ನ್ಮಾನಿಸತಾಗಿ ಯೋಗಪದದಿಂದು ಪರಿಷ್ಕವೆನಿಪ್ಪ ಭಕ್ತಿ ಸೌ
ಖ್ಯಾನುಭವೈಕ ನಿಷ್ಕಳ ಪದಕ್ಕೆಣೆಯಾವಪದಂಶಿವಾಧವಾ"

ಭಕ್ತಿಯವೈಭವ ಯೋಗಕ್ಕಿಂತ ಮಿಗಿಲಾದದ್ದು. ಯೋಗವು ಚಿತ್ತವೃತ್ತಿನಿರೋಧವನ್ನು ನಿರೂಪಿಸಿದರೆ ಭಕ್ತಿಯೋಗವು ವೃತ್ತಿ ನಿಸ್ಪೃಹತೆಯನ್ನು ನಿರೂಪಿಸುತ್ತದೆ. ಅಂತರಾತ್ಮನನ್ನು ಒಲಿಸುವ ಅನುರಾಗ ಅಥವಾ ಅಭಿರುಚಿಯೆ ಭಕ್ತಿ. ದೇವನನ್ನು ಒಲಿಸುವ ದಾರಿಗಳಲ್ಲಿ ಇದುವೆ ಮುಖ್ಯವಾದ ಮಾರ್ಗ ಕ್ರಿಯೆಜ್ಞಾನಯೋಗ ಮೊದಲಾದ ಸಾಧನಗಳಲ್ಲಿ ಭಕ್ತಿಭಾವಕ್ಕೆ ಪ್ರಥಮ ಸ್ಥಾನಸಲ್ಲುತ್ತದೆ. ಈಶ್ವರನಿಗೆ ಶಕ್ತಿ ಎಷ್ಟು ಅಗತ್ಯವೋ ಜೀವನಿಗೆ ಭಕ್ತಿ ಅಷ್ಟೇ ಅಗತ್ಯ. ದೇವನಲ್ಲಿರುವ ಶಕ್ತಿಗಿಂತಲೂ ಜೀವನಲ್ಲಿರುವ ಭಕ್ತಿಗೆ ಅಧಿಕ ಶಕ್ತಿಯಿದೆ. "ಕೊಲುವೆನೆಂಬ ಭಾಷೆ ದೇವನದಾದರೆ ಗೆಲುವೆನೆಂಬ ಭಾಷೆ ಭಕ್ತನದು" ಅಂತೆಯೇ ಭಕ್ತಿಭಾವ "ಯೋಗಪದದಿಂದುಪರಿಷ್ಕ," ಆದು ಆ 'ಸೌಖ್ಯಾನುಭವೈಕ ನಿಷ್ಕಳ ಪದ,' ಅದಕ್ಕೆ ಯಾವುದೂ ಎಣೆಯಿಲ್ಲ. ಅದನ್ನು ಏನೆಂದು ಹೇಳಲು ನುಡಿಯಿಲ್ಲ; ಸ್ತುತಿಸಲಸಾಧ್ಯ.

ಭಕ್ತಿ ಶಿವಪ್ರಸಾದ ಜನನೀಭುವನಂಶಿವನ ಪ್ರಸಾದವಾ
ಭಕ್ತಿಗೆ ಜನ್ಮಭೂಮಿ ವಿಮಲಾಂಕುರ ಬೀಜದವೊಲ್ ಪರಸ್ಪರಂ
ವ್ಯಕ್ತಮಿದಿಂತು ನೋಳ್ಪೊಡದು ತಾನೆ ನಿರಂತರಮಪ್ಪ ಮುಕ್ತಿಯಾ
ಮುಕ್ತಿಯ ಶುದ್ಧ ನಿಷ್ಕಳ ನಿಜೈಕ್ಯಪದಂಪರಮಂ ಶಿವಾಧವಾ.

ಭಕ್ತಿ-ಮುಕ್ತಿಗಳನ್ನು ವಿಂಗಡಿಸುವುದು ಬುದ್ಧಿಕಾರ್ಯ. ಆ ದಿವ್ಯಾನುಭವದ ಆನಂದಸಾಗರದಲ್ಲಿ ಆಳವಾಗಿ ಮುಳುಗಿ ತನ್ಮಯವಾದ ಭಾವಕ್ಕೆ ನಿರ್ಭಾವಕ್ಕೆ ಈ ಭೇದವಿಲ್ಲ. ಹೀಗೆ ಭಕ್ತಿ ಪೌರಣಿಕವೂ ಆಗಿದೆ ಎಂಬುದನ್ನು ಇಲ್ಲಿ ಗಮನಿಸಬಹುದು. ಮಾಯಿದೇವನು ವಿಶೇಷಾರ್ಥಪ್ರಕಾಶಿಕೆಯಲ್ಲಿ (೩-೫೧) ಭಕ್ತಿ-ಮುಕ್ತಿ ಕುರಿತು ಹೀಗೆ ಹೇಳುತ್ತಾನೆ.

ಪ್ರಸಾದೋಜನಕಃ ಪ್ರೋಕ್ತೋಜನನೀಭಕ್ತಿರೀರತಾ।
ಅನಯೋರೈಕ್ಯಭಾವೇನ ಜನಿತಾ ಮುಕ್ತಿ ಕನ್ಯಕಾ॥

೧೩೨. ಶಿವಮಹಾಪುರಾಣ, ೨-೧-೧೦-೩೭.

ಪ್ರಸಾದ-ಭಕ್ತಿ-ಮುಕ್ತಿಗಳಿಗೆ ಪರಿವಿಡಿದು ತಂದೆ-ತಾಯಿ-ಮಗು ಸಂಬಂಧ ಸಮನ್ವಯಗಳನ್ನು ಬಿತ್ತರಿಸಿದ್ದಾನೆ. ಈ ಮೂವರಲ್ಲಿ ನಾಮಭೇದವೆ ಹೊರತು ಸ್ವರೂಪ ಭೇದವಿಲ್ಲ. ಅಂತೆಯೇ ಪ್ರಸಾದ-ಭಕ್ತಿ-ಮುಕ್ತಿಗಳಲ್ಲಿಯೂ ಯಾವಭೇದವಿಲ್ಲ ಇಲ್ಲಿ ತಾಯಿಯ ಪಾತ್ರ ಗಮನಾರ್ಹವಾದಂತೆ ಭಕ್ತಿಯ ಪಾತ್ರವೂ ಗಮನಾರ್ಹವಾಗಿದೆ. ಉಭಯ ಸಂಬಂಧಕ್ಕೂ ಹೃದಯ ಶ್ರೀಮಂತಿಕೆಗೂ ಮಾತೆ ಅಧಿಷ್ಠಾತೆಯಾಗಿದ್ದಾಳೆ. ತಾಯಿತಂದೆಗಳಿಲ್ಲದೆ ಮಗುವಿನ ಹುಟ್ಟಿಲ್ಲ. ಅಂತೆಯೆ ಭಕ್ತಿ-ಪ್ರಸಾದಗಳಿಲ್ಲದೆ ಮುಕ್ತಿಯಿಲ್ಲ; ಮುಕ್ತಿಯಿಲ್ಲದೆ ನಿಜೈಕ್ಯವಿಲ್ಲ. ಇಲ್ಲಿ ಮುಕ್ತಿಯೆಂದರೆ ಸಾಲೋಕ್ಯ-ಸಾಮೀಪ್ಯ-ಸಾರೂಪ್ಯ-ಸಾಯುಜ್ಯ ಮುಕ್ತಿಗಳಲ್ಲ; ಸಾಕ್ಷಾತ್ ಶುದ್ಧ ನಿಷ್ಕಳ ನಿಜೈಕ್ಯ ಪದ ಪರಮಪದ ಅದರ ಸ್ವರೂಪವೇ ಭಕ್ತಿ ಎಂದು ಮಾಯಿದೇವ ವಿವರಿಸುತ್ತಾನೆ.



**ವೀರಶೈವದ ಮೇಲೆ ಪುರಾಣಗಳ ಪ್ರಭಾವ:**

ವೀರಶೈವ ಸಿದ್ಧಾಂತವನ್ನು ಪ್ರಸ್ತಾಪಿಸಿರುವ ಪುರಾಣಗಳಲ್ಲಿ ಶಿವಪುರಾಣ, ಸ್ಕಾಂದ ಪುರಾಣ, ಲಿಂಗಪುರಾಣ, ಶಿವರಹಸ್ಯ ಮುಂತಾದವು ಮುಖ್ಯ ಎಂದು ಪರಿಗಣಿತವಾಗಿವೆ.

ಶಿವಪುರಾಣ(ವಾಯುವೀಯ ಸಂಹಿತೆ ಪೂರ್ವೋತ್ತರ ಭಾಗಗಳು)ದಲ್ಲಿ ವೀರಶೈವದೀಕ್ಷಾ ವಿಧಿವಿಧಾನಗಳಿವೆ. ಈ ಸಂಹಿತೆಯಲ್ಲಿ ಒಟ್ಟು ೬೦ ಪ್ರಕರಣಗಳೂ ೪೦೨೫ ಶ್ಲೋಕಗಳೂ ಇವೆ.

ಇದರ ಉತ್ತರಭಾಗದಲ್ಲಿ ವೀರಶೈವರ ವಿಚಾರ ಹೆಚ್ಚಿನ ರೀತಿಯಲ್ಲಿ ಪ್ರತಿಪಾದನೆಗೊಂಡಿದೆ. ಶಿವಜಗನ್ಮಯತ್ವ, ಪಾಶುಪತಜ್ಞಾನ ಸ್ವರೂಪ, ಶಿವಶಕ್ತ್ಯಾತ್ಮಕ, ಜಗತ್ತಿನ ವರ್ಣನೆ, ೨೮ ಜನ ಯೋಗಾಚಾರ್ಯರ ಸಂಕೀರ್ತನೆ, ಶಿವಪಂಚಾಕ್ಷರಮಂತ್ರ ಮಹತ್ವ, ದೀಕ್ಷೆ, ಪಂಚಕಲಶವಿವೇಚನೆ, ಪೂಜಾದ್ರವ್ಯಲಕ್ಷಣಗಳು-ಇವೇ ಮುಂತಾದವುಗಳು ಅಲ್ಲಿ ನಿರೂಪಗೊಂಡಿವೆ.

ಶಿವಪುರಾಣದ ವಿದ್ಯೇಶ್ವರ ಸಂಹಿತೆಯಲ್ಲಿ ಶಿವಭಕ್ತನು ಯಾವಗಲೂ ಶಿವಲಿಂಗಧಾರಿಯಾಗಿರಬೇಕೆಂಬುದನ್ನು ಹೀಗೆ ಹೇಳಲಾಗಿದೆ:



ಶಿವಭಕ್ತೋವಸೇನ್ನಿತ್ಯಂಶಿವಲಿಂಗ ಸಮಾಶ್ರಿತಃ ।
ಪೂಜಾಯಾ ಚರಲಿಂಗಸ್ಯ ಕ್ರಮಾನ್ಮುಕ್ತೋಭವೇತ್ ಧ್ರುವಂ॥ [೧೩೩]

ಸನತ್ಕುಮಾರಸಂಹಿತೆಯಲ್ಲಿ ಗುರುಪೂಜೆ, ಗುರುಪ್ರಸಾದ ಸೇವನೆ, ವೀರಶೈವ ತೀರ್ಥ ಪ್ರಸಾದ ಸೇವಿಸುವ ಕ್ರಮಗಳು ಕಂಡು ಬರುತ್ತವೆ. ಈ ಪ್ರಕರಣದಲ್ಲಿ ಬರುವ 'ಅತ್ಯಾಶ್ರಮೀ', 'ಶಿವಾಶ್ರಮೀ', ಮುಂತಾದ ಪದಗಳು, ಅಲ್ಲದೆ ಶೀವದೀಕ್ಷೆಗೆ ಸ್ತ್ರೀಪುರುಷರು ಭೇಧವಿಲ್ಲ, ಸತಿಪತಿಗಳಿಬ್ಬರಿಗೂ ಲಿಂಗಪೂಜಾ-ಜಪಾದಿಗಳಲ್ಲಿ ಸಮಾನಾಧಿಕಾರವಿದೆ ಎಂಬ ಅಂಶಗಳು ಕುತೂಹಲಕಾರಿಯಾಗಿವೆ.[೧೩೪]

ಕೇದಾರಖಂಡದಲ್ಲಿ ಹತ್ತಾರು ಶ್ಲೋಕಗಳಲ್ಲಿ ವಿಷ್ಣು ಬ್ರಹ್ಮಾದಿ ದೇವತೆಗಳೆಲ್ಲರೂ ಶಿವಲಿಂಗ ಧರಿಸಿದರೆಂದೂ ಲಿಂಗಿ ಧರ್ಮವನ್ನು ಶೈಲಾದನು ಸ್ಥಾಪಿಸಿದನೆಂದೂ ಹೇಳಲಾಗಿದೆ. ಶಿವಪುರಾಣದ ಶಂಕರ ಸಂಹಿತೆಯಲ್ಲಿ ಬರುವ ಕೆಳಗಿನ ಈ

---

೧೩೩. ಶಿವಪುರಾಣಂ: ವಿದ್ಯೇಶ್ವರಸಂಹಿತೆ, ಅ. ೧೫, ಶ್ಲೋಕ ೧೪೦, ಅದೇ.

೧೩೪. ಶಿವಪುರಾಣಂ: ಸನತ್ಕುಮಾರಸಂಹಿತೆ, ಅ. ೪೩.

ಶ್ಲೋಕವನ್ನೂ ಪ್ರಾಚೀನ ವೀರಶೈವ ಲೇಖಕರೆಲ್ಲ ತಮ್ಮ ಕೃತಿಗಳಲ್ಲಿ ಸಾಂದರ್ಭಿಕವಾಗಿ ಬಳಸಿಕೊಂಡದ್ದನ್ನು ಗಮನಿಸಬಹುದು.

ಯೋಹಸ್ತಪೀಠೇ ನಿಜಲಿಂಗಮಿಷ್ಟಂ
ವಿನ್ಯಸ್ಯ ಮನಃ ಪ್ರಸಾರಃ ।
ಬಾಹ್ಯಕ್ರಿಯಾಸಂಕುಲ ನಿಃಸ್ಪೃಹಾತ್ಮಾ
ಸಂಪೂಜಯತ್ಯಂಗ ಸ ವೀರಶೈವಃ ॥[೧೩೫]

ಎಂದರೆ ಎಡ ಹಸ್ತದಲ್ಲಿ ಇಷ್ಟಲಿಂಗವನ್ನಿಟ್ಟು ತದೇಕ ಚಿತ್ತದಿಂದ ಪೂಜಿಸುವವನೇ ವೀರಶೈವ ಎಂದು ಮೇಲಿನ ಮಂತ್ರದ ಭಾವಾರ್ಥ. ಪದ್ಮಪುರಾಣದಲಿ "ಧಾರಣಂ ಶಂಕರಸ್ಯೈವ ಲಿಂಗಮೇವ ಮಹೇಶ್ವರಂ"[೧೩೬] ಎಂಬ ವಾಕ್ಯದಲ್ಲಿರುವ ಲಿಂಗಧಾರಣ ಮತ್ತು ಶಿವಲಿಂಗವಿರಿಸುವ ಸಜ್ಜಿಕೆ (ಕರಡಿಗೆ)ಯ ಸ್ವರೂಪ ಹಾಗೂ ಶಿವಲಿಂಗವನ್ನು ಕರಪೀಠದಲ್ಲಿ ಇಟ್ಟು ಅರ್ಚಿಸುವ ವರ್ಣನೆಗಳು ವೀರಶೈವಕ್ಕೆ ಸಂಬಂಧಿಸಿದವುಗಳಾಗಿವೆ. ಪದ್ಮಪುರಾಣಕ್ಕೆ ಸಂಬಂಧಿಸಿದ ಶಿವಗೀತೆಯಲ್ಲಿ "ಲಿಂಗಿನೋಯಶ್ಚವಾದ್ವೇಷ್ಟಿತೇನ್ಯವಾತ್ರಾಧಿಕಾರಿಣಃ"[೧೩೭] ಎಂದರೆ ಭಸ್ಮರುದ್ರಾಕ್ಷಲಂಕೃತರಾದ ಲಿಂಗಧಾರಿಗಳನ್ನು ದ್ವೇಷಿಸುವವರು ಶಿವಗೀತೆ ಪಠಿಸಲು ಅರ್ಹರಲ್ಲವೆಂದು ಪ್ರಸ್ತಾಪಿಸಲಾಗಿದೆ. ವೀರಶೈವ ಮೊದಲು ಪಾಶುಪಾತವಾಗಿದ್ದುದನ್ನು ಹಾಗೂ ಅದನ್ನು ಅವಲಂಬಿಸಿದ ಯೋಗಿಗೆ ಅತಿವರ್ಣಾಶ್ರಮಿ ಎಂದು ಸದಾನಂದನನ್ನು ಕುರಿತು ಕೊಂಡಾಡಿದ ಶ್ಲೋಕವೊಂದು ಹೀಗಿದೆ :

ರುದ್ರಾಕ್ಷಮಾಲಾಭರಣೋದ್ಧೃತ ಪಾಶುಪತವ್ರತಃ।
ಅತಿವರ್ಣಾಶ್ರಮಿಣೊ ಯೋಗೀ ಜೀವನ್ಮುಕ್ತೋ ಜಗದ್ಗುರಃ[೧೩೮]

ಮೇಲಿನ ಈ ಎಲ್ಲ ವಿಷಯಗಳು ಷಟ್‌ಸ್ಥಲ ಸಂಪ್ರದಾಯದ ಅಂಗಗಳಾದುದರಿಂದ ಪುರಾಣಗಳೂ ಷಟ್‌ಸ್ಥಲಕ್ಕೆ ಹಿನ್ನೆಲೆಯಾಗಿವೆ ಎಂದು ಹೇಳಬಹುದು.

**ರಾಮಾಯಣ ಮಹಾಭಾರತದಲ್ಲಿ ಶಿವಸ್ಥಲದ ಕಲ್ಪನೆ :**

ಮಾಯಿದೇವನು ರಾಮಾಯಣ ಮಹಾಭಾರತಗಳನ್ನು 'ಇತಿಹಾಸ್ಯೆ:' ಎಂಬ ಪದದೊಂದಿಗೆ ಸೂಚಿಸುತ್ತಾನೆ. ಇವೂ 'ಸ್ಥಲ' ತತ್ವಕ್ಕೆ ಅನೇಕ ವಿವರಗಳನ್ನು ನೀಡುತ್ತವೆ. ಇಲ್ಲಿಯೂ ಮಾಯಿದೇವನ ಧೋರಣೆಯನ್ನೇ ಅವಲಂಬಿಸಲಾಗಿದೆ. ಮೊದಲು ರಾಮಾಯಣ ಕುರಿತು ಆಲೋಚಿಸಬಹುದು.

---

೧೩೫. ಶಿ.ಪು. ಕೇದಾರಖಂಡ, ಅ. ೭.

೧೩೬. ವಾತುಲಖಂಡ, ಅ. ೧೦.

೧೩೭. ಶಿವಗೀತಾ (೧೯೬೦) ಪೀತಾಂಬರಪೀಠ, ದತಿಯಾ, ಅ.೧೦.

೧೩೮. ಸ್ಕಂದಪುರಾಣ ಸಂಕಸಂಹಿತೆ, ಅ. ೮೪, ಶ್ಲೋಕ ೯೩.

ರಾಮಾಯಣದ ಅವಲೋಕನದಿಂದಲೂ ಶಿವಪೂಜೆ, ಶಿವಲಿಂಗ, ಶಿರೋವ್ರತಲಿಂಗಧಾರಿಗಳ ಉಲ್ಲೇಖಗಳು ಕಂಡುಬರುತ್ತವೆ. ವಾಲ್ಮೀಕಿ ರಾಮಾಯಣದ ಉಪಖ್ಯಾನಗಳಲ್ಲಿ ಮೂರ್ತಿಪೂಜೆ ಮತ್ತು ಲಿಂಗಪೂಜೆಯಂತಹ ಉಪಾಸನೆಗಳ ಪ್ರಚಾರವಿದ್ದುದು ನಮ್ಮ ಗಮನಕ್ಕೆ ಬರುತ್ತದೆ. ಆ ಯುಗದಲ್ಲಿ ಕಠೋರವಾದ ಶಾರೀರಕ ಸಾಧನೆಗೆ ಮಹತ್ವಕೊಟ್ಟಂತಿದೆ. ಎಂಥ ಕಠಿಣಕಾರ್ಯವೇ ಇರಲಿ, ಅದನ್ನು ತಪಸ್ಸಿನಿಂದ ಸಾಧಿಸಬಹುದೆಂಬ ಛಲ ಅಲ್ಲಿ ಕಂಡುಬರುತ್ತದೆ. ಶಿವನನ್ನು ತಪಸ್ಸಿನ ಮೂಲಕ ದ್ರವೀಕರಿಸಿದ ವರ್ಣನೆ ಅಲ್ಲಿದೆ.ಅಲ್ಲಿ ವರ್ಣಿತನಾದ ಶಿವನು, ದಿವ್ಯ ಹಾಗೂ ಅಲೌಕಿಕ ಶಕ್ತಿ ಸಂಪನ್ನನಾಗಿದ್ದಾನೆ. ಹಾಗೆಯೇ ಶಿವನು ಉಮಾಪತಿ, ಪಶುಪತಿ, ಹರ ಆದಿ ವಿಶೇಷಣಗಳಿಂದ ಸುಶೋಭಿತನಾಗಿದ್ದಾನೆ.[೧೩೯]

ಬಾಲಕಾಂಡದ ಗಂಗಾವತಾರದಲ್ಲಿ ಶಿವನು ಗಂಗೆಯನ್ನು ತನ್ನ ಶಿಖೆಯಲ್ಲಿ ಧರಿಸಿ, ನಂತರ ಅವಳ ಅಹಂಕಾರದ ವಿನಾಶಕ್ಕಾಗಿ ಅವಳನ್ನು ತೊಡಕು ಬೀಳುವಂತೆ ಮಾಡಿದ ವರ್ಣನೆಯಿದೆ. ರಾಮಾಯಣದಲ್ಲಿಯೂ ಶಿವನ ಗುಣಗಳ ಬಗೆಗಿದ್ದ (ರುದ್ರಾತಾಮಸ, ಶೂದ್ರ ಎಂಬ ಇತ್ಯಾದಿ) ವಿರುದ್ಧ ಗುಣಗಳನ್ನು ಸಮನ್ವಯಗೊಳಿಸಲು .ಯತ್ನಿಸಿದಂತಿದೆ. ಅವನು ಬಹಳ ಉಗ್ರಸ್ವರೂಪಿಯಾಗಿದ್ದರೂ ಅವನನ್ನು ಸ್ತುತಿ ಹಾಗು ಪೂಜೆ -ಪ್ರಾರ್ಥನೆಗಳ ಮೂಲಕ ಶಾಂತಗೊಳಿಸಬಹುದೆಂದು ಹೇಳಲಾಗಿದೆ. ಅವನನ್ನು ಸ್ತುತಿಮಾಡುತ್ತ ಪಶುಪತಿ, ರುದ್ರ ಮುಂತಾಗಿ ಸಂಬೋಧಿಸಲಾಗಿದೆ. ಅವನು ಎಲ್ಲ ದೇವರದೇವ, ಮಹಾದೇವ, ಅತ್ಯಂತ ಶ್ರೇಷ್ಠ ಹಾಗೂ ಎಲ್ಲ ದೇವತೆಗಳಿಗೆ ಪ್ರಿಯಕರನಾಗಿದ್ದಾನೆ.[೧೪೦]

ಸಮುದ್ರಮಂಥನದಲ್ಲಿ ಶಿವನು ಮಾಡಿದ ವಿಷಪಾನ ಹಾಗೂ ನೀಲಕಂಠ ಮುಂತಾದ ನಾಮೋಲ್ಲೇಖಗಳ ಬಗ್ಗೆ ಚರ್ಚೆಯೂ ಅಲ್ಲಿದೆ.[೧೪೧] ಶ್ರೀ ವಾಲ್ಮೀಕಿ ರಾಮಾಯಣದಲ್ಲಿ ರಾಕ್ಷಸರಿಂದ ನಡೆದ ಪೂಜೆ ಹಾಗೂ ಅವನಿಂದ ಅವರು ಪಡೆದ ವರದಾನಗಳ ವರ್ಣನೆಯೂ ಬಂದಿದೆ. ನಿಜವಾಗಿ ಶಿವನು ಪ್ರೇಮಮಯಿ ಹಾಗೂ ಅನುಗ್ರಹಮೂರ್ತಿಯಾದುದರಿಂದ ನಿರಾಯಾಸವಾಗಿ ಅವನಿಂದ ನಾನಾತರದ ವರದಾನಗಳನ್ನು ಶಸ್ತ್ರಾಸ್ತ್ರಗಳನ್ನು ಪಡೆಯಬಹುದೆಂದು ಅಲ್ಲಿ ತೋರಿಸಲಾಗಿದೆ. ಶಿವನ ವೈಶಿಷ್ಟ್ಯವೆಂದರೆ, ಅವನು ಸರ್ವರನ್ನು ಬೇಗನೆ ಅನುಗ್ರಹಿಸುತ್ತಾನೆನ್ನುವದರಲ್ಲಿಯೇ ಇದೆ.[೧೪೨]

ರಾಮಾಯಣದಲ್ಲಿ ಲಿಂಗಪೂಜೆಯ ವಿಧಿ-ವಿಧಾನಗಳು ದೊರಕುತ್ತವೆ. ಉತ್ತರಕಾಂಡದಲ್ಲಿ ರಾವಣನ ಲಿಂಗನಿಷ್ಠೆಯ ಪ್ರಸ್ತಾಪ ಬಂದಿದೆ. ಅವನು ಹೋದಲ್ಲೆಲ್ಲ ಸ್ವರ್ಣಲಿಂಗವೊಂದನ್ನು ತನ್ನ ಸಂಗಡ ಒಯ್ಯುರುತ್ತಿದ್ದ. ಉಸುಕಿನ ವೇದಿಕೆ ಮಾಡಿ, ಅದರ ಮೇಲಿಟ್ಟು, ಪುಷ್ಪಗಂಧಗಳಿಂದ ಆ ಲಿಂಗಮೂರ್ತಿಯನ್ನು ಪೂಜಿಸುತ್ತಿದ್ದನೆಂದು ಹೇಳಲಾಗಿದೆ.[೧೪೩] ಹೀಗೆ ರಾಮಾಯಣದಲ್ಲಿ ಲಿಂಗದ ಬಗೆಗೆ ಮಹತ್ವದ ವಿಚಾರಗಳು ಅಡಕವಾಗಿವೆ.

---

೧೩೯. "ಉಮಾಪತಿ, ಪಶುಪತಿ ಹರ ಅಕಾಶಾದ್ ಪತದ್ರಾಯ ಶಿವೆ", ಶಿವಶಿರ ಸ್ತೂತ-ಬಾಲಕಾಂಡ, ಸರ್ಗ ೪೩.

೧೪೦. "ಅಥದೇವಾ ಮಹಾದೇವಂ ಶಂಕರಂ ಶರಣಾರ್ಥಿನಃ।
ಜಗ್ಮುಃ ಪಶುಪತಿಂ ರುದ್ರಮ್ ತ್ರಾಹಿ ತ್ರಾಹಿ ತಿತುಷ್ಟವ।" -ಬಾಲಕಾಂಡ, ಸರ್ಗ ೪೯, ಶ್ಲೋ-೨೧.

೧೪೧. ತೋಷಯಸ್ವ ಮಹಾದೇವಂ ನೀಲಕಂಠಮುಮಾಪತಿಮ್- ಉತ್ತರಕಾಂಡ, ಸರ್ಗ೧೬, ಶ್ಲೋ.೩೨.

೧೪೨. ಕೃಪಾಲುಃ ಶಂಕರಸ್ತುಷ್ಟಃ ಪ್ರಸಾದ ತೆ ವಿದ್ಯಾಸ್ಮತಿ ಏವಮುಕ್ತ ಸ್ತದಾಮಾತ್ಯ ಸ್ತುಷ್ಟಾವ ವೃಷಭಧ್ವಜಮ್ । - ಉತ್ತರ ಕಾಂಡ, ಸರ್ಗ ೧೬, ಕಾಂ. ೩೪.

೧೪೩. "ಯತ್ರ-ಯತ್ರ ಯಾತಿ ಸ್ಮ ರಾವಣೂ ರಾಕ್ಷಸೇಶ್ವರಃ ಜಾಂಬೂನದಮಯಂ ಲಿಂಗ ತತ್ರ ತತ್ರ ಸ್ಮ ನೀಯತೆ ಬಾಲುಕಾ - ವೇದಿಮಧ್ಯೆ ತು ತಲ್ಲಿಂಗಂ ಸ್ಥಾಪ್ಯಂ ರಾವಣಃ, ಅರ್ಚಯಾಮಾಸ ಗಂಧಾದಯ ಪುಷ್ಪೈಶ್ಚಾಗರುಗಂಧಿಭಿಃ - ಉತ್ತರಕಾಂಡ, ಸರ್ಗ ೩೧, ಕಾಂ. ೪೨, ೪೩.

ಹಿಂದೂಧರ್ಮದಲ್ಲಿ ಸಾಮಾಜಿಕ ವ್ಯವಸ್ಥೆಯ ಆಧಾರದ ಮೇಲೆ ಕಾಲಕಾಲಕ್ಕೆ ಬೇರೆಬೇರೆ ಮತಾವಲಂಬಿಗಳ ವಿಕಾಸವು ವಿಸ್ತಾರಗೊಳ್ಳುತ್ತಾ ಬಂದಿತು. ಕೆಲವುಜನ ವಿಷ್ಣುದೇವತೆಯನ್ನು ತಮ್ಮ ಅಧಿದೇವತೆಯೆಂದು ಮನ್ನಿಸಿ ಪಾಂಚರಾತ್ರಮತವನ್ನು ಸಮರ್ಥಿಸಿದರು. ಕೆಲವಲರು ಶಾಕ್ತ ಮತ್ತು ಪಾಶುಪತಮತವನ್ನು ಅವಲಂಬಿಸುತ್ತಿದ್ದರು. ಈ ಎಲ್ಲ ಮತಾವಲಂಬಿಗಳಲ್ಲಿ ಆಗಾಗ ಮತಭೇದಗಳೂ ಆಗುತ್ತಿದ್ದುದುಂಟು. ಬೃಹತ್‌ಗ್ರಂಥವಾದ ಮಹಾಭಾರತದಲ್ಲಿ ಎಲ್ಲ ಧರ್ಮಗಳನ್ನು ಸಮನ್ವಯಗೊಳಿಸಿದ ಸಮನ್ವಯವಾದೀ ದೃಷ್ಟಿಕೋನವನ್ನು ನಾವು ಕಾಣುತ್ತೇವೆ. ಮಹಾಭಾರತವೂ ಪುರಾಣಗಳಲ್ಲಿಯೇ ಪರಿಗಣಿತವಾದರೂ, ಅದರಲ್ಲಿ ಬರುವ ಶಿವಸ್ವರೂಪದ ವರ್ಣನೆಯು ಪೌರಾಣಿಕ ವರ್ಣನೆಗಳಂತೆಯೇ ಬಂದಿದೆ. ಪುರಾಣಗಳಿಗೂ ಮಹಾಭಾರತಕ್ಕೂ ಇರುವ ಅಂತರವೆಂದರೆ, ಪುರಾಣಗಳಲ್ಲಿ ಒಬ್ಬ ದೇವತೆ ಪ್ರಧಾನವಾಗಿದ್ದು, ಉಳಿದ ದೇವತೆಗಳೆಲ್ಲ ಅವನ ಅಧೀನರಾಗಿರುತ್ತಾರೆ. ಆದರೆ ಮಹಾಭಾರತದಲ್ಲಿನ ಎಲ್ಲ ದೇವತೆಗಳು ಒಂದೊಂದು ಸ್ಥಾನವಿಶೇಷದಿಂದಾಗಿ ಅವರೆಲ್ಲ ಪ್ರಮುಖರೆಂದು ಪರಿಗಣಿತರಾಗಿದ್ದಾರೆ.

ವೈಷ್ಣವ ಮತ್ತು ಶೈವಮತಗಳಲ್ಲಿದ್ದ ವಿರೋಧವನ್ನು ದೂರ ಗೊಳಿಸುವ ಉದ್ದೇಶದಿಂದ, ಮಹಾಭಾರತದಲ್ಲಿ ಶ್ರೀಕೃಷ್ಣನೊಂದಿಗೆ ಶಿವಸ್ತುತಿಯ ಅನೇಕ ಉಪಾಖ್ಯಾನಗಳನ್ನು ಕಲ್ಪಿಸಲಾಗಿದೆ.[೧೪೪] "ಶಂಕರನ ಭಕ್ತರೆ ನನ್ನ ಭಕ್ತರು, ಅವನನ್ನು ತಿಳಿದರೆ ನನ್ನನ್ನು ತಿಳಿದಂತೆಯೇ ಎಂದು ನಾರಾಯಣನು ಅಲ್ಲಿ ಸ್ಪಷ್ಟವಾಗಿ ಹೇಳುತ್ತಾನೆ."[೧೪೫] ಶಿವ ಮತ್ತು ವಿಷ್ಣು ಬೇರೆಬೇರೆಯಲ್ಲ ಎಂಬುದರ ಬಗ್ಗೆ ಸಾಕಷ್ಟು ವಿವರಣೆ ಅಲ್ಲಿ ದೊರೆಯುತ್ತದೆ.

ಮಹಾಭಾರತದಲ್ಲಿ ಬ್ರಹ್ಮ-ವಿಷ್ಣು-ಮಹೇಶ್ವರರನ್ನು ತ್ರಿಮೂರ್ತಿಗಳೆಂದು ಕರೆಯಲಾಗಿದೆ. ಅವರು ಸೃಷ್ಟಿ-ಸ್ಥಿತಿ-ಲಯಗಳ ಪ್ರತೀಕರಾಗಿದ್ದಾರೆ. ರುದ್ರ ಜಗತ್ತನ್ನು ಸಂಹಾರಗೊಳಿಸುತ್ತಾನೆ. ಆದುದರಿಂದಲೆ ಅವನನ್ನಲ್ಲಿ"ರುದ್ರ" "ಶರ್ವ" ಎಂದು ಸಂಬೋಧಿಸಲಾಗಿದೆ. ಅವನು ಎಲ್ಲ ಪಾಪಗಳನ್ನು ಹರಣಗೊಳಿಸುವುದರಿಂದ "ಹರ" ಎನಿಸಿದ್ದಾನೆ.[೧೪೬] ಪೌರಾಣಿಕರಲ್ಲಿ ಭಕ್ತಿಭಾವಗಳು ವಿಶೇಷವಾಗಿದ್ದ ಕಾರಣ "ಹರ" ಎಂಬ ನಾಮವೇ ಹೆಚ್ಚು ಪ್ರಚಾರದಲ್ಲಿದ್ದಂತಿದೆ. ಮಹಾಭಾರತದಲ್ಲಿ ತ್ರಿಮೂರ್ತಿಗಳ ಏಕೀಕರಣವು ಪರಬ್ರಹ್ಮಸ್ವರೂಪಿನಲ್ಲಿ ಪರ್ಯವಸಾನವಾಗುತ್ತದೆ.

ಮಹಾಭಾರತದಲ್ಲಿ ಶಿವನ ಸ್ವರೂಪ ಕುರಿತು ವಿಶೇಷವಾಗಿ ವರ್ಣಿಸಲಾಗಿದೆ. ಅವನ ತೇಜಸ್ಸನ್ನು ಅಲ್ಲಿ ಸಾವಿರಸೂರ್ಯರ ಪ್ರಕಾಶಕ್ಕೆ ಹೋಲಿಸಲಾಗಿದೆ. ಅವನು ತ್ರಿಶೂಲಧಾರಿ, ಜಟಾಮುಕಟ, ಚರ್ಮಾಂಬರ[೧೪೭] ಭೂತಪ್ರೇತಗಳ ಒಡೆಯ ಮುಂತಾಗಿ ಅವನನ್ನು ವರ್ಣಿಸಲಾಗಿದೆ. ಶಿವನೊಂದಿಗೆ ಶಕ್ತಿಯನ್ನು ಕಲ್ಪಿಸಲಾಗಿದೆ. ಅವನು ಸದಾ ಉಮಾಸಹಿತನಾಗಿರುತ್ತಾನೆ. ಉಮೆಯಿಲ್ಲದ ಶಿವನನ್ನು ಕಲ್ಪಿಸಲಾಧ್ಯವೆಂದು ಹೇಳಲಾಗಿದೆ. ಶಿವನು ಸೃಷ್ಟಿಕರ್ತ, ಜಗತ್ತಿನ ಆದಿಕಾರಣ, ಅಜಾತ, ಅವಿನಾಶಿ, ವ್ಯೋಮಕಾಯ, ವಾಯುರೂಪಿ ಹಾಗೂ ಸಂಹಾರಕನೆಂದು ಮಹಾಭಾರತ ಅವನನ್ನು ವರ್ಣಿಸಿದೆ.

---

೧೪೪. ಮಹಾಭಾರತಮ್, ವನಪರ್ವ ೭೬.

೧೪೫. ಶ್ರೀ ಸಾಂವಲಿಯಾವಿಹಾರೀಲಾಲವರ್ಮಾ (೧೯೭೫) ವಿಶ್ವಧರ್ಮ ದರ್ಶ, ಪು. ೧೦೫-೧೦೬.

೧೪೬. ವನಪರ್ವ, ಕೈಲಾಸಪರ್ವ - ೧೦.

೧೪೭. ದ್ರೋಣಪರ್ವ - ೩೯.

ಶಿವ ಅವ್ಯಕ್ತ, ಅಜ ಮತ್ತು ಈಶಾನನೆಂದು ಅದು ಹೇಳಿದೆ. ಅವನು ಧ್ರುವ, ಕೂಟಸ್ಥ, ಹೋತೃ, ಗೋಪ್ತೃ, ಹಾಗೂ ಕಪರ್ದಿ ಎಂದು ಬಣ್ಣಿಸಿದೆ.[೧೪೮] ಶಿವನು ತ್ರಿನೇತ್ರ. ಅವನು ತ್ರಿಭುವನಸಾರನಾಗಿದ್ದಾನೆ. ತನ್ನ ಶಕ್ತಿಯಿಂದಾಗಿ ಅವನು ಏಕರೂಪಿಯಾಗಿದ್ದರೂ ಬಹುರೂಪ ಧರಿಸುತ್ತಾನೆ. ಅವ್ಯಕ್ತನಾಗಿದ್ದರೂ ಅವನು ವ್ಯಕ್ತನೂ ಆಗುತ್ತಾನೆ.[೧೪೯] ಶಿವನು ಆದಿ ಮಧ್ಯ ಅಂತ್ಯರಹಿತನು. ಅವನು ಚಿನ್ಮಯ, ಪರಂಜ್ಯೋತಿಸ್ವರೂಪ.

ಮಹಾಭಾರತದಲ್ಲಿ ಅರ್ಧನಾರೀಶ್ವರ ಕಲ್ಪನೆಯೂ ಕಂಡುಬರುತ್ತದೆ. ಅರ್ಧಶರೀರದಲ್ಲಿ ಶಿವ, ಇನ್ನರ್ಧ ಶರೀರದಲ್ಲಿ ಶಕ್ತಿಯಾಗಿ ಶಿವನು, ಶಿವ-ಶಕ್ತಿ ಸಮನ್ವಯದ ಅಥವಾ ಶಕ್ತಿವಿಶಿಷ್ಟಾದ್ವೈತದ ಕಲ್ಪನೆಗೆ ಆಧಾರವೆನಿಸಿದ್ದಾನೆ. ಮಹೇಶ್ವರ ಸ್ವರೂಪ ಕುರಿತು ಆರು ವಿಧವಾದ ಶರೀರಗಳನ್ನು ಹೀಗೆ ಹೇಳಲಾಗಿದೆ. ೧. ಸರ್ವಜ್ಞತೆ, ೨. ತೃಪ್ತಿ, ೩. ಅನಾದಿ-ಬೋಧ, ೪. ಸ್ವತಂತ್ರತೆ, ೫. ನಿತ್ಯ ಅಲುಪ್ತಶಕ್ತಿ ಮತ್ತು ೬. ಅನಂತಶಕ್ತಿ.

ಪೌರಾಣಿಕಕಾಲದಂತೆ ಮಹಾಭಾರತದಲ್ಲಿ ಶಿವಲಿಂಗ ಮತ್ತು ಶಿವಪ್ರತಿಮೆಗಳೆರಡರ ಪೂಜೆ ಪ್ರಚಾರದಲ್ಲಿತ್ತು.[೧೫೦] ಶಿವಲಿಂಗ ಪೂಜೆಯಿಂದ ಆತ್ಮ ಮತ್ತು ಪರಮಾತ್ಮನ ಜ್ಞಾನ ಹಾಗೂ ಸನಾತನ ಆತ್ಮ-ಯೋಗದ ಪ್ರಾಪ್ತಿಯಾಗುತ್ತದೆಂದು ಲಿಂಗಾರ್ಚನೆ ಕುರಿತು ಸ್ಪಷ್ಟೀಕರಿಸಲಾಗಿದೆ.[೧೫೧] ಅನುಶಾಸನಪರ್ವದಲ್ಲಿ ಶಿವ-ಲಿಂಗಾರ್ಚನೆಯ ಬಗೆಗೆ ವಿಶೇಷ ವರ್ಣನೆಯಿದೆ.[೧೫೨]

ಮಹಾಭಾರತದಲ್ಲಿ ಶಿವಸ್ವರೂಪದ ಎರಡು ವಿರುದ್ಧಗುಣಗಳನ್ನು ಸಮನ್ವಯಗಳಿಸಲು ಯತ್ನಿಸಿದಂತಿದೆ. ಶಿವನ ಕಠೋರತ್ವ ಹಾಗೂ ಮೃದುತ್ವ, ಉಗ್ರ ಮತ್ತು ಶಾಂತ ಈಮುಂತಾದ ವಿರುದ್ಧಗುಣಗಳ ಸಮನ್ವಯ ವಿಶೇಷತೆಯನ್ನು ಪ್ರದರ್ಶಿಸಲಾಗಿದೆ.[೧೫೩] ವೈದಿಕಕಾಲದಿಂದ ಪೌರಾಣಿಕ ಕಾಲದವರೆಗೆ ಶಿವನ ಸ್ವರೂಪವು ಪರಿವರ್ಧಿತ ಹಾಗೂ ವಿಕಾಸಗೊಳ್ಳುತ್ತ ಬಂದಿತು. ನಿಜವಾಗಿ ವೇದ ಹಾಗೂ ಪುರಾಣಗಳಲ್ಲಿ ಒಂದೇ ವಿಶುದ್ಧತತ್ವದ ವರ್ಣನೆ ದೊರೆಯುತ್ತದೆ. ಅವುಗಳಲ್ಲಿರುವ ಒಂದು ಅಂತರವೆಂದರೆ, ಪುರಾಣಗಳಲ್ಲಿಯ ವಿಷಯ ವರ್ಣನೆಯು ಅತಿಶಯೋಕ್ತಿಯಾಗಿ ಕಂಡುಬರುತ್ತದೆ. ವಸ್ತುತಃ ಭಕ್ತಿಯ ಪ್ರಚಾರವೇ ಪುರಾಣಗಳ ಮುಖ್ಯಧ್ಯೇಯವಾದುದರಿಂದ ಪುರಾಣಗಳಲ್ಲಿ ಸಗುಣ ಈಶ್ವರ ಉಪಾಸನೆಗೆ ಹೆಚ್ಚು ಒತ್ತು ಕೊಟ್ಟಂತಿದೆ. ಸಗುಣ ಈಶ್ವರನ ಕಲ್ಪನೆಯನ್ನು ಜನಸಾಮಾನ್ಯರ ಮಾನಸಿಕ ಸ್ಥಿತಿಯನ್ನು ಗಮನದಲ್ಲಿಟ್ಟುಕೊಂಡು ಪುರಾಣಗಳು ರಚನೆಗೊಂಡಂತಿವೆ.[೧೫೪] ಸಗುಣದ ಕಲ್ಪನೆ ಸಾಮಾನ್ಯ ಮಾನವರ ಮಾನಸಿಕ ಸಂತೃಪ್ತಿಗೆ ಒಂದು ವಿಶಿಷ್ಟ ಮಾರ್ಗವಾಗಿದೆ. ಏಕೆಂದರೆ ಜೀವ ಈಶ್ವರನನ್ನು ತನಗಿಂತ ಬೇರೆಯೆಂದು ಭಾವಿಸಿ, ಅವನನ್ನು ಪಾಲಕನ ರೂಪಿನಲ್ಲಿ ಕಾಣಬಯಸುತ್ತಾನೆ. ಪ್ರಾರಂಭಸ್ತರದಲ್ಲಿ ಈ ಭೇದ ಅವಶ್ಯಂಭಾವಿಯಾಗಿದೆ. ಮಹಾಭಾರತದಲ್ಲಿಯೂ ಈ ಸತ್ಯ ಗೋಚರವಾಗುತ್ತದೆ. ಈಶ್ವರನು ಅಲ್ಲಿ ಅನುಗ್ರಹಮೂರ್ತಿಯಾಗಿದ್ದಾನೆ. ಅವನು ಪ್ರೇಮದಿಂದ ವಶೀಭೂತನಾಗಿ ಜೀವಿಗಳನ್ನು ದುಃಖಗಳಿಂದ ವಿಮುಕ್ತಗೊಳಿಸಿ ಮುಕ್ತಿಮಾರ್ಗದೋರುತ್ತಾನೆ.

---

೧೪೮. ಅನುಶಾಸನಪರ್ವ - ೨೧.

೧೪೯. ಅನುಶಾಸನಪರ್ವ - ಪು. ೫೪೬೧.

೧೫೦. ದ್ರೋಣಪರ್ವ - ೬೨.

೧೫೧. ದ್ರೋಣಪರ್ವ - ೬೩.

೧೫೨. ಅನುಶಾಸನಪರ್ವ, ಶ್ಲೋಕ ೨೩೦, ೩೧, ೩೨, ೩೩, ಇತ್ಯಾದಿ.

೧೫೩. Dr. Ramkrishna Gopal Bhandarkar (1983) Vaisnavism & Saivism, p. 114.

೧೫೪. ಒ.ಎಲ್. ನಾಗಭೂಷಣಸ್ವಾಮಿ (೧೯೬೩) ಪುರಾಣ, ಪು. ೧೫.

ಹೀಗೆ ಮಾಯಿದೇವ ಇತಿಹಾಸವೆಂದು ಕರೆದ ರಾಮಾಯಣ ಮಹಾಭಾರತಗಳಲ್ಲಿಯೂ "ಸ್ಥಲ" ಸರ್ವಸಮಾವೇಶ ರೂಪ ತಾಳಿದೆ.

ಈ ವರೆಗೆ ಷಟ್‌ಸ್ಥಲದರ್ಶನಕ್ಕೆ ಸಂಬಂಧಿಸಿದಂತೆ ಕೆಲವು ಮೂಲಭೂತ ಅಂಶಗಳು ವೇದ, ಆಗಮ, ಉಪನಿಷತ್ತು ಮೊದಲಾದ ಪ್ರಾಚೀನಗ್ರಂಥಗಳಲ್ಲಿ ಕೆಲಮಟ್ಟಿಗೆ ಪ್ರತಿಪಾದನೆಗೊಂಡಿರುವುದನ್ನು ವಿವೇಚಿಸಲಾಯಿತು. ವೇದಗಳಿಗಿಂತ ಉಪನಿಷತ್ತುಗಳಲ್ಲಿ, ಉಪನಿಷತ್ತುಗಳಗಿಂತ ಆಗಮಗಳಲ್ಲಿ, ಆಗಮಗಳಿಗಿಂತ ಪುರಾಣ, ರಾಮಾಯಣ, ಮಹಾಭಾರತಗಳಲ್ಲಿ ಸ್ಥಲತತ್ತ್ವದ ಉಗಮ ಹಾಗೂ ವಿಕಾಸವು ಸ್ಫುಟಗೊಂಡುದದನ್ನು ಗಮನಿಸಲಾಯಿತು. ಆದರೆ ಷಟ್‌ಸ್ಥಲವು ಸಂಪೂರ್ಣವಾಗಿ ಹೆಚ್ಚಿನ ವಿಚಾರ ವಿಮರ್ಶೆಗೆ ಒಳಗಾಗಿ ಸಮಾಜದ ವಿವಿಧ ಸ್ತರಗಳಿಂದ ಬಂದ ಹಲವಾರು ಅನುಭಾವಿಗಳ ಚಿಂತನಮಂಥನಕ್ಕೆ ಪಕ್ಕಾಗಿ ಸುವ್ಯವಸ್ಥಾಪೂರ್ವಕ ನಿರ್ಣೀತವಾಗಿರುವುದು ಬಸವಾದಿ ಪ್ರಮಥರ ಕಾಲದಲ್ಲಿಯೇ ಮುಂದಿನ ದರ್ಶನವಿಭಾಗದ ಸಮೀಕ್ಷೆಯಲ್ಲಿ ಶರಣರ ನಿರ್ಣಯಕೌಶಲವು ಕಂಡುಬರುತ್ತದೆ. ಅಲ್ಲಿ ಬರುವ ವಿಚಾರಗಳು ಶರಣರ ಪರಿಷ್ಕೃತ ಆಲೋಚನೆಗಳೇ ಆಗಿವೆ. ಮಾಯಿದೇವ ಅವುಗಳನ್ನು ತರ್ಕಬದ್ಧವಾದ ಸ್ವಾನುಭಾವದೊಂದಿಗೆ ನಿರ್ಣಯಿಸಿ ಷಟ್‌ಸ್ಥಲಕ್ಕೆ ಹೆಚ್ಚಿನ ಮೆರಗನ್ನು ತಂದುಕೊಟ್ಟಿದ್ದಾನೆಂದು ಹೇಳಬಹುದು. ಅಲ್ಲದೆ ಪೂರ್ವಮೀಮಾಂಸಾದಿ ದರ್ಶನಗಳನ್ನು ವಿವೇಚಿಸಿ ಅಲ್ಲಿ ಪ್ರಸಾದಕರ್ಮವೊಂದನ್ನು ನಿರೂಪಿಸಿದ್ದಾನೆ. ದ್ವೈತ, ಅದ್ವೈತಗಳನ್ನು ಗ್ರಹಿಸಿ, ಅದ್ವೈತ ಭಕ್ತಿಯನ್ನು ನಿರೂಪಿಸಿದ ಅಲ್ಲಿನ ವಿವೇಚನೆ, ಮಾಯಿದೇವನ ದಾರ್ಶನಿಕ ಪ್ರತಿಭೆಯನ್ನು ಪ್ರದರ್ಶಿಸುತ್ತದೆ.

❑

## ಅಧ್ಯಾಯ : ನಾಲ್ಕು

# ದರ್ಶನಗಳಲ್ಲಿ ಸ್ಥಲತತ್ತ್ವದ ಪರಿಕಲ್ಪನೆ

ಭಾರತೀಯ ದರ್ಶನಗಳ ಹಿನ್ನೆಲೆಯಲ್ಲಿ ಶಿವಾನುಭವಸೂತ್ರದ ಮೂಲಕ ಷಟ್‌ಸ್ಥಲವನ್ನು ಪರಿಚಯಿಸುವುದು ಮಾಯಿದೇವನ ಉದ್ದೇಶಗಳಲ್ಲಿ ಒಂದು. ಮಾಯಿದೇವ ಉಳಿದವರಂತೆ ದರ್ಶನಗಳನ್ನು ಒತ್ತಟ್ಟಿಗೆ ಉಲ್ಲೇಖಿಸದೆ ಸಂದರ್ಭೋಚಿತವಾಗಿ ಪ್ರಸ್ತಾಪಿಸಿದ್ದಾನೆ. ಶಿವಾನುಭವಸೂತ್ರದ ನಾಲ್ಕು ಅಧಿಕರಣಗಳನ್ನು ಅವಲಂಬಿಸಿ ಕೆಳಗಿನಂತೆ ಅವುಗಳನ್ನು ಗುರುತಿಸಲಾಗಿದೆ.

ಚಾರ್ವಾಕದರ್ಶನ:

ಸರ್ವೇಷಾಂ ಸ್ಥಾನಭೂತತ್ವಾಲ್ಲಯಭೂತತ್ವತಸ್ತತಃ ।
ತತ್ತ್ವಾನಾಂ ಮಹದಾದೀನಾಂ ಸ್ಥಲಮಿತ್ಯಭಿಧೀಯತೇ ॥

ಬೌದ್ಧ ದರ್ಶನ

ಪರನಿರ್ವಾಣನಿಷ್ಠಾನಾಂ ಯದ್ಧ್ಯೇತ್ಪರಮಂ ಪದಂ ।
ತದಾಹುಃ ಸ್ಥಲಮದ್ವೈತಂ ಶಿವಜ್ಞಾನೈಕತತ್ಪರಾಃ ॥[೧]

ನ್ಯಾಯ-ವೈಶೇಷಿಕದರ್ಶನ:

ಆದ್ಯಂತಶೂನ್ಯಮಮಲಂ ಪರಿಪೂರ್ಣಮೇಕಂ
ಸೂಕ್ಷ್ಮಂ ಪರಾತ್ಪರಮನಾಮಯಮಪ್ರಮೇಯಂ ।
ಭಾವೈಕಗಮ್ಯಮಜಡಂ ಶಿವತತ್ತ್ವಮಾಹು-
ಶ್ಚಿಚ್ಛಕ್ತಿ ಸಂಸ್ಫುರಣರೂಪಮಹಾತ್ಮಲಿಂಗಂ ॥[೨]

ಸಾಂಖ್ಯ-ಯೋಗ ದರ್ಶನ:

ಅಂಗಂ ಪ್ರಕೃತಿರಾಖ್ಯಾತಂ ಲಿಂಗಂ ಪುರುಷ ಈರಿತಃ।
ತಯೋಃ ಪ್ರೇರಕಭಾವೇನ ಸಂಯೋಗಃ ಸ್ವಯಮೀಶ್ವರಃ॥[೩]

---

೧. ಶಿವಾನುಭವಸೂತ್ರಂ, ಅಧಿಕರಣ ೨, ಶ್ಲೋಕ ೮, ೯.

೨. ಅದೇ, ಅಧಿಕರಣ ೩, ಶ್ಲೋಕ ೨೮.

೩. ಅದೇ, ಅಧಿಕರಣ ೫, ಶ್ಲೋಕ ೩೧.

ಪೂರ್ವಮೀಮಾಂಸಾದರ್ಶನ:

ಅಹಂಕರ್ತಾ ಸಮಸ್ತಸ್ಯ ಧರ್ಮಾಧರ್ಮಸ್ಯ ಕರ್ಮಣಃ ।
ಇತ್ಯನೇನಾಭಿಮಾನೇನ ಕರ್ಮಕಾಂಡೋಽಯಮುಚ್ಯತೇ॥

ಅದ್ವೈತ ದರ್ಶನ:

ನಾಹಂಕರ್ತಾಽಸ್ಯ ಕರ್ತೃತ್ವಂ ನೈವ ಸಾಕ್ಷೀ ಸ್ವಭಾವತಃ।
ಇತ್ಯನೇನಾಭಿಮಾನೇನ ಜ್ಞಾನಕಾಂಡೋಽಯಮುಚ್ಯತೇ॥

ವಿಶಿಷ್ಟಾದ್ವೈತದರ್ಶನ:

ಆತ್ಮಾನಂ ಚ ಪೃಥಕ್ಕೃತ್ವಾ ಪ್ರೇರಿತಾರಂ ತಥಾ ಪೃಥಕ್।
ಅಸೌ ಜುಷ್ಟಸ್ತತಸ್ತೇನಹ್ಯಮೃತತ್ವಾಯ ಕಲ್ಪತೇ ॥

ದ್ವೈತದರ್ಶನ:

ಅನೋನ್ಯಪ್ರಾರ್ಥಕಂ ದ್ವೈತಂ ಸಮಸಂಯೋಗಯೋಸ್ತ್ರಯೋಃ ।
ಕಃ ಕಂ ಭಜತಿ ಭಕ್ತ್ಯಾ ಸಾ ಭಕ್ತಿರದ್ವೈತಗಾ ನ ಹಿ ॥[೪]

ಶೈವದರ್ಶನಗಳು:

ಶಿವರೂಪತಯಾ ಸರ್ವಂ ಯಸ್ಯ ಭಾತಿ ಸ್ವರೂಪತಃ।
ಸ್ವೇಚ್ಛಾಚಾರಸಮಾಚಾರಃ ತಸ್ಯ ಚಾರ್ಚಾ ಹಿ ಶೂಲಿನಃ॥

ಏವಮರ್ಚನಮೀಶಸ್ಯ ಸ್ವೇಚ್ಛಾಚಾರನಿಬಂಧನಾ।
ಭವತ್ಯೇವ ನ ಸಂದೇಹಃ ಶಿವೋಽಹಮಿತಿ ವೇದನಾತ್॥

ಅಹಮಿತಿ ಶಿವ ಏವ ಸತ್ಯಚಿದ್ಘನಃ ಸ್ಫುರತಿ ತದಾ ಪ್ರಥುಗಸ್ತಿ ನೈವವಸ್ತು।
ಇದಮಿತಿ ವಪುಷಾ ನ ತೇನ ಬಂಧನಂ ನ ಹಿ ಶರಣಸ್ಯ ವಿಮೋಚನಂ ಚ ಕಿಂಚಿತ್॥[೫]

ಹೀಗೆ ಇವು ಶಿವಾನುಭಸೂತ್ರದಲ್ಲಿ ಮಾಯಿದೇವ ನಿರ್ಣಯಿಸಿದ ಭಾರತೀಯ ದರ್ಶನದ ಉಲ್ಲೇಖಗಳಾಗಿವೆ. ಪ್ರಸ್ತುತ ಅಧ್ಯಾಯದಲ್ಲಿ ಇದೇ ಕ್ರಮದಂತೆ ಒಂದೊಂದಾಗಿ ಮೇಲಿನವುಗಳನ್ನು ವಿವೇಚಿಸಲಾಗುವುದು.

---

೪. ಶಿವಾನುಭವಸೂತ್ರಂ, ಅಧಿಕರಣ ೮, ಶ್ಲೋಕ ೨೦, ೨೧, ೩೩, ೪೫.

೫. ಅದೇ, ಅಧಿಕರಣ ೮, ಶ್ಲೋಕ ೭-೯.

ದಾರ್ಶನಿಕರು ತಮ್ಮ ದರ್ಶನಗಳನ್ನು ಎರಡುವಿಧವಾಗಿ ವರ್ಗೀಕರಿಸಿದ್ದಾರೆ. ೧. ಪ್ರಮಾಣ ೨. ಪ್ರಮೆಯ. ಪ್ರಮೇಯದಲ್ಲಿ ಪರಿಶೀಲಿಸುವ ವಿಷಯಗಳೆಂದರೆ, ಈಶ್ವರ, ಜೀವ, ಜಗತ್ತು, ತತ್ವ, ಬಂಧ, ಸಾಧನಮಾರ್ಗ ಮೋಕ್ಷೋಪಾಯ, ಮೋಕ್ಷ.

ಪ್ರಮಾಣಗಳು:

ಜ್ಞಾನವನ್ನು ಪಡೆಯುವ ಮುಖ್ಯಸಾಧನ ಯಾವುದಿದೆಯೋ ಅದುವೇ ಪ್ರಮಾಣ (source of knowledge).ಈ ಪ್ರಮಾಣದಿಂದ ಯಾವುದನ್ನು ಅರಿಯುತ್ತೇವೆವೋ ಅದೇ ಪ್ರಮೇಯ. (Object of knowledge). ಪ್ರಮಾಣದಿಂದ ವಸ್ತುವನ್ನು ಅರಿಯುತ್ತೇವೆ ಎಂಬ ವಿಚಾರದಲ್ಲಿ ದಾರ್ಶನಿಕರಲ್ಲಿ ಒಮ್ಮತವಿದ್ದರೂ, ಯಾವ ಪ್ರಮಾಣದಿಂದ ಎಂಬ ವಿಷಯದಲ್ಲಿ ಐಕಮತ್ಯವಿಲ್ಲ. ಅಷ್ಟೇ ಅಲ್ಲದೆ ಪ್ರಮಾಣದ ಸ್ವರೂಪ ಅಥವಾ ವ್ಯಾಪ್ತಿಯ ವಿಷಯದಲ್ಲೂ ವೈವಿಧ್ಯವಿದೆ. ಉದಾಹರಣೆಗೆ ದಾರ್ಶನಿಕರೆಲ್ಲರೂ ಪ್ರತ್ಯಕ್ಷ ಪ್ರಮಾಣವನ್ನೊಪ್ಪಿದ್ದಾರೆ. ಆದರೆ ಆ ಪ್ರಮಾಣದ ಸ್ವರೂಪದ ಬಗೆಗೇ ಭಿನ್ನಾಭಿಪ್ರಾಯವಿದೆ.

ಚಾರ್ವಾಕದರ್ಶನದಲ್ಲಿ ಯಥಾರ್ಥಜ್ಞಾನದ ಏಕೈಕ ಸಾಧನವೆಂದರೆ ಪ್ರತ್ಯಕ್ಷವೊಂದೇ. ಬೌದ್ಧರು ಪ್ರತ್ಯಕ್ಷದ ಜೊತೆಗೆ ಅನುಮಾನವನ್ನೂ ಪ್ರಮಾಣವೆಂದು ಸ್ವೀಕರಿಸಿದ್ದಾರೆ. ಜೈನರಿಗೆ ಪ್ರತ್ಯಕ್ಷ, ಅನುಮಾನ ಹಾಗೂ ಶಬ್ದ ಮೂರೂ ಪ್ರಮಾಣವೇ. ರಾಮಾನುಜದರ್ಶನವೂ ಮೂರೂ ಪ್ರಮಾಣವನ್ನೊಪ್ಪಿದೆ. ಈ ದರ್ಶನದಲ್ಲಿ ಶಬ್ದವು ಅನುಮಾನವನ್ನಲಂಬಿಸಿಲ್ಲ. ಹಾಗೆಯೇ ಅನುಮಾನವು ಶಬ್ದಪ್ರಮಾಣವನ್ನು ಅವಲಂಬಿಸಿಲ್ಲ. ಈ ಎರಡೂ ತಮ್ಮತಮ್ಮ ವಿಷಯಗಳಲ್ಲಿ ಸ್ವತಂತ್ರವಾಗಿವೆ. ಮಾಧ್ವರು ಪ್ರತ್ಯಕ್ಷ ಮತ್ತು ಶಬ್ದ ಎರಡನ್ನೇ ಪ್ರಮಾಣ ಎಂದಿದ್ದಾರೆ. ಶೈವರೆಲ್ಲರಿಗೂ ಪ್ರತ್ಯಕ್ಷ, ಅನುಮಾನ ಮತ್ತು ಶಬ್ದ ಮೂರೂ ಸ್ವತಂತ್ರಪ್ರಮಾಣಗಳೇ. ವೈಶೇಷಿಕರಲ್ಲಿ ಶಬ್ದವು ಪ್ರತ್ಯೇಕ ಪ್ರಮಾಣವಾಗಿರದೆ ಅನುಮಾನದಲ್ಲಿ ಅದರ ಅಂತರ್ಭಾವವಾಗುತ್ತದೆ. ಸಾಂಖ್ಯರಿಗೂ ಪ್ರತ್ಯಕ್ಷ, ಅನುಮಾನ ಮತ್ತು ಶಬ್ದಗಳೇ ಪ್ರಮಾಣ. ನೈಯಾಯಿಕರು ಉಪಮಾನವನ್ನು ಸ್ವತಂತ್ರ ಪ್ರಮಾಣವೆಂದು ಸಾಧಿಸಿ ಒಟ್ಟು ಪ್ರಮಾಣಗಳು ನಾಲ್ಕು ಎನ್ನುತ್ತಾರೆ. ಈ ನಾಲ್ಕರ ಜೊತೆಗೆ ಅರ್ಥಾಪತ್ತಿಯನ್ನು ಸೇರಿಸಿ ಪ್ರಮಾಣಗಳು ಐದೆಂದು ಪ್ರಾಭಾಕರ ಮೀಮಾಂಸಕರೂ, ಇವುಗಳೊಡನೆ ಅನುಪಲಬ್ಧಿಯನ್ನು ಸೇರಿಸಿಕೊಂಡು ಆರೆಂದು ಭಾಟ್ಟಮೀಮಾಂಸಕರು ಹಾಗೂ ಅದ್ವೈತಿಗಳು ಹೇಳುತ್ತಾರೆ. ಈ ಆರು ಪ್ರಮಾಣಗಳಲ್ಲದೆ ಸಂಭವ, ಐತಿಹ್ಯ, ಲಿಪಿ, ಲೋಕ ಪ್ರಸಿದ್ಧ, ಚೇಷ್ಟ, ಪ್ರತಿಭ, -ಇವುಗಳೂ ಸೇರಿ ಒಟ್ಟು ಹನ್ನೆರಡು ಪ್ರಮಾಣಗಳಿವೆ ಎಂದೂ ಹೇಳಲಾಗುತ್ತದೆ.[೬]

ಒಟ್ಟಿಗೆ ಪ್ರಮಾಣದ ಸಂಖ್ಯೆಯ ವಿಷಯದಲ್ಲಿ ದಾರ್ಶನಿಕರಲ್ಲಿ ಮತಭೇದವಿದೆಯೇ ಹೊರತು ಅದು ಪ್ರಮೇಯ ಸಾಧನ ಎಂಬುದರಲ್ಲಿ ಭಿನ್ನಾಭಿಪ್ರಾಯವಿಲ್ಲ. ಅಲ್ಲದೆ ಇಲ್ಲಿ ಪ್ರಮಾಣಗಳಿಂದ ಮೊದಲೇ ಸಿದ್ಧವಾದ ವಸ್ತುವಿನ ಸ್ವರೂಪ ಖಚಿತವಾಗುತ್ತದೆಯೆ ಹೊರತು, ಅವು ಉತ್ಪತ್ತಿಗೆ ಕಾರಣವಾಗುವುದಿಲ್ಲ.

ನಾಸ್ತಿಕದರ್ಶನಗಳಲ್ಲಿ ಸ್ಥಲತತ್ವ :

ವೈದಿಕಧರ್ಮಗಳ ಪ್ರಭಾವದ ವಿರುದ್ಧವಾಗಿ ನಾಸ್ತಿಕದರ್ಶನಗಳು ಹುಟ್ಟಿಕೊಂಡವು. ಭಾರತೀಯದರ್ಶನದಲ್ಲಿ ಜಡವಾದಿ ವಿಚಾರಧಾರೆಯ ಪ್ರಾತಿನಿಧಿತ್ವವನ್ನು ಚಾರ್ವಾಕ ದರ್ಶನ ವಹಿಸಿಕೊಂಡಿದೆ. ಪ್ರತ್ಯಕ್ಷವೊಂದನ್ನೇ ಪ್ರಮಾಣವೆಂದು

---

೬. ಡಾ. ಶಾಂತಿಪ್ರಕಾಶ ಆತ್ರೇಯ (೧೯೬೫) ಯೋಗಮನೋವಿಜ್ಞಾನ (ಹಿಂದಿ) ಅಧ್ಯಾಯ ೮, ಪು. ೭೪-೮೮. ಈ ಹನ್ನೆರಡೂ ಪ್ರಮಾಣಗಳ ಸ್ವರೂಪ ಕುರಿತು ಅಲ್ಲಿ ಸುದೀರ್ಘವಾಗಿ ವಿವೇಚಿಸಲಾಗಿದೆ.

ಸಾರಿದ ಈ ದರ್ಶನ, ಶಬ್ದ ಮತ್ತು ಅನುಮಾನ ಪ್ರಮಾಣಗಳನ್ನು ಖಂಡಿಸುತ್ತದೆ. ಸತ್ತಾತ್ಮಕವಾದ ಪ್ರತ್ಯಕ್ಷವೊಂದೇ ಪ್ರಮಾಣ. ಈಶ್ವರ, ಆತ್ಮ ಹಾಗೂ ಸ್ವರ್ಗ ಮುಂತಾದವುಗಳು ಇಂದ್ರಿಯಕ್ಕೆ ಪ್ರತ್ಯಕ್ಷವಾಗದ್ದರಿಂದ ಅವೆಲ್ಲ ಕಾಲ್ಪನಿಕವೆಂದೇ ಇದರ ಅಭಿಪ್ರಾಯ. ಪ್ರತ್ಯಕ್ಷಕ್ಕೆ ಕೇವಲ ಜಡವಸ್ತುಗಳ ಜ್ಞಾನವಾಗುವದರಿಂದ ಚಾರ್ವಾಕರ ಅಭಿಪ್ರಾಯದಲ್ಲಿ ಜಡತತ್ತ್ವವೊಂದೇ ನಿಜವಾದ ತತ್ತ್ವ.

ಸಾಮಾನ್ಯವಾಗಿ ಭಾರತೀಯ ದಾರ್ಶನಿಕರು, ಭೌತಿಕ ಜಗತ್ತಿನ ಉತ್ಪತ್ತಿಯಲ್ಲಿ ಪಂಚಮಹಾಭೂತಗಳ ಅನಿವಾರ್ಯತೆಯನ್ನು ಸ್ವೀಕರಿಸಿದ್ದಾರೆ. ಆದರೆ ಚಾರ್ವಾಕರು ನಾಲ್ಕು ಮಹಾಭೂತಗಳ ಅಸ್ತಿತ್ವವನ್ನು ಮಾತ್ರ ಒಪ್ಪುತ್ತಾರೆ. ಅವು ಹೀಗಿವೆ - ವಾಯು, ಅಗ್ನಿ, ಜಲ, ನೆಲ.[೭] ಆಕಾಶವೆಂಬುದು ಪ್ರತ್ಯಕ್ಷದ ಕಕ್ಷೆಯಲ್ಲಿ ಬರಲಾರದ್ದರಿಂದ ಅದನ್ನು ಅಲ್ಲಿ ಕೈಬಿಡಲಾಗಿದೆ. ಈ ನಾಲ್ಕುಭೂತಗಳ ಪರಸ್ಪರ ಸಹಯೋಗದಿಂದಲೇ ವಿಶ್ವೋತ್ಪತ್ತಿಯಾಗುತ್ತದೆ. ಮಹಾಭೂತಗಳ ಸಂಯೋಗವೇ ಸೃಷ್ಟಿ, ಇವುಗಳ ಅಗಲುವಿಕೆಯೇ ಪ್ರಳಯ. ಮಹಾಭೂತಗಳ ಆಕಸ್ಮಿಕ ಸಂಯೋಜನೆಯಿಂದ ವಿಶ್ವವು ನಿರ್ಮಾಣಗೊಳ್ಳುತ್ತದೆ. ಇದಕ್ಕೆ ಯಾವ ಕರ್ತೃ ಎನ್ನುವನಿಲ್ಲದುದರಿಂದ ಇದರ ಉತ್ಪತ್ತಿಗೆ ಯಾವುದೇ ಪ್ರಯೋಜನವಿಲ್ಲ. ಮಹಾಭೂತಗಳ ಮಿಶ್ರಣದಿಂದ ನಿರ್ಜೀವ ವಸ್ತುಗಳಷ್ಟೇ ಏಕೆ, ಸಜೀವವಸ್ತುಗಳ ಉತ್ಪತ್ತಿಕೂಡ ಆಗಬಲ್ಲದು. ಏಕೆಂದರೆ ಇದು ಮಹಾಭೂತಗಳ ಸ್ವಾಭಾವಿಕ ಕ್ರಿಯೆಯಾಗಿದೆ. ಎಲೆ, ಅಡಿಕೆ ಹಾಗೂ ಸುಣ್ಣಗಳ ಸಂಯೋಗದಿಂದ ಕೆಂಪುವರ್ಣವು ಹುಟ್ಟುವಂತೆ ವಾಯು, ಅಗ್ನಿ, ನೆಲ ಜಲಗಳ ಕೂಡುವಿಕೆಯ ಸಂದರ್ಭದಲ್ಲಿ ಚಿತ್ ಹಾಗೂ ಅಚಿತ್ ವಸ್ತುಗಳು ಸ್ವಭಾವಿಕವಾಗಿ ಹುಟ್ಟಿಕೊಳ್ಳುತ್ತವೆ.[೮] ಹೇಗೆ ಉಷ್ಣ ಬೆಂಕಿಯ ಸ್ವಭಾವವೊ, ಶೀತ ನೀರಿನ ಸ್ವಭಾವವೊ, ಹಾಗೆಯೇ ಭೂತಗಳ ಸ್ವಭಾವ, ವಿಶ್ವವನ್ನು ನಿರ್ಮಾಣಮಾಡುವುದೇ ಆಗಿದೆ. ಚಾರ್ವಾಕರ ವಿಶ್ವಸಂಬಂಧಿ ಈ ವ್ಯಾಖ್ಯೆಗೆ 'ಸ್ವಭಾವವಾದೀ' ಸಿದ್ಧಾಂತವೆಂದು ಕರೆಯುತ್ತಾರೆ. ವಸ್ತುಗಳ ಸತ್ತೆ, ಜ್ಞಾತೃವಿನಿಗಿಂತ ಸ್ವತಂತ್ರವಾಗಿರುತ್ತದೆಂದು ಅವರ ಅಭಿಮತ. ವಸ್ತುವನ್ನು ನೋಡುವವ ಇರಲಿ, ಇಲ್ಲದೇ ಇರಲಿ, ಅವುಗಳ ಅಸ್ತಿತ್ವವಂತೂ ಸದಾ ಇದ್ದೇ ಇರುತ್ತದೆ.

ಪ್ರತ್ಯಕ್ಷವೊಂದನ್ನೇ ಪ್ರಮಾಣವೆಂದು ವಾದಿಸುವ ಚಾರ್ವಾಕರು, ಆತ್ಮನ ಅಸ್ತಿತ್ವವನ್ನು ಅಲ್ಲಗಳೆಯುತ್ತಾರೆ. ಭಾರತೀಯ ದರ್ಶನದಲ್ಲೂ ಆತ್ಮಸ್ವರೂಪ ಸಂಬಂಧದ ವಿಷಯದಲ್ಲಿ ಐಕಮತ್ಯವಿಲ್ಲ. ಕೆಲವು ದಾರ್ಶನಿಕರು ಚೈತನ್ಯವನ್ನು ಆತ್ಮದ ಮೂಲಸ್ವರೂಪವೆಂದರೆ, ಇನ್ನೂಕೆಲವರು ಆಗಂತುಕ ಲಕ್ಷಣವೆನ್ನುತ್ತಾರೆ. ಅನೇಕರು ಆತ್ಮತತ್ತ್ವವನ್ನು ಸ್ವಭಾವತಃ ಚೇತನವೆಂದು ಪರಿಗಣಿಸಿದರೆ,. ಮತ್ತೆ ಕೆಲವರು ಆತ್ಮತತ್ತ್ವದಲ್ಲಿ ಚೈತನ್ಯದ ಸಂಚಾರವು ವಿಶೇಷ ಸಂದರ್ಭದಲ್ಲಾಗುತ್ತದೆ ಎಂದು ವಾದಿಸುತ್ತಾರೆ. ಆದರೆ ಚಾರ್ವಾಕರು ಚೈತನ್ಯವು ಪ್ರತ್ಯಕ್ಷಕ್ಕೆ ಸಾಧ್ಯವಾಗುವಾದರಿಂದ, ಅದು ಯಥಾರ್ಥವಾಗಿದೆ ಎಂದು ನಂಬುತ್ತಾರೆ. ಪ್ರತ್ಯಕ್ಷ ಎರಡು ವಿಧವಾಗಿದೆ - ಬಾಹ್ಯ ಮತ್ತು ಆಂತರಿಕ ಎಂದು. ಬಾಹ್ಯಪ್ರತ್ಯಕ್ಷದಿಂದ ಭೌತಿಕ ಜಗತ್ತಿನ ಜ್ಞಾನವುಂಟಾದರೆ ಆಂತರಿಕ ಪ್ರತ್ಯಕ್ಷದಿಂದ ಆಂತರಿಕ ಜಗತ್ತಿನ ಜ್ಞಾನವುಂಟಾಗುತ್ತದೆ. ಆದುದರಿಂದ ಚೈತನ್ಯವು, ಪ್ರತ್ಯಕ್ಷಕ್ಕೆ ವಿಷಯವಾಗಿದೆ. ಚೇತನವು ಆತ್ಮದ ಗುಣವಾಗಿರದೆ, ಶರೀರದ ಗುಣವಾಗಿದೆ. ಶರೀರದಲ್ಲಿಯೇ ಚೈತನ್ಯವಿರುತ್ತದೆ. ಚೈತನ್ಯ ವಿಶಿಷ್ಟ ದೇಹವೇ ಆತ್ಮ.[೯] ಮಹಾಭೂತಗಳ ನಿರ್ದಿಷ್ಟಪ್ರಮಾಣದ ಮಿಶ್ರಣದಿಂದ ಶರೀರ ಇಂದ್ರಿಯ ಹಾಗೂ

---

೭. ಪೃಥ್ವ್ಯಾಪಸ್ತೇಜೋವಾಯುರಿತಿ ತತ್ತ್ವಾನಿ, ಬೃಹಸ್ಪತಿಸೂತ್ರಂ.

೮. ಜಡಭೂತವಿಕಾರೇಷು ಚೈತನ್ಯಂ ಯತ್ ದೃಶ್ಯತೇ ।
ತಾಂಬುಲಫಂಗಚೂರ್ಣಾನಾಂ ಯೋಗಾದ್ ರಾಗ ಇವೋತ್ಥಿತಮ್ ॥

೯. ಚೈತನ್ಯ ವಿಶಿಷ್ಟಃ ಕಾಯಃ ಪುರುಷಃ, ಬೃಹಸ್ಪತಿಸೂತ್ರ.

ವಿಷಯಗಳುಂಟಾಗುತ್ತವೆ.[೧೦] ಇವುಗಳಲ್ಲಿ ಪ್ರತ್ಯೇಕವಾಗಿ ಚೈತನ್ಯವಿಲ್ಲದ್ದರೂ[೧೧] ಇವುಗಳ ಮೇಲನದಿಂದ ಮಧ್ಯದಲ್ಲಿರುವ ಮಾದಕ ಶಕ್ತಿಯಂತೆ ಚೈತನ್ಯಶಕ್ತಿ ಉದ್ಭವಿಸುತ್ತದೆ.[೧೨]

ಆತ್ಮ ಮತ್ತು ಶರೀರದಲ್ಲಿ ಐಕ್ಯತೆಯನ್ನು ಸ್ಥಾಪಿಸಲು ಹೊರಟ ಚಾರ್ವಾಕರು ಹೀಗೆ ತರ್ಕಿಸುತ್ತಾರೆ. ಆತ್ಮ ಶರೀರಕ್ಕಿಂತ ಬೇರೆಯಾಗಿಲ್ಲ. ಒಂದು ವೇಳೆ ಅದು ಬೇರೆಯಾಗಿದ್ದರೆ, ಮರಣಾನಂತರ ಕಾಣಿಸಬೇಕಾಗಿತ್ತು ಆದ್ದರಿಂದ ಶರೀರ ವಿರುವವರೆಗೆ ಆತ್ಮವಿದೆ. ಶರೀರದ ನಾಶವಾಗುತ್ತಲೆ ಅದೂ ನಾಶವಾಗುತ್ತದೆ. "ನಾನು ತಿಳುವಾಗಿದ್ದೇನೆ", "ನಾನು ದಪ್ಪಗಾಗಿದ್ದೇನೆ", "ನಾನು ಕಪ್ಪು", "ನಾನು ಕೆಂಪು" ಎಂಬ ಈ ತೆಳು, ದಪ್ಪ, ಕಪ್ಪು, ಬಿಳುಪುತನಗಳೆಲ್ಲ ಶರೀರದ ಗುಣಗಳೇ ಹೊರತು, ಆತ್ಮದ ಗುಣಗಳಲ್ಲ, ಏಕೆಂದರೆ ಚಾರ್ವಾಕರು ಆತ್ಮತತ್ತ್ವವನ್ನು ಶರೀರಕ್ಕಿಂತ ಬೇರೆಯಾಗಿ ಪರಿಗಣಿಸಲಾರರು. ಆದುದರಿಂದ ಅವರು ಆತ್ಮದ ನಿತ್ಯತ್ತ್ವದಲ್ಲಾಗಲಿ ಹಾಗೂ ಅದರ ಅಮರತ್ವದಲ್ಲಾಗಲಿ ವಿಶ್ವಾಸತಾಳಿಲ್ಲ. ಆತ್ಮದ ಅಮರತ್ವವನ್ನು ಒಪ್ಪದ ಚಾರ್ವಾಕರಿಗೆ, ಸ್ವರ್ಗ-ನರಕಗಳೂ ಕಾಲ್ಪನಿಕವೆನಿಸಿವೆ. ಆತ್ಮದ ಅಸ್ತಿತ್ವವೇ ಇಲ್ಲವೆಂದ ಮೇಲೆ ಸ್ವರ್ಗನರಕಗಳು ಯಾರಿಗಾಗಿ? ಸ್ವರ್ಗನರಕಗಳು ಪ್ರತ್ಯಕ್ಷಕ್ಕೆ ಅಗೋಚರ, ಆದುದರಿಂದ ಅವುಗಳ ಅಸ್ತಿತ್ವವೂ ಅಸಿದ್ಧ.

ಈಶ್ವರ ಅಸ್ತಿತ್ವವನ್ನು ಚಾರ್ವಾಕರು ಒಪ್ಪಲಾರರು. ಪ್ರಾಯಃ ಶ್ರುತಿ ಹಾಗೂ ಅನುಮಾನ ಮತ್ತು ಅನುಭವ ಪ್ರಮಾಣಗಳ ಆಧಾರದಮೇಲೆ ಈಶ್ವರಾಸ್ತಿತ್ವವನ್ನು ಸ್ವೀಕರಿಸಲಾಗುತ್ತದೆ. ಚಾರ್ವಾಕರು ಶ್ರುತಿಯನ್ನು ಪ್ರಮಾಣವೆಂದು ನಂಬಲಾರರು. ಆದುದರಿಂದ ಈಶ್ವರಾಸ್ತಿತ್ವವನ್ನು ಶಬ್ದಪ್ರಮಾಣದ ಆಧಾರದ ಮೇಲೆ ಅವರು ನಿರ್ಧರಿಸಲಾರರು. ನೈಯಾಯಿಕರು ಲೌಕಿಕ ಹಾಗೂ ಅನುಮಾನ ಪ್ರಮಾಣಗಳಿಂದ ಈಶ್ವರಾಸ್ತಿತ್ವವನ್ನು ಸಿದ್ಧಗೊಳಿಸಲು ಪ್ರಯತ್ನಿಸುತ್ತಾರೆ. ಆದರೆ ಚಾರ್ವಾಕರು ಇವನ್ನೆಲ್ಲ ಅಂಗೀಕರಿಸಲಾರರು. ಏಕೆಂದರೆ ಅವರ ಅಭಿಪ್ರಾಯದಲ್ಲಿ ಈಶ್ವರ ಅಸಿದ್ಧ. ಈ ಸೃಷ್ಟಿಗೆ ಈಶ್ವರನು ಕಾರಣಕರ್ತ ಅಲ್ಲ; ಏಕೆಂದರೆ ವಿಶ್ವೋತ್ಪತ್ತಿಗೆ ಮಹಾಭೂತಗಳೇ ಕಾರಣವಾಗಿವೆ. ಈ ರೀತಿಯಾಗಿ ಜಡವಾದಿ ಚಾರ್ವಾಕರು ವಿವಿಧರೀತಿಯಾಗಿ ಆಧ್ಯಾತ್ಮಿಕ ತತ್ತ್ವಗಳನ್ನು ಖಂಡಿಸುತ್ತಾರೆ.

ಚಾರ್ವಾಕರು ಕೇವಲ ಪ್ರತ್ಯಕ್ಷವೊಂದನ್ನೇ ಪ್ರಮಾಣವೆಂದು ನಂಬಿದ ಕಾರಣ, ಅದೇ ಒಂದರಲ್ಲಿ ಅವರ ಎಲ್ಲ ತತ್ತ್ವವಿಚಾರವು ಅಡಕವಾಗಿದೆ. ಆದರೆ ಪ್ರತ್ಯಕ್ಷಪ್ರಮಾಣವು ಸಂಪೂರ್ಣ ಅನುಭವವನ್ನು ವಿಶ್ಲೇಷಿಸಲಾರದು. ಪ್ರತ್ಯಕ್ಷಪ್ರಮಾಣ ಸರ್ವಮಾನ್ಯವೇನೊ ಸರಿಯೇ, ಆದರೆ ಅದೂ ಅನುಮಾನಾಶ್ರಿತವಾಗಿದೆ.

ಪ್ರತ್ಯಕ್ಷ ಜ್ಞಾನಕ್ಕೆ ಕಾರಣಗಳಾದ ಕಣ್ಣುಗಳೇ ಯಾರಿಗೂ ಪ್ರತ್ಯಕ್ಷವಾಗುವದಿಲ್ಲ. ಕಣ್ಣು ತನಗಿಂತ ಭಿನ್ನವಾದ ವಸ್ತುಗಳನ್ನು ನೋಡುವದಲ್ಲದೇ ತನ್ನನ್ನೇ ತಾನು ನೋಡಲರಿಯದು. ವಸ್ತುಗಳು ಪ್ರತ್ಯಕ್ಷವಾಗುವದರಿಂದ ಕಣ್ಣಿನ ಅಸ್ತಿತ್ವದ ಅನುಮಾನವಾಗುತ್ತದೆ; ಆದುದರಿಂದ ಪ್ರತ್ಯಕ್ಷಪ್ರಮಾಣ ಒಂದನ್ನೇ ಅಂಗೀಕರಿಸುವ ಚಾರ್ವಾಕರಾದರೂ, ಅನಿವಾರ್ಯವಾಗಿ ಅನುಮಾನವನ್ನು ಸ್ವೀಕರಿಸಬೇಕಾಗುವುದು.

ಪ್ರಮಾಣ ವಿಚಾರದಂತೆಯೇ ಇವರ ತತ್ತ್ವ ವಿಚಾರವೂ ಸಂತೋಷಪ್ರದವಾಗಿಲ್ಲ. ಚಾರ್ವಾಕರು ವಿಶ್ವದ ಉತ್ಪತ್ತಿಯ ವಿಷಯವಾಗಿ ವಿಶ್ಲೇಷಿಸುವಲ್ಲಿ ಸೋತಿದ್ದಾರೆ. ಒಂದುವೇಳೆ ವಿಶ್ವದ ನಿರ್ಮಾಣವು ಭೂತಗಳಿಂದಲೇ ಆಗಿದ್ದರೆ ಭೂತಗಳಿಗೆ ಗತಿಶೀಲತೆ ಹೇಗೆ ದೊರೆಯಿತು? ಗತಿಹೀನ ಮಹಾಭೂತಗಳಿಂದ ಉತ್ಪತ್ತಿ ಹೇಗೆ ತಾನೆ ಸಾಧ್ಯ?

---

೧೦. ತತ್ಸಮುದಾಯ ಶರೀರೇಂದ್ರಿಯ ವಿಷಯ ಸಂಜ್ಞಾ, ಬೃಹಸ್ಪತಿಸೂತ್ರ.

೧೧. ತೇಭ್ಯಶ್ಚೈತನ್ಯಮ್, ಬೃಹಸ್ಪತಿಸೂತ್ರ.

೧೨. ಕಿಣ್ವಾದಿಭ್ಯೊ ಮದಶಕ್ತಿವತ್ ಚೈತನ್ಯಮುಪಜಾಯತೇ, ಬೃಹಸ್ಪತಿಸೂತ್ರ.

ಇಂಥ ಪ್ರಶ್ನೆಗಳು ಅನಿರ್ಧಾರವಾಗಿಯೇ ಉಳಿಯುತ್ತವೆ. ಚಾರ್ವಾಕರ ಎಲೆ, ಅಡಿಕೆ - ಈ ಉದಾಹರಣೆಯೂ ಉಚಿತವಾದುದಲ್ಲ. ಏಕೆಂದರೆ ಈ ಎಲ್ಲ ವಸ್ತುಗಳನ್ನು ಕೂಡಿಸಿ ಜಗಿದು ತಿನ್ನುವ ಒಂದು ಚೈತನ್ಯತತ್ತ್ವವೂ ಇರಬೇಕಾಗುತ್ತದೆ. ಈ ವಸ್ತುಗಳು ತಮ್ಮಿಂದತಾವೇ ಕೂಡಲಾರವು. ಆದುದರಿಂದ ಸೃಷ್ಟಿಗೋಸ್ಕರ ಒಬ್ಬ ಚೈತನ್ಯಯುಕ್ತ ಸೃಷ್ಟಿಕರ್ತನು ಬೇಕಾಗುತ್ತಾನೆ.

ನಿತ್ಯಾತ್ಮನನ್ನು ನಿಷೇಧಿಸಿ, ಚೈತನ್ಯೋತ್ಪತ್ತಿಗೆ ಮಹಾಭೂತಗಳನ್ನು ನಂಬುವ ವಿಚಾರವೂ ಸರಿಯಾದುದಲ್ಲ. ಏಕೆಂದರೆ ಯಾವುದೇ ಸ್ಥಾನದಲ್ಲಿ ಮಹಾಭೂತಗಳಿಂದಾಗುವ ಚೈತನ್ಯೋತ್ಪತ್ತಿಯು ಕಾಣುವದಿಲ್ಲ. ಸ್ವಭಾವವಾದಿಯ'ಚೈತನ್ಯವಿಶಿಷ್ಟ ದೇಹವೇ ಆತ್ಮ'ವೆಂಬ ವಿಚಾರವೂ ಅಷ್ಟು ಸಮರ್ಪಕವಾದದ್ದಲ್ಲ. ಏಕೆಂದರೆ ಚೇತನವು ಶರೀರದಲ್ಲಿದೆ ನಿಜ, ಆದರೆ ಅದು ಶರೀರದ ಗುಣವಾಗಿರದೆ ಆತ್ಮದ ಸ್ವರೂಪವಾಗಿದೆ. ನೀರು ಬಿಸಿಯಾಗಬಲ್ಲದು ಹಾಗಾಗುವದಕ್ಕೆ ಕಾರಣ, ಬೆಂಕಿ ; ನೀರಲ್ಲ. ಬಿಸಿಗೊಳಿಸುವ ಗುಣ ಬೆಂಕಿಯಲ್ಲಿದೆ ನೀರಿನಲ್ಲಿಲ್ಲ. ಅದೇ ರೀತಿ ಚೈತನ್ಯವು ಶರೀರದಗುಣವಲ್ಲ; ಆತ್ಮದ ಸ್ವರೂಪ.

ಒಂದುವೇಳೆ ಚೈತನ್ಯವನ್ನು ಶರೀರದ ಗುಣವೆಂದು ಒಪ್ಪಿದರೆ, ಅದು ಸುಷುಪ್ತಿ, ಮೂರ್ಛೆ ಮುಂತಾದ ಅವಸ್ಥೆಗಳಲ್ಲಿಯೂ ಇರಬೇಕಾಗುತ್ತದೆ. ಚೇತನವನ್ನು ಶರೀರದ ಗುಣವೆಂದು ವಾದಿಸಿದರೆ, ಅದು ಪರಿವರ್ತನಶೀಲವಾಗಿದೆ. ಅದು ಪರಿವರ್ತನಶೀಲವಾಗಿಯೇ ಇರಲಿ ಎಂದರೆ, ಸ್ಮೃತಿಗೆ ಅರ್ಥವೇ ಇಲ್ಲದಂತಾಗುತ್ತದೆ. ಏಕೆಂದರೆ ಶರೀರದ ಪರಿವರ್ತನೆಯೊಂದಿಗೆ ಬಾಲ್ಯಕಾಲದ ಸ್ಮೃತಿಗಳು ಯೌವನಾವಸ್ಥೆಯಲ್ಲಿ ಪರಿವರ್ತನಗೊಳ್ಳಬೇಕು. ಆದರೆ ಹಾಗಾಗುವದಿಲ್ಲವಾದ್ದರಿಂದ ಚೇತನವನ್ನು ಶರೀರದ ಗುಣ ಎನ್ನುವದಕ್ಕಿಂತ ಆತ್ಮದ ಗುಣವೆಂದು ಅಂಗೀಕರಿಸಬೇಕಾಗುತ್ತದೆ. ಆತ್ಮ ಯಾವಾಗಲೂ ಒಂದೇ ಆಗಿದ್ದು ನಿತ್ಯ ಎಂದು ನಿರ್ಧರಿಸಲಾಗಿದೆ.

ಶರೀರವು ಒಂದುವೇಳೆ ಚೈತನ್ಯಕ್ಕೆ ಕಾರಣವೆಂದರೆ ಅವುಗಳೆರಡರಲ್ಲಿಯೂ ಸಾಹಚರ್ಯವಿರಬೇಕಾಗುತ್ತದೆ. ಆದರೆ, ಮರಣ ಮುಂತಾದವುಗಳಲ್ಲಿ ಶರೀರವಿರುತ್ತಿದ್ದರೂ ಅಲ್ಲಿ ಚೈತನ್ಯದ ಅಭಾವವಿರುತ್ತದೆ. ವಸ್ತುತಃ ಆತ್ಮದ ಅಸ್ತಿತ್ವದ ನಿಷೇಧದಲ್ಲಿಯೇ ಆದರ ಸ್ವೀಕೃತಿಯು ನಿಹಿತವಾಗಿದೆ. ವಸ್ತುವನ್ನು ಯಾವ ರೀತಿಯಿಂದ ನಿಷೇಧಿಸಿದರೂ ಅದರ ಅಸ್ತಿತ್ವವು ಒಂದಿಲ್ಲ ಒಂದು ರೀತಿಯಲ್ಲಿ ಇದ್ದೇ ತೀರುತ್ತದೆ.[೧೩] ಆದುದರಿಂದ "ನನ್ನ ಆತ್ಮಅಸ್ತಿತ್ವದಲ್ಲಿಲ್ಲ" ಎನ್ನುವಲ್ಲಿ ಸ್ವಯಂ ವಿರೋಧಾಭಾಸವುಂಟಾಗುತ್ತದೆ.

ಚಾರ್ವಾಕರ ಪ್ರಕಾರ ಈಶ್ವರ ಪ್ರತ್ಯಕ್ಷವಾಗಲಾರ ಏಕೆಂದರೆ ಅವನಿಗೆ ಯಾವುದೇ ರೂಪ ಅಥವಾ ಆಕಾರವಿಲ್ಲ. ಈಶ್ವರ ಆಕಾರವಿಹೀನನಾದಕಾರಣ ಪ್ರತ್ಯಕ್ಷಕ್ಕೆ ಅತೀತನಾಗುತ್ತಾನೆ. ಏಕೆಂದರೆ ಪ್ರತ್ಯಕ್ಷವೇ ಜ್ಞಾನದ ಏಕಮಾತ್ರ ಪ್ರಮಾಣವಾಗಿದೆ. ಈಶ್ವರನ ಅಸ್ತಿತ್ವವೇ ಅಸಿದ್ಧವಾದುದರಿಂದ ಅವನ ಸ್ವರೂಪವಿಷಯದಲ್ಲಿ ಯಾವುದೇ ರೀತಿಯ ಕಲ್ಪನೆಯನ್ನು ಮಾಡುವಂತಿಲ್ಲ. ಅವನನ್ನು ರೂಪಿ ಹಾಗೂ ಅರೂಪಿಯೆಂದೂ ಒಪ್ಪುವಂತಿಲ್ಲ. ಒಂದುವೇಳೆ ರೂಪಿಯೆಂದರೆ, ಸಂಸಾರದ ವಸ್ತುಗಳಂತೆ ಅವನು ಅನಿತ್ಯವಾಗಬೇಕಾಗುತ್ತದೆ. ಹಾಗೆಯೇ ಅರೂಪಿಯೆಂದರೆ. 'ಆಕಾಶ'ದಂತೆ ಅಚಿತ್‌ನಾಗಬೇಕಾಗುತ್ತದೆ.[೧೪] ಹೀಗಾಗಿ ಈಶ್ವರಾಸ್ತಿತ್ವವನ್ನು ಅವರು ಒಪ್ಪಲಾರರು. ಈಶ್ವರತತ್ತ್ವವು ಉಪಾದಾನ ಮತ್ತು ನಿಮಿತ್ತ ಕಾರಣವಾದುದರಿಂದ, ಅಲ್ಲಿ ಅದು ಕೇವಲ ಮಹಾಭೂತಗಳ ಸತ್ತಾ ಮಾತ್ರವಾಗಬಹುದು. ಆದುದರಿಂದ

---

೧೩. ಯನ್ನಿಷೇಧತೇ ತತ್ ಸಾಮಾನ್ಯೇನ ವಿದ್ಯತೇ ಏವ (೧೯೮೧) ಷಡ್ದರ್ಶನ ಸಮುಚ್ಚಯ, ಪು. ೪೮-೪೯.

೧೪. Shivajnanasiddiyar (1973) V.12, Gurvokas statement.

ವಿಶ್ವಸೃಷ್ಟಿಯ ಕರ್ತೃವಿನ ರೂಪದಲ್ಲಿ ಈಶ್ವರನ ಯಾವುದೇ ಅಸ್ತಿತ್ವದ ಅವಶ್ಯಕತೆಯಿಲ್ಲ. ಚಾರ್ವಾಕರು ವಿಶ್ವದಲ್ಲಿಯೂ ಯಾವುದೇ ಪ್ರಯೋಜನವನ್ನು ಒಪ್ಪದ್ದರಿಂದ ವಿಶ್ವದ ನಿಯಮಗಳ ಅಥವಾ ವ್ಯವಸ್ಥಾಪಕರೂಪ ಅಸ್ತಿತ್ವವು ಅವರ ದಾರ್ಶನಿಕ ಕಕ್ಷೆಯಲ್ಲಿ ಬರದು. ಆದರೆ ವಿಶ್ವದಸ್ವಭಾವವನ್ನು ಪರಿಲಕ್ಷಿಸಿದಾಗ ಅದರಲ್ಲಿ ವ್ಯವಸ್ಥೆ ಪರಿಲಕ್ಷಿತವಾಗಿದೆ. ಈ ಕುರಿತು ಮಾಯಿದೇವ ದ್ವಿತೀಯಾಧಿಕರಣದ ೮ನೇ ಶ್ಲೋಕದಲ್ಲಿ ಹೀಗೆ ಹೇಳಿದ್ದಾನೆ.

ಸರ್ವೇಷಾಂ ಸ್ಥಾನಭೂತತ್ವಾಲ್ಲಯಭೂತತ್ವತಸ್ತತಃ।
ತತ್ವಾನಾಂ ಮಹದಾದೀನಾಂ ಸ್ಥಲಮಿತ್ಯಭಿಧೀಯತೇ॥

'ಈಶ್ವರ ಪ್ರತ್ಯಕ್ಷವಾಗಲಾರ ಆದುದರಿಂದ ಅವನಿಲ್ಲ' ಎಂಬ ಚಾರ್ವಾಕರ ಈ ಅನುಮಾನ ಯುಕ್ತಿಯುಕ್ತವಲ್ಲ ಏಕೆಂದರೆ, ನಮ್ಮ, ದೃಷ್ಟಿ ಭೌತಿಕ ವಸ್ತುಗಳಿಗಷ್ಟೇ ಸೀಮಿತವಾಗಿದೆ. ಅದಕ್ಕಿಂತ ಅತೀತವಾದದ್ದನ್ನು ಅದರಿಂದ ನಿರೀಕ್ಷಿಸಲಾಗದು. ನಮ್ಮ ನಿರೀಕ್ಷಣೆಗೆ ನಿಲುಕಲಾರದ್ದನ್ನು ಸಹಜವಾಗಿ ಅಲ್ಲಗಳೆಯಲು ಬರದು ಏಕೆಂದರೆ 'ಇಲ್ಲ'ವೆಂಬುದು ಒಂದು ಕೇವಲವಾದ, ತಾನೇ ತಾನಾದ ಕಲ್ಪನೆ ಅಲ್ಲ ಅದು 'ಇದೆ' ಎಂಬುದನ್ನು ಅಲ್ಲಗಳೆಯುತ್ತದೆ.ಈ 'ಇದೆ' ಎಂಬುವುದು ಕಲ್ಲು, ಮರ, ಮೇಜು, ಖುರ್ಚಿಯಂತೆ ನಮ್ಮ ಪಂಚೇಂದ್ರಿಯಗಳಿಗೆ ಗ್ರಾಹ್ಯವಾಗಿರಬಹುದು, ಅಂದರೆ ವಾಸ್ತವ ಸತ್ಯವಾಗಿರಬಹುದು ಅಥವಾ ಅಂಥದೊಂದು ಇರುವುದೆಂಬ ತಿಳುವಳಿಕೆಯೋ ಅನಿಸಿಕೆಯೋ ಆಗಿರಬಹುದು. ಇಂಥ ಅರಿವು ಅನಿಸಿಕೆ ಮೊದಲು ಇದ್ದ ಹೊರತು ಅದನ್ನು ಇಲ್ಲವೆಂದು ಸಾರುವುದು ಶಕ್ಯವಲ್ಲ"[೧೫] ಆದ್ದರಿಂದ ಈಶ್ವರ ನಿಷೇಧ ಈಶ್ವರ ಅಸ್ತಿತ್ವವನ್ನೇ ಪುನಃ ಸ್ಥಿರೀಕರಿಸುತ್ತದೆ. ಭಾರತೀಯ ದರ್ಶನಗಳಲ್ಲಿ ಪ್ರಮುಖ ಸ್ಥಾನವನ್ನು ಪಡೆದಿರುವ ಆತ್ಮವನ್ನು ನಿರಾಕರಿಸಿದ್ದರಿಂದ ಈ ಸಿದ್ಧಾಂತವು ಸಹಜವಾಗಿಯೇ ಅತ್ಯಂತ ತೀವ್ರವಾದ ವಿವಾದವನ್ನು ಪ್ರಚೋದಿಸಿತು. ಆದರೆ ತತ್ವಶಃ ಚಾರ್ವಾಕರ ನಿಲುವನ್ನು ಖಂಡಿಸುವುದು ಅಸಾಧ್ಯ ಎಂಬುದನ್ನು ಒಪ್ಪಿಕೊಳ್ಳಲೇಬೇಕು. ಅಂಗೀಕೃತವಾಗಿರುವ ಅರ್ಥದಲ್ಲಿ ಆತ್ಮವು ಇದೆ ಎಂಬುದನ್ನು ಪ್ರದರ್ಶಿಸಿ ತೋರಿಸುವುದು ಅಸಾಧ್ಯ. ಈ ಮಾತನ್ನು ವಾಸ್ತವವಾಗಿ ಕೆಲವು ಸಾಂಪ್ರದಾಯಿಕರು ಒಪ್ಪಿಕೊಂಡಿದ್ದಾರೆ.[೧೬]

ಸ್ಥಲ-ಪರನಿರ್ವಾಣ:

ಆಸ್ತಿಕ-ನಾಸ್ತಿಕವೆಂಬುದರ ಬಗೆಗೆ ವಾದವಿವಾದಗಳೇನೇ ಇದ್ದರು ಮಾಯಿದೇವನಿಗೆ ಅದು ಗೌಣವಾಗಿ ಕಂಡಂತಿದೆ. ಏಕೆಂದರೆ ಶಿವಾನುಭವಸೂತ್ರದ ದ್ವಿತೀಯಾಧಿಕರಣದಲ್ಲಿ ವಿವೇಚಿಸಲಾದ ಸ್ಥಲತತ್ವದಲ್ಲಿ ಬೌದ್ಧದರ್ಶನದ ಪರ ನಿರ್ವಾಣಕ್ಕೂ ಮಹತ್ತ್ವದಸ್ಥಾನವಿದೆ. ಆ ದರ್ಶನದಲ್ಲಿ ಅಂತಿಮಸತ್ಯವೆಂದು ಪರಿಗಣಿತವಾದ ಪರನಿರ್ವಾಣವನ್ನು 'ಸ್ಥಲ' ಎಂಬುದಕ್ಕೆ ಅನ್ವಯಿಸಿಕೊಂಡು, ಅದಕ್ಕೆ ಹೆಚ್ಚಿನ ಮಹತ್ತ್ವ ಮತ್ತು ಅರ್ಥ ಕಲ್ಪಿಸಲು ಪ್ರಯತ್ನಿಸಿದಂತಿದೆ. ಅದು ಇಂತಿದೆ:

ಪರನಿರ್ವಾಣ ನಿಷ್ಠಾನಾಂ ಯದ್ಧ್ವವೇತ್ಪರಮಂ ಪದಂ।
ತದಾಹುಃ ಸ್ಥಲಮದ್ವೈತಂ ಶಿವಜ್ಞಾನೈಕ ತತ್ಪರಾಃ॥[೧೭]

---

೧೫. ಗೌರೀಶ ಕಾಯ್ಕಿಣಿ (೧೯೮೯) ನಾಸ್ತಿಕನು ಮತ್ತು ದೇವರು, ಪು. ೨.

೧೬. ಎಂ. ಹಿರಿಯಣ್ಣ (೧೯೬೩) ಭಾರತೀಯ ತತ್ವಶಾಸ್ತ್ರದ ರೂಪುರೇಖೆಗಳು (ಅನು) ಡಾ. ಪ್ರಭುಶಂಕರ, ಪು. ೨೦೬.

೧೭. ಶಿವಾನುಭವಸೂತ್ರ, ಅಧಿಕರಣ ೧, ಶ್ಲೋಕ ೯.

"ಸಂಸಾರದ ಉಪಶಮ ಎಂದರೆ ಪರನಿರ್ವಾಣದಲ್ಲಿ ನಿಷ್ಠೆಯುಳ್ಳವರಿಗೆ ಅಂತಿಮ ಸ್ಥಾನವು ಯಾವುದೋ ಆ ದ್ವೈತರಹಿತವಾದ ವಸ್ತುವನ್ನೇ ಶಿವಾನುಭಾವಿಗಳು 'ಸ್ಥಲ'ವೆಂದು ಹೇಳುತ್ತಾರೆ" ಎಂಬುದಾಗಿ ಮಾಯಿದೇವ ಅಭಿಪ್ರಾಯಪಟ್ಟಿದ್ದಾನೆ.

ಬೌದ್ಧದರ್ಶನ:

ಬುದ್ಧನು ಚಾರ್ವಾಕರಂತೆ ಆತ್ಮ, ಈಶ್ವರ, ಹಾಗೂ ಜಗತ್ತಿನ ನಿತ್ಯತ್ವವನ್ನು ಖಂಡಿಸಿದ್ದಾನೆ. ಆದರೆ ಈ ಕ್ಲೇಶಯುಕ್ತ ಸಂಸಾರದ ಜಂಜಾಟದಿಂದ ಬಿಡುಗಡೆ ಹೊಂದಿ ನಿರ್ವಾಣ ಅವಸ್ಥೆಯ ಅನುಭವವನ್ನು ಸತ್ಯವೆಂದು ನಂಬಿದ್ದರಿಂದ ಅವನ ವಿಚಾರಗಳಲ್ಲಿ ನೈತಿಕತೆಯ ಸಮಾವೇಶವನ್ನು ಕಾಣಬಹುದಾಗಿದೆ.

ಬೌದ್ಧಸಿದ್ಧಾಂತವನ್ನು ಅನಾತ್ಮವಾದದ ಸಿದ್ಧಾಂತ ಎಂದು ಕರೆಯಲಾಗಿದೆ. ಜೀವಿಯ ಅಸ್ತಿತ್ವವನ್ನು ವಿವರಿಸಲು ಆತ್ಮ ಎನ್ನುವ ಮಾತನ್ನು ಬೌದ್ಧ ಧರ್ಮದಲ್ಲಿಯೂ ಬಳಸಲಾಗಿದೆಯಾದರೂ, ಆ ಮಾತಿನ ಅರ್ಥ ಸ್ವಲ್ಪ ವಿಶಿಷ್ಟವಾಗಿದೆ. ಈ ಸಿದ್ಧಾಂತದಲ್ಲಿ ಮಹತ್ವ ಪಡೆದ, ಕ್ಷಣಿಕವಾದದ ಪಾರಮ್ಯದಿಂದಾಗಿ, ಬೌದ್ಧ ಧರ್ಮದಲ್ಲಿ ಬರುವ ಆತ್ಮದ ಕಲ್ಪನೆ ವೀರಶೈವ ಧರ್ಮದಲ್ಲಿ ಬರುವ ಆತ್ಮದ ಕಲ್ಪನೆಯಂತೆ ನಿತ್ಯ, ಶಾಶ್ವತ, ಅನಂತ ಎಂದೆನಿಸುವದಿಲ್ಲ. ಬೌದ್ಧಧರ್ಮದಪ್ರಕಾರ ಆತ್ಮ ಎನ್ನುವುದು ರೂಪ, ವೇದನ, ಸಂಜ್ಞ, ಸಂಸ್ಕಾರ ಮತ್ತು ವಿಜ್ಞಾನ ಎಂಬ ಪಂಚಸ್ಕಂದಗಳ ಒಂದು ಸಂಘಾತ. ಉಪನಿಷತ್ತಿನಲ್ಲಿ ಜೀವಿಯ ಸ್ವರೂಪವನ್ನು ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ ಎಂಬ ಪಂಚಕೋಶಗಳಾಗಿ ವಿಶ್ಲೇಷಿಸಿ, ಪಂಚಕೋಶ ಯುಕ್ತವಾದ ಈ ಪುರದಲ್ಲಿ ವಾಸಿಸುವವನನ್ನು ಪುರುಷ ಅಥವಾ ಆತ್ಮ ಎಂದು ಹೆಸರಿಸಲಾಗಿದೆ. ಈ ಆತ್ಮನನ್ನು ನಿತ್ಯನೂ ಅನಂತನೂ ಶಾಶ್ವತನೂ ಎಂದು ಕರೆದು, ಅವನನ್ನು ಸಚ್ಚಿದಾನಂದ ಸ್ವರೂಪಿ ಎಂಬುದಾಗಿ ಉಪನಿಷತ್ತುಗಳು ಗ್ರಹಿಸಿದವು. ಆದರೆ ಭೌದ್ಧ ಸಿದ್ಧಾಂತವು, ನಿತ್ಯನೆನಿಸಿದ ಈ ಆತ್ಮನನ್ನು ಮತ್ತೆ ವಿಶ್ಲೇಷಿಸಿ, ಆತ್ಮ ಎನ್ನುವುದು ಪಂಚಸ್ಕಂದಯುಕ್ತವಾದ ಒಂದು ಸಂಘಾತ ಎಂಬ ನಿರ್ಣಯಕ್ಕೆ ಬಂದಿತು.

ಇತ್ತೀಚಿನ ದಿನಗಳಲ್ಲಿ ಭೌದ್ಧ ಧರ್ಮವನ್ನು ಚೆನ್ನಾಗಿ ಅಧ್ಯಯನ ಮಾಡಿದ ಪಾಶ್ಚಿಮಾತ್ಯ ಮತ್ತು ಪೌರಾತ್ಯ ಪಂಡಿತರಲ್ಲಿ ಪ್ರಮುಖರೆನಿಸಿದ ರಾಯಸ್ ಡೇವಿಡ್ ಅನಿಬೆಸಂಟ್, ಕೊಸಾಂಬಿ, ಡಾ|| ರಾಧಾಕೃಷ್ಣನ್, ಪ್ರೊ|| ಹಿರಿಯಣ್ಣ ಮೊದಲಾದವರು ಬೌದ್ಧಸಿದ್ಧಾಂತವನ್ನು ಅನಾತ್ಮ ತತ್ವ ಎಂದು ಒಪ್ಪಲು ಸಿದ್ಧರಿಲ್ಲ.[೧೮] ಬುದ್ಧನು ತನ್ನ ಜಾತಕ ಕಥೆಗಳಲ್ಲಿ ಹೇಳುವಂತೆ, ಅವನಿಗೆ ಬೋಧಿಜ್ಞಾನ ಲಭಿಸುವ ಮುನ್ನ, ಅವನಿಗೆ ತನ್ನ ಪೂರ್ವಜನ್ಮದ ಸ್ಮರಣೆಯು ಸಾಧ್ಯವಾಯಿತಂತೆ. ಬುದ್ಧನಿಗೆ ದೊರೆತ ಈ ಜನ್ಮಾಂತರದ ಸ್ಮರಣೆ ನಿಜವೆನಿಸುವುದಾದರೆ, ಈ ಎಲ್ಲ ಭವಾಂತರಗಳನ್ನು ದಾಟಬಂದ ಆತ್ಮತತ್ವ ಎಂಬುದು ಇರಲೇಬೇಕೆಂದಾಗುತ್ತದೆ. ಅಷ್ಟೇ ಅಲ್ಲದೆ, ಅರ್ಹಂತನಾದವನು, ಬೋಧಿಸತ್ವನೆನಿಸಲು ಮತ್ತಷ್ಟು ಜನ್ಮಾಂತರಗಳನ್ನು ಪಡೆಯಬೇಕೆಂದು ಬುದ್ಧನೂ ನಂಬುತ್ತಾನೆ. ಆದ್ದರಿಂದ ಬೌದ್ಧ ಸಿದ್ಧಾಂತವನ್ನು ಅನಾತ್ಮಸಿದ್ಧಾಂತ ಎಂದು ನಂಬುವುದು ಸಲ್ಲದು, ಎಂಬುದು ಈ ಪಂಡಿತರ ಮತ. ಜೊತೆಗೆ, ಬೌದ್ಧ ಸಿದ್ಧಾಂತದಲ್ಲಿ ಬರುವ ಹೀನಯಾನ ಮತ್ತು ಮಹಾಯಾನ ಎಂಬ ಎರಡು ಶಾಖೆಗಳಲ್ಲಿ, ಈ ವಿಚಾರದಲ್ಲಿ ಮತಭೇದವಿದೆ. ಹೀನಯಾನ ಪಂಥವು ಅನಾತ್ಮ ವಾದವನ್ನು

---

೧೮. C.D. Sharma (1973) A Critical Survey of Indian Philosophy, p. 49. Motilal Banarasidass.

ಅಕ್ಷರಶಃ ನಂಬುವುದಾದರೆ, ಮಹಾಯಾನ ಪಂಥವು ಆತ್ಮತತ್ವದ ನಿತ್ಯತೆಯನ್ನು ನಂಬುತ್ತದೆ. ಜೊತೆಗೆ ಈ ಎರಡು ಶಾಖೆಗಳೂ ಆತ್ಮನ ಜನ್ಮಾಂತರವನ್ನು ವಿವರಿಸಲು ಕರ್ಮ ಸಿದ್ಧಾಂತವನ್ನು ಒಪ್ಪುತ್ತವೆ.

ನಿರೀಶ್ವರವಾದ:

ಬೌದ್ಧ ಧರ್ಮದ ಕ್ಷಣಿಕವಾದದಿಂದಾಗಿ, ಆ ಧರ್ಮವು ನಿರೀಶ್ವರವಾದವಾಗಿ ಪರಿಣಾಮಗೊಳ್ಳುವುದು, ಅನಿವಾರ್ಯವಾಯಿತು. ಅನಾತ್ಮವಾದವನ್ನು ಕುರಿತಂತೆ ವಿಚಾರಭೇದವಿರುವ ಹಾಗೆ, ನಿರೀಶ್ವರವಾದದ ವಿಚಾರದಲ್ಲಿಯೂ ಪಂಡಿತರಲ್ಲಿ ವಿಚಾರಭೇದ ಕಂಡುಬಂದಿದೆ. ಬುದ್ಧನ ಕಾಲಕ್ಕೆ ಮೊದಲು ವೈದಿಕ ಧರ್ಮದಲ್ಲಿ ಕಂಡ ಅನೇಕದೇವತಾರಾಧನೆ ಮತ್ತು ಯಜ್ಞಯಾಗಾದಿ ಹಿಂಸಾಚಾರಗಳನ್ನು ಕಂಡು ಬೇಸತ್ತು ಬುದ್ಧನು, ಅನೇಕ ದೇವತಾವಾದವನ್ನು ಖಂಡಿಸಿದನೇ ಹೊರತು, ನಿರಾಕಾರನೂ ನಿರ್ಗುಣನೂ ಆದ ಆ ಪರತತ್ವದ ಅಸ್ತಿತ್ವವನ್ನು ಅಲ್ಲ, ಎಂಬುದು ಆಸ್ತಿಕವಾದಿಗಳ ಮತ. ಬುದ್ಧನ ಬೋಧನೆಗಳನ್ನು ಅವನ ಕಾಲದಲ್ಲಿ ಬರೆದಿಡಲಿಲ್ಲವಾಗಿ, ಮುಂದೆ ತ್ರಿಪಿಟಕಗಳು ರಚನೆಗೊಳ್ಳುವ ವೇಳೆಗೆ, ಬುದ್ಧನ ಮೂಲ ತತ್ವಗಳು ಪ್ರಕ್ಷಿಪ್ತಗೊಂಡು, ಇಂತಹ ತಪ್ಪುಕಲ್ಪನೆಗೆ ಕಾರಣವಾಗಿರಬೇಕೆಂದು, ಈ ಆಸ್ತಿಕರು ನಂಬುತ್ತಾರೆ. ದೇವರ ಔಚಿತ್ಯವನ್ನು ಬೌದ್ಧಧರ್ಮವು ಮನಗಂಡಿದ್ದರಿಂದಲೇ, ಮುಂದೆ ಈ ಧರ್ಮೀಯರು, ಭಗವಾನ್ ಬುದ್ಧನನ್ನೇ ದೇವರೆಂದು ಪೂಜಿಸಿದರು ಎಂದು ಇವರು ತಿಳಿಯುತ್ತಾರೆ. ಬುದ್ಧನನ್ನು ಆರಾಧಿಸುವ ಈ ಆಚರಣೆ ಮತ್ತಷ್ಟು ತೀವ್ರಗೊಂಡು ಮುಂದೆ ಅವನನ್ನು ವಿಷ್ಣುವಿನ ಅವತಾರ ಎಂದುತಿಳಿಯಲಾಯಿತು. ಈ ಬಗೆಗೆ ಡಾ|| ರಾಧಾಕೃಷ್ಣನ್[೧೯] ಹೀಗೆ ಹೇಳುತ್ತಾರೆ - "ಬುದ್ಧನನ್ನು ವಿಷ್ಣುವಿನ ಅವತಾರ ಎಂದು, ಹಿಂದೂ ಧರ್ಮವೂ ಸಹ ಒಪ್ಪಿದ್ದರಿಂದ ಬೌದ್ಧಧರ್ಮದ ನಾಸ್ತಿಕ ವಾದದ ಬುನಾದಿ ಸಡಿಲಗೊಂಡು, ಅದರ ವಿನಾಶದ ಗಂಟೆ ಬಾರಿಸಿದಂತಾಯಿತು." ಹೀಗಾಗಿ ಬೌದ್ಧಧರ್ಮವನ್ನು ಆಸ್ತಿಕಧರ್ಮವೆಂದು ವ್ಯಾಖ್ಯಾನಿಸುವ ಪ್ರಯತ್ನ, ಬೌದ್ಧೇತರ ಪಂಡಿತರ ಜೊತೆಗೆ, ಬೌದ್ಧ ಧರ್ಮೀಯರಿಂದಲೂ ನಡೆಯಿತು.

ಶೂನ್ಯತತ್ವದ ಕಲ್ಪನೆ:

ಬೌದ್ಧ ಸಿದ್ಧಾಂತದಲ್ಲಿ ದೊರೆಯುವಸಿದ್ಧಿಯನ್ನು ನಿರ್ವಾಣ ಅಥವಾ ಶೂನ್ಯಸ್ಥಿತಿ ಎಂದು ಕರೆಯಲಾಗಿದೆ. ನಿರ್ವಾಣವೆಂದರೆ ಊದಿಬಿಡುವುದು (To blow out) ಎಂದರ್ಥ. ಪಂಚ ಸ್ಕಂದಗಳ ಸಂಘಾತದಿಂದಾದ ಆತ್ಮನು, ಆಸೆಯ ಬೆನ್ನುಹತ್ತಿದಕಾರಣ, ಕರ್ಮದ ಬಂಧನಕ್ಕೆ ಸಿಲುಕಿ, ಜನ್ಮಾಂತರದ ಸುಳಿಯಲ್ಲಿ ತೊಳಲುತ್ತಿದ್ದಾನೆ. ಆಶೆಯನ್ನು ನೀಗಿದ ಆತ್ಮನು, ಕರ್ಮದಿಂದ ಮುಕ್ತನಾಗಿ ತನ್ನ ಅಸ್ತಿತ್ವವೇ ಇಲ್ಲದಷ್ಟು ಶೂನ್ಯನಾಗಿ ಬಿಡುತ್ತಾನೆ. ಇದು ಬೌದ್ಧರ ನಿರ್ವಾಣ ಸ್ಥಿತಿ ಈ ನಿರ್ವಾಣಸ್ಥಿತಿಯನ್ನು ಕುರಿತು ಬೌದ್ಧಧರ್ಮದಲ್ಲಿ ಸ್ಪಷ್ಟವಾದ ವಿವರಣೆ ಇಲ್ಲದ ಕಾರಣ, ನಿರ್ವಾಣ ಎಂಬುದು ಭಾವಾತ್ಮಕ ಸ್ಥಿತಿಯೇ ಅಥವಾ ಅಭಾವಾತ್ಮಕ ಸ್ಥಿತಿಯೇ ಎಂಬ ಜಿಜ್ಞಾಸೆ ಇಂದಿಗೂ ನಡೆದು ಬರುತ್ತಿದೆ.[೨೦]

ಶೂನ್ಯ ಎನ್ನುವ ಮಾತು ವೀರಶೈವ ವಚನ ವಾಙ್ಮಯದಲ್ಲಿ ಅದರಲ್ಲಿಯೂ ಹೆಚ್ಚಾಗಿ ಅಲ್ಲಮ ಪ್ರಭುವಿನ ವಚನಗಳಲ್ಲಿ ನಮಗೆ ಕಾಣುತ್ತದೆ. ಅನುಭವಮಂಟಪದಲ್ಲಿ ನಡೆಯಿತೆಂಬ ಧಾರ್ಮಿಕಸಂವಾದವನ್ನು ಶಿವಗಣಪ್ರಸಾದಿ ಮಹಾದೇವಯ್ಯಗಳು ಮೊದಲಾದ ಸಂಪಾದನಕಾರರು 'ಶೂನ್ಯಸಂಪಾದನೆ' ಎಂಬ ಶೀರ್ಷಿಕೆಯಲ್ಲಿ ಸಂಪಾದಿಸಿಟ್ಟಿದ್ದಾರೆ.

---

೧೯. Dr. S. Radhakrishnan (4th Reprint 1988) Indian Philosophy, p. 31.

೨೦. ಡಾ. ತಾಳ್ತಜೆ ವಸಂತಕುಮಾರ (೧೯೮೮) ಕರ್ನಾಟಕದಲ್ಲಿ ಬೌದ್ಧ ಸಂಸ್ಕೃತಿ, ಪು. ೧೮೬.

'ಶೂನ್ಯ' ಎಂಬ ಮಾತು ಶರಣರ ಸಾಧನೆಯ ಗಮ್ಯಸ್ಥಿತಿಯನ್ನು ಸೂಚಿಸುವಂತಿದೆ. ಶರಣಧರ್ಮದಲ್ಲಿ ಕಾಣುವ ಈ ಶೂನ್ಯದ ಕಲ್ಪನೆ ಬೌದ್ಧಧರ್ಮದಲ್ಲಿ ಬರುವ ಶೂನ್ಯದ ಕಲ್ಪನೆಯಿಂದ ಪ್ರಭಾವಿತವಾಗಿದೆ ಎಂದು ತಿಳಿಯುವವರು ಕೆಲವರುಂಟು. ಆದರೆ ಬೌದ್ಧರ ಅಭಾವಾತ್ಮಕ ಶೂನ್ಯಕ್ಕೂ ವೀರಶೈವರ ಭಾವಾತ್ಮಕ ಶೂನ್ಯಕ್ಕೂ ಬಹಳ ಅಂತರವಿದೆ. ಬೌದ್ಧರ ಪ್ರಭಾವ ಶರಣರಮೇಲಾದುದು ನಿಜವಿರಬಹುದಾದರೂ, ಅವರು ಬಳಸಿದ 'ಶೂನ್ಯ' ಎನ್ನುವ ಮಾತು, ಉಪನಿಷತ್ತಿನ 'ಓಂ ಪೂರ್ಣಮದಃ ಪೂರ್ಣಮಿದಂ' ಎನ್ನುವ ಮಂತ್ರಕ್ಕೆ ಸಂವಾದಿಯಾಗಿ ಬರುತ್ತದೆ. ಶರಣರ ಮಾತಿನಲ್ಲಿ 'ಶೂನ್ಯ'ವೆಂದರೆ ಏನೂ ಇಲ್ಲದುದು ಎಂದಲ್ಲ, ಅದು ಎಲ್ಲವನ್ನು ಒಳಗೊಂಡುದು ಮತ್ತು ಇದೆಲ್ಲದರ ಅಸ್ತಿತ್ವಕ್ಕೆ ಕಾರಣವಾದುದು ಎಂಬ ಅರ್ಥವನ್ನು ಪಡೆಯುತ್ತದೆ. ಶರಣರದು ಬೌದ್ಧಧರ್ಮದ ಅನಾತ್ಮವಾದ ವಲ್ಲ; ಆತ್ಮವಾದದ ಪೂರ್ಣಮಾರ್ಗ. ಆ ವಿಶ್ವಾತ್ಮನೇ ಬಹುರೂಪದಿಂದ ಕೂಡಿದ ಈ ಸೃಷ್ಟಿಯಾಗಿ, ಈ ಸೃಷ್ಟಿಯಲ್ಲಿ ಇರುವ ಜೀವರುಗಳಾಗಿ ಪರಿಣಮಿಸಿ ಮತ್ತೆ ಅದಕ್ಕೆ ಅತೀತನಾಗಿ ನಿಲ್ಲುತ್ತಾನೆ. ಈ ಸೃಷ್ಟಿವಿಕಾಸಕ್ರಮದಲ್ಲಿ ಮೊಟ್ಟ ಮೊದಲನೆಯ ಹಂತವನ್ನು "ಶೂನ್ಯಲಿಂಗ"ವೆಂದು ಶರಣರು ಕರೆದು ಅದರ ಸ್ವರೂಪವನ್ನು ಅನೇಕ ರೀತಿಯಲ್ಲಿ ವರ್ಣಿಸಿದ್ದಾರೆ.[೨೧] ಮಾಯಿದೇವನು 'ಸ್ಥಲ' ಎಂಬಲ್ಲಿ ಆ 'ಶೂನ್ಯಲಿಂಗ'ದ ಅರ್ಥವನ್ನೆಲ್ಲ ಅನ್ವಯಿಸಿಕೊಂಡಿದ್ದಾನೆ.

ಬೌದ್ಧ ಸಿದ್ಧಾಂತದಲ್ಲಿ ಪರತತ್ವದ ಅಸ್ತಿತ್ವದ ಕಲ್ಪನೆಗೆ ಅವಕಾಶವೇ ಇಲ್ಲ ಎಂದಮೇಲೆ ಬೌದ್ಧರಲ್ಲಿ ಬರುವ ಶೂನ್ಯದ ಮಾತು, ಯಾವ ಕಾರಣದಿಂದಲೂ ಭಗವಂತನ ಸ್ವರೂಪವನ್ನು ಸೂಚಿಸಲು ಸಾಧ್ಯವಿಲ್ಲ. ಆದುದರಿಂದ ಬೌದ್ಧದರ್ಮದ ಶೂನ್ಯಕ್ಕೂ ವೀರಶೈವಧರ್ಮದಲ್ಲಿ ಕಾಣುವ ಶೂನ್ಯಕ್ಕೂ ಈ ವಿಚಾರದಲ್ಲಿ ಯಾವ ಹೋಲಿಕೆಯೂ ಇಲ್ಲವೆಂದಂತಾಯಿತು. ಆದರೆ ಈ ಎರಡು ಧರ್ಮಗಳೂ ಅತ್ಯಂತ ಮಾನವೀಯ ಧರ್ಮಗಳು ಎಂದೆನಿಸಿದ ಕಾರಣ, ಅವುಗಳ ನಡುವೆ ನೈತಿಕ. ಸಾಮಾಜಿಕ ಮತ್ತು ಭಾವನಾತ್ಮಕ ವಿಚಾರಗಳಲ್ಲಿ ಬಹುಮಟ್ಟಿನ ಸಾಮೀಪ್ಯ ನಮಗೆ ಗೋಚರಿಸುತ್ತದೆ.

ಬೌದ್ಧದರ್ಶನದ ಪ್ರಕಾರ ಯಾವುದಕ್ಕೆ ಕಾರಣವಿದೆಯೋ ಅದನ್ನು ತೊಡೆದು ಹಾಕಬಹುದು. ಕಾರಣವಿದ್ದಲ್ಲಿ ಕಾರ್ಯ ಅಥವಾ ಫಲವಿರುತ್ತದೆ. ಅಷ್ಟೇ ಅಲ್ಲದೆ ಒಂದನ್ನು ತೆಗೆದರೆ ಮತ್ತೊಂದು ಅಗತ್ಯವಾಗಿ ಇಲ್ಲದೇ ಹೋಗುತ್ತದೆ. ದುಃಖವನ್ನು ತೊಡೆದು ಹಾಕಲು ಸಾಧ್ಯ ಏಕೆಂದರೆ ಅದು ಕಾರಣಯುಕ್ತವಾಗಿದೆ. ಸಂಸಾರವು ದುಃಖಮಯ, ಆದ್ದರಿಂದ ಅದಕ್ಕೊಂದು ಕಾರಣದ ಕಲ್ಪನೆ ಅನಿವಾರ್ಯ ದುಃಖ ಸಕಾರಣವಾದದ್ದು ಎನ್ನುವ ವಿಚಾರವನ್ನು 'ಕಾರಣ-ಸರಪಳಿ' ಎನ್ನುವ ಹನ್ನೆರಡು ಕೊಂಡಿಗಳ ರೂಪದಲ್ಲಿ ನೋಡಬಹುದು. ಅಜ್ಞಾನ (ಅವಿದ್ಯಾ), ಕರ್ಮ(ಸಂಸ್ಕಾರ), ಪ್ರಜ್ಞೆ (ವಿಜ್ಞಾನ), ನಾಮ ಮತ್ತು ರೂಪ (ನಾಮ-ರೂಪ), ಆರು ಕ್ಷೇತ್ರಗಳು ಅಂದರೆ, ಐದು ಇಂದ್ರಿಯಗಳು ಮತ್ತು ಆ ಇಂದ್ರಿಯ ವಿಷಯಗಳೂ ಕೂಡಿದಂತೆ ಮನಸ್ಸು(ಷಡಾಯತನ) ಇಂದ್ರಿಯಗಳಿಗೂ ಮತ್ತು ಅವುಗಳು ವಿಷಯಗಳಿಗೂ ಇರುವ ಸಂಪರ್ಕ(ಸ್ಪರ್ಶ), ಸಂವೇದನೆ (ವೇದನಾ), ಬಯಕೆ (ತೃಷ್ಣಾ), ಬದುಕಿಗೆ ಅಂಟಿಕೊಂಡಿರುವುದು (ಉಪಾದಾನ), ಇರವು (ಭವ), ಪುನರ್ಜನ್ಮ (ಜಾತಿ) ಮತ್ತು ದುಃಖ ಅಥವಾ ಅಕ್ಷರಶಃ ಮುಪ್ಪು ಮತ್ತು ಸಾವು (ಜರಾ-ಮರಣ) ಈ ಸರಪಣಿಯು ಪ್ರಸ್ತುತ ಜೀವನವನ್ನು ಮಾತ್ರ ಕುರಿತದ್ದಲ್ಲ, ಹಿಂದಿನ ಮತ್ತು ಮುಂದಿನ ಜೀವನಗಳ ಪ್ರಸ್ತಾಪವನ್ನು ಒಳಗೊಳ್ಳುತ್ತದೆ. ಈಗಿನ ಜೀವನವನ್ನು ಹಿಂದಿನ ಮತ್ತು ಮುಂದಿನ ಜನ್ಮಗಳಿಗೂ ಸಂಬಂಧ ಪಟ್ಟಂತೆ ತೋರಿಸಿ, ಸಂಸಾರ ಅಥವಾ ಹುಟ್ಟು ಸಾವುಗಳ ನಿರಂತರ ಶ್ರೇಣಿಗಳಿಗೆ ಉದಾಹರಣೆಯಾಗಿದೆ, ಎಂಬುದನ್ನು ತೋರಿಸುತ್ತದೆ. ಇವುಗಳ ವ್ಯಾಖ್ಯಾನದ ಬಗೆಗೆ ಅನೇಕ ಭಿನ್ನಭಿಪ್ರಾಯಗಳಿವೆ. ಇಷ್ಟು ಮಾತ್ರ ಹೇಳಬಹುದು, ಈ ಶ್ರೇಣಿಗಳಲ್ಲಿ ಮೊದಲಿನೆರಡು ಹಿಂದಕ್ಕೂ ಅನ್ವಯವಾಗುತ್ತವೆ. ಈ ಜನ್ಮದ ತತ್‌ಕ್ಷಣದ ಹಿಂದಿನ ಜನ್ಮವನ್ನು ಕುರಿತು ಹೇಳಿ ಅದರ ಸಾಮಾನ್ಯ ಲಕ್ಷಣ ಅಜ್ಞಾನ ಎಂದೂ ಅದರ ಪರಿಣಾಮ

೨೧. ಡಾ. ಎಚ್. ತಿಪ್ಪೆರುದ್ರಸ್ವಾಮಿ (೧೯೮೫) ಶೂನ್ಯಸಂಪಾದನೆ ಮತ್ತು ಆಧುನಿಕ ಮೌಲ್ಯಗಳು, ಪು. ೧೫.

'ಕರ್ಮ' ಎಂದೂ ಅವು ವರ್ಣಿಸಿ ಮುಗಿಸುತ್ತವೆ. ಇದರ ಅರ್ಥ ಅಜ್ಞಾನದಿಂದ ಪ್ರೇರಿತವಾದ ಹಿಂದಿನ ಜನ್ಮದ 'ಕರ್ಮ'ವು ಈ ಜನ್ಮಕ್ಕೆ ನೇರವಾದ ಕಾರಣವಾಗುತ್ತದೆ ಎಂದು. ಈ ಜನ್ಮದ ಗತಿಯನ್ನು ಮುಂದಿನ ಎಂಟು ಕೊಂಡಿಗಳು ಗುರುತಿಸುತ್ತವೆ. ಅವುಗಳಲ್ಲಿ ಮೊದಲಿನವು, ಬದುಕಿನ ಅನುಭವಗಳಿಗೆ ಅನುಗುಣವಾಗಿ ಸಿದ್ಧವಾಗುವ ಜೀವಿಯ ವಿಕಾಸವನ್ನು ಸೂಚಿಸುತ್ತವೆ. ಮುಂದಿನವು ಆ ಅನುಭವಗಳ ಸ್ವರೂಪವನ್ನು ಅವುಗಳ ಫಲಗಳನ್ನು ವರ್ಣಿಸುತ್ತವೆ. ಕೊನೆಯ ಎರಡು ಈ ಬದುಕಿನ ಚಟುವಟಿಕೆಗಳಿಂದ ಅನಿವಾರ್ಯವಾಗಿ ಉಂಟಾಗುವ ಮುಂದಿನ ಜನ್ಮವನ್ನು, ಅಲ್ಲಿ ಕಾದಿರುವ ದುಃಖವನ್ನು ಸೂಚಿಸುತ್ತವೆ.[೨೨] ಮುಖ್ಯವಾಗಿ ವ್ಯಕ್ತಿಯ ಅಸ್ತಿತ್ವಕ್ಕೆ ಮೂಲಕಾರಣ ಅಜ್ಞಾನ. ಅಜ್ಞಾನದಿಂದ ಆಸೆಯು ಹುಟ್ಟುತ್ತದೆ. ಆಸೆಯಿಂದ ಕರ್ಮ, ಕರ್ಮವು ತನ್ನ ಸರದಿಯಲ್ಲಿ ಹೊಸ ಆಸೆಗಳಿಂದ ಕೂಡಿದ ಪುನರ್ಜನ್ಮಕ್ಕೆ ಕಾರಣವಾಗುತ್ತದೆ. ಇದೇ ಸಂಸಾರಚಕ್ರ ಅಥವಾ ಭವಚಕ್ರ ಎಂಬ ವಿಷವೃತ್ತ. ಈ ಸಿದ್ಧಾಂತಕ್ಕೆ "ಪ್ರತೀತ್ಯ ಸಮುತ್ಪಾದ" ಎಂದು ಹೆಸರು ಪ್ರತೀತ್ಯ ಸಮುತ್ಪಾದವು ಕ್ಷಣಿಕವಾದವನ್ನು ಸದೃಢವಾಗಿ ನಂಬಿದೆ. ಪ್ರತಿಯೊಂದು ವಸ್ತು ಕಾರಣಾಶ್ರಿತವಾಗಿದೆ. ಕಾರಣದ ವಿನಾಶದೊಂದಿಗೆ ಕಾರ್ಯವು ನಾಶವಾಗುತ್ತದೆ. ಅದರ ಪರಿವರ್ತನೆ ಬೇರೊಂದು ರೀತಿಯಲ್ಲಾಗುತ್ತದೆ. ಹೀಗೆ ನಿತ್ಯ ಹಾಗು ಚಿರಸ್ಥಾಯಿಯಾಗಿರುವ ವಸ್ತುವೂ ಅನಿತ್ಯವಾಗಿದೆ. ಪ್ರತಿಯೊಂದು ವಸ್ತು ಪರಿವರ್ತನಶೀಲವಾಗಿದೆ. ವಸ್ತುವಿನ ಅಸ್ತಿತ್ವ ಕ್ಷಣಮಾತ್ರ. ಆದ್ದರಿಂದಲೆ ವಸ್ತು ಕ್ಷಣ ಭಂಗುರ. ಪ್ರತಿಯೊಂದೂ ಕ್ಷಣಕ್ಷಣವೂ ಬದಲಾಗುತ್ತದೆ ಎಂಬ ದೃಷ್ಟಿಯನ್ನು 'ಕ್ಷಣಿಕವಾದ' ಎಂದು ಕರೆದಿದ್ದಾರೆ. ಬೌದ್ಧ ಧರ್ಮವು ವಸ್ತುವು ಒಂದೇ ಎಂಬ ಅರ್ಥದಲ್ಲಿ ಏಕತೆಯನ್ನು ನಿರಾಕರಿಸುತ್ತದೆ.[೨೩] ಆದರೆ ಅದರ ಬದಲು ನಿರಂತರತೆಯನ್ನು ಒಪ್ಪಿಕೊಳ್ಳುತ್ತದೆ. ತಾನೇ ಬದಲಾಗದೆ, ದೈಹಿಕವಾಗಿಯೂ ಮಾನಸಿಕವಾಗಿಯೂ ಬದಲಾಗುವ ವಸ್ತುಗಳ ನಡುವೆ ಕಾಣಿಸಿಕೊಂಡೂ ಸ್ಥಿರವಾಗಿರುವ ವಸ್ತು ಎಂಬ ಅರ್ಥದಲ್ಲಿ ಆತ್ಮ ಎಂಬುದನ್ನು ಬೌದ್ಧದರ್ಶನವು ನಿರಾಕರಿಸುತ್ತದೆ.[೨೪] ಆದರೆ ಒಂದು 'ಪ್ರವಾಹಶೀಲ ಆತ್ಮ'ವನ್ನು ಅದು ಒಪ್ಪಿಕೊಳ್ಳುತ್ತದೆ. ಅದರ ಪ್ರವಾಹದ ಸ್ವಭಾವದಿಂದಲೇ ಅದನ್ನು ಸಂಪೂರ್ಣವಾಗಿ ಭಿನ್ನವೂ, ಸಾದೃಶ್ಯವಿಲ್ಲದುದೂ ಆದ ಒಂದು ಶ್ರೇಣಿ ಎಂದು ಪರಿಗಣಿಸುವುದು ಸಾಧ್ಯವಿಲ್ಲ. ಪ್ರಾಸಂಗಿಕವಾಗಿ ಹೇಳುವದಾದರೆ, ಬೌದ್ಧರು ತಮ್ಮ ದೃಷ್ಟಿಯನ್ನು ಮೀರುವ ಆತ್ಮವೊಂದನ್ನು ಗುಪ್ತವಾಗಿ ಒಪ್ಪಿಕೊಂಡರೆನಿಸುತ್ತದೆ. ಆತ್ಮವನ್ನು ವಿಶ್ಲೇಷಿಸಿ ಅದು ಕೇವಲ ಕ್ಷಣಿಕ ಸ್ಥಿತಿಗಳ ಶ್ರೇಣಿ ಎಂದು ನಿರಾಕರಿಸುವ ಕ್ರಿಯೆಯಲ್ಲೇ ಆ ಸ್ಥಿತಿಗಳನ್ನು ಮೀರಿ ಆ ಶ್ರೇಣಿಗಳನ್ನೆಲ್ಲ ಒಟ್ಟಾಗಿ ನೋಡಲು ಸಮರ್ಥವಾಗಿರುವ ಶಾಶ್ವತವಾದ ಆತ್ಮವೊಂದನ್ನು ಅವರು ಒಪ್ಪಿಕೊಂಡಂತಾಯಿತು.[೨೫]

ಬೌದ್ಧಧರ್ಮ 'ಕ್ಷಣಭಂಗುರವಾದ'ವೆಂದು ಹೆಸರುವಾಸಿಯಾಗಿದೆ.[೨೬] ಏಕೆಂದರೆ ಅದರ ಪ್ರಕಾರ ಯಾವುದು ಇದೆಯೋ ಅದು ಕ್ಷಣಕ್ಕಿಂತ ಹೆಚ್ಚಿನ ಕಾಲ ಇರುವುದಿಲ್ಲ. ಈ ಕ್ಷಣದಲ್ಲಿ ಒಂದು ವಸ್ತು ಹುಟ್ಟಿತೆನ್ನೋಣ. ಮತ್ತೊಂದು ಕ್ಷಣದಲ್ಲಿ ಅದಿಲ್ಲ. "ಒಬ್ಬನು ಒಂದೇ ಹೊಳೆಯೊಳಗೆ ಎರಡು ಸಲ ಇಳಿಯುವುದಿಲ್ಲ" ಎನ್ನುತ್ತಾರೆ. ಏಕೆಂದರೆ ಎರಡು ಕ್ಷಣಗಳಲ್ಲಿ ಆ ಹೊಳೆ ಒಂದೇ ಆಗಿರುವದಿಲ್ಲ, ಒಂದು ಎಂಬಂತೆ ಕಾಣುತ್ತದೆ. ವಸ್ತುಗಳೆಲ್ಲ ಸತತವಾಗಿ ಬದಲಾಗುತ್ತಲೇ ಇರುತ್ತವೆ. ಒಂದು ವಸ್ತು ಮತ್ತೊಂದು ವಸ್ತುವಾಗಿ ಪರಿಣಾಮ ಹೊಂದದಿದ್ದರೂ ಅಚಲವಾಗಿರದೆ ಪರಿಣಾಮ ತನ್ನಲ್ಲಿಯೇ ಹೊಂದುತ್ತಲೇ ಇರುತ್ತದೆ. ಈ ಕಾರಣದಿಂದ ಸದೃಶರೂಪಗಳನ್ನು ತಾಳುವ, ಅನುಸರಿಸುವ ಒಂದು ದೀಪದ ಕುಡಿ ಇದ್ದಂತೆ

---

೨೨. ಹೆಚ್. ಎನ್. ರಾಘವೇಂದ್ರಾಚಾರ್ಯ (೧೯೩೦) ಭಾರತೀಯ ತತ್ತ್ವಶಾಸ್ತ್ರಸಂಗ್ರಹ, ಪು. ೧೪೫

೨೩. Rhys Davids (1973) Buddhism, p. 135.

೨೪. Prof. Hopkins (1906) Journal of the Royal Asiatic Society, p. 581.

೨೫. Oldenberg, op. cit., p. 244.

೨೬. ಹೆಚ್. ಎನ್. ರಾಘವೇಂದ್ರಾಚಾರ್ಯ (೧೯೩೦) ಭಾರತೀಯ ತತ್ತ್ವಶಾಸ್ತ್ರಸಂಗ್ರಹ, ಪು. ೧೩೧.

ಇರುವ ಸತತವಾದ ಗತಿ. ಬೌದ್ಧಧರ್ಮವು ಸತ್ಯವೆನ್ನುವದನ್ನು ಒಂದು ಸಂಘಾತವೆಂದು ಪರಿಗಣಿಸಿದ್ದರೂ ಬಾಹ್ಯವಸ್ತುಗಳನ್ನಾಗಲೀ ಆತ್ಮವನ್ನಾಗಲೀ ನಿರಾಕರಿಸಲಿಲ್ಲ. ಈ ಎರಡನ್ನು ಒಪ್ಪಿಕೊಂಡದ್ದರಿಂದ ಅದು ಜ್ಞಾನದ ದೃಷ್ಟಿಯಿಂದ ಪೂರ್ಣವಾಗಿ 'ವಾಸ್ತವವಾದ' (Realism) ವಾಗಿದೆ. ಈ ಅಂಶ ಹೀನಯಾನದಲ್ಲಿ ಉಳಿಯುತ್ತದೆ. ಆದರೆ ನೂತನ ಕಲ್ಪನೆಯಾದ 'ಕ್ಷಣಭಂಗವಾದ'ದ ಸಂಬಂಧದಲ್ಲಿ ಸ್ವಾಭಾವಿಕವಾಗಿಯೇ ಮಾರ್ಪಾಡನ್ನು ಹೊಂದುತ್ತದೆ. ಎಂದರೆ ಬಾಹ್ಯ ಸತ್ಯವಾಗಲೀ, ಆತ್ಮವಾಗಲೀ, ಒಂದು ಕ್ಷಣಕ್ಕಿಂತ ಹೆಚ್ಚಿನ ಸಮಯ ಬಾಳುವುದಿಲ್ಲ. ಒಂದು ದೀಪದ ಕುಡಿ ಯಾವ ಎರಡು ಕ್ಷಣಗಳಲ್ಲೂ ಒಂದೇ ಎಂದು ಭಾಸವಾಗುತ್ತದೆ. ಆದರೆ ಅದು ಸತ್ಯವಾಗಿ ಒಂದೇ ಆಗಿರದೆ ಎರಡು ವಿಭಿನ್ನ ಸ್ಥಿತಿಗಳನ್ನು ಸೂಚಿಸುತ್ತದೆ. ಎಂದರೆ ಪರಿಣಾಮಗಳು ಆಗುತ್ತಿರಬಹುದು. ಆದರೆ ಆ ಪರಿಣಾಮಗಳನ್ನು ಹೊಂದುತ್ತಿರುವ ಯಾವ ವಸ್ತುವೂ ಸತತವಾಗಿಯೂ ಇರುವುದಿಲ್ಲ.ಬುದ್ಧದೇವನ ನಿರ್ವಾಣದನಂತರ ಅವನ ಅಭಿಪ್ರಾಯಗಳನ್ನು ಅನೇಕವಿಧವಾದ ಅರ್ಥಗಳಲ್ಲಿ ವ್ಯಾಖ್ಯಾನ ಮಾಡಲಾಯಿತು. ಇವುಗಳಲ್ಲಿ ಮುಖ್ಯವಾಗಿ ಎರಡು ಸಂಪ್ರದಾಯಗಳು: ಹೀನಯಾನ ಮತ್ತು ಮಹಾಯಾನ. ಪುನಃ ಈ ಎರಡರಲಿ ಅನೇಕ ಸಂಪ್ರದಾಯಗಳು ಹುಟ್ಟಿಕೊಂಡವು. ಅವುಗಳಲ್ಲಿ ಹೀನಯಾನದ 'ವೈಭಾಷಿಕ' ಹಾಗು 'ಸೌತಾಂತ್ರಿಕ'; ಮಹಾಯಾನದ 'ವಿಜ್ಞಾನವಾದ' ಮತ್ತು 'ಶೂನ್ಯವಾದ' ಉಲ್ಲೇಖನೀಯವಾಗಿವೆ.

ವೈಭಾಷಿಕ : ವೈಭಾಷಿಕನು ಚಿತ್ತ ಮತ್ತು ಬಾಹ್ಯ ವಸ್ತುವಿನ ಅಸ್ತಿತ್ವವನ್ನು ಸ್ವೀಕರಿಸುತ್ತಾನೆ, ಆದರೆ ವಸ್ತುಜ್ಞಾನ ಕೇವಲ ಪ್ರತ್ಯಕ್ಷಪ್ರಮಾಣವೊಂದನ್ನೇ ನಂಬುತ್ತದೆ. ಒಂದು ವೇಳೆ ಬಾಹ್ಯವಸ್ತುಗಳ ಪ್ರತ್ಯಕ್ಷ ಒಮ್ಮೆಯೂ ಆಗದಿದ್ದರೆ ಮಾನಸಿಕ ಪ್ರತಿರೂಪಗಳ ಆಧಾರದ ಮೇಲೆ ಅವುಗಳ ಅನುಮಾನವನ್ನು ಮಾಡಲಾಗುವದಿಲ್ಲ. ಬಾಹ್ಯವಿಷಯಗಳನ್ನು ವೈಭಾಷಿಕರು ಅಣುಗಳ ಸಂಘಾತವೆಂದು ಮಾತ್ರ ಒಪ್ಪುತ್ತಾರೆ. ಆ ಅಣು ಅವಿಭಾಜ್ಯವಾಗಿದೆ.

ಸೌತಾಂತ್ರಿಕರ ಪ್ರಕಾರ ಚಿತ್ತ ಹಾಗೂ ಬಾಹ್ಯ ಜಗತ್ತುಗಳ ಅಸ್ತಿತ್ವವಿದೆ. ಒಂದು ವೇಳೆ ಬಾಹ್ಯವಸ್ತುಗಳ ಅಸ್ತಿತ್ವವನ್ನು ಒಪ್ಪದಿದ್ದರೆ ಅವುಗಳ ಪ್ರತೀತಿ ಅಸಂಭವ. ಸೌತಾಂತ್ರಿಕರು ಪರಮಾಣುಗಳ ಅಸ್ತಿತ್ವವನ್ನು ಒಪ್ಪುತ್ತಾರೆ. ಪರಮಾಣು ನಿರವಯವಾಗಿವೆ ಆದರೆ ಅವು ಪರಸ್ಪರ ಸಂಯುಕ್ತವಾಗಿಲ್ಲ.

ವಿಜ್ಞಾನವಾದಿಗಳು ಬಾಹ್ಯವಸ್ತುಗಳ ಅಸ್ತಿತ್ವವನ್ನು ಒಪ್ಪದೆ ಕೇವಲ ಚಿತ್ತವೊಂದನ್ನೇ ಸ್ವೀಕರಿಸಿದ್ದಾರೆ. ಜ್ಞಾನವೆನ್ನುವುದು ಯಾವ ಬಾಹ್ಯವಸ್ತುವನ್ನೂ ತೋರಿಸುವುದಿಲ್ಲ. ಭಾವನೆಗಳ ಪ್ರವಾಹವೆಂದು ಕಲ್ಪಿತವಾದ ಆತ್ಮವೊಂದೇ ಸತ್ಯ. ಈ ವಿಚಾರದಲ್ಲಿ ಹೀನಯಾನ ಬೌದ್ಧಧರ್ಮಕ್ಕೆ ಸಮೀಪವಾಗಿದೆ. ಆದರೆ ಇಲ್ಲಿ ಯಾವ 'ಭಾವನೆ' ಅಥವಾ 'ಯೋಚನೆ'ಯನ್ನುವುದಕ್ಕೂ ಬಾಹ್ಯ ವಸ್ತುಗಳ ಪ್ರತೀಕಗಳಿರುವುದಿಲ್ಲ. ಎಲ್ಲ ಸತ್ಯವನ್ನೂ ಚಿತ್ತ ಅಥವಾ ವಿಜ್ಞಾನಕ್ಕೆ ಇಳಿಸುವುದರಿಂದ ಈ ಮತವನ್ನು "ವಿಜ್ಞಾನವಾದ" ವೆಂದು ಕರೆಯಲಾಗಿದೆ. ಜ್ಞಾನಗಳಲ್ಲಿ ಎರಡು ವಿಧ.[೨೬] ೧. ಪ್ರವೃತ್ತಿವಿಜ್ಞಾನ ೨. ಆಲಯ ವಿಜ್ಞಾನ. ಆಲಯ ವಿಜ್ಞಾನದಲ್ಲಿ ಎಲ್ಲ ಜ್ಞಾನವು ಬೀಜರೂಪದಲ್ಲಿರುತ್ತದೆ. ಅದು ಎಲ್ಲ ಜ್ಞಾನಗಳ ಭಂಡಾರ. ವಿಜ್ಞಾನವಾದದ ಅನುಸಾರವಾಗಿ ಬಾಹ್ಯವಸ್ತುವಿನ ರೂಪದಲ್ಲಿ ಪ್ರತೀತವಾಗುವದೆಲ್ಲ ಮನಸ್ಸಿನ ಒಂದು ಪ್ರತ್ಯಯ ಮಾತ್ರ. 'ಆಲಯ' ಕ್ಕಿಂತ ಬೇರೆಯಾಗಿ ವಸ್ತುಜಗತ್ತಿನ ಅಸ್ತಿತ್ವವಿಲ್ಲ. ಕನಸಿನಲ್ಲಿ ವಸ್ತುಗಳು ಮನಸ್ಸಿನೊಳಗಿರುತ್ತಿದ್ದರೂ ಹೇಗೆ ಬಾಹ್ಯ ಪ್ರತೀತವಾಗುತ್ತವೆಯೋ, ಹಾಗೆಯೇ ಸಾಧಾರಣವಾದ ಮಾನಸಿಕ ಅವಸ್ಥೆಗಳಲ್ಲಿ ವಿಜ್ಞಾನವೇ ಬಾಹ್ಯವಸ್ತುಗಳ ರೂಪಾಗಿ ಪ್ರತೀತವಾಗುತ್ತದೆ. ಆದ್ದರಿಂದ ವಸ್ತು ಮತ್ತು ಜ್ಞಾನದಲ್ಲಿ ಯಾವುದೇ ವಿಧವಾದ ಭೇದವಿರಲು ಸಾಧ್ಯವಿಲ್ಲ. ಆದುದರಿಂದ ಅವೆರಡೂ ಒಂದೇ ಚಿತ್ತಿನಲ್ಲಿ ಉತ್ಪನ್ನವಾಗುವ ಆಕಾರಗಳ ಜ್ಞಾನ ಕಾರಣದಿಂದಾಗಿಯೇ ನಮಗೆ ಬಾಹ್ಯಾರ್ಥದ ಜ್ಞಾನವಾಗುತ್ತದೆ. ನೀಲೀ ಬಣ್ಣ ಹಾಗೂ ನೀಲಿ ಬಣ್ಣದ ಜ್ಞಾನದಲ್ಲಿ ಯಾವುದೇ ಭೇದವಿಲ್ಲ. ಏಕೆಂದರೆ ಬಾಹ್ಯಾರ್ಥದ ಅಸ್ತಿತ್ವ,

---

೨೬. ಲಂಕಾವತಾರಸೂತ್ರ, ಪು. ೧೫೮, ೧೮೬.

ಜ್ಞಾನದಮೇಲೆ ಅವಲಂಬಿತವಾಗಿರುವದರಿಂದ ಜ್ಞಾನವೇ ವಾಸ್ತವಿಕ ಅಸ್ತಿತ್ವವಾಗಿದೆ. ವಸ್ತುವಿನ ಅಸ್ತಿತ್ವ ಆದರ ಜ್ಞಾನದಿಂದ ಭಿನ್ನವಾಗಿಲ್ಲ.

ವಿಜ್ಞಾನವಾದಿಗಳು ಕ್ಷಣಿಕವಾದದ ಆಧಾರದ ಮೇಲೆ ಬಾಹ್ಯವಸ್ತುಗಳ ಅಸ್ತಿತ್ವವನ್ನು ಖಂಡಿಸುತ್ತಾರೆ. ವಸ್ತುಗಳ ಉತ್ಪತ್ತಿಯಾದನಂತರವೇ ಅವುಗಳ ಜ್ಞಾನವಾಗುತ್ತದೆ. ಆದರೆ ಕ್ಷಣಿಕವಾದದ ಪ್ರಕಾರ, ಉತ್ಪತ್ತಿಯ ಕ್ಷಣದಲ್ಲಿಯೇ ವಸ್ತುವಿನ ನಾಶವಾಗುತ್ತದೆ. ಆದರೆ ವಸ್ತುವಿನ ನಾಶವಾದ ನಂತರ ಆದರ ಜ್ಞಾನವಾಗುವದಾದರೂ ಹೇಗೆ ? ಈ ರೀತಿಯಾಗಿ ಬಾಹ್ಯ ವಸ್ತುಗಳ ಜ್ಞಾನ ಅಸಂಭವವಾಗುತ್ತದೆ. ಆದುದರಿಂದ ವಿಜ್ಞಾನವೇ ಏಕಮಾತ್ರ ಅಸ್ತಿತ್ವವುಳ್ಳದುದು. ಅದು ನಿತ್ಯ, ಅಮೃತ ಹಾಗು ಅಪರಿವರ್ತಶೀಲವಾಗಿದೆ. ಅದು ಉತ್ಪತ್ತಿ ಸ್ಥಿತಿ, ಲಯಕ್ಕಿಂತ ಅತೀತವಾಗಿದೆ. ಗ್ರಾಹ್ಯ ಹಾಗೂ ಗ್ರಾಹಕ ಭೇದಾತೀತವಾಗಿದೆ.[೨೮] ವೈಯಕ್ತಿಕ ಪ್ರವೃತಿ-ವಿಜ್ಞಾನವು 'ಆಲಯ ವಿಜ್ಞಾನ'ದರದ್ದೇ ಅಭಿವ್ಯಕ್ತಿಯಾಗಿದೆ. ಆಲಯ, ಅವರ್ಣನೀಯ ಹಾಗೂ ಬುದ್ಧಿಗೆ ಅತೀತವಾಗಿದೆ. ವಿಜ್ಞಾನವು ಸ್ವಯಂ-ಪ್ರಕಾಶದ ಚೈತನ್ಯರೂಪ. 'ಆಲಯ-ವಿಜ್ಞಾನವು ಎಲ್ಲವನ್ನು ಸಂಯುಕ್ತಗೊಳಿಸುವಂಥದ್ದು.[೨೯] ವಸ್ತುವಿನ ಅಸ್ತಿತ್ವವು ಒಂದು ವೇಳೆ ಜ್ಞಾತೃವಿನ ಮೇಲೆ ನಿರ್ಭರವಾಗಿದ್ದರೆ ಅವನು ತನಗೆ ಬೇಕಾದ ವಸ್ತುಗಳನ್ನು ಸೃಷ್ಟಿಮಾಡಿಕೊಳ್ಳಬಲ್ಲ. ಆದರೆ ಹಾಗಾಗಲು ಸಾಧ್ಯವಿಲ್ಲ, ಆದುದರಿಂದ ವಿಜ್ಞಾನವಾದಿಗಳ ಅಭಿಪ್ರಾಯ ಸಮುಚಿತವೆನಿಸದು. ಜ್ಞಾತೃವಿನ ಇಚ್ಛಾನುಸಾರವಾಗಿ ವಸ್ತುಗಳ ಪರಿವರ್ತನ ಎಂದರೆ ತಿರೋಭಾವ ಮತ್ತು ಆವಿರ್ಭಾವ ಅಸಂಭವ ವಸ್ತುವನ್ನು ಒಂದುವೇಳೆ ಕೇವಲ ಜ್ಞಾನಮಾತ್ರವೆಂದು ತಿಳಿಯುವದಾದರೆ ಅನುಭೂತಿ ಅಸಂಭವ, ಹೀಗೆ ತಿಳಿಯುವುದರಿಂದ ವಸ್ತುವಿನ ಪ್ರತೀತಿಯು 'ಅಹಂ'ನ ರೂಪಿನಲ್ಲಾಗುವುದೇ ವಿನಾ ವಸ್ತು ಅಥವಾ 'ಇದಂ'ನ ರೂಪಿನಲ್ಲಲ್ಲ. ಘಟದ ಜ್ಞಾನ "ನಾನು ಘಟ" ಎಂದಾಗುವದಿಲ್ಲ. "ಅದು ಘಟ"ವೆಂದಾಗುತ್ತದೆ. ಆದುದರಿಂದ ವಸ್ತು ಮತ್ತು ಆದರ ಜ್ಞಾನ ಭಿನ್ನವಾಗಿದೆ. ಒಂದು ವೇಳೆ ಬಾಹ್ಯವಸ್ತುಗಳ ಅಸ್ತಿತ್ವವನ್ನು ಒಪ್ಪದೇ ಹೋದರೆ, ಸಮಸ್ತಜ್ಞಾನವು ಒಂದೇ ಸಮಾನವಾಗುತ್ತದೆ. ಘಟ-ಜ್ಞಾನ ಮತ್ತು ಪಟ-ಜ್ಞಾನಗಳಲ್ಲಿ ಯಾವ ಅಂತರವೂ ಉಳಿಯದು. ಆದರೆ ಹಾಗಾಗಲು ಸಾಧ್ಯವಿಲ್ಲ. ಘಟ ಪಟ ಜ್ಞಾನವನ್ನು ನಾವು ಬೇರೆಯಾಗಿ ಕಾಣುತ್ತೇವೆ. ಆದುದರಿಂದ ಬಾಹ್ಯವಸ್ತುವನ್ನು ಭ್ರಮೆಯೆಂದು ತಿಳಿದು ಕೇವಲ ವಿಜ್ಞಾನದ ಅಸ್ತಿತ್ವವನ್ನು ನಂಬುವುದು ಉಚಿತವಾಗಲಾರದು.

ಮಾಧ್ಯಮಿಕ ಶೂನ್ಯವಾದಿಗಳು ಬಾಹ್ಯಾರ್ಥ ಮತ್ತು ವಿಜ್ಞಾನ ಸತ್ತೆಯೆರಡನ್ನೂ ನಂಬುವುದಿಲ್ಲ. ಇವರ ಪ್ರಕಾರ 'ಶೂನ್ಯ'ವೇ ಪರಮತತ್ವ. 'ಶೂನ್ಯ'ದರ ಅರ್ಥ ವರ್ಣನಾತೀತ ಅಥವಾ ಅವರ್ಣನೀಯ. ವಸ್ತುಗಳ ಪ್ರತೀತಯಾಗುತ್ತದಾದರೂ ಅವುಗಳ ತಾತ್ವಿಕ ಸ್ವರೂಪವನ್ನು ತಿಳಿಯಲಾಗುವದಿಲ್ಲ. ನಾಗಾರ್ಜುನ ಹೇಳುವಂತೆ "ಪರಮಸ್ಥಲವು ಸತ್ ಅಲ್ಲ ಅಸತ್ ಅಲ್ಲ, ಸತ್ ಮತ್ತು ಅಸತ್ ಎರಡೂ ಹೌದು. ಎರಡರಗಿಂತ ಭಿನ್ನವೂ ಅಲ್ಲ. ಅದು ಚತುಷ್ಕೋಟಿ ವಿನಿರ್ಮುಕ್ತ ತತ್ತ್ವ.[೩೦] ನಾಗುರ್ಜನನು 'ಶೂನ್ಯ'ವನ್ನು ಪ್ರತೀತ್ಯಸಮುತ್ಪಾದವೆಂದು ಕರೆದಿದ್ದಾನೆ.[೩೧] ಅವನು ಎರಡು ವಿಧವಾದ ಸತ್ಯವನ್ನು ಸ್ವೀಕರಿಸಿದ್ದಾನೆ. ಮೊದಲನೆಯದ್ದು ಸಂವೃತಿಸತ್ಯ. ಎರಡನೆಯದ್ದು ಪಾರಮಾರ್ಥಿಕ ಸತ್ಯ.

---

೨೮. ಧಾತುರಚಿಂತ್ಯ: ಕುಶಲೋಧ್ರುವ: ...... ತ್ರಿಶತಿಕಾ ೩೦.

೨೯. ಚಿತ್ತೇನ ಚೀಯತೆ ಕರ್ಮ ಮನಸಾ ಚ ವಿಧೀಯತೆ ।
ವಿಜ್ಞಾನೇನ ವಿಜಾನಾತಿ ದೃಶ್ಯಂ ಕಲ್ಪೇತಿ ಪಂಚಭಿ: ॥ ಲಂಕಾವತಾರ, ಪು. ೪೬.

೩೦. ನಸನ್ ನಾಸನ್ ನ ಸದಾಸನ್ನ ಚಾಪ್ಯನುಭಯಾತ್ಮಕಮ್ ।
ಚತುಷ್ಕೋಟಿ ವಿನಿರ್ಮುಕ್ತಂ ತತ್ತ್ವಂ ಮಾಧ್ಯಮಿಕಾ ವಿದು: ॥ (ಮಾಧ್ಯಮಿಕ ಕಾರಿಕಾ -II) ಸಂ: ಭಟ್ಟಾರಕಂಠ(೧೯೨೫)

೩೧. "ಯ: ಪ್ರತೀತ್ಯಸಮುತ್ಪದ: ಶೂನ್ಯತಾಂ ತಾಂ ಪ್ರಚಕ್ಷ್ಮಹೆ" (ಮಾಧ್ಯಮಿಕ ಕಾರಿಕಾ - ೧೪/೧೮) ಅದೇ.

ಒಂದು ಸಾಧಾರಣ; ಇನ್ನೊಂದು ನಿರಪೇಕ್ಷ ಹಾಗು ಅವರ್ಣನೀಯವಾಗಿದೆ.[೩೨] ಇರುವ ಧರ್ಮಗಳೆಲ್ಲ 'ಶೂನ್ಯ'ವಾಗಿವೆ. ಆದುದರಿಂದ ವಸ್ತುಗಳ ಪರಾವಲಂಬನೆಗೆ, ಅವುಗಳ ನಿರಂತರ ಪರಿವರ್ತನಶೀಲತೆಗೆ ಹಾಗೂ ಅವರ್ಣನೀಯತೆಗೆ "ಶೂನ್ಯ"ವೆನ್ನುತ್ತಾರೆ.[೩೩] ಸಂವೃತ್ತಿ-ಸತ್ಯ ಪಾರಮಾರ್ಥಿಕ-ಸತ್ಯದ ಪ್ರಾಪ್ತಿಗೆ ಸಾಧನವಾಗಿದೆ. ಇವರ ಪ್ರಕಾರ ವ್ಯವಹಾರದ ಸಹಾಯವಿಲ್ಲದೆ ಪರಮಾರ್ಥವನ್ನೂ ತಿಳಿಯಲಾಗುವುದಿಲ್ಲ. ಪರಮಾರ್ಥಜ್ಞಾನವಿಲ್ಲದೆ ನಿರ್ವಾಣ ಅಸಂಭವ.[೩೪] ಆದ್ದರಿಂದ ಪರಮಾರ್ಥವನ್ನು ತಿಳಿಯಲು ಸಂವೃತಿ-ಸತ್ಯ ಅವಶ್ಯಕವಾಗಿದೆ. ಪರಮಾರ್ಥಸತ್ಯವು ನಿರಪೇಕ್ಷವಾಗಿದೆ. ಅದು ದೃಶ್ಯ ವಸ್ತುಗಳಿಗಿಂತ ಅತೀತ, ನಿತ್ಯ ಹಾಗು ಸಾಧಾರಣ. ಅಲ್ಲದೆ ವ್ಯವಹಾರಿಕ ಧರ್ಮ ರಹಿತವಾಗಿದೆ. ಅದನ್ನು ಮನಸ್ಸಿನಿಂದಾಗಲಿ, ಮಾತಿನಿಂದಾಗಲಿ ಕರ್ಮದಿಂದಾಗಲಿ ತಿಳಿಯಲಸಾಧ್ಯ. ಅದು ಅನಿರ್ವಚನೀಯ. ವಸ್ತುತಃ ಪರಮಾರ್ಥ, ಅವ್ಯಾಖ್ಯೇಯ. ಪಾರಮಾರ್ಥಿಕ ದೃಷ್ಟಿಕೋನದಲ್ಲಿ ಅದು ನಿರೋಧವೂ ಅಲ್ಲ., ಉತ್ಪಾದ್ಯವಲ್ಲ, ಉಚ್ಛೇದವಲ್ಲ, ಶಾಶ್ವತವೂ ಅಲ್ಲ, ಶೂನ್ಯವೂ ಅಲ್ಲ ಅನೇಕವಲ್ಲ, ಆಗಮನ ಹಾಗು ನಿರ್ಗಮನವೂ ಅಲ್ಲ.[೩೫]

ಶೂನ್ಯವಾದದ ಪ್ರಕಾರ ಪಂಚಸ್ಕಂದ, ದ್ರವ್ಯಗುಣ, ಆತ್ಮ ಎಲ್ಲವೂ ಅಸತ್ ಆಗಿವೆ. ಆತ್ಮ ಪಂಚಸ್ಕಂದವೂ ಅಲ್ಲ ಅದಕ್ಕಿಂತ ಭಿನ್ನವೂ ಅಲ್ಲ. ಒಂದು ವೇಳೆ ಅದನ್ನು ಪಂಚಸ್ಕಂದವೆನ್ನುವದಾದರೆ ಅದರ ಉತ್ಪತ್ತಿ ಮತ್ತು ವಿನಾಶವನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಜಗತ್ ಹಾಗೂ ಅದರ ವಿಷಯಗಳಿಗೆ ಆದಿಯೂ ಇಲ್ಲ, ಮಧ್ಯ ಮತ್ತು ಅಂತ್ಯವೂ ಇಲ್ಲ.[೩೬] ಪರಿವರ್ತನೆಯೂ ಅಸತ್ ಆಗಿದೆ. ಕಾಲವೂ ಅಸತ್ ಆಗಿದೆ. ಏಕೆಂದರೆ ಭೂತ ವರ್ತಮಾನ ಹಾಗೂ ಭವಿಷತ್ತೆಲ್ಲ ಸಾಪೇಕ್ಷವಾಗಿವೆ. ಬಂಧನಮೋಕ್ಷ ಸಾಪೇಕ್ಷವಾಗಿವೆ. ಆದುದರಿಂದ ಇವು ಅಸತ್ಯವಾಗಿವೆ.

ನಾಗಾರ್ಜುನನ ಪ್ರಕಾರ 'ತತ್ತ್ವ'ವೆಂಬುದು ಶಾಂತ ಹಾಗು ಆನಂದಮಯವಾಗಿದೆ. ಅದರಲ್ಲಿ ಪ್ರಪಂಚಗಳೆಲ್ಲ ಸಮಾಪ್ತವಾಗುತ್ತವೆ. ಅದು ನಿರ್ವಿಕಲ್ಪ,ಅದ್ವೈತ ಹಾಗು ಏಕರಸವಾಗಿದೆ.[೩೭] ಯಾವನು ಶೂನ್ಯದ ಅರ್ಥವನ್ನು ಸರಿಯಾಗಿ ತಿಳಿಯುತ್ತಾನೆಯೋ ಅವನೇ ಪ್ರತಿಯೊಂದು ವಸ್ತುವಿನ ಅರ್ಥ ಮತ್ತು ಅದರ ವೈಶಿಷ್ಟ್ಯ ಕುರಿತ ವ್ಯಾಖ್ಯಾನಿಸಬಲ್ಲ ಎಂದು ಹೇಳಲಾಗಿದೆ. ಅದೇ ರೀತಿ ಯಾವನು ಶೂನ್ಯ ಎಂಬುದಕ್ಕೆ ಸರಿಯಾದ ಅರ್ಥವನ್ನು ಗ್ರಹಿಸಲಾರನೋ ಅವನು ಏನನ್ನೂ ತಿಳಿಯದೇ ಹೋಗುತ್ತಾನೆಂದು ಹೇಳಲಾಗುತ್ತದೆ.[೩೮] ಶೂನ್ಯವಾದದಲ್ಲಿ ಪ್ರಮಾತೃ, ಪ್ರಮಾಣ, ಪ್ರಮೇಯ ಹಾಗೂ ಪ್ರಮಿತಿಯನ್ನು ಅಕಲ್ಪಿತವೆಂದು ತಿಳಿಯಲಾಗಿದೆ. ಕೇವಲ 'ಶೂನ್ಯ'ವೊಂದೇ ಅಸ್ತಿತ್ವವುಳ್ಳದ್ದು. ಆದರೆ ಈ ಅಭಿಪ್ರಾಯ ಉಚಿತವೆನಿಸದು. ಏಕೆಂದರೆ 'ಶೂನ್ಯ'ವೆನ್ನುವ ಪರಮಾರ್ಥ ತತ್ವವನ್ನು ಅನುಭೂತಿ ಮಾಡಿಕೊಳ್ಳುವದಕ್ಕಾದರೂ ಒಂದು ಚೇತನ ತತ್ವದ ಅವಶ್ಯಕತೆ ಇರಬೇಕಾಗುತ್ತದೆ. ಅದನ್ನು ಆತ್ಮವೆಂದು ಕರೆಯಲಾಗಿದೆ. ಆದರೆ ಭೌದ್ಧದರ್ಶನದ ನೈರಾತ್ಮ್ಯವಾದದ ಪ್ರಕಾರ ಚಿರಸ್ಥಾಯಿ ಮತ್ತು ನಿತ್ಯ ಆತ್ಮ ಅಸಂಭವವಾಗಿದೆ.

---

೩೨. ದ್ವೇಸತ್ಯೇ ಸಮುಪಾಶ್ರಿತ್ಯಬುದ್ಧಾನಾಂ ಧರ್ಮದೇಶನಾ।
ಲೋಕಸಂವೃತ್ತಿ ಸತ್ಯ ಚ, ಸತ್ಯಂ ಚ ಪರಮಾರ್ಥತಃ ॥ ಮಾಧ್ಯಮಿಕ ಕಾರಿಕಾ ೮, ಅದೇ.

೩೩. D.T. Suzaki (1968) Outlines of Buddhism, p. 194-98.\

೩೪. ವ್ಯವಹಾರಮನಾಶ್ರಿತ್ಯಪರಮಾರ್ಥೋ ನ ದೃಶ್ಯತೆ । ಮಾಧ್ಯಮಿಕ ಕಾರಿಕಾ -೧೪/೧೮, ಅದೇ.

೩೫. On Indian Mahaayan budhism,Horper & Kow. p. 46.

೩೬. ಮಾಧ್ಯಮಿಕ ಕಾರಿಕಾ ೧೧/೨೧, ಅದೇ.

೩೭. ಅಪರಂ ಪ್ರತ್ಯಯಂ ಶಾಂತಂ ಪ್ರಪಂಚೆರಪ್ರಪಂಚಿತಮ್ ।
ನಿರ್ವಿಕಲ್ಪಮನಾರ್ಥಮೇತತ್ ತತ್ವಸ್ಯ ಲಕ್ಷಣಮ್ ॥ ಮಾಧ್ಯಮಿಕ ಕಾರಿಕಾ, ೨೭/೯.

೩೮. ವಿಗ್ರಹವ್ಯಾವರ್ತಿನೀ ಕಾರಿಕಾ ೭೧.

ಬೌದ್ಧ ಪರಂಪರೆಯಲ್ಲಿ ತತ್ವಕ್ಕೆ ಸಂಬಂಧಿಸಿದ ಅಭಿಪ್ರಾಯಗಳು ಕ್ರಮವಾಗಿ ಪರಿವರ್ತನೆಗೊಳ್ಳುತ್ತಾ ಹೋಗಿವೆ. ಪ್ರಾರಂಭದ ಬೌದ್ಧಚಿಂತನವನ್ನು ಯಥಾರ್ಥವಾದೀಯೆಂದು ಕರೆಯಬಹುದು. ಕ್ಷಣಿಕವಾದವನ್ನು ಸ್ವೀಕರಿಸುತ್ತಲೆ ಇದರಲ್ಲಿ ವಸ್ತು ಹಾಗೂ ಘಟನೆಗಳನ್ನು ಯಥಾರ್ಥವೆಂದು ಮನ್ನಿಸಲಾಗಿದೆ. ಉತ್ತರೋತ್ತರ ಯಥಾರ್ಥವಾದೀ ಮಾನ್ಯತೆಗಳು ಅಸಂಗತ ಹಾಗು ನಿರಾಧಾರವಾಗಿ ಕಂಡುಬಂದಕಾರಣ, ಇವುಗಳ ಸ್ಥಾನದಲ್ಲಿ ವಿಜ್ಞಾನವಾದ ಹಾಗೂ ಶೂನ್ಯವಾದದಂಥ ಆದರ್ಶವಾದೀ ವಿಚಾರಗಳು ವಿಕಾಸಗೊಂಡವು. ವಿಜ್ಞಾನವಾದೀ ಬೌದ್ಧರು, ವಿಜ್ಞಾನಕ್ಕಿಂತ ಸ್ವತಂತ್ರವಾದ ವಸ್ತುವಿನ ಅಸ್ತಿತ್ವವನ್ನು ಸ್ವೀಕರಿಸಲಿಲ್ಲ. ಅವರು ವಿಜ್ಞಾನವೊಂದನ್ನೇ ಪರಮಸತ್ಯದ ರೂಪಿನಲ್ಲಿ ಗ್ರಹಿಸಿದರು. ಭಾರತೀಯ ಚಿಂತನ ಧಾರೆಯಲ್ಲಿ ಈ ನಿರಪೇಕ್ಷ ವಿಜ್ಞಾನವಾದವು ಒಂದು ಮಹತ್ವಪೂರ್ಣ ಸ್ಥಾನಪಡೆದಿದೆ. ಯೋಗಾಚಾರ ಬೌದ್ಧರು ಅನಾತ್ಮವಾದ ಹಾಗು ಕ್ಷಣಿಕವಾದದ ಆಧಾರದ ಮೇಲೆ ವಿಜ್ಞಾನ ಅಥವಾ ಪರಮಸಂವಿತ್ತಿನ ನಿರಪೇಕ್ಷ ಸತ್ತೆಯನ್ನೂ ಪ್ರತಿಪಾದಿಸುತ್ತಾರೆ. ಶೂನ್ಯವಾದಿ ಬೌದ್ಧರ ಪರಮತತ್ವಕ್ಕೆ ಸಂಬಂಧಿಸಿದ ವಿವೇಚನೆಯು, ಒಂದು ಹೊಸ ಆಯಾಮವಾಗಿದೆ. ಅವರ ಪ್ರಕಾರ ಪರಮತತ್ವವು ಎಲ್ಲ ವೈಚಾರಿಕ ಸೀಮೆಗಳಿಂದ ಮುಕ್ತವಾಗಿದೆ. ಸೀಮಿತವಾದ ದೃಷ್ಟಿಕೋನದಿಂದ ಇದನ್ನು ನಿರ್ಣಯಿಸಲು ಸಾಧ್ಯವಿಲ್ಲ. ಇದರ ಸ್ವರೂಪ ತರ್ಕದ ನಾಲ್ಕು ಶ್ರೇಣಿಗಳಿಗಿಂತ ಉನ್ನತವಾಗಿದೆ. ಆದುದರಿಂದಲೇ ಇದು 'ಚತುಷ್ಕೋಟ ವಿನಿರ್ಮುಕ್ತ' . 'ಶೂನ್ಯ' ಒಂದರಿಂದಲೇ. ಅದನ್ನು ವರ್ಣಿಸಲು ಸಾಧ್ಯ.

ಜೈನದರ್ಶನ :

ಜೈನದರ್ಶನವು ಬೌದ್ಧರ ನೈರಾತ್ಮ್ಯದವನ್ನು ವಿರೋಧಿಸಿತು. ತಾತ್ವಿಕವಾದ ನೆಲೆಯಲ್ಲಿ ಜೈನಧರ್ಮದ ವಿಶಿಷ್ಟಲಕ್ಷಣವೆಂದರೆ, ನಿತ್ಯ ಹಾಗೂ ಸ್ವತಂತ್ರ ಅಸ್ತಿತ್ವವನ್ನು ಹೊಂದಿರುವ ಆಧ್ಯಾತ್ಮಿಕ ಮತ್ತು ಭೌತಿಕ ಅರ್ಥಾತ್ 'ಜೀವ' ಮತ್ತು 'ಅಜೀವ' ತತ್ವಗಳಲ್ಲಿನ ನಂಬಿಕೆ. ಇಲ್ಲಿ ಅಧ್ಯಾತ್ಮ ತತ್ವವೆಂದರೆ 'ಜೀವಾತ್ಮ'ನೆಂದು ಅರ್ಥ ಮಾಡಬೇಕೇ ಹೊರತು ಉಪನಿಷತ್ತುಗಳಲ್ಲಿರುವಂತೆ ಪರಮಾತ್ಮ ತತ್ವವಲ್ಲ. ಭೌತಿಕ ವಸ್ತುಗಳಲ್ಲೂ ಅವುಗಳ ಆತ್ಮಗಳಿರುವುವೆಂಬುದನ್ನು ಜೈನದರ್ಶನ ಹೇಳುವುದನ್ನು ನೋಡಿದರೆ, ಅದು ಸಾರ್ವತ್ರಿಕ ಆತ್ಮ ಅಥವಾ ಈಶ್ವರ ಎನ್ನುವ ತತ್ವವನ್ನು ನಂಬಿಲ್ಲವೆಂದು ವ್ಯಕ್ತವಾಗುತ್ತದೆ.

ಜೀವ :

ಜೈನಮತದಲ್ಲಿ ಆತ್ಮನು ಚೈತನ್ಯಸ್ವರೂಪ[೩೯] ಆದರೆ ಬೌದ್ಧದರ್ಶನ ಹೇಳುವಂತೆ ಕ್ಷಣಿಕವಲ್ಲ. ಜೀವಾತ್ಮನು ಬೆಳಕಿನಂತೆ ಸಂಕೋಚ ವಿಕಾಸಸ್ವಭಾವವುಳ್ಳವನು[೪೦] ಯಾವ ಶರೀರದಲ್ಲಿ ನೆಲೆಸುತ್ತಾನೆಯೋ ಆ ಶರೀರದ ಪರಿಮಾಣವನ್ನು ಹೊಂದುತ್ತಾನೆ. ಈ ಜೀವಾತ್ಮರೂ ಅನೇಕ.

ಅಜೀವ :

ಅಜೀವಗಳು ಪ್ರಜ್ಞಾರಹಿತ ವಸ್ತುಗಳು. ಇವು ಐದು ಬಗೆ - ಪುದ್ಗಲ, ಧರ್ಮ, ಅಧರ್ಮ, ಆಕಾಶ, ಕಾಲ. ಪುದ್ಗಲವೆಂದರೆ ವಸ್ತುವಿನ ಉಪಚಯ ಹಾಗೂ ಅಪಚಯಕ್ಕೆ ಕಾರಣವಾಗಿರುವ ಪರಮಾಣು. ಗತಿಶೀಲವಾದದ್ದು ಧರ್ಮ, ಸ್ಥಿತಿಶೀಲವಾದದ್ದು ಅಧರ್ಮ. ಇವು ಅಗೋಚರವಾದ ದ್ರವ್ಯಗಳು. ಎಲ್ಲ ಪದಾರ್ಥಗಳ ಅಸ್ತಿತ್ವಕ್ಕೆ ಅವಕಾಶವನ್ನು

೩೯. ಚೈತನ್ಯಲಕ್ಷಣೋ ಜೀವಃ ೩-ಷಡ್ದರ್ಶನ ಸಮುಚ್ಚಯಃ, ಕಾರಿಕೆ ೨೯.

೪೦. ಪ್ರದೇಶ ಸಂಹಾರ ವಿಸರ್ಗಾಭ್ಯಾಂ ಪ್ರದೀಪವತ್, ತತ್ವಾರ್ಥಾಧಿಗಮಸೂತ್ರ ೩-೧೬.

ಕಲ್ಪಿಸಿಕೊಡುವುದೇ ಆಕಾಶದ ಸ್ವಭಾವ. ಇದರ ಅಸ್ತಿತ್ವ ಅನುಮಾನ ಪ್ರಮಾಣದಿಂದ ಸಿದ್ಧವಾಗುತ್ತದೆ. ಇದು ಅನಂತ. ಭೌತಿಕವಸ್ತುಗಳಿಗೆ ಆಶ್ರಯವಾಗಿರುವ ಆಕಾಶವನ್ನು ಲೋಕಾಕಾಶವೆಂದೂ, ಯಾವ ವಸ್ತುವೂ ಇಲ್ಲದ ಶೂನ್ಯವಾದ ಭಾಗವನ್ನು ಅಲೋಕಾಕಾಶವೆಂದೂ ಕರೆಯಲಾಗಿದೆ.[೪೧] ಜಗತ್ತಿನ ಎಲ್ಲ ವಸ್ತುಗಳು ಪರಿಮಾಣವನ್ನು ಹೊಂದುತ್ತವೆ ಎಂಬುದು ನಿತ್ಯಸತ್ಯ. ಈ ಪರಿಣಾಮಕ್ಕೆ ಕಾರಣವಾಗಿರುವುದೇ ಕಾಲತತ್ವ. ಇದು ಅನಾದಿ ಮತ್ತು ಅನಂತ ಆದರೂ ವ್ಯವಹಾರಿಕವಾಗಿ ವರ್ಷ, ತಿಂಗಳು, ದಿನ ಎಂಬ ವಿಭಾಗವುಂಟು.

ಪುದ್ಗಲ :

ಜೈನ ದೃಷ್ಟಿಯಲ್ಲಿ ಜಗತ್ತಿನಲ್ಲಿರುವ ಪ್ರತಿಯೊಂದು ವಸ್ತುವು ಪುದ್ಗಲದಿಂದಲೇ ವಿಕಾಸಹೊಂದಿದೆ. ಪುದ್ಗಲವೆಂದರೆ ಸೂಕ್ಷ್ಮವಾದ ಮೂಲ ಧಾತುಗಳು. ಭೂಮಿ, ಜಲ, ನೆಲ ಮುಂತಾದವು ಪುದ್ಗಲದ ಸ್ಥಲ ಅಭಿವ್ಯಕ್ತಿಗಳು, ಇವು ಭೌತಿಕ ಪ್ರಪಂಚದ ಆಧಾರ, ಇವು ಸದಾ ಚಲನೆಯಲ್ಲಿದ್ದು ವೈವಿಧ್ಯಪೂರ್ಣವಾದ ರೂಪ ಹಾಗೂ ಆಕಾರಗಳಿಗೆ ಕಾರಣವಾಗುತ್ತವೆ.

ಬಂಧ-ಮುಕ್ತಿ :

ಜೈನದರ್ಶನವೂ ಜೀವಕ್ಕೆ ಜನ್ಮಾಂತರಗಳುಂಟು ಎಂದು ಒಪ್ಪಿರುವದರಿಂದ ಅದಕ್ಕೆ ಕಾರಣವಾದದ್ದು ಕರ್ಮವೇ. ಆದರೆ ಉಳಿದ ದರ್ಶನಗಳಿಗಿಂತ ಕರ್ಮದ ಕಲ್ಪನೆಯು ಇಲ್ಲಿ ಸಂಪೂರ್ಣಭಿನ್ನ. ಕರ್ಮವು ಭೌತಿಕ. ಕಬ್ಬಿಣದೊಂದಿಗೆ ಕಾಖವು ಬೆರೆಯುವಂತೆ ಕರ್ಮಪುದ್ಗಲಗಳು ಜೀವನಲ್ಲಿ ಬೆರೆತು ಅವನನ್ನು ಅಧೋಗತಿಗೆಳೆಯುತ್ತವೆ.[೪೨] ಜೀವನಧ್ಯೇಯ, ಈ ಅಜೀವದ ರೂಪವಾದ ಪುದ್ಗಲದಿಂದ ತಪ್ಪಿಸಿಕೊಳ್ಳುವುದು. ಬಂಧನ ಮತ್ತು ಮುಕ್ತಿಯ ಗತಿಗಳನ್ನು ಜೈನದರ್ಶನದಲ್ಲಿ ಮುಂದಿನಂತೆ ವಿವರಿಸಲಾಗಿದೆ. ಮೊದಲು ಆತ್ಮದೊಳಗೆ ಕರ್ಮದ 'ಆಸ್ರವ'ವಾಗುತ್ತದೆ. ಇದರಿಂದ ಆಗುವುದೇ 'ಬಂಧ'. ಕರ್ಮದ ಆಸ್ರವದಿಂದ ಉತ್ಪನ್ನವಾದ (ಫಲಗಳಾದ) ಸುಖ ಮತ್ತು ದುಃಖಗಳನ್ನು ಅನುಭವಿಸುವದರ ಮೂಲಕ ಅದು ಕರಗುತ್ತದೆ. ಆದರೆ ಸಾಮಾನ್ಯ ಮನುಷ್ಯನಲ್ಲಿ ಇಚ್ಛೆಯ ಕಾರಣದಿಂದ ಒಳ್ಳೆಯ ಅಥವಾ ಕೆಟ್ಟ ಕರ್ಮವು ಸತತವಾಗಿ ಆತ್ಮನಲ್ಲಿಗೆ ಹರಿಯುತ್ತಲೇ ಇದ್ದು, ಆತ್ಮ ಯಾವಾಗಲೂ 'ಬಂಧ'ದಲ್ಲಿಯೇ ಇರುತ್ತದೆ. ಈ 'ಕಾರ್ಮಣ ಶರೀರ'ವು ಆತ್ಮನನ್ನು ತನ್ನ ನೂತನ ಸ್ಥಿತಿಯಲ್ಲೂ ಅನುಸರಿಸುತ್ತದೆ. ಈ ರೀತಿಯಲ್ಲಿ ಅನಾದಿಯಾಗಿಯೂ ಮತ್ತು ಅನಂತವಾಗಿಯೂ ಇರುವ ಜನ್ಮಾಂತರ ನಡೆಯುತ್ತಲೇ ಇರುತ್ತದೆ.[೪೩] ನೂತನ ಕರ್ಮದ ಅಸ್ರವವನ್ನು ನಿಲ್ಲಿಸಬಹುದೆಂಬ ಆಶಯದಲ್ಲಿ ಮನುಷ್ಯನ ಮುಕ್ತಿ ಅಡಗಿದೆ. ಪುದ್ಗಲಗಳ ಪ್ರವಾಹ ತಡೆಯುವದಕ್ಕೆ 'ಸಂವರ' ಎನ್ನುತ್ತಾರೆ. ಹಿಂದಿನ ಪುದ್ಗಲಗಳ ಕ್ಷಯಕ್ಕೆ 'ನಿರ್ಜರಾ' ಎಂದು ಹೆಸರು (ಮಿಥ್ಯಾತ್ವ, ಅವಿರತಿ, ಪ್ರಮಾದ, ಕಷಾಯ ಮತ್ತು ಯೋಗ ಈ ಐದು ಬಂಧನದ ಕಾರಣಗಳು ಎಂದು ಉಮಾಸ್ವಾತಿಯ ಅಭಿಪ್ರಾಯ).

---

೪೧. ಡಾ. ಹೀರಾಲಾಲ ಜೈನ (೧೯೪೧) (ಅನು) ಮಿರ್ಜಿ ಅಣ್ಣಾರಾಯ, ಸೇಡಬಾಳ, ಭಾರತೀಯ ಸಂಸ್ಕೃತಿಗೆ ಜೈನಧರ್ಮದ ಕೊಡುಗೆ, ಪು. ೨೭೦.

೪೨. ಸಕಷಾಯತ್ವಾತ್ ಜೀವಃ ಕರ್ಮಣೌ ಯೋಗ್ಯಾನ್
ಪುದ್‌ಗಲಾನ್ ಆದತ್ತೇ ಸಂಬಂಧಃ । ತತ್ವಾರ್ಥಧಿಗಮಸೂತ್ರ ೮, ೯.

೪೩. ಮಿಥ್ಯಾದರ್ಶನಾವಿರತಿಪ್ರಮಾದಕಷಾಯಯೋಗಾಬಂಧಹೇತವಃ (೮.೪.ಸೂ.೧. ಪು.೧೯೨, ೧೯೪) ತತ್ವಾರ್ಥಸೂತ್ರ.

ಜೀವಾತ್ಮನಲ್ಲಿ ಸೇರಿರುವ ಕರ್ಮಪುದ್ಗಲಗಳೆಲ್ಲಾ ಸಾಧನೆಯ ಮೂಲಕ ನಾಶವಾಗುವದರಿಂದ ಆತನ ಊರ್ಧ್ವಗತಿಗೆ ತಡೆಯಾಗುತ್ತಿದ್ದುದೆಲ್ಲವು ನಿವೃತ್ತಿಯಾಗುತ್ತದೆ. ಅನಂತರ ಕರ್ಮರಹಿತವಾದ ಆತ್ಮವು ನಿಸ್ಸಂಗವಾಗುವದರಿಂದ ಹರಳಿನ ಬೀಜವು ಮೇಲೆ ಚಿಮ್ಮುವಂತೆ ಸತತವೂ ಊರ್ಧ್ವಗಾಮಿಯಾಗಿರುತ್ತದೆ. ಇದೇ ಜೈನದ ಮೋಕ್ಷ. ಮತ್ತೆ ಕೆಲವರು ಅತ್ಯಂತ ಊರ್ಧ್ವದಲ್ಲಿ ಆ ಲೋಕಾಕಾಶದಲ್ಲಿ ಉಳಿಯುವುದೇ ಮೋಕ್ಷವೆನ್ನುತ್ತಾರೆ.

ಜೈನದರ್ಶನದಂತೆ ಆತ್ಮನು ಅರ್ಹಂತಸ್ಥಿತಿಯನ್ನು ಹೊಂದುವುದು ಸಮ್ಯಕ್ ದರ್ಶನ, ಸಮ್ಯಕ್ ಜ್ಞಾನ ಮತ್ತು ಸಮ್ಯಕ್ ಚಾರಿತ್ರ,[೪೪] ಈ ಮೂರು ಅಮೂಲ್ಯ ತತ್ವಗಳನ್ನು ಜೀವನದಲ್ಲಿ ಅಳವಡಿಸಿಕೊಂಡಾಗ ಮಾತ್ರ. ಸಮ್ಯಕ್ ದರ್ಶನವೆಂದರೆ ಜೈನಶಾಸ್ತ್ರದಲ್ಲಿ ನಂಬಿಕೆಯನ್ನು ತಳೆಯುವದು ಸಮ್ಯಕ್ ಜ್ಞಾನವೆಂದರೆ ಜೈನಧರ್ಮ ಹಾಗೂ ಅಲ್ಲಿನ ತತ್ವಗಳ ಜ್ಞಾನ. ಸಮ್ಯಕ್ ಚಾರಿತ್ರವೆಂದರೆ-ನಂಬಿಕೆಯ ಮೂಲಕ, ಬೌದ್ಧಿಕವಾಗಿ ಅರಿತದ್ದನ್ನು ಆಚರಣೆಗೆ ತರುವುದು.

ಜೈನದರ್ಶನದ ಪ್ರಕಾರ ಈಶ್ವರಸತ್ತೆಯು ಪ್ರತ್ಯಕ್ಷಾನುಮಾನಾದಿಪ್ರಮಾಣಗಳಿಂದ ಸಿದ್ಧವಾಗಲಾರದು. ಅಂತೆಯೇ ಜಗತ್ತಿನ ವ್ಯಾಖ್ಯಾನಕ್ಕಾಗಿ ಈಶ್ವರನ ಕಲ್ಪನೆಯು ಅನವಶ್ಯಕ. ಜೀವ ಹಾಗೂ ಅಜೀವ ಇವು ನಿತ್ಯವಾಗಿರುವವು. ಇವಾವೂ ಸೃಷ್ಟ ಪದಾರ್ಥಗಳಲ್ಲ. ಜೀವನ ಕರ್ಮಗಳಿಂದ ಉತ್ಪನ್ನವಾದ ಅದೃಷ್ಟ ಶಕ್ತಿಯು, ಜಡಾಣುಗಳನ್ನು ಜಗದ್ರೂಪದಲ್ಲಿ ಸಂಘಟಿಸುವುದು.

'ಪ್ರತಿಯೊಂದು ಕಾರ್ಯಕ್ಕೆ ಒಂದು ಕಾರಣವಿರುವಂತೆ, ಜಗದ್ರೂಪಕಾರ್ಯಕ್ಕೂ ಒಂದು ಕಾರಣವಿದೆ. ಆ ಕಾರಣವೇ ಈಶ್ವರ'' ಇದು ಈಶ್ವರವಾದಿಗಳ ಅಭಿಪ್ರಾಯ. ಇದಕ್ಕೆ ಜೈನರು ಹೇಳುವುದು ಹೀಗೆ-ಜಗತ್ತು ಅನಾದಿ ಅನಂತವಾಗಿದೆ. ಇದು ಯಾವುದಾದರೊಂದು ನಿರ್ದಿಷ್ಟಕಾಲದಲ್ಲಿ ಹುಟ್ಟಿಲ್ಲ. ಅದಕ್ಕಾಗಿ ಜಗತ್ಕಾರಣದ ಪ್ರಶ್ನೆಯೂ ಉದಯಿಸುವುದಿಲ್ಲ. ಅಂದ ಮೇಲೆ ಜಗತ್ತಿನ ಕಾರಣರೂಪದಲ್ಲಿ ಈಶ್ವರನ ಕಲ್ಪನೆಯು ಕೇವಲ ಕಾಲ್ಪನಿಕವಾಗಿದೆ. ಒಂದುವೇಳೆ ಜಗತ್ತಿನ ಕಾರಣವನ್ನು ಹೇಳುವದಾದರೆ, ಆ ಕಾರಣಕ್ಕೂ ಕಾರಣವಿರುವದೆಂದು ಏಕೆ ಹೇಳಬಾರದು? ಹೀಗೆ ಹೇಳುತ್ತಹೋದರೆ ಅನವಸ್ಥಾದೋಷ ಪ್ರಾಪ್ತವಾಗುವುದು. ಅದ್ದರಿಂದ ಜಗತ್ತಿಗೆ ಕಾರಣವಿಲ್ಲವೆಂದು ಹೇಳುವುದೇ ಸಮೀಚೀನಮಾರ್ಗ. ಒಂದು ವೇಳೆ, ಸಂಸಾರದ ಕರ್ತೃವನ್ನು ಅಂಗೀಕರಿಸುವುದಾದರೆ, ಅವನು ಸಾವಯವಿಯಾಗಿಯೇ ಇರಬೇಕುವುದು. ಹಾಗೆಲ್ಲಿದೆ! ಅಂದಮೇಲೆ ವಿದೇಹಿಯಾದ ಈಶ್ವರನಿಗೆ ಕರ್ತೃತ್ವವೇ ಸಂಭವಿಸಲಾರದು. ಈಶ್ವರನು ನಿರವಯವನಾಗಿದ್ದರೂ ಬುದ್ಧಿ ಹಾಗು ಇಚ್ಛಾಶಕ್ತಿಯ ಸಹಾಯದಿಂದ ಜಗತ್ತಿನ ಸೃಷ್ಟಿಯನ್ನು ಮಾಡುವನೆಂದು ಹೇಳಲಿಕ್ಕಾಗದು ಏಕೆಂದರೆ ದೇಹವಿಲ್ಲದ ಕ್ರಿಯಾಶಕ್ತಿಯು ಇರುತ್ತಾದರೂ ಹೇಗೆ? ಈಶ್ವರನು, ಪರಿಪೂರ್ಣ ಹಾಗೂ ಆಪ್ತಕಾಮನು ಆಗಿರುವದರಿಂದ ಅವನು ಯಾವ ಅಭಾವದ ಪೂರ್ತಿಗಾಗಿ ಕಾರ್ಯಸೃಷ್ಟಿಮಾಡುವನು? ಲೀಲೆಯಿಂದ ಅಥವಾ ಕರುಣೆಯಿಂದ ಅವನು ಜಗತ್ತನ್ನು ನಿರ್ಮಿಸಿದ್ದಾನೆಂದರೆ, ಜಗತ್ತಿನ ಪ್ರಾಣಿಗಳಿಗೆ ಇಷ್ಟೊಂದು ಕಷ್ಟನಷ್ಟಗಳನ್ನು ಅನುಭವಿಸುವ ಸಂದರ್ಭ ಅದೇಕೆ ಬರುತ್ತಿತ್ತು? ಮೋಕ್ಷಕ್ಕಾಗಿಯೂ ಈಶ್ವರನನ್ನು ಒಪ್ಪುವುದು ಅನಾವಶ್ಯಕ. ಏಕೆಂದರೆ ಜೀವನು ತನ್ನ ಆತ್ಮಪ್ರಯತ್ನದಿಂದ ಮುಕ್ತಿಯನ್ನು ಹೊಂದುತ್ತಾನಾದ್ದರಿಂದ ಈಶ್ವರನ ಹಸ್ತಕ್ಷೇಪ ಅದರಲ್ಲಿ ಇರಬೇಕಾಗಿಲ್ಲ.

ಜೈನದರ್ಶನದಲ್ಲಿ ಸ್ವೀಕರಿಸಲಾದ ಜೀವ ಮತ್ತು ಪುದ್ಗಲಿನ ಸಂಬಂಧ ಉಚಿತವೆಂದು ತೋರದು. ಶುದ್ಧ ಹಾಗೂ ಚೈತನ್ಯಸ್ವರೂಪವಾದ ಆತ್ಮನಲ್ಲಿ ಅವಿದ್ಯೆಯ ಉತ್ಪತ್ತಿ ಹೇಗೆ ತಾನೆ ಸಾಧ್ಯ? ಅಲ್ಲದೆ ಜೀವನ ಕರ್ಮದಿಂದ ಉದಯಿಸಿದ ಅದೃಷ್ಟಶಕ್ತಿಯು ಪುದ್ಗಲದ ಸಹಾಯದಿಂದ ಜಗತ್ತಿನ ರಚನೆಯನ್ನು ಮಾಡುತ್ತದೆ ಎಂಬ ಅಭಿಪ್ರಾಯವೂ

---

೪೪. ಸಮ್ಯಕ್‌ದರ್ಶನ, ಜ್ಞಾನ, ಚಾರಿತ್ರಾಣಿ ಮೋಕ್ಷಮಾರ್ಗಃ, ತತ್ವಾರ್ಥಧಿಗಮಸೂತ್ರ ೧-೨, ೩.

ಸರಿಯಲ್ಲ. ಏಕೆಂದರೆ ಅದೃಷ್ಟಶಕ್ತಿಯು, ಜಡ ಅಥವಾ ಅಚೇತನವೆಂದು ಸಿದ್ಧವಾದಾಗ, ಅದರಿಂದ ಜಗತ್ತಿನ ನಿರ್ಮಾಣವು ಹೇಗಾಗುವುದು? ಇದಲ್ಲದೆ, ವಿಭಿನ್ನ ಜೀವಿಗಳ ಕರ್ಮಗಳು ವಿಭಿನ್ನವಾಗಿರುವವು, ಮತ್ತು ಅವು ವಿಭಿನ್ನಫಲಗಳನ್ನೇ ಕೊಡುತ್ತಿರುವವು. ಅದೃಷ್ಟಶಕ್ತಿಯಿಂದಲೇ ಜಗತ್ತಿನ ಸೃಷ್ಟಿಯಾಗುವುದಾದರೆ, ವಿಭಿನ್ನ ಜೀವಿಗಳಿಗೆ ವಿಭಿನ್ನ ಜಗತ್ತು ಉಂಟಾಗಬೇಕಾಗುವುದು. ಆದರೆ, ಜಗತ್ತು ಎಲ್ಲರಿಗೂ ಸಾಮಾನ್ಯವಾಗಿರುವುದು ಅನುಭವ ಸಿದ್ಧವಾಗಿದೆ. ಆದುದರಿಂದ ಜೈನದರ್ಶನ ಕೊಡುವ ಸಾಮಾನ್ಯ ಜಗತ್ತಿನ ವ್ಯಾಖ್ಯೆ, ಜಟಿಲವಾಗಿದೆ. ಅಲ್ಲದೆ ಆತ್ಮ ಮತ್ತು ಪುದ್ಗಲ ಸಂಬಂಧವೂ ಸ್ಪಷ್ಟವಾಗುವುದಿಲ್ಲ.[೪೫] ಏಕೆಂದರೆ ಜೀವ ಮತ್ತು ಪುದ್ಗಲಿನ ಸಂಬಂಧ ಅನಾದಿಯಾದುದರಿಂದ ಮೋಕ್ಷದ ಕಲ್ಪನೆ ಇಲ್ಲಿ ಅಸಾಧ್ಯವಾಗುವುದು. ಇದೂ ಅಲ್ಲದೆ ಆತ್ಮ ಮತ್ತು ಪುದ್ಗಲಗಳನ್ನು ಸಂಬಂಧಗೊಳಿಸುವವರು ಯಾರು? ಎಂಬುದಕ್ಕೆ ಸರಿಯಾದ ಉತ್ತರ ದೊರೆಯದು. ಜೈನದರ್ಶನದ ಪ್ರಕಾರ ಆತ್ಮವು ಯಾವ ಶರೀರದಲ್ಲಿ ಪ್ರವೇಶಿಸುತ್ತದೆಯೋ ಆ ಶರೀರದಂತೆ ರೂಪಧರಿಸುತ್ತದೆ ಎಂದಾದರೆ, ಇರುವೆಯ ಶರೀರದಲ್ಲಿ ಪ್ರವೇಶವಾಗುವ ಆತ್ಮಕ್ಕೂ ಮತ್ತು ಮನುಷ್ಯ ಶರೀರದಲ್ಲಿ ಪ್ರವೇಶವಾಗುವ ಆತ್ಮಕ್ಕೂ ಭೇದವಿದೆ. ಅಲ್ಲದೆ ಮಗುವಿನ ವಿಕಾಸದೊಂದಿಗೆ ಅದರಲ್ಲಿ ಆತ್ಮವೂ ಬೆಳೆಯುತ್ತ ಹೋಗುತ್ತದೆ. ಈ ರೀತಿ ಸಂಕೋಚವಿಕಾಸಶೀಲ ಆತ್ಮ ಅನಿತ್ಯ, ಮತ್ತು ಪರಿವರ್ತನಶೀಲವಾಗಬೇಕಾಗುತ್ತದೆ. ಆತ್ಮವೇ ಅನಿತ್ಯವೆಂದಾದ ಮೇಲೆ ಮೋಕ್ಷವೆಂಬುದು ಯಾರಿಗಾಗಿ? ಆದ್ದರಿಂದ ಆತ್ಮವನ್ನು ಚೈತನ್ಯ, ಪರಿವರ್ತನಶೀಲ, ಅಪರಿಣಾಮೀ ಎಂದು ಸ್ವೀಕರಿಸಬೇಕಾಗುತ್ತದೆ. ಮಲಬದ್ಧಜೀವ ಹಾಗೂ ಮುಕ್ತ ಆತ್ಮಗಳ ಸಂಚಲನಕ್ಕೆ ಈಶ್ವರನ ಅಸ್ತಿತ್ವ ಅನಿವಾರ್ಯ. ಅವನು ಕರುಣಾಮಯ, ದಯಾಮಯನಾಗಿದ್ದಾನೆ. ಅವನು ಜೀವಿಗಳ ಆತ್ಮಕಲ್ಯಾಣಕ್ಕಾಗಿ ಜಗತ್ತನ್ನು ಸೃಷ್ಟಿಸುತ್ತಾನೆ. ಆದುದರಿಂದ ಸೃಷ್ಟಿ ಅನಿವಾರ್ಯವಲ್ಲ, ಆವಶ್ಯಕವಾಗಿದೆ. ಜೈನರು ಈಶ್ವರ ಕಾರಣವೊಪ್ಪಲು ಅನವಸ್ಥಾದೋಷ ಮುಂದೊಡ್ಡುತ್ತಾರೆ. ಆದರೆ ಅವನನ್ನು ನಿತ್ಯ ಹಾಗೂ ಅನಾದಿ ಎಂದು ನಂಬಿದಲ್ಲಿ ಈ ದೋಷ ತನ್ನಿಂದತಾನೇ ಪರಿಹಾರವಾಗುತ್ತದೆ. ಆತ್ಮ ಮತ್ತು ಜಡತತ್ವದ ಸಂಬಂಧವನ್ನು ಪ್ರದರ್ಶಿಸಲು ಈಶ್ವರನ ಆವಶ್ಯಕತೆ ಅನಿವಾರ್ಯವಾಗಿದೆ.

ಜೈನದರ್ಶನದಲ್ಲಿ ಬಂಧಮುಕ್ತಿಗಾಗಿ ಜೀವನ ಆತ್ಮಪ್ರಯತ್ನದ ಮೇಲೆ ವಿಶೇಷವಾದ ಒತ್ತುಕೊಡಲಾಗಿದೆ. ಜೀವನು ರತ್ನತ್ರಯದ ಬಲದಿಂದ ಮುಕ್ತನಾಗಬಲ್ಲ. ಇಲ್ಲಿ ಅವನಿಗೆ ಈಶ್ವರನ ಅನುಕಂಪ ಬೇಕಾಗಿಲ್ಲ. ಆದರೆ ಮನುಷ್ಯ ಅಪೂರ್ಣ ಹಾಗೂ ಅಸೀಮಿತನಾಗಿದ್ದಾನೆ. ಆದುದರಿಂದ ಅವನಿಗೊಂದು ಪೂರ್ಣ ಹಾಗೂ ಅಸೀಮತತ್ವದ ಸಹಾಯ ಅಥವಾ ಅನುಗ್ರಹದ ಆವಶ್ಯಕತೆಯಿದೆ. ಅದು ಈಶ್ವರ, ಸ್ಥಲ, ಬ್ರಹ್ಮ, ಶಿವ ಎಂದೆಲ್ಲ ಆಗಿದೆ. ಆದರ ಅನುಗ್ರಹದಿಂದ ಜೀವ ಅನಾದಿಬಂಧನದಿಂದ ಬಿಡುಗಡೆಹೊಂದುತ್ತಾನೆ. ಆತ್ಮನ ಪ್ರತಿಯೊಂದು ಕ್ರಿಯೆಯಲ್ಲಿ ಈಶ್ವರಾನುಗ್ರಹ ಅಪೇಕ್ಷಣೀಯವಾಗಿದೆ. ಬಾವಿಯಲ್ಲಿ ಬಿದ್ದ ಕೊಡವನ್ನು ಹೊರತೆಗೆಯಲು ಒಬ್ಬ ವ್ಯಕ್ತಿ ಮನಸ್ಸು ಮಾಡದೆ ಹೇಗೆ ಅದು ಹೊರಬರಲಾರದೋ ಹಾಗೆಯೇ, ಜೀವನೂ ಕೇವಲ ತನ್ನ ಪ್ರಯತ್ನಗಳಿಂದ ಬಿಡುಗಡೆಹೊಂದಲಾರ, ಅವನಿಗೆ ಈಶ್ವರಾನುಗ್ರಹವೂ ಅನಿವಾರ್ಯವಾಗಿದೆ.

ಸೈದ್ಧಾಂತಿಕವಾಗಿ ಜೈನರು ಈಶ್ವರಾಸ್ತಿತ್ವವನ್ನು ಖಂಡಿಸಿದರೂ ವ್ಯಾವಹಾರಿಕ ದೃಷ್ಟಿಕೋನದಿಂದ ನೋಡಿದರೆ, ತೀರ್ಥಂಕರರನ್ನು ಅಲ್ಲಿ ಈಶ್ವರಸ್ಥಾನಕ್ಕೇರಿಸಲಾಗಿದೆ. ಆದರೆ ಈಶ್ವರನಿಗೂ ಮತ್ತು ಮುಕ್ತಾತ್ಮರಿಗೂ ಭೇದವಿದೆ. ಹೇಗೆಂದರೆ, ಮುಕ್ತಾತ್ಮನು ಈಶ್ವರನ ಸರಿಸಮನಾಗಬಹುದು. ಆದರೆ ಸ್ವಯಂಈಶ್ವರನಾಗುವಂತಿಲ್ಲ. ಆದುದರಿಂದ ನಿರಪೇಕ್ಷವನ್ನು ಸ್ವೀಕರಿಸದ ಸಾಪೇಕ್ಷವಾದ, ಒಂದು ಅಪೂರ್ಣ ಸಿದ್ಧಾಂತವೆಂದು ಸಿದ್ಧವಾಗುತ್ತದೆ.[೪೬]

---

೪೫. Mohanlal Mehta (1971) Jaina Philosophy, p. 31.

೪೬. Sivajnanusidhiyar (1984) - v. 41 (Reputation of Jainism) (Tran. Eng) K.Sivaraman Tirupandal

ಪರಮತತ್ವಕ್ಕೆ ಸಂಬಂಧಿಸಿದಂತೆ ಜೈನರ ಸಾಪೇಕ್ಷವಾದ ಹಾಗೂ ಅನೇಕಾಂತಚಿಂತನಗಳು ಮಹತ್ವಪೂರ್ಣವಾಗಿವೆಯಾದರೂ ಪರಮೇಶ್ವರನ ಅಸ್ತಿತ್ವ ಅದರಲ್ಲಿ ಸ್ವೀಕೃತವಾಗಲಿಲ್ಲ. ಆದುದರಿಂದ ಇದು ಭಕ್ತಿ ಹಾಗೂ ಸಮರಸ ಭಾವನಾನುಕೂಲ ಪ್ರತೀತವಾಗಲಿಲ್ಲ. ದಕ್ಷಿಣದಲ್ಲಿ ಜೈನದರ್ಶನದ ಅನೀಶ್ವರವಾದವು ದೀರ್ಘಕಾಲದವರೆಗೆ ಪ್ರಭಾವಶಾಲಿಯಾಗಿತ್ತು. ಆದರೆ ಭಕ್ತಿಪರಂಪರೆಯ ಪ್ರವಾಹದ ಮುಂದೆ[೪೭] ಅದು ನೆಲೆಗಾಣಲಿಲ್ಲ. ತಮಿಳುನಾಡಿನಲ್ಲಿ ಶೈವರು ಭಕ್ತಿ, ಪ್ರೇಮ ಹಾಗೂ ಅನುಗ್ರಹಕ್ಕೆ ಹೆಚ್ಚಿನ ಮಹತ್ವಕೊಟ್ಟು ಶೈವಸಿದ್ಧಾಂತವನ್ನು ಸ್ಥಿರಗೊಳಿಸಿದರು.[೪೮] ಇದೇ ರೀತಿ ಕರ್ನಾಟಕದಲ್ಲಿಯೂ ಶಿವಾನುಗ್ರಹಕ್ಕೆ ಮಹತ್ವ ನೀಡಿದ ಶೈವರು ಅನೀಶ್ವರವಾದಿ ಮತಗಳನ್ನು ಖಂಡಿಸಿದರು. ಆಗಲೇ ಶೈವದೀಕ್ಷೆಯಂಥಹ ಮತಾಂತರ ಚಟುವಟಿಕೆಗಳು ನಡೆದುದರಿಂದ ಏಕಕಾಲಕ್ಕೆ ಭಕ್ತಿಪರಂಪರೆಯನ್ನವಲಂಬಿಸಿದ ಅನುಯಾಯಿಗಳ ಸಂಖ್ಯೆ ಹೆಚ್ಚಿತೆಂದು ಹೇಳಲಾಗುತ್ತದೆ.[೪೯] ಹಲವಾರು ವಿಷಯಗಳಲ್ಲಿ ಜೈನಧರ್ಮವು, ವೀರಶೈವವನ್ನು ಹೋಲುತ್ತದೆ. ಜೈನಧರ್ಮಪಂಥದಲ್ಲಿ ವೀರಶೈವಧರ್ಮಪಂಥದ ಶಿವಪಾರಮ್ಯವಿಲ್ಲ[೫೦]ವೆಂಬುದು ನಿಜವಾದರೂ ಜೈನರ ಎರಡು ಮುಖ್ಯ ಪಂಥಗಳಲ್ಲಿ ಒಂದಾದ ಶ್ವೇತಾಂಬರರಲ್ಲಿ 'ಶಿವ' ಪದದ ಬಗ್ಗೆ ಅಪಾರಭಕ್ತಿಯಿದೆ; ಪೂಜ್ಯತೆಯಿದೆ. ಅಲ್ಲಿ 'ಶಿವ' ಪದಕ್ಕೆ ಮುಕ್ತಿ, ಮೋಕ್ಷ, ನಿರ್ವಾಣ ಎಂಬ ಅರ್ಥವಿದೆ.

ಇಷ್ಟಾಗಿಯೂ ಜೈನದರ್ಶನವು ನಾಸ್ತಿಕ ಪಂಥವೆ? ಎಂಬ ಪ್ರಶ್ನೆ ಪುನಃ ತಲೆದೋರುತ್ತದೆ. ಇದಕ್ಕೆ ಉತ್ತರ ಸಹಜವಾಗಿಯೇ, ನಾಸ್ತಿಕ ಎಂಬ ಪದಕ್ಕೆ ನಾವು ನೀಡುವ ಅರ್ಥವನ್ನು ಅವಲಂಬಿಸಿದೆ. ಸಂಸ್ಕೃತದಲ್ಲಿ ಈ ನಾಸ್ತಿಕ ಎಂಬ ಪದಕ್ಕೆ ಇರುವ ಅರ್ಥವನ್ನು ಗಮನಿಸಿದರೆ ಉತ್ತರ ಸ್ಪಷ್ಟವಾಗಿಯೇ ಇದೆ. ನಾಸ್ತಿಕ ಎಂಬ ಪದದ ಅರ್ಥ ಪರಲೋಕದಲ್ಲಿ ನಂಬಿಕೆಯಿಲ್ಲದವನು ಎಂದು.[೫೧] ಎಂದರೆ, ಶಾಶ್ವತವಾದ ಆತ್ಮವೊಂದರಲ್ಲಿ ನಂಬಿಕೆಯಿಲ್ಲದವನು ಎಂಬುದಾಗಿ. ಈ ಅರ್ಥದಲ್ಲಿ, ಇರುವ ಏಕೈಕ ನಾಸ್ತಿಕಪಂಥವೆಂದರೆ ಭೋಗವಾದಿಯಾದ ಚಾರ್ವಾಕ ಪಂಥ. ಈ ಪದದ ಅರ್ಥ ಅನಂತರ ಬದಲಾವಣೆ ಹೊಂದಿ, ನಾಸ್ತಿಕ ಎಂದರೆ ವೇದಪ್ರಾಮಾಣ್ಯವನ್ನು ನಿರಾಕರಿಸುವವನು ಎಂದಾಯಿತು. ಆ ಅರ್ಥದಲ್ಲಿ ಜೈನದರ್ಶನವು ನಾಸ್ತಿಕಪಂಥ. ಕೆಲವರು ಇದನ್ನೂ ಒಪ್ಪಲಾರರು.[೫೨] ನಾಸ್ತಿಕ ಎಂದರೆ ಇಂಗ್ಲೀಷಿನಲ್ಲಿ ಎತಿಯಸ್ಟಿಕ್ (atheistic) ಎಂಬ ಪದಕ್ಕಿರುವ ಅರ್ಥದಂತೆ 'ದೇವರನ್ನು ನಂಬದವನು' ಎಂದಾದರೆ, ಆಗ ಜೈನದರ್ಶನಸ್ವರೂಪದ ವಿಷಯದಲ್ಲಿ ಒಂದು ಸಂದೇಹವು ಉದಿಸಬಹುದು. ಏಕೆಂದರೆ, ಅದು ದೇವರನ್ನು ನಂಬದಿದ್ದರೂ ದೇವತ್ವದಲ್ಲಿ ನಂಬಿಕೆಯನ್ನು ಇಟ್ಟಿದೆ. ವಾಸ್ತವವಾಗಿ ಪ್ರತಿಯೊಂದು ಮುಕ್ತಜೀವವೂ ದಿವ್ಯಸ್ವರೂಪ. ಇವುಗಳ ಸಂಖ್ಯೆಗೆ ಸಂಕಲನ ಸಾಧ್ಯವೇ ಹೊರತು, ಅದರಿಂದ ಏನನ್ನೂ ಕಳೆಯುವುದು ಸಾಧ್ಯವಿಲ್ಲವಾಗಿ, ಅಂತಹ ಮುಕ್ತಜೀವಗಳು ಅನೇಕವಿರಬಹುದು. ಹೀಗೆ, ದೇವರು ಎಂಬುದರ ಅರ್ಥ ಈ ಜಗತ್ತಿನ ಸೃಷ್ಟಿಗೆ ಕಾರಣವಾದ ಒಬ್ಬ ಪರಮವ್ಯಕ್ತಿ ಎಂದು ನಾವು ಭಾವಿಸುವುದಾದರೆ,

---

47. Dr. Radhakrishnan (1969) Indian Philosophy, Vol. I, p. 305.

೪೮. ಸಿದ್ದಯ್ಯ ಪುರಾಣಿಕ (೧೯೭೪) ಶರಣಚರಿತಾಮೃತ, ಪು. ೮೨, ೮೩.

೪೯. ಡಾ. ಆರ್. ಸಿ. ಹಿರೇಮಠ (ಸಂ) (೧೯೭೧) ಬಸವಪುರಾಣ ಸಂಧಿ, ಪು. ೪೮-೫೧.

೫೦. ಡಾ. ಎಂ.ಡಿ. ವಸಂತರಾಜ್ (೧೯೮೪) ವೀರಶೈವ ಮತ್ತು ಜೈನಧರ್ಮ : ಒಂದು ಸಮೀಕ್ಷೆ, ಅರ್ಚನ, ಪು. ೮೫೫.

೫೧. ಎಂ. ಹಿರಿಯಣ್ಣ (೧೯೭೩) ಭಾರತೀಯ ತತ್ತ್ವಶಾಸ್ತ್ರದ ರೂಪುರೇಖೆಗಳು, ಪು. ೧೮೨.

೫೨. (i) 'ಜೈನಧರ್ಮದಲ್ಲಿ ನಾಸ್ತಿಕರನ್ನು ಟೀಕಿಸುವ ಭಾಗಗಳಿವೆ. ತಾವೇ ನಾಸ್ತಿಕರಾದರೆ ನಾಸ್ತಿಕರನ್ನು ಟೀಕಿಸುತ್ತಿದ್ದರೆ? ವೈದಿಕರಿಗಿಂತ ಜೈನರು ಹೇಳುವ ದೇವರ ಕಲ್ಪನೆ ಭಿನ್ನವಾದ ಮಾತ್ರಕ್ಕೆ ಅವರನ್ನು ನಾಸ್ತಿಕರೆನ್ನುವುದು ನ್ಯಾಯವೆ? ಜೈನರನ್ನು ನಾಸ್ತಿಕರೆನ್ನುವುದು ಸಂಪೂರ್ಣ ತಪ್ಪು.' ಬಿ.ಬಿ. ಮಹೀಶವಾಡಿ (೧೯೭೭) ಜೈನಸಿದ್ಧಾಂತ ಸಮೀಕ್ಷೆ, ಪು. ೭೩.
(ii) ಶ್ರೀ ಕಾ.ಸ. ಧರಣೇಂದ್ರಯ್ಯ (೧೯೮೧) ಜೈನಧರ್ಮ, ಭಾರತೀಯ ದರ್ಶನ ಸಂಸ್ಕೃತಿ, ಪು. ೧೭೭.

ಜೈನದರ್ಶನವು ನಾಸ್ತಿಕಪಂಥ ಎಂದು ಹೇಳಬೇಕಾಗುತ್ತದೆ. ದೈವತ್ವವನ್ನು ಕುರಿತ ಅಂಥದೊಂದು ಕಲ್ಪನೆ ಸ್ವವಿರೋಧಿ ಎಂದು ಜೈನದರ್ಶನವು ಉದ್ದೇಶಪೂರ್ವಕವಾಗಿಯೇ ನಿರಾಕರಿಸುತ್ತದೆ. ಜಗತ್ತೊಂದನ್ನು ಸೃಷ್ಟಿಮಾಡುವ ಅಗತ್ಯ ದೇವರಿಗಿದೆ ಎಂದು ಹೇಳುವುದಾದರೆ, ಅವನಿಗೊಂದು ಬಯಕೆಯಿದೆ ಎಂದಾಯಿತು. ಪರಮವಸ್ತುವಾಗಿರಲು ಆಗತ್ಯವಾದ ಪರಿಪೂರ್ಣತೆಯ ದೃಷ್ಟಿಯಿಂದ ಅದು ಅಸಂಗತವಾಗುತ್ತದೆ. ಆದುದರಿಂದ ದೇವರೂ ಇಲ್ಲ, ಜಗತ್ತು ಸೃಷ್ಟಿಯಾಗಲೇ ಇಲ್ಲ. ಈ ದೃಷ್ಟಿಯಿಂದ ಜೈನರು, ಸಾಂಪ್ರದಾಯಿಕ ಸಿದ್ಧಾಂತವನ್ನೇ ಕಟ್ಟುನಿಟ್ಟಾಗಿ ಎತ್ತಿ ಹಿಡಿಯುವ ಮೀಮಾಂಸಕರ ದೃಷ್ಟಿಯನ್ನೇ ಅನುಮೋದಿಸುತ್ತಿರುವುದು ವಿಚಿತ್ರವಾಗಿದೆ.

ಕೊನೆಯದಾಗಿ ಇತರ ಯಾವುದೇ ಪಂಥಕ್ಕಿಂತ ಹೆಚ್ಚಾಗಿ ಜೈನಪಂಥವು ಮಾನವನಿಗೆ ಸಂಪೂರ್ಣವಾಗಿ ಧಾರ್ಮಿಕ ಸ್ವಾಧೀನತೆ ಮತ್ತು ಸ್ವಾತಂತ್ರ್ಯಗಳನ್ನು ಕೊಡುತ್ತದೆ.

ಆಸ್ತಿಕದರ್ಶನಗಳಲ್ಲಿ 'ಸ್ಥಲ' ತತ್ತ್ವ:

೧. ನ್ಯಾಯ ವೈಶೇಷಿಕ:

ಸಮಸ್ತಜ್ಞಾನವು, ಸ್ವಭಾವತಃ ತನ್ನ ಆಚೆಗಿರುವ, ತಾನಲ್ಲದ, ವಸ್ತುವೊಂದರ ಕಡೆಗೆ ಬೆರಳಿಟ್ಟು ತೋರಿಸುತ್ತದೆ ಎಂಬ ಪ್ರಮೇಯದಿಂದ ಈ ಸಿದ್ಧಾಂತ ಪ್ರಾರಂಭವಾಗುತ್ತದೆ. ವೈಶೇಷಿಕ ದರ್ಶನದಲ್ಲಿ ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯ ಮತ್ತು ಅಭಾವವೆಂಬ ಏಳು ಪದಾರ್ಥಗಳು.[೫೩] ದ್ರವ್ಯವು ಪೃಥ್ವಿ, ಜಲ, ತೇಜಸ್ಸು, ವಾಯು, ಆಕಾಶ, ಕಾಲ, ದಿಕ್ ಮತ್ತು ಆತ್ಮ ಎಂದು ಒಂಭತ್ತು ವಿಧ. ರೂಪ, ರಸ, ಗಂಧ, ಸ್ಪರ್ಶ, ಸಂಖ್ಯಾ,[೫೪] ಪರಿಮಾಣ, ಪಥಕ್ತ್ವ, ಸಂಯೋಗ, ವಿಭಾಗ, ಪರತ್ವ, ಅಪರತ್ವ, ಗುರುತ್ವ, ದ್ರವತ್ವ, ಸ್ನೇಹ, ಶಬ್ದ, ಬುದ್ಧಿ, ಸುಖ, ದುಃಖ, ಇಚ್ಛಾ, ದ್ವೇಷ, ಪ್ರಯತ್ನ, ಧರ್ಮ, ಅಧರ್ಮ, ಸಂಸ್ಕಾರ ಎಂದು ಗುಣ ಇಪ್ಪತ್ನಾಲ್ಕುವಿಧ. ಉತ್ಕ್ಷೇಪಣ, ಅಪಕ್ಷೇಪಣ, ಆಕುಂಚನ, ಪ್ರಸಾರಣ ಮತ್ತು ಗಮನ ಎಂಬುದಾಗಿ ಕರ್ಮವು ಐದುವಿಧ. ಸಮಾನವಾದ ಎಲ್ಲಾ ವಸ್ತುಗಳಲ್ಲಿರುವ ಸಾಧಾರಣವಾದ ನಿತ್ಯಧರ್ಮವೇ ಸಾಮಾನ್ಯ. ಇದು ಅನೇಕ ವಿಧ. ಒಂದು ವಸ್ತುವು ಮತ್ತೊಂದು ವಸ್ತುವಿಗಿಂತ ಪ್ರತ್ಯೇಕ ಎಂಬ ಭಾವನೆಗೆ ಕಾರಣವಾಗಿರುವುದೇ ವಿಶೇಷ. ಸಮವಾಯವೆಂಬ ಪ್ರತ್ಯೇಕ ಪದಾರ್ಥವನ್ನು ನ್ಯಾಯ ವೈಶೇಷಿಕರಲ್ಲದೆ ಉಳಿದ ದಾರ್ಶನಿಕರಾರೂ ಒಪ್ಪಿಲ್ಲ. ಅಭಾವವು ನಾಲ್ಕು ವಿಧ - ಪ್ರಾಗಭಾವ, ಪ್ರಧ್ವಂಸಾಭಾವ, ಅತ್ಯಂತಾಭಾವ ಮತ್ತು ಅನ್ಯೋನ್ಯಾಭಾವ.[೫೫]

ನ್ಯಾಯದರ್ಶನವು ಪ್ರಮಾಣವನ್ನು ನಿರೂಪಿಸುವ ಶಾಸ್ತ್ರವಾದುದರಿಂದ ತತ್ವವಿಭಾಗವನ್ನು ಪ್ರತ್ಯೇಕವಾಗಿ ಹೇಳಿಲ್ಲ. ಮುಂದಿನ ವ್ಯಾಖ್ಯಾನಕಾರರು ವೈಶೇಷಿಕ ದರ್ಶನದಲ್ಲಿ ತತ್ವವನ್ನು ಅಳವಡಿಸಿದರು. ಆದರೂ ಪ್ರಮಾಣ, ಮುಂತಾದ ಹದಿನಾರು ತತ್ವಗಳನ್ನು ಮೋಕ್ಷ ಸಾಧನಾಂಗವಾಗಿ ನಿರೂಪಿಸಿದೆ. ಅವು ಇಂತಿವೆ - ಪ್ರಮಾಣ, ಪ್ರಮೇಯ, ಸಂಶಯ, ಪ್ರಯೋಜನ, ದೃಷ್ಟಾಂತ, ಸಿದ್ಧಾಂತ, ಅವಯವ, ತರ್ಕ, ನಿರ್ಣಯ, ವಾದ, ಜಲ್ಪ, ವಿತ್ತಂಡ, ಹೇತ್ವಾಭಾಸ, ಛಲ, ಜಾತಿ, ನಿಗ್ರಹಸ್ಥಾನ.

---

೫೩. ದುಂಡಿರಾಜಶಾಸ್ತ್ರೀ (೧೯೨೩) ವೈಶೇಷಿಕದರ್ಶನ (ಭಾಗ-೧) ಪು. ೧.

೫೪. ಮಹೇಶ ಅಡಕೋಳಿ. ಶಂಕರಭಟ್ಟ (೧೯೯೨) ಅನ್ನಂಭಟ್ಟ ವಿರಚಿತ ತರ್ಕಸಂಗ್ರಹ, ೨.೪, ಪು. ೧.

೫೫. "ಶಿವಾದ್ವೈತಿಗಳು ಶಿವಸ್ವರೂಪವಾದ ಸೃಷ್ಟಿಯ ವಿಷಯದಲ್ಲಿ ಪ್ರಾಗಭಾವ-ಪ್ರಧ್ವಂಸಾಭಾವಗಳೆರಡನ್ನೇ ಅಂಗೀಕರಿಸಿದ್ದಾರೆ. ಅನ್ಯೋನ್ಯಾಭಾವ, ಅತ್ಯಂತಾಭಾವಗಳನ್ನು ಮನ್ನಿಸಿಲ್ಲ." ಡಾ. ಜ.ಚ.ನಿ. (೧೯೭೭) ಶಿವಾದ್ವೈತದರ್ಶನ, ಪು. ೨೭. ದಳ: ಒಂದು.

ವೈಶೇಷಿಕ ದರ್ಶನದಂತೆ ಪ್ರಳಯಕಾಲದಲ್ಲಿ ಪ್ರತ್ಯೇಕವಾಗಿದ್ದ ಪರಮಾಣುಗಳಲ್ಲಿ ಈಶ್ವರನ ಸಂಕಲ್ಪದಿಂದ ಚಲನೆಯುಂಟಾಗಿ ದ್ವ್ಯಣುಕ, ತ್ರ್ಯಣುಕ ಮುಂತಾದ ಕ್ರಮದಿಂದ ಒಂದುಗೂಡಿ ಈ ಜಗತ್ತು ನಿರ್ಮಾಣವಾಗುತ್ತದೆ.[೫೬] ಆದ್ದರಿಂದ ಈಶ್ವರನು ಕೇವಲ ನಿಮಿತ್ತಕಾರಣ. ಪರಮಾಣುಗಳೇ ಉಪಾದಾನ ಕಾರಣ; ಜಗತ್ತು ಪಂಚಭೂತಾತ್ಮಕವಾಗಿದೆ. ಇವರು ಕಾರ್ಯಕಾರಣಭಾವದ ವಿಚಾರದಲ್ಲಿ ಅಸತ್ಕಾರ್ಯವಾದಿಗಳು. ಅಂದರೆ ಕಾರ್ಯವು ಕಾರಣದಲ್ಲಿ ಮೊದಲು ಇರುವದಿಲ್ಲ ಎಂಬುದು ಇವರ ಅಭಿಮತ.

ನ್ಯಾಯಮತವು ಜಗತ್ತಿನ ಉತ್ಪತ್ತಿಯ ವಿಷಯದಲ್ಲಿ ವೈಶೇಷಿಕ ಸಿದ್ಧಾಂತವನ್ನೇ ಅನುಸರಿಸುತ್ತದೆ. ಆದ್ದರಿಂದ ಈ ಎರಡು ದರ್ಶನಗಳನ್ನು 'ಸಮಾನತಂತ್ರ' ಎಂದು ಕರೆಯಲಾಗಿದೆ.

ವೈಶೇಷಿಕಮತದಲ್ಲಿ ಜೀವಾತ್ಮನು ಅಚೇತನ, ವಿಭುಪರಿಮಾಣವುಳ್ಳವನು ಮತ್ತು ಸ್ವತಂತ್ರ ಜ್ಞಾನಕ್ಕೆ ಆಶ್ರಯನೇ ಹೊರತು ಜ್ಞಾನಸ್ವರೂಪನಲ್ಲ.[೫೭] ಜೀವಾತ್ಮರು ಅನೇಕ. ನೈಯಾಯಿಕರಿಗೂ ವೈಶೇಷಿಕದರ್ಶನದಲ್ಲಿ ಹೇಳಿರುವ ಜೀವಾತ್ಮನ ಸ್ವರೂಪವು ಸಮ್ಮತ. ದೇಹ, ಇಂದ್ರಿಯ, ಮನಸ್ಸು, ಬುದ್ಧಿ - ಇವುಗಳಿಗಿಂತ ಪ್ರತ್ಯೇಕವಾಗಿರುವವನೇ ಜೀವಾತ್ಮ.[೫೮]

ವೈಶೇಷಿಕದರ್ಶನವು ಈಶ್ವರನನ್ನು ಜಗತ್ತಿನ ಕರ್ತೃವೆಂದೊಪ್ಪಿದೆ. ಈಶ್ವರನೇ ಕರ್ಮಾಧ್ಯಕ್ಷ.

ನ್ಯಾಯಮತದವರಿಗೆ ಮೇಲಿನ ಅಂಶವು ಸಮಾನವಾಗಿದ್ದರೂ ಈ ದರ್ಶನವು ಪ್ರಮಾಣಶಾಸ್ತ್ರವಾಗಿರುವುದರಿಂದ ವೇದದ ಪ್ರಾಮಾಣ್ಯವನ್ನು ಸ್ಥಾಪಿಸುವ ಸಲುವಾಗಿ ಅನಾದಿ ಸರ್ವಜ್ಞನಾದ ಈಶ್ವರನ ಅಸ್ತಿತ್ವವನ್ನೊಪ್ಪುತ್ತಾರೆ.[೫೯]

ವೈಶೇಷಿಕ ಮತ್ತು ನ್ಯಾಯದರ್ಶನಗಳೆರಡರಲ್ಲೂ, ಆತ್ಮನ ವಿಕಾಸಕ್ಕೆ ಅಡ್ಡಿಗಳಾದ ರಾಗ-ದ್ವೇಷಾದಿಗಳು ಸ್ವಾರ್ಥಪ್ರವೃತ್ತಿಗೆ ಕಾರಣವಾಗುತ್ತವೆ. ಈ ಪ್ರವೃತ್ತಿಯು ಸುಖ-ದುಃಖಗಳಿಗೆ ಕಾರಣವಾಗುತ್ತದೆ. ಇವು ಮತ್ತೆ ಇಷ್ಟಾನಿಷ್ಟಗಳಿಗೆ ಕಾರಣವಾಗುತ್ತವೆ. ಇದೇ ಬಂಧ. ಇದರಿಂದ ಆತ್ಮಕ್ಕೆ ಸೇರದ ಮನಸ್ಸು, ದೇಹ ಮುಂತಾದ ವಸ್ತುಗಳನ್ನು ಆತ್ಮಕ್ಕೆ ಸೇರಿದುವೆಂದು ತಪ್ಪಾಗಿ ತಿಳಿಯುತ್ತಾನೆ. ಒಟ್ಟಿನಲ್ಲಿ ಮಿಥ್ಯಾಜ್ಞಾನವೇ ಬಂಧದ ಮೂಲ.

ಸಮ್ಯಕ್‌ಜ್ಞಾನ ಮತ್ತು ಯೋಗಾಭ್ಯಾಸವು ಮೋಕ್ಷಸಾಧನೆಯ ಲಕ್ಷಣಗಳು, ಸಪ್ತ ಪದಾರ್ಥಗಳಲ್ಲಿರುವ ಸಾಧರ್ಮ್ಯ-ವೈಧರ್ಮ್ಯವನ್ನು ಅರಿಯುವದರ ಮೂಲಕ ಉಂಟಾಗುವ ಆತ್ಮತತ್ವಜ್ಞಾನವೇ ಮೋಕ್ಷಸಾಧನ. ಈ ತತ್ವಜ್ಞಾನವು ಕೇವಲ ಬುದ್ಧಿಬಲದಿಂದಾದುದಲ್ಲ; ಯೋಗಾಭ್ಯಾಸದಿಂದ ಆಗಿರುವಂಥದು. ಈ ದರ್ಶನದಲ್ಲಿ ನಿತ್ಯ-ನೈಮಿತ್ತಿಕ

---

೫೬. ನಿರವಯವಃ ಕ್ರಿಯಾವಾನ್ ಪರಮಾಣು - ಸಪ್ತಪದಾರ್ಥೀ, ಪು. ೮೮.
ಸುಖ, ದುಃಖ, ಇಚ್ಛೆ, ಪ್ರಯತ್ನ, ಧರ್ಮ, ಅಧರ್ಮ ಇವೆಲ್ಲ ಆತ್ಮದ ಗುಣಗಳು. "ಪ್ರಾಣಾಪಾನಾನಿಮೇಷೋನ್ಮೇಷ ಜೀವನ ಮನೋಗತಿ ಇಂದ್ರಿಯಾಂತರ ವಿಕಾರ ಸುಖದುಃಖೇಚ್ಛಾ ದ್ವೇಷ ಪ್ರಯತ್ನಾಶ್ಚಾತ್ಮನೊ ಲಿಂಗಾನಿ" -ವೈಶೇಷಿಕಸೂತ್ರ ೩-೨-೪.

೫೭. ನ್ಯಾಯಮಂಜರೀ, ಪು. ೪೩೨.

೫೮. ನ್ಯಾಯಭಾಷ್ಯ ೧-೧-೧೦.

೫೯. ಕಾರ್ಯಾಯೋಜನಧೃತ್ಯಾದೇಃ ಪದಾತ್ ಪ್ರತ್ಯಯತಃ ಶ್ರುತೇ।
ವಾಕ್ಯಾತ್ ಸಂಖ್ಯಾವಿಶೇಷಾಚ್ಚ ಸಾಧ್ಯೋ ವಿಶ್ವವಿದವ್ಯಯಃ ॥ ನ್ಯಾಯಕುಸುಮಾಂಜಲಿ ೫-೧.

ಕರ್ಮಾನುಷ್ಠಾನವು ಕೇವಲ ಜ್ಞಾನಸಂವರ್ಧನೆಗೆ ಮಾತ್ರ. ಅಂದಮಾತ್ರಕ್ಕೆ ಅದು ಅನಗತ್ಯವೆಂದರ್ಥವಲ್ಲ. ಕರ್ಮವು ಮೋಕ್ಷಸಾಧನವಲ್ಲ; ಅದು ಜ್ಞಾನಕ್ಕೆ ಅಂಗ.

ನ್ಯಾಯದ ಪ್ರಕಾರ ಷೋಡಶ ಪದಾರ್ಥಗಳ ತತ್ವಜ್ಞಾನದಿಂದಲೇ ಮುಕ್ತಿ. ಉಳಿದ ಅಂಶಗಳಲ್ಲಿ ವೈಶೇಷಿಕರ ಸಿದ್ಧಾಂತವು, ಇವರಿಗೂ ಸಮ್ಮತ.

ನ್ಯಾಯ ಹಾಗೂ ವೈಶೇಷಿಕ ದರ್ಶನದಲ್ಲಿ ಆರು ಇಂದ್ರಿಯ, ಅವುಗಳ ಆರು ವಿಷಯಗಳು, ಆರು ಬುದ್ಧಿ, ಸುಖ, ದುಃಖ ಮತ್ತು ಶರೀರ - ಇವುಗಳಿಂದ ಸಂಪೂರ್ಣವಾಗಿ ಬಿಡುಗಡೆ ಹೊಂದುವುದೇ ಮೋಕ್ಷ. ಶಿವಾದ್ವೈತದಂತೆ ಮೋಕ್ಷವು ಆನಂದಾತ್ಮಕವಲ್ಲ. ಮುಕ್ತಿಯಾದಾಗ ಯಾವ ವಿಧವಾದ ಸುಖವೂ ಇರುವುದಿಲ್ಲ, ದುಃಖವೂ ಇರುವುದಿಲ್ಲ. ದುಃಖದಿಂದ ಬಿಡುಗಡೆ ಹೊಂದುವುದೇ ಸುಖವಲ್ಲದೆ ಪ್ರತ್ಯೇಕವಾದ ಭಾವಾತ್ಮಕ ಸುಖವಲ್ಲ. ಬುದ್ಧಿ, ಸುಖ, ದುಃಖ, ಇಚ್ಛೆ, ದ್ವೇಷ, ಧರ್ಮ, ಅಧರ್ಮ ಮತ್ತು ಸಂಸ್ಕಾರ - ಈ ಎಂಟು ಆತ್ಮಗುಣಗಳು ನಾಶವಾಗುತ್ತವೆ. ಮೋಕ್ಷದಲ್ಲಿ, ಮುಕ್ತ ಜೀವನು ಸರ್ವಗುಣ ರಹಿತನಾಗಿ ಸರ್ವದುಃಖ[೭೦] ವಿಮುಕ್ತನಾಗಿ, ಸರ್ವಕರ್ಮದೂರನಾಗಿ ತನ್ನ ಶುದ್ಧಸ್ವರೂಪದಲ್ಲಿರುತ್ತಾನೆ.

ಆದರೆ ನ್ಯಾಯಮತಕ್ಕೆ ಸೇರಿದ ಭೂಷಣಕಾರ ಮೊದಲಾದವರು[೭೧] - ಆತ್ಮನಲ್ಲಿ ಕರ್ಮದಿಂದ ಆಚ್ಛಾದಿತವಾಗಿದ್ದ ನಿರತಿಶಯ ಸುಖವು ಮುಕ್ತಿಯಲ್ಲಿ ಅಭಿವ್ಯಕ್ತವಾಗುತ್ತದೆ ಎನ್ನುತ್ತಾರೆ.

ನ್ಯಾಯವೈಶೇಷಿಕ ದರ್ಶನದಲ್ಲಿ ಪರಮಾಣುಗಳನ್ನು ಜಗತ್ತಿನ ಉಪಾದಾನ ಕಾರಣವೆಂದು ಸ್ವೀಕರಿಸಲಾಗಿದೆ. ಆದರೆ ಪರಮಾಣುಗಳು ಅಚೇತನ ಹಾಗೂ ನಿಷ್ಕ್ರಿಯವಾಗಿವೆ. ಅವುಗಳಿಂದ ಸುವ್ಯವಸ್ಥಿತ ಜಗತ್ತಿನ ಉತ್ಪತ್ತಿ ಅಸಾಧ್ಯ. ಅವುಗಳ ಗತಿಶೀಲತೆಗೆ ಈಶ್ವರನಿದ್ದರೂ ಅವು ನಿತ್ಯ ಹಾಗೂ ನಿರವಯವವಾಗಿವೆ. ಈ ಕಾರಣದಿಂದಾಗಿ ಅವು ನಿತ್ಯ ನಿಷ್ಕ್ರಿಯವಾದರೂ ಆಗಿರಬೇಕು, ಇಲ್ಲವೆ ನಿತ್ಯ ಗತಿಶೀಲವಾದರೂ ಆಗಿರಬೇಕು. ಒಂದುವೇಳೆ ಅವು ನಿಷ್ಕ್ರಿಯವೆಂದರೆ, ಸೃಷ್ಟಿಯಾಗಲು ಸಾಧ್ಯವಿಲ್ಲ. ಗತಿಶೀಲವೆಂದರೆ ಪ್ರಳಯ ಅಸಾಧ್ಯ. ಆದುದರಿಂದ ಪರಮಾಣು ನಿತ್ಯ ಹಾಗೂ ನಿರವಯವ ಎಂದಿದ್ದಾರೆ. ಇದರಿಂದ ಸೃಷ್ಟಿಯ ವಿಶ್ಲೇಷಣೆ ಅಸಾಧ್ಯವಾಗುತ್ತದೆ. ಇದೂ ಅಲ್ಲದೆ, ಪರಮಾಣುಗಳಲ್ಲಿ ಗುಣಾತ್ಮಕ ಭೇದವೊಂದನ್ನು ಸ್ವೀಕರಿಸಲಾಗಿದೆ. ಒಂದುವೇಳೆ ಪೃಥ್ವಿಯ ಪರಮಾಣುಗಳು ಹೆಚ್ಚಾಗಿ, ವಾಯುವಿನ ಗುಣಗಳು ಕಡಿಮೆಯಾದರೆ, ಅವೆರಡರ ಭಾರ ಮತ್ತು ಪರಿಮಾಣುಗಳಲ್ಲಿ ಭೇದವುಂಟಾಗುತ್ತದೆ. ಪರಮಾಣುಗಳಲ್ಲಿ ಗುಣಾತ್ಮಕತೆಯನ್ನೊಪ್ಪಿದರೆ ಅವುಗಳ ನಿತ್ಯತೆಗೆ ಭಂಗವುಂಟಾಗುತ್ತದೆ.

ನ್ಯಾಯದ ಆತ್ಮ-ವಿಷಯಕ ವಿಚಾರವೂ ಉಚಿತವಾಗಿಲ್ಲ. ಆತ್ಮವನ್ನು ಅಚೇತನವೆಂದು, ಚೇತನ ಅದರ ಆಕಸ್ಮಿಕಗುಣವೆಂದು ನಂಬಿರುವದರಿಂದ, ಸ್ಮೃತಿಗೆ ನ್ಯಾಯ ದೊರೆತಿಲ್ಲ. ಒಂದುವೇಳೆ ಆತ್ಮದೊಂದಿಗೆ ಮನಸ್ಸು ಮುಂತಾದವುಗಳು ಸದೈವ ಸಂಲಗ್ನವಾಗಿದ್ದರೆ, ಸ್ಮೃತಿಯೂ ಸದೈವ ಇರಬೇಕಾಗುವುದು, ಆದರೆ ಹಾಗಾಗದು. ಆತ್ಮ, ಜ್ಞಾತೃವಾದುದರಿಂದ ಸಾಮಾನ್ಯ ಅನುಭವಗಳ ಹಿನ್ನೆಲೆಯಲ್ಲಿ ಚೇತನವನ್ನು ಆತ್ಮದ ಆಕಸ್ಮಿಕ ಗುಣವೆಂದು ಒಪ್ಪುವಂತಿಲ್ಲ. ಚೇತನವು ಆತ್ಮದ ಸ್ವರೂಪವೇ ವಿನಃ ಗುಣ ಅಲ್ಲ. ಒಂದು ವೇಳೆ ಆತ್ಮವನ್ನು ಚೇತನರಹಿತವೆಂದು ಒಪ್ಪಿದ್ದಾದರೆ, ಆಗ ಅದು ಆತ್ಮವಾಗದೆ ಅಚೇತನ ಜಡದಂತಾಗುತ್ತದೆ.

---

೭೦. ನ್ಯಾಯದರ್ಶನದಲ್ಲಿ ಮೋಕ್ಷಕ್ಕೆ ಅಪವರ್ಗವೆನ್ನುತ್ತಾರೆ. ನೋಡಿ : "ತದತ್ಯಂತವಿಮೋಕ್ಷೋಽಪವರ್ಗಃ" ನ್ಯಾಯಸೂತ್ರ, ೧-೧-೨೨.

೭೧. ನ್ಯಾಯದರ್ಶನಮ್, ಪು. ೫.

ಈಶ್ವರನನ್ನು ಕೇವಲ ನಿಮಿತ್ತಕಾರಣನೆಂದು ತಿಳಿದುದರಿಂದ ಅವನಲ್ಲಿ ಮಾನವೋಚಿತ ದೋಷಗಳನ್ನು ಸ್ಥಾಪಿಸಿದಂತಾಗುತ್ತದೆ. ಈಶ್ವರನು ಪರಮಾಣು ಹಾಗೂ ಅದೃಷ್ಟಾವಲಂಬಿಯಾಗಿರುವುದರಿಂದ ಇಲ್ಲಿ ಅವನ ಸ್ವಾತಂತ್ರ್ಯ ಹಾಗೂ ಸರ್ವಶಕ್ತಿಮತ್ತ್ವ ಮೊದಲಾದವುಗಳನ್ನು ಹಾನಿಗೊಳಿಸಿದಂತಾಗಿದೆ. ಈಶ್ವರನನ್ನು ಸೃಷ್ಟಿಕರ್ತನನ್ನಾಗಿ ಅಲ್ಲ; ಕೇವಲ ಪ್ರಬಂಧಕ ಎಂಬಂತೆ ಚಿತ್ರಿಸಲಾಗಿದೆ. ಇದರಿಂದಾಗಿ, ಅವನ ಶಕ್ತಿಸಾಮರ್ಥ್ಯಗಳೆಲ್ಲ ಕರ್ಮನಿಯಮಕ್ಕೊಳಗಾಗಿ ಸೀಮಿತಗೊಂಡಿವೆ. ಈಶ್ವರನು ಪರಮಾಣು ಹಾಗೂ ಅದೃಷ್ಟಗಳ ಸಹಕಾರವಿಲ್ಲದೆ ಸೃಷ್ಟಿಯನ್ನು ಮಾಡಲು ಅಸಾಧ್ಯವೆಂದು ಹೇಳುವುದರಿಂದ ಅವನ ಸ್ವಾತಂತ್ರ್ಯವನ್ನು ಸೀಮಿತಗೊಳಿಸಿದಂತಾಗಿದೆ. ಪರಮಾಣುಗಳ ಸಂಯೋಜನೆಯಿಂದ ಸೃಷ್ಟಿಯಾಗುತ್ತದೆ; ಇದರಲ್ಲಿ ಈಶ್ವರನ ಹಸ್ತಕ್ಷೇಪವಿಲ್ಲವೆಂಬುದು ಅಷ್ಟು ಸಮಂಜಸವಲ್ಲ. ನಿರೀಶ್ವರವಾದಿಗಳ ವಿರುದ್ಧವಾಗಿ ನ್ಯಾಯವು ಈಶ್ವರವಾದವನ್ನು ಸ್ಥಾಪಿಸಿಯಾದರೂ ಈಶ್ವರನ ಸರ್ವಶಕ್ತಿಮತ್ತ್ವ ಹಾಗೂ ಈಶ್ವರತ್ವದ ಬಗೆಗೆ ಸರಿಯಾದ ನ್ಯಾಯ ಒದಗಿಸಲಿಲ್ಲವೆನಿಸುತ್ತದೆ. ಈ ದರ್ಶನದಲ್ಲಿ ಈಶ್ವರನಿಗಿಂತ ಪರಮಾಣುಗಳಿಗೇ ಹೆಚ್ಚಿನ ಮಹತ್ವ ಕೊಡಲಾಗಿದೆ. ವಸ್ತುತಃ ಉತ್ಪತ್ತಿಗೆ ಪರಮಾಣುವೇ ಕರ್ತೃವಾಗಿದೆ. ಆದ್ದರಿಂದ ಈಶ್ವರನಿಗೆ ಇಲ್ಲಿ ಸ್ವತಂತ್ರವಾದ ಅಸ್ತಿತ್ವವಿಲ್ಲ.

ನ್ಯಾಯವೈಶೇಷಿಕದ ಮೋಕ್ಷವಿಚಾರಕ್ಕೆ ಬಂದರೆ, ಅದು ಇಲ್ಲಿ ಅಭಾವಾತ್ಮಕ ಅವಸ್ಥೆಯಾಗಿದೆ. ಮೋಕ್ಷಾವಸ್ಥೆಯಲ್ಲಿ ಆತ್ಮವು ಎಲ್ಲ ಪ್ರಕಾರದ ಅನುಭವಗಳಿಂದ ಶೂನ್ಯವಾಗಿ ಜಡವಸ್ತುವಿನಂತಾಗುತ್ತದೆ. ಇಂತಹ ಮೋಕ್ಷ ಜೀವಿಗಳಿಗೆ ಉತ್ಸಾಹವರ್ಧಕವಾಗಿರುವುದಿಲ್ಲ. ವಸ್ತುತಃ ಮೋಕ್ಷಾವಸ್ಥೆಯು ಪೂರ್ಣಾನಂದದ ಅವಸ್ಥೆಯಾಗಿರಬೇಕು. ಸರ್ವಶಕ್ತಿವಂತನಾದ ಹಾಗೂ ನಿತ್ಯಸ್ವರೂಪನಾದ ಈಶ್ವರನನ್ನು ನಂಬಿ, ಸಮಸ್ತ ಪದಾರ್ಥಗಳು ಅವನಿಗೆ ಸಂಬಂಧಪಟ್ಟಿವೆ - ಎಂದು ತಿಳಿದು, ಅವುಗಳ ಕಾರಣ ವಸ್ತುವಿನ ಮೇಲೆ ಒತ್ತುಕೊಡುವಂತಾಗಬೇಕು.

ನ್ಯಾಯ-ವೈಶೇಷಿಕ ದರ್ಶನದಲ್ಲಿ ಪರಮಾಣುಗಳನ್ನು ಜಗತ್ತಿನ ಉಪಾದಾನಕಾರಣವೆಂದು ನಂಬಲಾಗಿದೆ. ಆದರೆ ಪರಮಾಣುಗಳು ಅಚೇತನ ಹಾಗೂ ನಿಷ್ಕ್ರಿಯಗಳಾದುದರಿಂದ ಸುವ್ಯವಸ್ಥಿತ ಜಗತ್ತಿನ ಉತ್ಪತ್ತಿಯ ಕಲ್ಪನೆ ಅವುಗಳಿಂದ ಸಾಧ್ಯವಾಗದು. ಒಂದು ವೇಳೆ ಅವುಗಳ ಗತಿಗೆ ಈಶ್ವರನಿದ್ದರೂ ಪರಮಾಣು ನಿತ್ಯ ಹಾಗೂ ನಿರಯವಗಳಾದ್ದರಿಂದ ಅವು ಶಾಶ್ವತವಾಗಿ ನಿಷ್ಕ್ರಿಯವಾಗಿರಬೇಕು. ಇಲ್ಲವೇ ನಿತ್ಯ ಗತಿಶೀಲವಾಗಿರಬೇಕಾಗುತ್ತದೆ. ಒಂದುವೇಳೆ ಅವು ನಿಷ್ಕ್ರಿಯವೆಂದದ್ದಾದರೆ ಅವುಗಳಿಂದ ಸೃಷ್ಟಿಕಾರ್ಯ ಅಸಾಧ್ಯವಾಗುತ್ತದೆ. ನಿತ್ಯಗತಿಶೀಲವೆಂದರೆ ಪ್ರಳಯ ಸಾಧ್ಯವಾಗದು. ಅಲ್ಲದೆ ಅವು ನಿತ್ಯ ಹಾಗೂ ನಿರಯವವೆಂದು ವಾದಿಸಿದರೆ ಸೃಷ್ಟಿಯ ವಿಶ್ಲೇಷಣೆ ಅಸಂಬದ್ಧವಾಗುವುದು.

೨. ಸಾಂಖ್ಯಯೋಗ:

ವಸ್ತುತಃ ಅನೇಕವಾದ ಹಾಗೂ ಬಹುತ್ವವಾದವನ್ನು ಸ್ವೀಕರಿಸುವುದರಿಂದ ಚೇತನ ಹಾಗೂ ಅಚೇತನ ತತ್ತ್ವಗಳ ವಿಶ್ಲೇಷಣೆಯಲ್ಲಿ ತೊಂದರೆಯನ್ನು ಎದುರಿಸಬೇಕಾಗುತ್ತದೆ. ಆದುದರಿಂದ ಬಹುತ್ವವಾದಕ್ಕಿಂತ ಉತ್ಕೃಷ್ಟವಾದ ದ್ವೈತವಾದದ ಕಲ್ಪನೆಯನ್ನು ನಾವು ಸಾಂಖ್ಯಯೋಗದಲ್ಲಿ ಕಾಣುತ್ತೇವೆ. 'ಪ್ರಕೃತಿ', 'ಪುರುಷ' - ಈ ದ್ವೈತವನ್ನು ಸ್ವೀಕರಿಸಿ ಇದರಲ್ಲಿಯೇ ಎಲ್ಲ ತತ್ತ್ವಗಳನ್ನು ಅಂತರ್ನಿಹಿತಗೊಳಿಸಬಹುದೆಂದು ನಂಬಲಾಗಿದೆ. ಆದುದರಿಂದ ಇದರಲ್ಲಿ ಅನೇಕವಾದದ ದೋಷಗಳಿಗೆ ಅವಕಾಶವಿರಲಾರದು. ಆದರೆ ಈ ದ್ವೈತವಾದವನ್ನು ಸ್ವೀಕರಿಸುವುದರಿಂದ ಸಮಸ್ಯೆಗಳು ಅಲ್ಲಿಗೆ ಮುಕ್ತಾಯವಾಗಲಾರವು. ಎರಡು ವಿಪರೀತ ತತ್ತ್ವಗಳ ಸಂಬಂಧದ ಹೊರತಾಗಿ ಏಕತೆ ಸಂಭವಿಸುವುದೇ ಇಲ್ಲ. ಇವು ಸ್ವಯಂ ಸಂಬಂಧವನ್ನು ಪ್ರದರ್ಶಿಸಲಾರವು. ಏಕೆಂದರೆ ಸತ್ ಅಥವಾ ಚೇತನ, ಅಸತ್ ಅಥವಾ ಅಚೇತನಕ್ಕೆ ಕಾರಣವಾಗದು. ಅದೇ ರೀತಿ ಅಸತ್ ಸತ್ತಿಗೆ ಕಾರಣವಾಗದು. ಆದುದರಿಂದ ಸಮಸ್ಯೆ ಮತ್ತೊಮ್ಮೆ ಹುಟ್ಟಿಕೊಳ್ಳುತ್ತದೆ. ಈ ಕಾರಣದಿಂದ ಈ

ಎರಡನ್ನೂ ಒಂದುಗೂಡಿಸುವ ಇನ್ನೊಂದು ಅತ್ಯುನ್ನತ ಚೈತನ್ಯದ ಅಗತ್ಯವಿದೆ. ಆ ಚೇತನತತ್ತ್ವ ಈಶ್ವರನೆಂದು ಸ್ವೀಕರಿಸಬೇಕಾಗುತ್ತದೆ. ಪ್ರಾರಂಭಿಕ ಸಾಂಖ್ಯದರ್ಶನದಲ್ಲಿ ಈಶ್ವರ ಅಸ್ತಿತ್ವವನ್ನು ಅಂಗೀಕರಿಸಲಾಗಿತ್ತು. ಆದರೆ, ತರ್ಕದ ಸಹಾಯದಿಂದ ಈಶ್ವರನ ಅಸ್ತಿತ್ವವನ್ನು ಸಮರ್ಪಕವಾಗಿ ಸಿದ್ಧಗೊಳಿಸದ ಕಾರಣಕ್ಕಾಗಿ, ಸಾಂಖ್ಯದ ದಾರ್ಶನಿಕ ಸಂರಚನೆಯಲ್ಲಿ ಸೃಷ್ಟಿ ಮುಂತಾದುದಕ್ಕೆ ಈಶ್ವರನ ಅವಶ್ಯಕತೆಯಿಲ್ಲದ್ದರಿಂದ ಸಾಂಖ್ಯ, ತನ್ನನ್ನು ನಿರೀಶ್ವರವಾದಿ ಎಂದು ಪರಿಚಯಿಸಿಕೊಂಡಿತು.

ಸಾಂಖ್ಯ ಯೋಗದರ್ಶನದಲ್ಲಿ ಸತ್ಕಾರ್ಯವಾದವನ್ನು ಸ್ವೀಕರಿಸಲಾಯಿತು. ಇದರ ಪ್ರಕಾರ ಪ್ರತಿಯೊಂದು ಕಾರ್ಯವು ತನ್ನ ಉತ್ಪತ್ತಿಯ ಪೂರ್ವ, ತನ್ನ ಕಾರಣದಲ್ಲಿ ಅವಶ್ಯವಾಗಿ ಇದ್ದೇ ಇರುತ್ತದೆ. ಏಕೆಂದರೆ ವಿಶ್ವವೊಂದು ಕಾರ್ಯ. ಆದುದರಿಂದ ಇದಕ್ಕೆ ಒಂದಿಲ್ಲೊಂದು ಕಾರಣ ಇದ್ದಿರಲೇಬೇಕು. ಈ ವಿಶ್ವ, ಭೌತಿಕವಾಗಿದೆ. ಆದುದರಿಂದ ಅದರ ಕಾರಣ ಅಚೇತನವೆಂದೇ ಒಪ್ಪಬೇಕಾಗುತ್ತದೆ. ಈ ಅಚೇತನ ಕಾರಣವನ್ನು "ಪ್ರಕೃತಿ" ಅಥವಾ "ಅವ್ಯಕ್ತ"ವೆಂದು ಕರೆಯಲಾಗಿದೆ. ಅದರ ಜೊತೆ ಜೊತೆಗೆ ಪ್ರಕೃತಿಯನ್ನು ಉಪಭೋಗಿಸಲು ಯಾವುದಾದರೊಂದು ಚೇತನತತ್ತ್ವದ ಅವಶ್ಯಕತೆ ಉಂಟಾಗುತ್ತದೆ. ಈ ಚೇತನ ಸತ್ತೆಗೆ ಸಾಂಖ್ಯ "ಪುರುಷ" ಎಂದಿದೆ. ಇದೇ ಆತ್ಮ. ಈ ರೀತಿಯಾಗಿ ಸಾಂಖ್ಯದರ್ಶನ "ದ್ವೈತವಾದ"ವನ್ನು ಪ್ರಸ್ತಾಪಿಸುತ್ತದೆ.

ಪ್ರಕೃತಿ ಒಂದು ಸರ್ವವ್ಯಾಪಕ ಹಾಗೂ ನಿತ್ಯ ತತ್ತ್ವವಾಗಿದೆ. ಅದು ಎಂದಿಗೂ ಹುಟ್ಟುವುದಿಲ್ಲ. ಅದೇ ರೀತಿ ಅದಕ್ಕೆ ನಾಶವೂ ಇಲ್ಲ. ಅದು "ಆದಿಕಾರಣ" ಅದಕ್ಕೆ ಕಾರಣ ಮತ್ತೊಂದಿಲ್ಲ. ಇದು ಜಗತ್ತಿನ ಪ್ರಥಮ ತತ್ತ್ವ. ಆದುದರಿಂದ ಅದು "ಪ್ರಧಾನ" ಎನಿಸಿಕೊಂಡಿದೆ. ಅದು ಜ್ಞಾನದ ವಿರೋಧಿ. ಆದುದರಿಂದ ಅದನ್ನು "ಅವಿದ್ಯೆ"ಯೆಂತಲೂ ಕರೆಯುತ್ತಾರೆ. ಇದು ವಿಚಿತ್ರಮಯವಾದ ಸೃಷ್ಟಿಯನ್ನು ನಿರ್ಮಿಸುತ್ತದೆ. ಪ್ರಕೃತಿ ಜಡವಾಗಿದ್ದರೂ ಅತ್ಯಂತ ಸೂಕ್ಷ್ಮವಾಗಿದೆ. ಅದರಿಂದಾಗುವ ಕಾರ್ಯಗಳಿಂದ ಅದನ್ನು ಅನುಮಾನಿಸಬಹುದು. ಅದು ಅನಾದಿ ಹಾಗೂ ಅನಂತವಾಗಿದೆ. ಸಾಂಖ್ಯಕಾರಿಕೆಯಲ್ಲಿ ಪ್ರಕೃತಿಯ ಅಸ್ತಿತ್ವವನ್ನು ಹಲವಾರು ಯುಕ್ತಿಗಳಿಂದ ಸಮರ್ಥಿಸಲಾಗಿದೆ.[೬೨]

ಸಾಂಖ್ಯಮತದಲ್ಲಿ ಮೂಲಭೂತವಾಗಿ 'ಪ್ರಕೃತಿ', 'ಪುರುಷ' ಎರಡೇ ತತ್ತ್ವಗಳೆಂದು ಹಿಂದೆ ಹೇಳಲಾಗಿದೆ. ನಿರ್ವಿಕಾರ, ನಿರ್ಗುಣ, ಚೈತನ್ಯಸ್ವರೂಪವಾದುದು ಪುರುಷತತ್ತ್ವ ಅಥವಾ ಜೀವಾತ್ಮವಾದರೆ, ಸತ್ತ್ವ, ರಜತಮೋಗುಣಾತ್ಮಕವಾದ ಪ್ರಕೃತಿಯು, ಅವ್ಯಕ್ತತತ್ತ್ವ.[೬೩] ಇದರಿಂದ ವ್ಯಕ್ತವಾಗುವ ತತ್ತ್ವಗಳು ಇಪ್ಪತ್ತಮೂರು ಪ್ರಕೃತಿಯಿಂದ ಮಹತ್‌ತತ್ತ್ವ(ಬುದ್ಧಿತತ್ತ್ವ) ಇದರಿಂದ ಅಹಂಕಾರ; ಅಹಂಕಾರದಿಂದ ಪಂಚಜ್ಞಾನೇಂದ್ರಿಯ, ಪಂಚಕರ್ಮೇಂದ್ರಿಯ, ಮನಸ್ಸು, ಪಂಚತನ್ಮಾತ್ರಗಳು; ಇವುಗಳಿಂದ ಪಂಚಭೂತಗಳು. ಕೆಳಗಿನ ಈ ಕೋಷ್ಟಕದಿಂದ ಮೇಲಿನ ವಿವರಣೆ ಇನ್ನೂ ಸ್ಪಷ್ಟವಾಗುವುದು.

---

೬೨. ಭೇದಾನಾಂ ಪರಿಮಾಣಾತ್, ಸಮನ್ವಯಾತ್ ಶಕ್ತಿತಃ ಪ್ರವೃತ್ತೇಶ್ಚ।
ಕಾರಣಕಾರ್ಯವಿಭಾಗಾದವಿಭಾಗಾದ್ವೈಶ್ವರೂಪಸ್ಯ ॥ ಸಾಂಖ್ಯಕಾರಿಕಾ ೧೫.

೬೩. ಮೂಲ ಪ್ರಕೃತಿವಿಕೃತಿರ್ಮಹದಾದ್ಯಾಃ ಪ್ರಕೃತಿವಿಕೃತಯಸ್ಸಪ್ತ।
ಷೋಡಶಕವಸ್ತುವಿಕಾರೋ, ನಪ್ರಕೃತಿರ್ನವಿಕೃತಿಃ ಪುರುಷಃ ॥ ಸಾಂಖ್ಯಕಾರಿಕಾ, ಶ್ಲೋಕ ೩.

ಪುರುಷ ೧

ಪ್ರಕೃತಿ ೨

| | |
|---|---|
| ಮಹತ್ (ಬುದ್ಧಿ)೩ | ಮನಸ್ಸು ೧೦ |
| ಅಹಂಕಾರ ೪ | ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ (ಜ್ಞಾನೇಂದ್ರಿಯಗಳು) ೧೧-೧೫ |
| ಶಬ್ದ, ಸ್ಪರ್ಶ, ರೂಪ, ಗಂಧ ರಸ ೫-೯ (ಪಂಚ ತನ್ಮಾತ್ರಗಳು) | ವಾಕ್, ಪಾಣಿ, ಪಾದ, ಪಾಯು, ಉಪಸ್ಥ (ಕರ್ಮೇಂದ್ರಿಯಗಳು) ೧೬-೨೦ |
| | ಪೃಥ್ವಿ, ಅಪ್, ವಾಯು, ತೇಜ, ಆಕಾಶ (ಪಂಚಭೂತಗಳು) ೨೧-೨೫ |

ಯೋಗಮತವು ಸಾಂಖ್ಯಮತದ ಇಪ್ಪತ್ತೈದು ತತ್ವಗಳ ಜೊತೆಗೆ ಈಶ್ವರ ತತ್ವವನ್ನೂ ಸೇರಿಸಿಕೊಂಡಿದೆ. ತತ್ವಗಳ ವಿಕಾಸ ಕ್ರಮದಲ್ಲಿ ಸಾಂಖ್ಯಕ್ಕೂ ಈ ದರ್ಶನಕ್ಕೂ ಯಾವ ಅಂತರವೂ ಇಲ್ಲ.

ಸತ್ವ, ರಜಸ್ಸು ಮತ್ತು ತಮಸ್ಸು ಎಂಬ ತ್ರಿಗುಣಾತ್ಮಕವಾದ ಪ್ರಕೃತಿಯೇ[೬೪] ಜಗತ್ತಿಗೆ ಮೂಲ ಕಾರಣವಾದುದರಿಂದ ಅದು ನಿತ್ಯ ಮತ್ತು ಅವ್ಯಕ್ತ. ಆದ್ದರಿಂದ ಇದರ ಕಾರ್ಯವಾದ ಜಗತ್ತಿನ ಪ್ರತಿಯೊಂದು ವಸ್ತುವಿನಲ್ಲಿಯೂ ಈ ಮೂರು ಗುಣಗಳ ಅಸ್ತಿತ್ವವನ್ನು ಕಾಣಬಹುದು. ತ್ರಿಗುಣಗಳ ಸಾಮ್ಯಾವಸ್ಥೆಯೇ ಪ್ರಳಯ. ವಿಷಮಾವಸ್ಥೆಯೇ ಜಗತ್ ಸೃಷ್ಟಿ. ಈ ದರ್ಶನವೂ ಸಹ ಈಶ್ವರನನ್ನೊಪ್ಪದಿರುವದರಿಂದ, ಪ್ರಕೃತಿ ತಾನಾಗಿಯೆ ಪುರುಷನ ಸಾನಿಧ್ಯ ಮಾತ್ರದಿಂದಲೇ ಜಗತ್ತಾಗಿ ಪರಿಣಾಮಹೊಂದುತ್ತದೆ. ಪುರುಷನ ಸಂಪರ್ಕದಿಂದ ಪ್ರಕೃತಿಗೆ ಜಗತ್ತಿನ ಕರ್ತೃತ್ವವು ಸಿದ್ಧಿಸುತ್ತದೆ.

ಸಾಂಖ್ಯದಲ್ಲಿ ಆತ್ಮನನ್ನೇ 'ಪುರುಷ' ಎನ್ನುತ್ತಾರೆ.[೬೫] ಪುರುಷನು ಶುದ್ಧಚೈತನ್ಯರೂಪನೇ ಹೊರತು ಚೈತನ್ಯಕ್ಕೆ ಆಶ್ರಯನಲ್ಲ. ಈತನೇ ಪ್ರಕೃತಿಯ ಪರಿಣಾಮವಾದ ಬುದ್ಧಿಯ ಸಂಪರ್ಕದಿಂದ ಜ್ಞಾತೃವೆನಿಸಿಕೊಳ್ಳುತ್ತಾನೆ. ಈತನು ಪ್ರಕೃತಿಗಿಂತ ಸಂಪೂರ್ಣವಾಗಿ ಭಿನ್ನ. ಜೀವಾತ್ಮನ ಸುಖ-ದುಃಖಗಳೆಲ್ಲವೂ ಪ್ರಕೃತಿಯ ಸಂಪರ್ಕದಿಂದುಟಾಗುತ್ತವೆ. ಈ ದರ್ಶನದಲ್ಲಿ ಪುರುಷರು ಅನೇಕ.[೬೬] ಆದರೂ ಅವರ ಸ್ವರೂಪದಲ್ಲಿ ವ್ಯತ್ಯಾಸವಿಲ್ಲ. ಪುರುಷನು ನಿಷ್ಕ್ರಿಯ.

---

೬೪. ಇಮ ಸತ್ವರಜಸ್ತಮಾಂಸಿ ಗುಣಾಮಯದೃಷ್ಟಾಃ (ಶಂಕರ, ಗೀತಾಭಾಷ್ಯ ೧೩-೧೪)

೬೫. ಅವ್ಯಕ್ತಾದಿಗಳಿಗಿಂತ ಪುರುಷನನ್ನು ಯಾಕೆ ಸ್ವೀಕರಿಸಬೇಕು? ಎಂಬುದಕ್ಕೆ ಈ ಕಾರಿಕೆಯು ಸಮಾಧಾನ ಪಡಿಸುತ್ತದೆ.
ಸಂಘಾತಪರಾರ್ಥತ್ವಾತ್ ತ್ರಿಗುಣಾದಿವಿಪರ್ಯಯಾದಧಿಷ್ಠಾನಾತ್।
ಪುರುಷೋಽಸ್ತಿ ಭೋಕ್ತೃಭಾವಾತ್ಕೈವಲ್ಯಾರ್ಥಂ ಪ್ರವತ್ತೇಶ್ಚ।। ಸಾಂಖ್ಯಕಾರಿಕಾ, ಶ್ಲೋಕ ೧೭.

೬೬. ಜನ್ಮಮರಣಕರಣಾನಾಂ ಪ್ರತಿನಿಯಮಾದಯುಗಪತ್ಪ್ರವೃತ್ತೇಶ್ಚ ।
ಪುರುಷಬಹುತ್ವಂ ಸಿದ್ಧಂ ತ್ರೈಗುಣವಿವಿಪರ್ಯಾಯಾಚ್ಚೈವ ।। ಸಾಂಖ್ಯಕಾರಿಕಾ, ಶ್ಲೋಕ ೧೮.

ಪುರುಷರಿಗಿಂತ ಪ್ರತ್ಯೇಕವಾದ ಈಶ್ವರನನ್ನು ಸಾಂಖ್ಯ ಒಪ್ಪುವುದಿಲ್ಲ. ಈಶ್ವರನನ್ನೊಪ್ಪಿದರೆ ಜಗತ್ತಿನಲ್ಲಿರುವ ಎಲ್ಲಾ ವಿಧವಾದ ಅಸಮಾನತೆಯಿಂದ ಉದ್ಭವಿಸುವ ವೈಷಮ್ಯ-ನೈರ್ಘೃಣ್ಯ ಮುಂತಾದ ದೋಷಗಳಿಗೆ ಆತನು ಭಾಗಿಯಾಗಬೇಕಾಗುತ್ತದೆ ಎಂದು ವಿವಿಧವಾದಗಳನ್ನು ಅದರಲ್ಲಿ ಮಂಡಿಸಲಾಗಿದೆ. ಸಾಂಖ್ಯದಲ್ಲಿ ಬರುವ ಈಶ್ವರ ಸಂದರ್ಭ ಕುರಿತು ಎಂ. ಹಿರಿಯಣ್ಣ ಹೀಗೆ ಹೇಳಿದ್ದಾರೆ: "ಅದು (ಪ್ರಕೃತಿ) ಸ್ವತಃ ವಿಕಾಸವಾಗಬಲ್ಲದು. ಇಂತಹ ವಸ್ತುವಿಗೆ ಹೊರಗಿನಿಂದ ಕ್ರಿಯಾಡಿಸುವವನೊಬ್ಬನ ಅಗತ್ಯವೇನೂ ಇಲ್ಲ. ಸಾಂಖ್ಯದ ನಾಸ್ತಿಕತೆಗೆ ಈ ಭಾವನೆಯೇ ಮೂಲ".[೬೭]

ಯೋಗದಲ್ಲಿ ಬರುವ ಈಶ್ವರನು ಕೇವಲ ಇತರ ಪುರುಷರಂತೆಯೇ ಒಬ್ಬ ಪುರುಷನಷ್ಟೇ ಆದರೆ ಅವನು ಪರಿಪೂರ್ಣ ಪುರುಷ. ಅವನು ಸರ್ವಜ್ಞ ಮತ್ತು ಸರ್ವವ್ಯಾಪಿ. ಆದರೆ ವೀರಶೈವರ ಈಶ್ವರನಂತಲ್ಲದೆ, ಪ್ರಕೃತಿಗೂ ಮತ್ತು ಪ್ರತ್ಯೇಕ ಪುರುಷರಿಗೂ ಹೊರಗಿನವನು. ಬೇರೆ ಮಾತುಗಳಲ್ಲಿ ಹೇಳಬಹುದಾದರೆ, ಆತ ಪರತತ್ವವಲ್ಲ. ಈ ವಿಷಯದಲ್ಲಿ ನ್ಯಾಯ-ವೈಶೇಷಿಕರ ಭಗವಂತನಿಗೂ ಈ ಈಶ್ವರನಿಗೂ ಹೋಲಿಕೆಯುಂಟು. ಪ್ರಮುಖ ವ್ಯತ್ಯಾಸವಿರುವುದು ಜಗತ್ತನ್ನು ರೂಪಿಸುವದರಲ್ಲಿ ಅವರು ವಹಿಸುವ ಪಾತ್ರದಲ್ಲಿ ಮಾತ್ರ. ಈ ವ್ಯತ್ಯಾಸಕ್ಕೆ ಕಾರಣ, ಯಾವ ವಸ್ತುವಿನಿಂದ ಈ ಜಗತ್ತು ಉಂಟಾಗಿದೆ ಎಂಬ ವಿಷಯದಲ್ಲಿ ಆ ಸಿದ್ಧಾಂತಗಳೆರಡರಲ್ಲೂ ಇರುವ, ದೃಷ್ಟಿಭೇದ. ತನ್ನ ಈಶ್ವರವಾದವನ್ನು ಪುಷ್ಟೀಕರಿಸಲು ಪತಂಜಲಿಯು ಮಂಡಿಸುವ ಒಂದೇ ಒಂದು ವಾದವೆಂದರೆ, ಜ್ಞಾನ, ವಿವೇಕ ಮೊದಲಾದವುಗಳಲ್ಲಿ ತರ-ತಮ ಕ್ರಮವಿರುವುದು ನಮ್ಮ ಅನುಭವಕ್ಕೆ ಬಂದ ವಿಷಯ. ಇಂಥ ತರ-ತಮ ಕ್ರಮದ ಪರಮಾವಧಿಯೆಂದರೆ ಅನಂತ ಜ್ಞಾನ, ಅನಂತ ವಿವೇಕಗಳೇ ಎಂಬುದು. ಭಗವಂತ ಕೂಡ ಪುರುಷಮಾತ್ರನಾಗಿದ್ದು ಶುದ್ಧಚೇತನವೇ ಆಗಿ ಪ್ರಕೃತಿಯಿಂದ ಭಿನ್ನವಾಗಿರುವ ಪಕ್ಷದಲ್ಲಿ ಇಂತಹ ಶ್ರೇಷ್ಠಾತಿ ಶ್ರೇಷ್ಠತೆಗಳು ಅವನಲ್ಲಿ ಇರುವುದು ಹೇಗೆ ಸಾಧ್ಯ? ಇಂಥದೊಂದು ಆಕ್ಷೇಪವನ್ನು ನಿವಾರಿಸುವದಕ್ಕಾಗಿ, ಅವನಿಗೆ ಒಂದು ಬೌತಿಕ ಉಪಾಧಿಯೊಡನೆ ವಾಸ್ತವವಾದ ಸಂಪರ್ಕವಿರುವ ಒಂದುಬಗೆಯ ವ್ಯಕ್ತಿತ್ವವಿದೆಯೆಂದೂ ಅದು ಸತ್ವಪ್ರಧಾನವಾಗಿರುವುದರಿಂದ ಬಂಧಕವಲ್ಲವೆಂದೂ ಈ ಸಿದ್ಧಾಂತವು ಮುಂದಿಡುವ ಅಭಿಪ್ರಾಯ[೬೮] ಪ್ರಕೃತಿಯ ವಿಕಾಸಕ್ಕೆ ಮೂಲ ಪ್ರೇರಣೆಯನ್ನು ನೀಡುವದರ ಜೊತೆಗೆ ತನ್ನ ಭಕ್ತರ ಮೇಲೆ ಅವನಿಗಿರುವ ಕೃಪೆಯಿಂದ ಲೌಕಿಕ ಜೀವನದಿಂದ ಬಿಡುಗಡೆಹೊಂದಲು ನೆರವಾಗುತ್ತಾನೆ.[೬೯] ಆದರೆ ಅವರಿಗೆ ಬಿಡುಗಡೆ ಸಂಧಿಸಲು ಇರುವ ಉಪಾಯ ಭಗವಂತನ ಸಹಾಯ ಮತ್ತು ಯೋಗಾಭ್ಯಾಸ.[೭೦]

ಪ್ರಕೃತಿ-ಪುರುಷರು ಸಂಪೂರ್ಣವಾಗಿ ಭಿನ್ನರು ಎಂಬ ವಿವೇಕವಿಲ್ಲದಿರುವದರಿಂದ ಪುರುಷಧರ್ಮವನ್ನು ಪ್ರಕೃತಿಯಲ್ಲೂ, ಪ್ರಕೃತಿಯ ಧರ್ಮವನ್ನು ಪುರುಷನಲ್ಲೂ ಆರೋಪಿಸಿಕೊಳ್ಳುವುದೇ ಬಂಧ. ಜನ್ಮಾಂತರವಿರುವುದು- ಹನ್ನೊಂದು ಇಂದ್ರಿಯಗಳು, ಬುದ್ಧಿ, ಅಹಂಕಾರ, ಪಂಚ ತನ್ಮಾತ್ರಗಳುಳ್ಳ ಲಿಂಗಶರೀರಕ್ಕೇ ಹೊರತು, ಶುದ್ಧ ಚೈತನ್ಯಸ್ವರೂಪವಾದ ಪುರುಷನಿಗಲ್ಲ. ಏಕೆಂದರೆ ಆತ ವಿಭು ಪುರುಷನು ಬದ್ಧನೂ ಅಲ್ಲ. ಮುಕ್ತನೂ ಅಲ್ಲ, ಆತನಿಸ್ಸಂಗ.

ಪ್ರಕೃತಿಯ ಪರಿಣಾಮವಾದ ಚಿತ್ತವು, ಕರ್ಮದ ಪ್ರಭಾವದಿಂದ ಕ್ಲೇಶಗಳಿಗೆ ಈಡಾಗಿ ಶುದ್ಧವಾದ ಚೈತನ್ಯ ಸ್ವರೂಪದರ್ಶನಕ್ಕೆ ಅಡ್ಡಿಯನ್ನುಂಟು ಮಾಡುತ್ತದೆ. ಇದೇ ಪಾತಂಜಲಮತದಲ್ಲಿ ಬಂಧ. ಆ ಕ್ಲೇಶಗಳು ಹೀಗಿವೆ - ಅವಿದ್ಯಾ, ಅಸ್ಮಿತಾ, ರಾಗ, ದ್ವೇಷ ಮತ್ತು ಅಭಿನಿವೇಶ. ಅನಿತ್ಯ, ಅನಾತ್ಮ ಹಾಗೂ ಅಪವಿತ್ರವಾದ ವಿಷಯಗಳನ್ನು ನಿತ್ಯ, ಆತ್ಮ ಮತ್ತು

---

೬೭. ಎಂ. ಹಿರಿಯಣ್ಣ, (೧೯೭೧) ಭಾರತೀಯ ತತ್ತ್ವಶಾಸ್ತ್ರದ ಮೂಲಾಂಶಗಳು (ಕನ್ನಡಕ್ಕೆ) ಡಾ. ಕೆ.ಬಿ. ರಾಮಕೃಷ್ಣರಾವ, ಪು. ೧೪೨.

೬೮. ಕ್ಲೇಶಕರ್ಮವಿಪಾಕಾಶೈಯರಪರಾಮೃಷ್ಟಃ ಪುರುಷ ವಿಶೇಷ ಈಶ್ವರಃ, ೧-೨೪, ಯೋಗಸೂತ್ರ.

೬೯. ಈಶ್ವರಪ್ರಣಿಧಾನಾದ್ವಾ, ಯೋಗಸೂತ್ರ, ೧.೨೩.

೭೦. ಯೋಗಸೂತ್ರ, ೨-೪೫.

ಪವಿತ್ರವಾದದ್ದೆಂದು ಭಾವಿಸುವುದೇ ಅವಿದ್ಯೆ. ಸುಖ-ದುಃಖಗಳನ್ನು ವಾಸ್ತವವಾಗಿ ಅನುಭವಿಸುವ ಬುದ್ಧಿಯನ್ನು ತಾನೆಂದು ಭಾವಿಸುವುದೇ ಅಸ್ಮಿತಾ. ಮರಣಭಯವೇ ಅಭಿನಿವೇಶ. ಈ ಕ್ಲೇಶಗಳಿಂದ ದೂರವಾದ ಚಿತ್ತವು ಸಮಾಧಿಗೆ ಸಾಧನವಾಗುತ್ತದೆ. ಅವಿದ್ಯೆಯೇ ಬಂಧಕ್ಕೆ ಮುಖ್ಯ ಕಾರಣ.

ಪುರುಷನು ಸದಾ ಪರಿವರ್ತನೆಯಾಗುವ ಪ್ರಕೃತಿಗಿಂತ ಬೇರೆ ಎಂಬ ವಿವೇಕವೇ ಮುಖ್ಯ ಸಾಧನ. ಇದು ಕೇವಲ ನಂಬಿಕೆಯಾಗದೆ ಅನುಭವದಲ್ಲಿ ಅಳವಡಬೇಕು.

ಪಾತಂಜಲಿದರ್ಶನದಲ್ಲಿ- ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ[೭೧] ಎಂಬ ಅಷ್ಟಾಂಗಯೋಗವನ್ನು ಮೋಕ್ಷಸಾಧನವನ್ನಾಗಿ ನಿರೂಪಿಸಿದೆ. ಮುಮುಕ್ಷುವು ಇದನ್ನು ಅನುಷ್ಠಾನ ಮಾಡಬೇಕು. ಅಲ್ಲದೆ ಸಮಾಧಿಗೆ ಸಾಧನವಾಗಿ, ವಿಘ್ನಗಳನ್ನು ನಿವಾರಿಸಿ ಮಾರ್ಗವನ್ನು ಸುಗಮಗೊಳಿಸಲು ಈಶ್ವರನ ಉಪಾಸನೆಯನ್ನು ವಿಧಾನ ಮಾಡಿದೆ. ಆದರೆ ಈಶ್ವರನು ಮೋಕ್ಷದಾಯಕನಲ್ಲ. ವೈರಾಗ್ಯ ಮತ್ತು ಅನಾಸಕ್ತಿಯನ್ನು ಬೆಳಸಿಕೊಂಡಾಗ ಮೋಕ್ಷದ ಹಾದಿ ಸುಗಮವಾಗುತ್ತದೆ.

ಪುರುಷನು ಪ್ರಕೃತಿಯ ಸಂಪರ್ಕವನ್ನು ಸಂಪೂರ್ಣವಾಗಿ ಕಳೆದುಕೊಳ್ಳುವುದೇ ಮೋಕ್ಷ.[೭೨] ಆಗ ಪುರುಷನು ತನ್ನ ನೈಜಸ್ವರೂಪದಲ್ಲಿರುತ್ತಾನೆ. ಇದೇ ಕೈವಲ್ಯ ಅಥವಾ ಅಪವರ್ಗ. ಈ ಸ್ಥಿತಿಯಲ್ಲಿ ಇತ್ಯಾತ್ಮಕವಾದ ಯಾವ ಆನಂದವೂ ಇಲ್ಲ, ಆದರೆ ನೈಯಾಯಿಕರ ಮೋಕ್ಷದಂತಲ್ಲ. ಏಕೆಂದರೆ ಜೀವಾತ್ಮವು ಚೈತನ್ಯಸ್ವರೂಪ. ದುಃಖವೆಲ್ಲವೂ ಈ ಸ್ಥಿತಿಯಲ್ಲಿ ಸಂಪೂರ್ಣ ನಾಶವಾಗುತ್ತದೆ. ಈ ದರ್ಶನವು ಜೀವನ್ಮುಕ್ತಿ ಹಾಗೂ ವಿದೇಹ ಮುಕ್ತಿ ಎರಡನ್ನು ಮಾನ್ಯಮಾಡುತ್ತದೆ.

ಯೋಗಮತವು ಮೋಕ್ಷದ ವಿಷಯದಲ್ಲಿ ಸಾಂಖ್ಯಮತಕ್ಕಿಂತ ಬೇರೆ ಏನಲ್ಲ ಆದರೆ ಆ ಕೈವಲ್ಯವನ್ನು ಹೇಳುವಾಗ ಸಂಪ್ರಜ್ಞಾತಸಮಾಧಿ.[೭೩] ಅಸಂಪ್ರಜ್ಞಾತಸಮಾಧಿ ಎಂಬ ಆತ್ಮನ ಎರಡು ಅವಸ್ಥೆಯನ್ನು[೭೪] ನಿರೂಪಿಸುತ್ತದೆ. ಎರಡನೆಯದನ್ನು ಸಾಧಿಸುವುದೇ ಜೀವನದ ಮುಖ್ಯಗುರಿ. ಮೊದಲನೆಯ ಅವಸ್ಥೆಯಲ್ಲಿ ಬುದ್ಧಿಯು ಒಂದು ವಸ್ತುವಿನ ಮೇಲೆ ಏಕಾಗ್ರತೆಯನ್ನು ಹೊಂದಿ ಸಂಪೂರ್ಣವಾಗಿ ಧ್ಯಾನದಲ್ಲಿ ಮುಳುಗಿರುವುದು. ಎರಡನೆಯ ಅವಸ್ಥೆಯಲ್ಲಿ ತನ್ನ ಇರುವಿಕೆಯ ಅರಿವೂ ಸಂಪೂರ್ಣವಾಗಿ ಲಯವಾಗುವುದು; ಇವೇ ಪೂರ್ಣತೆ.

ಸಾಂಖ್ಯದರ್ಶನದಲ್ಲಿ ಪ್ರಕೃತಿ ಸ್ವತಂತ್ರ ಹಾಗೂ ನಿರಪೇಕ್ಷವಾಗಿದ್ದರೂ ಪುರುಷನನ್ನು ಅವಲಂಬಿಸಿದೆ. ಪುರುಷನ ಸಹಯೋಗವಿಲ್ಲದಿದ್ದರೆ ಸೃಷ್ಟಿಕಾರ್ಯ ಅಸಂಭವ. ಅಚೇತನ ಪ್ರಕೃತಿಯಿಂದ ಸಾಮಂಜಸ್ಯವಾದ ವಿಶ್ವದ ನಿರ್ಮಾಣ ಹೇಗೆ ತಾನೆ ಆಗಬಹುದು? ಪುರುಷ ನಿಷ್ಕ್ರಿಯನಾಗಿರುವುದರಿಂದ ಅವನು ಹೇಗೆ ಕರ್ಮಫಲ ಉಪಭೋಗಿಸುತ್ತಾನೆ? ಪ್ರಕೃತಿಯೇ ವಿಭಿನ್ನ ಕರ್ಮಗಳಲ್ಲಿ ಭಾಗಿಯಾಗುವದರಿಂದ ಕರ್ಮಗಳ ಫಲ ಪ್ರಕೃತಿಗೇ ದೊರಕಬೇಕು, ನಿಷ್ಕ್ರಿಯಪುರುಷನಿಗಲ್ಲ. ಪ್ರಕೃತಿ ಜಡ, ಚೇತನದ ಸಾನಿಧ್ಯವಿಲ್ಲದಿದ್ದರೆ ಪ್ರಕೃತಿ ಸಂಚಲನಗೊಳ್ಳಲಾರದು. ಆದರೆ ಪುರುಷ ನಿಷ್ಕ್ರಿಯನಾದುದರಿಂದ ಅದನ್ನು ಸಂಚಲಿಸಲಾರ. ಆದುದರಿಂದ ಇವುಗಳೆರಡನ್ನೂ ಸಂಚಲಿಸುವ ಮತ್ತೊಂದು ಕಾರಣತತ್ವವು

---

೭೧. ಯಮನಿಯಮಾಸನಪ್ರಾಣಾಯಾಮಪ್ರತ್ಯಾಹಾರಧಾರಣಾಧ್ಯಾನಸಮಾಧಯೋಽಷ್ಟಾವಂಗಾನಿ ॥ ಯೋಗಸೂತ್ರ ೨೯.

೭೨. ತದ್ವೈರಾಗ್ಯಾದಪಿ ದೋಷಬೀಜಕ್ಷಯೇ ಕೈವಲ್ಯಮ್, ಯೋಗಸೂತ್ರ ೫೦.

೭೩. ವಿತರ್ಕವಿಚಾರಾನಂದಾಸ್ಮಿತಾರೂಪಾನುಗಮಾತ್ಸಂಪ್ರಜ್ಞಾತಃ ॥ ಯೋಗಸೂತ್ರ ೧೭.

೭೪. ತಸ್ಯಾಪಿ ನಿರೋಧೇ ಸರ್ವನಿರೋಧಾನ್ನಿರ್ಬೀಜಃ ಸಮಾಧಿಃ ॥ ಯೋಗಸೂತ್ರ ೫೧.

ಇಲ್ಲಿ ಅನಿವಾರ್ಯವೆನಿಸುತ್ತದೆ. ಅದುವೇ ಶಕ್ತಿವಿಶಿಷ್ಟ ಶಿವಸ್ಥಲ (ಈಶ್ವರ)ಎಂದು ಸ್ವೀಕರಿಸಬೇಕಾಗುತ್ತದೆ. ಪ್ರಕೃತಿ-ಪುರುಷ ಅಥವಾ ಜಡ-ಚೇತನ ಈ ಮುಂತಾದ ದ್ವೈತ, ಸ್ಥಲತತ್ವದ ಎರಡು ರೂಪಗಳೆಂದು ಒಪ್ಪಿದಲ್ಲಿ ಸೃಷ್ಟಿಗೆ ಉಚಿತವ್ಯಾಖ್ಯೆಯಾಗಬಲ್ಲದು. ಇದನ್ನೇ ಮಾಯಿದೇವ ಹೀಗೆ ಹೇಳಿದ್ದಾನೆ :

ಅಂಗಂ ಪ್ರಕೃತಿರಾಖ್ಯಾತಂ ಲಿಂಗಂ ಪುರುಷ ಈರಿತಃ।
ತಯೋಃ ಪ್ರೇರಕಭಾವೇನ ಸಂಯೋಗಃ ಸ್ವಯಮೀಶ್ವರಃ॥[೭೫]

ಹೀಗೆ ಸಾಂಖ್ಯ, ಸೃಷ್ಟಿವಿಕಾಸ ಹಾಗೂ ಪ್ರಕೃತಿ ಪುರುಷ ಸಂಬಂಧದ ವಿಶ್ಲೇಷಣೆಯಲ್ಲಿ ಸಫಲವಾಗಿಲ್ಲ. ಈ ಕೊರತೆಯನ್ನು ಅನುಲಕ್ಷಿಸಿದ ಯೋಗದರ್ಶನವು ಬಹಳ ತಡವಾಗಿಯಾದರೂ ಈಶ್ವರ ಅಸ್ತಿತ್ವತವನ್ನು ಸ್ವೀಕರಿಸಿತು. ಆದರೂ ಯೋಗದರ್ಶನವು, ಈಶ್ವರನನ್ನು ಸೃಷ್ಟಿಕರ್ತ, ಸಂರಕ್ಷಕ, ಹಾಗೂ ಸಂಹಾರಕನಂತೆ ಕಾಣಲಿಲ್ಲ. ಈಶ್ವರ ಇಲ್ಲಿ ಕೇವಲ ಧ್ಯಾನಕ್ಕೆ ಸರ್ವಶ್ರೇಷ್ಠ ವಸ್ತುವಾಗಿದ್ದರೂ ಸೀಮಿತನಾಗಿ ಉಳಿದ. ಅವನು ಕರ್ಮನಿಯಮದ ಅಧೀಕ್ಷಕನೂ ಅಲ್ಲ. ದಂಡ ಹಾಗೂ ಪುರಸ್ಕಾರಗಳನ್ನೂ ಕೊಡಲಾರ. ಸೃಷ್ಟಿಸ್ಥಿತಿಲಯಗಳಿಗೂ ಅವನಿಗೂ ಯಾವ ಸಂಬಂಧವೂ ಇಲ್ಲ. ಆದುದರಿಂದ ಅವನು ಸರ್ವಶಕ್ತಿವಂತನಾಗಲಾರ. ಈ ರೀತಿಯಾಗಿ ಯೋಗದಲ್ಲಿ ಈಶ್ವರನ ಬಗೆಗೆ ಉತ್ಕೃಷ್ಟವಾದ ಕಲ್ಪನೆಯ ಅಭಾವ ಎದ್ದು ಕಾಣುತ್ತದೆ.

ಮಾಯಿದೇವನು ಯೋಗದರ್ಶನದಲ್ಲಿ ಬರುವ ಉತ್ತರಯೋಗವನ್ನು ಷಟ್‌ಸ್ಥಲಕ್ಕೆ ಹೀಗೆ ಅನ್ವಯಿಸಿಕೊಂಡಿದ್ದಾನೆ.

ಶಿವ ಏವ ಸ್ವಯಂಲಿಂಗಮಾತ್ಮಾವಾಂಗಸ್ಥಲಂಭವೇತ್ ।
ತಯೋಃ ಶಿವಾತ್ಮಯೋಃ ಸಮ್ಯಗ್ಯೋಗಃ ಸಂಯೋಗ ಏವ ಹಿ ॥[೭೬]

ಸಂಯೋಗ ಅಥವಾ ಸಾಮರಸ್ಯವೇ ಯೋಗವೆಂದು ಹೇಳಿದ ಮಾಯಿದೇವ, ಭಕ್ತಿ ಯೋಗವನ್ನು ಅಷ್ಟಮಾಧಿಕರಣದಲ್ಲಿ ಹೀಗೆ ಪ್ರತಿಪಾದಿಸಿದ್ದಾನೆ.

ನ ಯೋಗೋ ನ ತಪೋ ನಾರ್ಚಾಕ್ರಮಃ ಕೋಪಿ ನ ವಿದ್ಯತೇ।
ಆಮಾಯೇ ಶಿವಮಾರ್ಗೇಽಸ್ಮಿನ್ ಭಕ್ತಿರೇಕಾ ಪ್ರಶಸ್ಯತೇ ॥[೭೭]

ಸಾಂಖ್ಯದರ್ಶನದ ತತ್ತ್ವ ವಿಶ್ಲೇಷಣ ಪದ್ಧತಿಯು ಹೃದಯ ಸ್ಪರ್ಶಿಯಾಗಿದೆಯೆಂದೂ ವಿಜ್ಞಾನಕ್ಕೆ ಬಹಳ ಹತ್ತಿರವಾದ ಸಿದ್ಧಾಂತವೆಂದರೆ ಸಾಂಖ್ಯ ಎಂದೂ ಹೇಳಲಾಗಿದೆ. ವೀರಶೈವ ವಿದ್ವಾಂಸರನೇಕರು ಸಾಂಖ್ಯದ ೨೫, ತತ್ವಗಳನ್ನು

೭೫. ಶಿವಾನುಭವಸೂತ್ರಂ, ಅಧಿಕರಣ ೫, ಶ್ಲೋಕ ೩೧.

೭೬. ಅದೇ, ಶ್ಲೋಕ ೨.

೭೭. ಅದೇ, ಅಧಿಕರಣ ೮, ಶ್ಲೋಕ ೧೩.

ಒಪ್ಪಿಕೊಂಡಿದ್ದಾರೆ.[೭೮] ಕೆಲವರು ಅವು ಸಾಂಖ್ಯದ ಸ್ವತಂತ್ರ ಅಭಿಪ್ರಾಯಗಳಾಗಿರದೆ ವೃದ್ಧಜಾಬಾಲೋಪನಿಷತ್ತಿನಿಂದ ಸ್ವೀಕರಿಸಿದಂಥವುಗಳೆಂದು ವಾದಿಸುತ್ತಾರೆ.[೭೯]

ಪತಂಜಲಿ ಶೈವನೆಂದು ಹೇಳಲಾಗುತ್ತದೆ. ಆದುದರಿಂದ ಅವನ ಸಿದ್ಧಾಂತದ ಪ್ರಭಾವ ವೀರಶೈವದ ಸಾಧನಮಾರ್ಗದ ಮೇಲೆ ದಟ್ಟವಾಗಿ ಬಿದ್ದುದರಲ್ಲಿ ಸಂದೇಹವಿಲ್ಲ. ಚನ್ನಸದಾಶಿವ (ಸು.ಕ್ರಿ.ಶ ೧೫೦೦)ನಿಂದ ರಚಿತವಾದ 'ಶಿವಯೋಗ ಪ್ರದೀಪಿಕೆ'ಯೆಂಬ ಕೃತಿಯಲ್ಲಿ 'ಯಮನಿಯಮ' ಮುಂತಾದ ಅಷ್ಟಾಂಗಮಾರ್ಗಗಳನ್ನು ಸಂಪೂರ್ಣವಾಗಿ ವೀರಶೈವಸಿದ್ಧಾಂತಕ್ಕೆ ಅಳವಡಿಸಿದುದನ್ನು ಕಾಣಬಹುದು. ಪಟಲ ೩ರಲ್ಲಿ "ಅಷ್ಟಾಂಗಯೋಗಸಂಪನ್ನನೇ ಭಕ್ತಾದಿಷಟ್‌ಸ್ಥಲ ಸಂಪನ್ನನಾದ ವೀರಶೈವನೆಂಬ" ನಿರೂಪಣೆ ಎಂದು ಹೇಳಿ ಅಲ್ಲಿ ಈ ಯಮನಿಯಗಳನ್ನು ಷಟ್‌ಸ್ಥಲಕ್ಕೆ ಅನ್ವಯಿಸಲಾಗಿದೆ.

ಕೃತಿಯ ಪ್ರಸ್ತಾವನೆಯಲ್ಲಿ ಹೇಳಲಾದ ಮಾತುಗಳು ಗಮನಾರ್ಹವಾಗಿವೆ "ಭಾರತೀಯ ದಾರ್ಶನಿಕ ಮತವಾದಗಳಲ್ಲಿ ಸಾಕಷ್ಟು ಭಿನ್ನಭಿಪ್ರಾಯಗಳು ಕಂಡುಬಂದರೂ ಯೋಗದಬಗೆಗೆ ಮಾತ್ರ ಯಾರದೂ ಭಿನ್ನಾಪ್ರಾಯ ಕಂಡುಬರುವದಿಲ್ಲವೆಂಬುದೇ ಯೋಗದ ಮಹತಿಯನ್ನೆತ್ತಿತೋರಿಸುತ್ತದೆ. ತಮ್ಮ ಜೀವಿತದಲ್ಲಿ ಭೋಗಸುಖವನ್ನು, ಯಥೇಷ್ಟವಾಗಿ ಪಡೆಯಲು ನಾಸ್ತಿಕರು ಕೂಡ ಯೋಗಾಂಗಳೆನಿಸಿದ ಯಮನಿಯಮಾಂಗಗಳನ್ನು ಅನುಸರಿಸಲೇ ಬೇಕಾಗುವುದೆಂಬುದನ್ನು ಇಲ್ಲಿ ಗಮನಿಸಬೇಕು. ವಿಚಾರಿಸಿ ನೋಡಿದರೆ ಯೋಗವೆಂಬುದು ಪ್ರಾಚ್ಯಮನೋವಿಜ್ಞಾನಶಾಸ್ತ್ರವೇ ಆಗಿದೆ. ಮಾನವರು ಪ್ರಕೃತಿರಾಜ್ಯದಿಂದ ಪಾರಾಗಿ ಆತ್ಮರಾಜ್ಯದಲ್ಲಿ ಪ್ರವೇಶಿಸುವುದಕ್ಕೆ ಯೋಗಕ್ಕಿಂತ ಸುಲಭೋಪಾಯ ಮತ್ತಾವುದೂ ಇಲ್ಲ".[೮೦] ಯೋಗದ ಮಹತ್ತ್ವವನ್ನು ಹಲವರು ಹಲವಾರು ರೀತಿಯಲ್ಲಿ ಕೊಂಡಾಡುತ್ತಾರೇನೋ ನಿಜ. ಆದರೆ ಮಾಯಿದೇವ, ಹಿಂದೆ ಹೇಳಿದಂತೆ ಅಷ್ಟಾಂಗಯೋಗದ ಉತ್ತರಭಾಗವನ್ನಷ್ಟೇ ಷಟ್‌ಸ್ಥಲಕ್ಕೆ ಅಳವಡಿಸಿ, ಶತಕತ್ರಯದಲ್ಲಿ ಕೆಳಗಿನಂತೆ ಹೀಗೆ ವಿವರಿಸಿದ್ದಾನೆ.

ಯಮ ನಿಯಮಾದಿಕಾಷ್ಟ ವಿಧಯೋಗದೊಳುತ್ತರ ಭಾಗಪೂರ್ವಭಾಗ
ಗಮನನುಮಾನ ದೃಷ್ಟವಿಮಳ ಶ್ರುತದಿಂದರಿದಲ್ಲಿ ಪೂರ್ವಭಾ
ಗಮನುಳಿದುತ್ತರಾರ್ಧಶಿವಯೋಗ ಸಮಾಹಿತ ಭಕ್ತಿ ಸತ್ಕ್ರಿಯಾ
ಶ್ರಮ ಪರಮಾರ್ಥಮಂ ಪಿಡಿದು ವರ್ತಿಸುವರ್ ಶರಣರ್ ಶಿವಾಧವಾ[೮೧]

ಯಮ, ನಿಯಮ, ಆಸನ, ಪ್ರಾಣಾಯಾಮ, ಮತ್ತು ಪ್ರತ್ಯಾಹಾರ ಇವೈದು ಪೂರ್ವಯೋಗ; ಧಾರಣ, ಧ್ಯಾನ ಸಮಾಧಿ, ಇವು ಮೂರು ಉತ್ತರಯೋಗ ಈ ವಿಭಾಗವನ್ನು ಆಗಮ-ಪ್ರತ್ಯಕ್ಷ-ಅನುಮಾನ, ಪ್ರಮಾಣಗಳಿಂದ ಅರಿತು, ಪೂರ್ವಯೋಗವನ್ನುಳಿದು, ಉತ್ತರ ಯೋಗವನ್ನು ತಳೆದು, ಸಮಾಧಾನಿಗಳಾಗಿ ಭಕ್ತಿಕ್ರಿಯಾಯುಕ್ತರಾಗಿ, ಪರಮಾರ್ಥದಲ್ಲಿ ಶರಣರು ವರ್ತಿಸುತ್ತಾರೆಂದು ಪ್ರತಿಪಾದಿಸುತ್ತಾನೆ.

---

೭೮. "ಷಟ್‌ಸ್ಥಲಜ್ಞಾನ ಸಾರಾಮೃತ" ೨೫ ತತ್ತ್ವಗಳ ಜೊತೆಗೆ ೧೧ ತತ್ವಗಳನ್ನೂ ಅಂಗೀಕರಿಸಿ ವೀರಶೈವವು ೩೬ ತತ್ವಗಳನ್ನು ಒಪ್ಪಿದೆ. ಡಾ. ಆರ್.ಸಿ.ಹಿರೇಮಠ (೧೯೬೬) ಪು. ೧೬೦.

೭೯. ಎಂ.ಜಿ. ನಂಜುಂಡಾರಾಧ್ಯ (೧೯೭೭) ಪು. ೬೧೩ "ವೀರಶೈವ ಸಂಸ್ಕೃತಿ ಸಾಹಿತ್ಯ ಸಮೀಕ್ಷೆ" (ಸಂ) ಸದಾನಂದ ಕನವಳ್ಳಿ "ವೀರಶೈವ ಸಾಹಿತ್ಯ ಸಮೀಕ್ಷೆ". ಪು. ೬೧೩.

೮೦. ಶಿವಯೋಗಪ್ರದೀಪಿಕಾ (ಸಂ) ಎಂ.ಎಂ. ಕಲಬುರ್ಗಿ, ಪಂ. ನಾಗಭೂಷಣಶಾಸ್ತ್ರಿಗಳು, ಪ್ರಸ್ತಾವನೆ, ಪು. ii.

೮೧. ಶಿವಾಧವಾಶತಕ ೫೦.

ಎಂದರೆ, ಕಾಯದಲ್ಲಿ ಸತ್ಕಳೆಯಾದ ಇಷ್ಟಲಿಂಗ, ವಾಕ್ಕಿನಲ್ಲಿ ಚಿತ್ಕಳೆಯಾದ ಜ್ಞಾನಲಿಂಗ, ಮನದಲ್ಲಿ ಆನಂದ ಕಳೆಯಾದ ಭಾವಲಿಂಗ ಧಾರಣವಾಗಬೇಕು. ಇಷ್ಟಲಿಂಗ ಪ್ರತ್ಯಕ್ಷ ಪ್ರಮಾಣಗೋಚರ. ಪ್ರಾಣಲಿಂಗ ಶಬ್ದಪ್ರಮಾಣಗೋಚರ, ಭಾವಲಿಂಗ ಅನುಮಾನ ಪ್ರಮಾಣಗೋಚರ. ಕಾಯದಲ್ಲಿ ಧಾರಣ, ಮನದಲ್ಲಿ ಧ್ಯಾನ, ಭಾವದಲ್ಲಿ ಸಮಾಧಿರೂಪ ಸಮರಸ ಧಾರಣವಾಗದೆ, ಧ್ಯಾನ ಸಮನಿಸದು, ಧ್ಯಾನ ಸಮನಿಸದೆ ಸಮಾಧಿ ಸಂಭವಿಸದು. ಕಾಯದಲ್ಲಿ ಶಿವಕ್ರಿಯೆ ಧಾರ್ಯವಾಗಬೇಕು. ಮನದಲ್ಲಿ ಶಿವಜ್ಞಾನದ ಧ್ಯಾನ ಅಂದರೆ ಮನನವಾಗಬೇಕು. ಅಂತಾದಾಗ ಭಾವದಲ್ಲಿ ಶಿವನ ಅನುಭವ ಆನಂದಗಳು ಆಳವಡುತ್ತವೆ. ಆ ಶೈವೀ ಆನಂದದಲ್ಲಿ ಅವಿರಳತೆಯುಂಟಾಗುತ್ತದೆ. ಅದನ್ನು ಶಿವಯೋಗ ಎಂದು ಮಾಯಿದೇವ ಕರೆಯುತ್ತಾನೆ.

ಹೀಗೆ ಮಾಯಿದೇವ ಸಾಂಖ್ಯರ ೨೫ ತತ್ವಗಳನ್ನು ಹಾಗೂ ಯೋಗದ ಉತ್ತರಭಾಗಗಳನ್ನು ಷಟ್‌ಸ್ಥಲ ದರ್ಶನಕ್ಕೆ ಅನ್ವಯಿಸಿಕೊಂಡದ್ದುಂಟು. ಉಳಿದುದನ್ನು ತನ್ನದೇ ಆದ ದೃಷ್ಟಿಕೋಣದಿಂದ ಪರಾಮರ್ಶಿಸಿದ್ದನ್ನು ಈಗಾಗಲೆ ಗಮನಿಸಿದ್ದೇವೆ. ಈ ಬಗೆಯಾಗಿ ಸಾಂಖ್ಯ-ಯೋಗ ಹಾಗೂ ಷಟ್‌ಸ್ಥಲ ದರ್ಶನಗಳಲ್ಲಿ ಕೆಲವು ಸಾದೃಶ್ಯಗಳು ಕಂಡು ಬರುತ್ತವೆ.

೩. ಪೂರ್ವ-ಮೀಮಾಂಸ :

ವೈದಿಕ ಕರ್ಮಕಾಂಡದ ಯಥಾರ್ಥನಿರ್ಣಯವೇ ಮೀಮಾಂಸಾದರ್ಶನದ ಮುಖ್ಯಗುರಿ. ಪ್ರಾಚೀನ ಮೀಮಾಂಸಕರು ಕೇವಲ ಕರ್ಮಬ್ರಹ್ಮವಾದಿಗಳಾಗಿದ್ದರು. ಅರ್ವಾಚೀನ ಮೀಮಾಂಸಕರು ತತ್ವಗಳನ್ನು ವಿಭಾಗಗೊಳಿಸಿದ್ದಾರೆ. ಇದರಲ್ಲಿ ಎರಡು ಪಂಥಗಳಿವೆ. ೧. ಪ್ರಾಭಾಕರ ಮತ, ೨. ಕುಮಾರಿಲ ಮತ. ಪ್ರಾಭಾಕರರು, ದ್ರವ್ಯ, ಗುಣ, ಕರ್ಮ, ಸಾಮಾನ್ಯ, ಸಮವಾಯ, ಸಂಖ್ಯೆ, ಶಕ್ತಿ ಮತ್ತು ಸಾದೃಶ್ಯ ಈ ಎಂಟು ಪದಾರ್ಥಗಳನ್ನೊಪ್ಪಿದ್ದಾರೆ. ದ್ರವ್ಯವು ಒಂಭತ್ತು ವಿಧ-ಪೃಥಿವೀ, ಜಲ, ತೇಜಸ್ಸು, ವಾಯು, ಆಕಾಶ, ಕಾಲ, ದಿಕ್, ಆತ್ಮ, ಮನಸ್ಸು - ಇವುಗಳ ಸ್ವರೂಪವು ಸಾಮಾನ್ಯವಾಗಿ ನ್ಯಾಯ-ವೈಶೇಷಿಕ ಮತದಂತೆಯೆ ಇದೆ. ಪ್ರಾಭಾಕರ ಮತದಲ್ಲಿ ಗುಣಗಳ ಸಂಖ್ಯೆ ಇಪ್ಪತ್ತೊಂದು. ವೈಶೇಷಿಕರ ಸಂಖ್ಯಾ, ವಿಭಾಗ, ಪೃಥಕ್ತ್ವ, ದ್ವೇಷ ಈ ನಾಲ್ಕು ಗುಣಗಳಿಗೆ ಬದಲಾಗಿ ವೇಗ ಎಂಬ ಒಂದೇ ಗುಣವನ್ನೊಪ್ಪಿದೆ. ಕರ್ಮವು ಪ್ರತ್ಯಕ್ಷವಲ್ಲ, ಅನುಮೇಯ ಆದರೆ ಈ ಅಭಿಪ್ರಾಯವು ಕೌಮಾರಿಲರಿಗೆ ಸಮ್ಮತವಲ್ಲ. ಸಮವಾಯವು ನ್ಯಾಯಮತದಂತೆ ನಿತ್ಯವಲ್ಲ, ಏಕೆಂದರೆ ಅದು ಅನಿತ್ಯವಸ್ತುಗಳಲ್ಲಿಯೂ ಇರುತ್ತದೆ.

ಕುಮಾರಿಲ ಮತದಲ್ಲಿ ಮುಖ್ಯವಾಗಿ ಎಲ್ಲಾ ತತ್ವಗಳನ್ನು ಎರಡು ರೀತಿಯಾಗಿ ವಿಭಾಗಿಸಬಹುದು;ಭಾವ ಹಾಗೂ ಅಭಾವ. ಭಾವ ಪದಾರ್ಥಗಳು ದ್ರವ್ಯ, ಗುಣ, ಕರ್ಮ ಮತ್ತು ಸಾಮಾನ್ಯ ಎಂದು ನಾಲ್ಕುವಿಧ. ಇದೇ ರೀತಿ ಅಭಾವವೂ ಪ್ರಾಗಭಾವ, ಪ್ರಧ್ವಂಸಾಭಾವ, ಅತ್ಯಂತಾಭಾವ ಹಾಗೂ ಅನ್ಯೋನ್ಯಾಭಾವ ಎಂದು ನಾಲ್ಕುವಿಧ. ಭಾವ ಪದಾರ್ಥಗಳಲ್ಲೊಂದಾದ ದ್ರವ್ಯವು ಹನ್ನೊಂದುವಿಧ - ನೈಯಾಯಿಕರು ಅಂಗೀಕರಿಸಿರುವ ಒಂಬತ್ತು ದ್ರವ್ಯಗಳ ಜೊತೆಗೆ, (ಶಕ್ತಿ ಹಾಗೂ ಸಾದೃಶ್ಯ) ಅಂಧಕಾರ ಹಾಗೂ ಶಬ್ದವನ್ನು ಸೇರಿಸಿದೆ. ಗುಣ ಹದಿಮೂರು ವಿಧ. ಕರ್ಮವು ಪ್ರತ್ಯಕ್ಷಗೋಚರ. ಈ ಮತದಲ್ಲಿ ನೈಯಾಯಿಕರಂತೆ ಸಮವಾಯವೆಂಬ ಪ್ರತ್ಯೇಕ ಪದಾರ್ಥವಿಲ್ಲ.

ಪೂರ್ವಮೀಮಾಂಸಕರು ಜಗತ್ತಿನ ಸೃಷ್ಟಿ, ಸ್ಥಿತಿ ಮತ್ತು ವಿನಾಶವನ್ನು ಒಪ್ಪದೆ ಅದು ಅನಾದಿ ಎನ್ನುತ್ತಾರೆ.[೮೨] ವೇದಾಂತದರ್ಶನಗಳಂತೆ ಜಗತ್ತಿಗೆ ಕಾರಣನಾದ ಈಶ್ವರನನ್ನೊಪ್ಪದಿರುವುದರಿಂದ ಜಗತ್ತಿನ ಕಾರ್ಯವೆಲ್ಲವೂ

೮೨. ಶ್ಲೋಕವಾರ್ತಿಕ, ಪು. ೬೫೦.

ಸ್ವಭಾವದಿಂದಲೇ ನಡೆಯುತ್ತಿರುತ್ತದೆ. ಜಗತ್ತು ಈಗಿರುವದಕ್ಕಿಂತ ಬೇರೆಯಾಗಿದ್ದ ಕಾಲವೇ ಇಲ್ಲ.[೮೩] ಪ್ರತ್ಯೇಕ ವಸ್ತುಗಳು ಬರಬಹುದು ಹೋಗಬಹುದು.

ಕುಮಾರಿಲಭಟ್ಟರ ಪ್ರಕಾರ ಆತ್ಮನು ಬೋಧ ಹಾಗೂ ಅಬೋಧಾತ್ಮಕ. ಅಲ್ಲದೆ ಈತನು ವಿಕಾರಿ, ವಿಭು ಮತ್ತು ನಿತ್ಯ.[೮೪] ಆತ್ಮನು ಮಾನಸ ಪ್ರತ್ಯಕ್ಷಗೋಚರನಲ್ಲ. ಅನುಮಾನ ಪ್ರಮಾಣದಿಂದಲೇ ಆತ್ಮನ ಅಸ್ತಿತ್ವವನ್ನು ಊಹಿಸಬೇಕು. ಪ್ರಾಭಾಕರ ಮೀಮಾಂಸಕರಿಗೆ ಆತ್ಮನು ಸ್ವಪ್ರಕಾಶ ಮತ್ತು ಜ್ಞಾನಸ್ವರೂಪ.

ಮೀಮಾಂಸಕರು ಅನಾದಿಸಿದ್ಧನಾದ, ಜಗತ್ಕರ್ತೃವಾದ ಈಶ್ವರನನ್ನೊಪ್ಪಿಲ್ಲ. ಯಜ್ಞದ ಹವಿಸ್ಸುಗಳನ್ನು ಮುಟ್ಟಿಸಲು ಕೆಲವು ದೇವತೆಗಳನ್ನು ಕಲ್ಪಿಸಲಾಗಿದೆ. ಅವರು ಕೇವಲ ವೈದಿಕಮಂತ್ರಗಳ ಮಟ್ಟಿಗೆ ಸೀಮಿತರಾಗಿದ್ದಾರೆ. ಆದ್ದರಿಂದ ವೇದಾಂತಿಗಳಿಗೆ ಸೇಶ್ವರಮೀಮಾಂಸಕರೆಂದೂ, ಇವರಿಗೆ ನಿರೀಶ್ವರಮೀಮಾಂಸಕರೆಂದೂ ಹೆಸರು ಮನುಷ್ಯನು ಮಾಡುವ ಕರ್ಮಗಳೇ ಸ್ವತಂತ್ರವಾಗಿ ಫಲವನ್ನು ಕೊಡವಂಥವು. ಆದ್ದರಿಂದ ಅವರಿಗೆ ಈಶ್ವರನ ಅಗತ್ಯವಿಲ್ಲ.

ಮೀಮಾಂಸಾದರ್ಶನದಲ್ಲಿ ಕಾಮ್ಯಕರ್ಮದ ಆಚರಣೆಯಿಂದ ಬರುವ ಪುಣ್ಯ, ಪ್ರತಿಸಿದ್ಧಕರ್ಮಾಚರಣೆಯಿಂದ ಲಭಿಸುವ ಪಾಪ, ಇವೆರಡೂ ಬಂಧನಕ್ಕೆ ಕಾರಣವಾಗುತ್ತವೆ. ಆದರೆ ನಿತ್ಯಕರ್ಮದಿಂದ ಬಂಧನವುಂಟಾಗಲಾರದು. ಆದರೆ ಅದರ ಲೋಪದಿಂದ ಪಾಪವುಂಟಾಗುತ್ತದೆ. ಇದೂ ಪ್ರಕಾರಾಂತರದಿಂದ ಬಂಧಕ್ಕೆ ಕಾರಣವಾಗುತ್ತದೆ. ಈ ದರ್ಶನ, ಕರ್ಮವಾದದ ಪೋಷಕವಾಗಿದೆ. ಕರ್ಮಮಾಡುವ ವ್ಯಕ್ತಿಗೆ ಅದರ ಫಲ ಅವಶ್ಯವಾಗಿ ಲಭಿಸುತ್ತದೆ. ವೈದಿಕ ಪುಣ್ಯಕರ್ಮಗಳ ಫಲಸ್ವರೂಪದಿಂದ ಸ್ವರ್ಗದ ಪ್ರಾಪ್ತಿಯಾಗುತ್ತದೆ. ಧರ್ಮಾಚರಣೆಯನ್ನು ಪಾಲಿಸಿದವನಲ್ಲಿ 'ಅಪೂರ್ವ'ವೆಂಬ ಧರ್ಮವೊಂದು ಉತ್ಪನ್ನವಾಗುತ್ತದೆ. ಅದರ ಸಹಾಯದಿಂದ ಆತ್ಮನಿಗೆ ಸುಖ ಪ್ರಾಪ್ತಿ ಮತ್ತು ದುಃಖ ನಿವೃತ್ತಿಗಳು ಏರ್ಪಡುತ್ತವೆ.

ಜೈಮಿನಿಮತವು ಸ್ವರ್ಗಕ್ಕಿಂತ ಪ್ರತ್ಯೇಕವಾದ ಮೋಕ್ಷವನ್ನೊಪ್ಪದಿರುವುದರಿಂದ ಸ್ವರ್ಗವನ್ನು ಸಾಧಿಸುವ ಸಾಧನಗಳಿಂದ ವೇದವಿಹಿತವಾದ ಯಜ್ಞಗಳನ್ನು ಅನೇಕ ಬಾರಿ ಆಚರಿಸಬೇಕು. ಇದರಿಂದ ಅಪರಿಮಿತವಾದ ಸುಖವುಳ್ಳ ಸ್ವರ್ಗ ಪ್ರಾಪ್ತಿಯಾಗುತ್ತದೆ. ಇದೇ ಮೋಕ್ಷ. ನಿತ್ಯ ನೈಮಿತ್ತಿಕ ಕರ್ಮಗಳೊಡನೆ ಇದನ್ನು ಅನುಷ್ಠಾನಮಾಡಬೇಕು ಕಾಮ್ಯಾದಿಕರ್ಮಗಳು ಮೋಕ್ಷಸಾಧನಗಳಲ್ಲ.

ಈ ದರ್ಶನದ ಪ್ರಕಾರ ದುಃಖ ಮತ್ತು ಸಂಕಟಗಳಿಗೆ ಕಾರಣವಾದ ಪುನರ್ಜನ್ಮದಿಂದ ಬಿಡುಗಡೆಯೇ ಮೋಕ್ಷ. ಜನ್ಮಾಂತರದಲ್ಲಿ ಮಾಡಿರುವ ಎಲ್ಲ ಕರ್ಮಫಲಗಳನ್ನು ಅನುಭವಿಸಿದಮೇಲೆ ಕರ್ಮಶೇಷವಿಲ್ಲದಿರುವುದರಿಂದ, ಭೋಗಾಯತನ ಶರೀರ, ಭೋಗಸಾಧನವಾದ ಇಂದ್ರಿಯ, ಭೋಗವಿಷಯ - ಈ ಮೂರರ ಸಂಪರ್ಕ ಆತ್ಮನಿಗಿರುವುದಿಲ್ಲ. ಹೀಗೆ ಶರೀರೇಂದ್ರಿಯಗಳ ಸಂಪರ್ಕದಿಂದ ಸಂಪೂರ್ಣ ಮುಕ್ತನಾಗುವುದೇ ಜೀವಾತ್ಮನ ಮುಕ್ತಿ. ಮೋಕ್ಷಕ್ಕೆ ಜ್ಞಾನವು ನೇರವಾಗಿ ಕಾರಣವಲ್ಲ. ಅದು ಜನ್ಮಾಂತರವನ್ನು ತಡೆಗಟ್ಟಲು ನೆರವು ನೀಡುತ್ತದೆ. ಮೋಕ್ಷವು ಸುಖಾನುಭವರೂಪವೂ ಅಲ್ಲ. ಹಾಗೆ ಒಪ್ಪಿದರೆ ಅದು ಸ್ವರ್ಗಕ್ಕಿಂತ ಬೇರೆ ಏನಲ್ಲ.

---

೮೩. ಪ್ರಭಾಕರವಿಜಯ, ಪು. ೪೩-೪೭.

೮೪. ಯಜಮಾನತ್ವಮಪ್ಯಾತ್ಮಾ ಸಕ್ರಿಯತ್ವಾತ್ ಪ್ರಪದ್ಯತೆ ।
ನ ಪರಿಸ್ಪಂದಃ ವಿಷ್ಯೆಕಃ ಕ್ರಿಯಾ ನಃ ಕಣಭೋಜವತ್ ॥ ಶ್ಲೋಕವಾರ್ತಿಕ, ಪು. ೭೦೭.

ಮೀಮಾಂಸಾದರ್ಶನದಲ್ಲಿ ಕರ್ಮವಾದ ಮತ್ತು ಅಣುವಾದವನ್ನು ಸ್ವೀಕರಿಸಲಾಗಿದೆ. ಕರ್ಮವಾದದ ವಿಶ್ಲೇಷಣೆಗಾಗಿ 'ಅಪೂರ್ವ' ಎಂಬುದೊಂದನ್ನು ಕಲ್ಪಿಸಲಾಗಿದೆ. ಆದರೆ ಅಪೂರ್ವಜಡವಾದ್ದರಿಂದ ಆತ್ಮಗಳಿಗೆ ಅದು ಸುಖ ದುಃಖಗಳನ್ನು ಕೊಡಲಾರದು. ಏಕೆಂದರೆ ಅದು ಜಡ ಹಾಗೂ ಅಚೇತನವಾಗಿದೆಯಾದುದರಿಂದ ಅದನ್ನು ಗತಿಶೀಲಗೊಳಿಸಲು ಮತ್ತೊಂದು ಚೇತನವಸ್ತುವನ್ನು ಅಂಗೀಕರಿಸಬೇಕಾಗುತ್ತದೆ. ಇಂಥ ಚೇತನ ವಸ್ತು, ಈಶ್ವರನೇ ಎಂದು ಮನ್ನಿಸುವುದು ಉಚಿತ. ಅವನು ಎಲ್ಲ ಜೀವಾತ್ಮರ ಕರ್ಮ ಹಾಗೂ ಅವುಗಳಿಂದ ಉತ್ಪನ್ನವಾಗುವ ಫಲಗಳನ್ನು ಕೊಡುವಲ್ಲಿ ಸಮರ್ಥನಾಗಿದ್ದಾನೆ.[೮೫] ಆದುದರಿಂದ ಕರ್ಮವಾದದೊಂದಿಗೆ ಈಶ್ವರವಾದವನ್ನೂ ಮನ್ನಿಸುವುದು ಆವಶ್ಯಕವಾಗಿದೆ.

ವೈದಿಕಕರ್ಮಗಳನ್ನು ಕುರಿತು ಮಾಯಿದೇವ ಕೆಲವು ಸ್ವತಂತ್ರವಾದ ಅಭಿಪ್ರಾಯಗಳನ್ನು ಹೊಂದಿದ್ದಾನೆ. ಕರ್ಮಕಾಂಡದೊಂದಿಗೆ ಜ್ಞಾನಕಾಂಡವೊಂದನ್ನು ಸೇರಿಸಿ, ಅವುಗಳನ್ನು ಭಕ್ತಿಕಾಂಡದೊಂದಿಗೆ ಹೋಲಿಸುತ್ತಾನೆ. ನಾನು ಮಾಡುವ ಧರ್ಮಾಧರ್ಮಗಳ ಫಲವನ್ನೆಲ್ಲ ಅನುಭವಿಸಲು ನಾನೇ ಕರ್ತೃ ಎಂಬ ಅಭಿಮಾನದಿಂದ ಕೂಡಿರುವುದಕ್ಕೆ ಕರ್ಮಕಾಂಡವೆನ್ನುತ್ತಾರೆ. ಈ ಧರ್ಮಾಧರ್ಮಕರ್ಮಗಳಿಗೆಲ್ಲಾ ನಾನು ಕರ್ತೃವಲ್ಲ. ಇದಕ್ಕೆಲ್ಲ ನಾನು ಸಾಕ್ಷಿಮಾತ್ರ, ಎಂದು ತಿಳಿದಿರುವುದಕ್ಕೆ ಜ್ಞಾನಕಾಂಡವೆಂದು ಹೆಸರು. ನಾನು ಧರ್ಮಾಧರ್ಮ ಕರ್ಮಗಳಿಗೆ ಕರ್ತನೂ ಅಲ್ಲ, ಸಾಕ್ಷಿಯೂ ಅಲ್ಲ; ಎಲ್ಲದಕ್ಕೂ ಶಿವನೇ ಕರ್ತನೂ ಸಾಕ್ಷಿಯೂ ಇರುವನೆಂದು ಆ ಕರ್ತೃತ್ವಸಾಕ್ಷಿತ್ವಾದಿ ಅಭಿಮಾನಗಳನ್ನು ಬಿಟ್ಟಿರುವುದೇ ಭಕ್ತಿಕಾಂಡವೆಂದು ನಿರೂಪಿಸಲಾಗಿದೆ. ಇದಕ್ಕೆ ಮುತ್ತಿನ ಚಿಪ್ಪು, ಕಬ್ಬಿನ ಪಿಂಡ ಹಾಗೂ ತಾವರೆ ದಳದ ಉದಾಹರಣೆಗಳನ್ನು ಕೊಡಲಾಗಿದೆ. ಇವುಗಳಲ್ಲಿ ಸಂಸಾರ ಎಂಬ ನೀರಿನ ಹನಿಯುಬಿದ್ದರೆ ಕ್ರಮವಾಗಿ ಮುತ್ತಿನ ಚಿಪ್ಪಿನಲ್ಲಿ ಸಾಫಲ್ಯ(ಮುತ್ತಾಗುವಿಕೆ), ತಾವರೆಯ ದಳದಲ್ಲಿ ವೈಫಲ್ಯ, (ಮುತ್ತಿನಂತೆ ತೋರುವುದು) ಕಾದ ಕಬ್ಬಿನದ ಪಿಂಡದಲ್ಲಿ ನಾಶ (ನೀರೆಂಬ ಉಪಾಧಿಯೂ ಮಾಯವಾಗುವಿಕೆ) ಸಂಭವಿಸುವುದು ಪ್ರಸಿದ್ಧವಾಗಿದೆ. ಬೇರೆಮಾತುಗಳಲ್ಲಿ ಹೇಳುವದಾದರೆ, ಕರ್ಮಜ್ಞಾನಭಕ್ತಿಗಳಿಂದ ಕ್ರಮವಾಗಿ, ಸಂಸಾರ ಬಂಧದ ಸಫಲತೆ, ವಿಫಲತೆ, ನಾಶವುಂಟಾಗುವದೆಂದೇ ಮಾಯಿದೇವನ ಅಭಿಪ್ರಾಯ.[೮೬] ಲೇಖಾತ್ರಯದ ಉದಾಹರಣೆಯೊಂದಿಗೆ ಇದನ್ನು ಇನ್ನೂ ಸ್ಪಷ್ಟ ಪಡಿಸುತ್ತಾನೆ.

ಕರ್ಮ, ಜ್ಞಾನ, ಭಕ್ತಿ ಇವು ಮೂರೂ ಕ್ರಮವಾಗಿ, ಶಿಲಾಲೇಖ, ಸ್ಥಲಲೇಖ, ಜಲಲೇಖಗಳಾಗಿವೆ. ಶಿಲಾಲೇಖ ಅಚ್ಚಳಿಯದಂತಿದ್ದರೆ, ಸ್ಥಲಲೇಖವು ಬರೆಯಲಿಕ್ಕೆ ಬರುವಂತಿದೆ. ಜಲಲೇಖ ಇದು ಬರೆಯಲಿಕ್ಕಾಗಲಿ ಅಳಿಸಲಿಕ್ಕಾಗಲಿ ಬರುವಂತಿಲ್ಲ. ಭಕ್ತಿಯ ಮಹಿಮಾತಿಶಯದಮುಂದೆ ಕರ್ಮಜ್ಞಾನದ ಸತ್ವಹೀನತೆಯನ್ನು ಪ್ರದರ್ಶಿಸುವ ಮಾಯಿದೇವನ ವೈಶಿಷ್ಟ್ಯ ಅಪೂರ್ವವಾಗಿದೆ. ಭಕ್ತಿವಿಶೇಷದ ಮಹತ್ವವನ್ನು ಎತ್ತಿಹಿಡಿಯಲು, ಲೇಖಾತ್ರಯಸ್ಥಿತಿಯನ್ನು ಅರಿಯಬೇಕೆನ್ನುತ್ತಾನೆ. ಕರ್ಮವು, ಅಶುಭಕರ್ಮ, ಶುಭಕರ್ಮ, ಜ್ಞಾನಕರ್ಮ, ಪ್ರಸಾದಕರ್ಮವೆಂದು ನಾಲ್ಕು ವಿಧವಾಗಿದೆ.[೮೭] ಅಶುಭಕರ್ಮದಿಂದ ನರಕ, ಶುಭಕರ್ಮದಿಂದ ಸ್ವರ್ಗ, ಶುಭಾಶುಭ ಕರ್ಮಗಳಮಾರ್ಗತೊರೆದು ಜ್ಞಾನಮಾರ್ಗಾವಲಂಬಿಯಾದರೆ ಮೋಕ್ಷಸಿದ್ಧಿಸುತ್ತದೆ. ಪಾಪ, ಪುಣ್ಯ ಹಾಗೂ ಜ್ಞಾನ ಈ ಮೂರನ್ನು ಬಿಟ್ಟು ಶಿವಪ್ರಸಾದವನ್ನು ಸಂಪಾದಿಸಿದರೆ, ಆ ಪ್ರಸಾದಕರ್ಮದಿಂದ ಭಕ್ತಿಯು ಲಭಿಸುತ್ತದೆ. ಶಿವಪ್ರಸಾದದಿಂದ ಶಿವಭಕ್ತಿಯು; ಶಿವಭಕ್ತಿಯಿಂದ ಶಿವಪ್ರಸಾದವು ಲಭಿಸುತ್ತದೆ. ಇವೆರಡಕ್ಕೂ ಬೀಜಾಂಕುರಗಳಂತೆ ಪರಸ್ಪರ ಜನ್ಯಜನಕ ಸಂಬಂಧವಿದೆ ಎಂದು ಹೇಳಲಾಗಿದೆ. ಇಲ್ಲಿ ವೀರಶೈವರ ಕರ್ಮ ಪ್ರಸಾದಕರ್ಮ ಎಂದು ಕ್ರಿಯಾವಿಶ್ರಾಂತಿ ಎಂಬ ಎಂಟನೇ ಅಧಿಕರಣದಲ್ಲಿ ನಿರ್ಣಯಿಸಲಾಗಿದೆ. ಶಿವಾನುಗ್ರಹದಿಂದಲೇ ಶಿವಭಕ್ತಿಯು ಲಭಿಸುತ್ತದೆ; ಆ ಶಿವಭಕ್ತಿಯಿಂದಲೇ ಶಿವಾನುಗ್ರಹವು ಲಭಿಸುವದಾಗಿ ಮಾಯಿದೇವ ತಿಳಿಸಿದ್ದಾನೆ.

---

೮೫. ಶ್ರೀಕರಭಾಷ್ಯ (ಪ್ರ.ಭಾಗ) (ಭೂಮಿಕೆ) ಪು. ೩೫, ೩೮, ೪೯. (೧೯೫೪) ಕಾಶಿನಾಥ ಗ್ರಂಥಮಾಲಾ.

೮೬. ಶಿವಾನುಭವಸೂತ್ರಂ, ಅಧಿಕರಣ ೮, ಶ್ಲೋಕ ೨೦-೨೩.

೮೭. ಶಿವಾನುಭವಸೂತ್ರಂ, ಅಧಿಕರಣ ೮, ಶ್ಲೋಕ ೨೬-೩೧.

ಕತ್ತಲೆ ಬೆಳ್ದಿಂಗಳುಗಳ ಸಂದರ್ಭ ರಾತ್ರಿ ಕಾಲದಲ್ಲಿಯಲ್ಲದೆ, ಹಗಲಲ್ಲಿಲ್ಲದಂತೆ ಪಾಪ ಪುಣ್ಯಗಳ ಪ್ರಸಕ್ತಿ ಕರ್ಮಮತದಲ್ಲಿರುವುವಲ್ಲದೆ ಶಿವಭಕ್ತಿಮತದಲ್ಲಿಲ್ಲ, ಕತ್ತಲೆ ಬೆಳ್ದಿಂಗಳುಗಳ ಸಂಬಂಧವಿಲ್ಲದ ಹಗಲಲ್ಲಿ ಸೂರ್ಯನ ತೇಜಸ್ಸೊಂದೇ ಪ್ರಕಾಶಿಸುವಂತೆ, ಪಾಪಪುಣ್ಯಗಳ ಸೋಂಕಿಲ್ಲದ ಭಕ್ತಿಮತದಲ್ಲಿ ಶಿವತೇಜಸ್ಸೊಂದೇ ಬೆಳಗುತ್ತಿರುವುದು ಹಗಲಲ್ಲಿ ಸೂರ್ಯನು ಪ್ರಕಾಶಿಸುವಂತೆ, ಭಕ್ತಿಮತದಲ್ಲಿ ಜ್ಞಾನಲಕ್ಷಣಯುಕ್ತವಾದ ಶಿವತೇಜಸ್ಸಿರುವುದು. ರಾತ್ರಿಯಲ್ಲಿ ಕತ್ತಲೆ ಬೆಳ್ದಿಂಗಳುಗಳೆರಡೂ ಇರಬಹುದಾದುದರಿಂದ ರಾತ್ರಿಯಲ್ಲಿ ಆ ಕತ್ತಲೆ ಬೆಳ್ದಿಂಗಳುಗಳಿಗೆ ಸಂಬಂಧ ಹೇಳಬಹುದು, ಅದರಂತೆಯೇ ಕರ್ಮಮತದಲ್ಲಿ ಪಾಪಪುಣ್ಯಗಳ ಮೈತ್ರಿಯಿದೆ. ಆದರೆ ಸೂರ್ಯತೇಜೋವಿಶಿಷ್ಟವಾದ ಹಗಲಿನಂತಿರುವ ಶಿವತೇಜೋಯುಕ್ತವಾದ ಭಕ್ತಿಮತದಲ್ಲಿ ಪಾಪಪುಣ್ಯಗಳ ಸಂಬಂಧವೇ ಇಲ್ಲವೆನ್ನುತ್ತಾನೆ ಮಾಯಿದೇವ. ಒಟ್ಟಿಗೆ ಮೋಕ್ಷಕ್ಕಿಂತ ಭಕ್ತಿ ಶ್ರೇಷ್ಠವಾಗಿದೆ ಎಂದೇ ಅವನ ಅಭಿಪ್ರಾಯ.[೮೮]

ವೀರಶೈವರ ಪಂಚಯಜ್ಞಗಳು :

ವೀರಶೈವರು ಸ್ವೀಕರಿಸಿದ ಪಂಚಯಜ್ಞಗಳು ಇಂತಿವೆ. ಧರ್ಮವು ತಪಸ್ಸು, ಕರ್ಮ, ಜಪ, ಧ್ಯಾನ, ಮತ್ತು ಜ್ಞಾನ ಎಂದು ಐದು ಬಗೆ. ಶಿವನಿಗಾಗಿ ದೇಹವನ್ನು ದಂಡಿಸುವುದೇ ತಪಸ್ಸು ; ಕೃಚ್ಛ (ಪ್ರಾಯಶ್ಚಿತ್ತ) ಚಾಂದ್ರಾಯಣಾದಿವ್ರತಗಳನ್ನು ಆಚರಿಸುವುದು ವೀರಶೈವದ ತಪಸ್ಸಲ್ಲ. ಕರ್ಮವೆಂದರೆ ಶಿವಪೂಜೆಯೇ ಹೊರತು ಬಾಹ್ಯವಾದ ಯಜ್ಞಯಾಗ ಮುಂತಾದ ಪಶುಹಿಂಸಾತ್ಮಕ ಕರ್ಮವಲ್ಲ. ಪ್ರಣವ ಸಹಿತ ಶಿವಪಂಚಾಕ್ಷರ ಮಂತ್ರಪುರಶ್ಚರಣವೇ ಜಪ ; ರುದ್ರಾಧ್ಯಾಯಾದಿವೇದ ಪಾರಾಯಣಾದಿಗಳೂ ಇದರಲ್ಲಿ ಸೇರಿವೆ; ಆದರೆ ಕರ್ಮಕಾಂಡ ಬೋಧಕವಾದ ವೇದಾಧ್ಯಯನವಲ್ಲ, ಶಿವಸ್ವರೂಪಚಿಂತನವೇ ಧ್ಯಾನ ; ಆತ್ಮಚಿಂತನವಲ್ಲ. ವಚನ ಶಿವಾಗಮಾದಿಗಳ ಅರ್ಥ ಪರಿಶೀಲನವೇ ಜ್ಞಾನ; ಇತರ ಶಾಸ್ತ್ರಾಭ್ಯಾಸವಲ್ಲ. ಇವು ವೀರಶೈವದ ಪಂಚಯಜ್ಞಗಳು. ಮಾಯಿದೇವ ವಿಶೇಷಾರ್ಥ ಪ್ರಾಕಶಿಕೆಯಲ್ಲಿ ಮೇಲಿನದನ್ನೇ ಹೀಗೆ ಹೇಳಿದ್ದಾನೆ.

ಜಪೇಚ ತರ್ಪಣೇ ಹೋಮೇ ಭೋಜನೇ ಪೂಜನೇಽಪಿಚ।
ಯಥಾಕಾಲಂ ಯಥಾಶಕ್ತಿ ಯಥಾಪ್ರೀತಿ ಯಥಾವಿಧಿ ॥[೮೯]

ಹೀಗೆ ಶಿವಾನುಭವ ಸೂತ್ರಕ್ಕೂ ಪೂರ್ವಮೀಮಾಂಸಾ ಶಾಸ್ತ್ರಕ್ಕೂ ಸಾಮ್ಯವೈಷಮ್ಯಗಳಿವೆ.

೪. ಅದ್ವೈತ ವೇದಾಂತ:

ಜೀವ, ಜಗತ್ತು ಹಾಗೂ ಈಶ್ವರ ಈ ಮೂರರ ಸಂಬಂಧವನ್ನು ವಿವರಿಸುವಾಗ ಆಚಾರ್ಯ ಶಂಕರರು ಅದ್ವೈತದ ನಿಲುವನ್ನು ತಳೆದರು. 'ಅದ್ವೈತ' ಎಂದರೆ 'ಎರಡೂ ಸಹ ಅಲ್ಲ' ಅಂದರೆ ಮೂರಂತೂ ಅಲ್ಲವೇ ಅಲ್ಲ. ಈ ಮೂರರಲ್ಲಿ ನಿಜವಾದ ಸತ್ಯ ಒಂದೇ, ಬ್ರಹ್ಮ ಮಾತ್ರವೇ ಸತ್ಯ, ಉಳಿದ ತತ್ವಗಳೆಲ್ಲವೂ ವ್ಯಾವಹಾರಿಕ ದೃಷ್ಟಿಯಿಂದ ಸತ್ಯ. ಪಾರಮಾರ್ಥಿಕ ದೃಷ್ಟಿಯಿಂದ ಕಲ್ಪಿತ.

---

೮೮. ಅದೇ, ೭೦-೭೫.

೮೯. ಈ ಬಗೆಗೆ ದೀರ್ಘವಾದ ವಿವರಣೆಯಿದೆ. ನೋಡಿ : ವಿಶೇಷಾರ್ಥಪ್ರಕಾಶಿಕಾ (೧೯೭೧) ಅಧಿಕರಣ ೪ (ಸಂ) ವೈ. ನಾಗಭೂಷಣಶಾಸ್ತ್ರಿಗಳು, ಶ್ಲೋಕ ೫೪, ಪು. ೧೦೭.

ಜಗತ್ತೆಲ್ಲವೂ ತೋರಿಕೆ ಮಾತ್ರ. ಸಚ್ಚಿದಾನಂದ ಬ್ರಹ್ಮವೇ ಈ ತೋರಿಕೆಗೆ ಆಧಾರ.[೬೦] ಈ ತೋರಿಕೆಯನ್ನೇ ಭ್ರಾಂತಿ ಅಥವಾ ಅಧ್ಯಾಸ ಎನ್ನುತ್ತಾರೆ. ಈ ಅಧ್ಯಾಸಕ್ಕೆ ಕಾರಣವಾಗಿರುವುದೇ ಅವಿದ್ಯೆ. ಅವಿದ್ಯೆಯಿಂದ ಕೂಡಿದ ಬ್ರಹ್ಮನನ್ನೇ ಈಶ್ವರನೆಂದೊಪ್ಪಿ ಈತನೇ ಜಗತ್‌ಸೃಷ್ಟಿಗೆ ಕಾರಣನೆನ್ನುತ್ತಾರೆ. ಇದರಿಂದ ಇವರು ಮೂರು ಸತ್ಯವನ್ನೊಪ್ಪಿದಂತಾಗುತ್ತದೆ. ಕಪ್ಪೆಚಿಪ್ಪಿನಲ್ಲಿ ತೋರುವ ಬೆಳ್ಳಿಯು ಪ್ರಾತಿಭಾಸಿಕ ಸತ್ಯವೆಂದೂ, ಅಂಗಡಿಯಲ್ಲಿರುವ ಬೆಳ್ಳಿಯು ವ್ಯಾವಹಾರಿಕ ಸತ್ಯವೆಂದೂ, ಪರಬ್ರಹ್ಮವು ಮಾತ್ರ ಪಾರಮಾರ್ಥಿಕ ಸತ್ಯವೆಂದು ಹೇಳುತ್ತಾರೆ. ಇದೂ ಸಹ ಮಂದಾಧಿಕಾರಿಗಳ ದೃಷ್ಟಿಯಿಂದ, ಉತ್ತಮಾಧಿಕಾರಿಗಳ ದೃಷ್ಟಿಯಿಂದ ಬ್ರಹ್ಮವೊಂದೇ ಸತ್ಯ. ಉಳಿದ ಜಗತ್ತೆಲ್ಲವೂ ಸ್ವಪ್ನದಂತೆ ಸಂಪೂರ್ಣ ಭ್ರಮೆಯೆ.[೬೧] ಆದರೆ ವ್ಯಾವಹಾರಿಕ ದೃಷ್ಟಿಯಿಂದ ಪಂಚೀಕರಣ ಪ್ರಕ್ರಿಯೆಯನ್ನೊಪ್ಪಿದ್ದಾರೆ. ಅಲ್ಲದೆ ಶೃತಿಯಲ್ಲಿ ಹೇಳಲಾದ ತ್ರಿವೃತ್ಕರಣ ಪ್ರಕ್ರಿಯೆಯನ್ನು ಅಂಗೀಕರಿಸಿದ್ದಾರೆ.[೬೨]

ಅದ್ವೈತ ವೇದಾಂತದಲ್ಲಿ ಪಾರಮಾರ್ಥಿಕವಾಗಿ ಜೀವಾತ್ಮನಿಗೆ ಬ್ರಹ್ಮನಿಗಿಂತ ಅತಿರಿಕ್ತವಾದ ಅಸ್ತಿತ್ವವಿಲ್ಲ. ಬುದ್ಧಿ ಎಂಬ ಅಂತಃಕರಣದಿಂದ ಉಪಹಿತವಾದ ಚೈತನ್ಯವನ್ನೇ ಜೀವಾತ್ಮನೆನ್ನುತ್ತಾರೆ.[೬೩] ಈತನು ಅವಿದ್ಯಾಸಂಬಂಧದಿಂದ ಕರ್ತೃ, ಭೋಕ್ತೃ ಎನಿಸಿಕೊಳ್ಳುತ್ತಾನೆ. ಪಾರಮಾರ್ಥಿಕ ದೃಷ್ಟಿಯಿಂದ ಜೀವ-ಬ್ರಹ್ಮರಲ್ಲಿ ಭೇದವಿಲ್ಲ. ಒಬ್ಬನೇ ಸೂರ್ಯನು ಮಾಧ್ಯಮಗಳ ವೈವಿಧ್ಯದಿಂದಾಗಿ, ವಿಭಿನ್ನ ಪಾತ್ರಗಳಲ್ಲಿ ವಿಭಿನ್ನ ರೂಪದಿಂದ ಪ್ರತಿಬಿಂಬಿಸುವಂತೆ, ಅವಿಕಾರಿಯಾದ ಬ್ರಹ್ಮವು ಅವಿದ್ಯಾಸಂಬಂಧದಿಂದ ಅನೇಕ ಜೀವಾತ್ಮರಿರುವಂತೆ ತೋರುತ್ತದೆ.[೬೪] ಆಕಾಶವು ಒಂದೇ ಆದರೂ ಉಪಾಧಿಭೇದದಿಂದ ಬೇರೆಬೇರೆ ಆಕಾಶಗಳಾಗಿ ವ್ಯವಹಾರಯೋಗ್ಯವಾಗುವಂತೆ, ಒಂದೇ ಬ್ರಹ್ಮವು ಅನೇಕ ಜೀವಾತ್ಮರಾಗಿ ತೋರುತ್ತದೆ. ಮೊದಲನೆಯದಕ್ಕೆ 'ಪ್ರತಿಬಿಂಬವಾದ'ವೆಂದೂ, ಎರಡನೆಯದಕ್ಕೆ 'ಅವಚ್ಛೇದವಾದ'ವೆಂದೂ ಹೆಸರು. ಜೀವನನ್ನು ಉಪಾಧಿಯಿಂದ ಬೇರ್ಪಡಿಸಿ ಸ್ವರೂಪತಃ ನೋಡಿದಾಗ ಸಾಕ್ಷೀ ಎನಿಸಿಕೊಳ್ಳುತ್ತಾನೆ.

ಪರಿಪೂರ್ಣವಾದ ಬ್ರಹ್ಮನಿಗಿಂತ ಪ್ರತ್ಯೇಕವಾದ ವಾಸ್ತವಿಕವಾದ ಈಶ್ವರನಿಲ್ಲ.[೬೫] ಅವಿದ್ಯಾ ಸಂಪರ್ಕವಿಲ್ಲದ ಶುದ್ಧ ಚಿನ್ಮಾತ್ರತತ್ತ್ವವನ್ನೇ ನಿರ್ಗುಣ ಬ್ರಹ್ಮನೆನ್ನುತ್ತಾರೆ.[೬೬] ಅವಿದ್ಯೆಯಿಂದ ಉಪಹಿತವಾದ ಪರಮಾತ್ಮನೇ ಈ ದರ್ಶನದಲ್ಲಿ ಈಶ್ವರ.[೬೭] ಇವನೇ ಸಗುಣಬ್ರಹ್ಮ.

---

೬೦. ಮಾಂಡುಕ್ಯಕಾರಿಕಾ ೨-೨೭-೮.

೬೧. ಅದೇ, ೨-೪.

೬೨. ಪಂಚೀಕರಣವೆಂದರೆ ಐದಾಗಿ ವಿಭಾಗಿಸುವುದೆಂದರ್ಥ. ಸ್ಥೂಲಸೃಷ್ಟಿಯನ್ನು ನಿರೂಪಿಸುವದಕ್ಕಾಗಿ ಈ ಪ್ರಕ್ರಿಯೆಯನ್ನು ಬಳಸಲಾಗಿದೆ. ಶಬ್ದ ತನ್ಮಾತ್ರೆಗಳ ತಾಮಸಾಂಶದಿಂದ ಹುಟ್ಟಿದ ಆಕಾಶಾದಿ ಪಂಚಮಹಾಭೂತಗಳು ಪರಸ್ಪರ ಸಮ್ಮಿಶ್ರವಾಗಿ ಸ್ಥೂಲಜಗತ್ತಿಗೆ ಕಾರಣವಾದವು ಎಂದು ಸಾರಾಂಶ. ಛಾಂದೋಗ್ಯದ ಆರನೆಯ ಅಧ್ಯಾಯದಲ್ಲಿ ತೇಜಸ್ಸು, ಜಲ, ಪೃಥ್ವಿ - ಈ ಮೂರರ ಸೃಷ್ಟಿಕ್ರಮವನ್ನು ಹೇಳಲಾಗಿದೆ. ಇದಕ್ಕೆ ತ್ರಿವೃತ್‌ಕರಣವೆಂದು ಹೆಸರಿದೆ. ಸೂತ್ರಭಾಷ್ಯ (೧೯೮೪) ೧-೪-೧೪. ಹೊಳೆನರಸಿಪುರ.

೬೩. ಅದೇ, ೩-೧೯-೨೧.

೬೪. ಸೂತ್ರಭಾಷ್ಯ, ೨-೩೭.

೬೫. ಏಕಮೇವ ಪರಮಾರ್ಥಸತ್ಯಂಬ್ರಹ್ಮ, ತೈತ್ತರೀಯೋಪನಿಷತ್ (ಶಾಂ.ಭಾಷ್ಯ) ೧೧, ೭.

೬೬. ಕೇನೋಪನಿಷತ್ ೧-೫.

೬೭. ವೇದಾಂತದರ್ಶನಮ್ ೧-೧-೨.

ಶಾಂಕರದರ್ಶನದಲ್ಲಿ ಹೇಳಲಾದ ಬಂಧಸ್ವರೂಪವು ಬಹುಪಾಲು ಸಾಂಖ್ಯಮತವನ್ನೇ ಹೋಲುತ್ತದೆ. ಶುದ್ಧವಾದ ಚೈತನ್ಯವು ಮಾಯೆಯ ಪರಿಣಾಮದಿಂದ ಅವಿದ್ಯಾವೃತವಾದದ್ದಾಗಿ ತನ್ನ ಸಹಜ ಸ್ವರೂಪವನ್ನು ಮರೆತಿರುತ್ತದೆ. ಹೀಗೆ ಉಪಾಧಿಮೂಲಕವಾದ ಭ್ರಮೆಯಿಂದ 'ತಾನು ಬ್ರಹ್ಮನಿಗಿಂತ ಬೇರೆ' ಎಂದು ಭಾವಿಸುವುದೇ ಬಂಧ.

ಅದ್ವೈತದರ್ಶನದಲ್ಲಿ ಬ್ರಹ್ಮನ ಅಪರೋಕ್ಷಜ್ಞಾನವೇ ಮೋಕ್ಷಕ್ಕೆ ಸಾಧನವಾಗಿದೆ. ಸಾಧನ ಮಾರ್ಗದ ಮೊದಲನೆ ಘಟ್ಟದಲ್ಲಿ ಈ ನಾಲ್ಕನ್ನು ಹೇಳಲಾಗುತ್ತದೆ.[೯೮] ೧. ನಿತ್ಯ ಹಾಗೂ ಅನಿತ್ಯವಸ್ತುಗಳಿಗಿರುವ ಅಂತರವನ್ನು ತಿಳಿಯುವ ವಿವೇಕ, ೨. ಇಲ್ಲಿ ಅಥವಾ ಪರಲೋಕದಲ್ಲಿ ಭೋಗ ಸಂಪಾದಿಸುವ ಬಯಕೆ ಇಲ್ಲದಿರುವುದು. ೩. ಶಮ, ದಮ, ಉಪರತಿ, ತ್ಯಾಗ, ಸಹಿಷ್ಣುತೆ, ಚಿತ್ತಸಮಾಧಾನ ಹಾಗೂ ಶ್ರದ್ಧೆ. ೪. ಮುಕ್ತಿಯನ್ನು ಪಡೆಯಬೇಕೆಂಬ ಹಂಬಲ. ಎರಡನೆಯ ಘಟ್ಟದಲ್ಲಿ ಈ ಜ್ಞಾನವು ಶ್ರವಣ, ಮನನ, ನಿಧಿಧ್ಯಾಸನಗಳಿಂದುಂಟಾಗುತ್ತದೆ. ಉಪನಿಷತ್ತುಗಳಲ್ಲಿ ಹೇಳಿರುವ 'ತತ್ವಮಸಿ' ಮುಂತಾದ ವಾಕ್ಯಗಳಿಂದ ಬೋಧಿತವಾಗುವ ಸತ್ಯವನ್ನು ಗುರುಮುಖೇನ ಶ್ರವಣಮಾಡಬೇಕು. ಹೀಗೆ ಉಪದಿಷ್ಟವಾದ ಜ್ಞಾನವು ಅಳವಡಬೇಕಾದರೆ ಸ್ವತಃ ವಿಚಾರದ ಮೂಲಕ ಮನನ ಮಾಡಬೇಕು. ಈ ಮನನದಿಂದ ವಿರೋಧಗಳು ಪರಿಹಾರವಾಗಿ ಬ್ರಹ್ಮ ಒಂದೇ ಸತ್ಯ, ಉಳಿದುದೆಲ್ಲಾ ಮಿಥ್ಯೆ ಎಂಬ ಜ್ಞಾನ ಉದಿಸುತ್ತದೆ. ಜೀವಬ್ರಹ್ಮೈಕ್ಯವನ್ನು ಸತತವಾಗಿ ಚಿಂತಿಸುವುದೇ ನಿಧಿಧ್ಯಾಸನ. ಅಂದರೆ ಅನಾದಿ ವಾಸನೆಯಿಂದ ವಿಷಯಗಳೆಡೆಗೆ ಸೆಳೆಯುತ್ತಿರುವ ಚಿತ್ತವನ್ನು ಸಂಯಮಗೊಳಿಸಿ ಅದನ್ನು ಆತ್ಮನಲ್ಲಿಯೇ ನೆಲೆಗೊಳಿಸುವಂತೆ ಮಾಡುವುದು.

ಇದರಲ್ಲಿ ವಿವರಣ ಪ್ರಸ್ಥಾನದವರು-ಶ್ರುತವಾಗಿರುವ 'ತತ್ವಮಸಿ', 'ಅಹಂ ಬ್ರಹ್ಮಾಸ್ಮಿ', 'ಪ್ರಜ್ಞಾನಂ ಬ್ರಹ್ಮ', ಎಂಬ ಮಹಾವಾಕ್ಯಗಳೇ ಮನನ, ನಿಧಿಧ್ಯಾಸನಮೂಲಕವಾಗಿ ಬ್ರಹ್ಮಾಪರೋಕ್ಷಜ್ಞಾನವನ್ನು ಹುಟ್ಟಿಸುತ್ತವೆ - ಎನ್ನುತ್ತಾರೆ, ಇವರೇ ಶಬ್ದಾಪರೋಕ್ಷವಾದಿಗಳು. ಆದರೆ ಭಾಮತೀ ಪ್ರಸ್ಥಾನದವರು - ಮಾನಸಿಕವಾಗಿ ಶ್ರವಣ, ಮನನ, ನಿಧಿಧ್ಯಾಸನಗಳ ಸಹಕಾರದಿಂದ ಅಪರೋಕ್ಷಜ್ಞಾನವು ಅಂತಃಕರಣದಿಂದಾಗುತ್ತದೆಯೆ ಹೊರತು, ಕೇವಲ ಮಹಾವಾಕ್ಯಗಳ ಶ್ರವಣಾದಿಗಳಿಂದಲ್ಲ - ಎನ್ನುತ್ತಾರೆ. ಇವರಿಗೆ ಮಾನಸಾಪರೋಕ್ಷವಾದಿಗಳು ಎಂದು ಹೆಸರು. ಈ ಮತದಲ್ಲಿ ಕರ್ಮವು ನ್ಯಾಯಮತದಂತೆ ಕೇವಲ ಚಿತ್ತಶುದ್ಧಿಯನ್ನುಂಟುಮಾಡುತ್ತದೆ. ಬ್ರಹ್ಮಜ್ಞಾನಕ್ಕೆ ತಡೆಯಾಗಿರುವ ಚಿತ್ತದ ಕಲ್ಮಶಗಳನ್ನು ನಿವಾರಿಸುವುದೇ ಕರ್ಮಮಾರ್ಗದ ಪ್ರಯೋಜನ. ನೇರವಾಗಿ ಕರ್ಮವು ಮೋಕ್ಷಸಾಧನವಲ್ಲ.

ಶಾಂಕರದರ್ಶನದಲ್ಲಿ ಮೋಕ್ಷವು ಹೊಸದಾಗಿ ಪಡೆಯುವ ಸ್ಥಿತಿ ಅಲ್ಲ.[೯೯] ಅದು ಆತ್ಮನ ಸಹಜಸಿದ್ಧಸ್ವರೂಪ. ಅಜ್ಞಾನದಿಂದ ಮರೆತದ್ದನ್ನು ಜ್ಞಾನದಿಂದ ಮತ್ತೆ ಗುರುತಿಸಿಕೊಳ್ಳುವುದು. ಅವಿದ್ಯೆಯಿಂದ ಸಂಸಾರಿ ಎನಿಸಿಕೊಂಡಿದ್ದ ಚೈತನ್ಯವೇ ಜೀವ. ಅವಿದ್ಯಾ ಮೂಲಕವಾದ ಭ್ರಾಂತಿಯು ನಿವೃತ್ತಿಯಾಗಿ ಜೀವಾತ್ಮನು 'ತಾನು ಬ್ರಹ್ಮನೇ' ಎಂದರಿಯುತ್ತಾನೆ. ಬಾಲ್ಯದಿಂದಲೂ ಬೇಡರ ಮಧ್ಯೆ ಬೆಳೆದ ರಾಜಪುತ್ರನೊಬ್ಬನು ಕಾಲಕ್ರಮದಲ್ಲಿ ತಾನು ಬೇಡನಲ್ಲ ನಿಜವಾದ ರಾಜಪುತ್ರನೇ ಎಂದರಿಯುವಂತೆ ಜೀವನು ತಾನು ಬ್ರಹ್ಮನಿಗಿಂತ ಬೇರೆಯಲ್ಲ ಎಂದು ತಿಳಿಯುವುದು. ಜ್ಞಾನಕ್ಕೆ ಅಡ್ಡಿಯೆನಿಸಿದ್ದ ಆವರಣಗಳ ನಿವಾರಣೆಯನ್ನು ಮಾಡಿದರೆ ಸಾಕು ತಾನಾಗಿಯೇ ಮೋಕ್ಷಲಭಿಸುತ್ತದೆ.[೧೦೦]

---

೯೮. ವಿವರಣ ಪ್ರಮೇಯಸಂಗ್ರಹ, ಪು. ೮೬.

೯೯. 'ಯಸ್ಯಬಂಧಸ್ತಸ್ಯೈವಮುಕ್ತಿಃ ನ ಚ ಪುರುಷಸ್ಯ ಬಂಧಃ' ಚಿತ್ಸುಖಾಚಾರ್ಯ (೧೯೭೧) ತತ್ತ್ವಪ್ರದೀಪಿಕಾ(ಚಿತ್ಸುಖಿ)

೧೦೦. ಅಪ್ಪಯ್ಯದೀಕ್ಷಿತ (೧೯೩೧) ಸಿದ್ಧಾಂತಲೇಶಸಂಗ್ರಹ, ಪು. ೪೬.

ಶಂಕರಾಚಾರ್ಯರ ಮಾಯೆಯ ಕಲ್ಪನೆ ಬಹಳ ವಿಶಿಷ್ಟವಾದದ್ದು. ಅದ್ವೈತದ ತಿರುಳು ಅಡಗಿರುವುದು ಈ ಒಂದು ಕಲ್ಪನೆಯಲ್ಲಿ. ಇದನ್ನು ಅತ್ಯಂತ ಸರಳಗೊಳಿಸಿ ಹೇಳುವದಾದರೆ, ಜೀವಜಗತ್ತಿಗೆ ಮೂಲ ಮಾಯೆ, ಬ್ರಹ್ಮನು ಎಂದೂ ಅಖಿಂಡನ.[೧೦೧] ಮಾಯೆಯಾದರೋ ಸ್ವತಂತ್ರವಾದ ಅಸ್ತಿತ್ವವನ್ನು ಹೊಂದಿದ ನಿತ್ಯಸತ್ಯವೇನಲ್ಲ. ನಿಜವಾಗಿ ನೋಡಿದರೆ, ಅದು ಕೇವಲ ಇಲ್ಲದ್ದು, ಅದು ಇದ್ದಂತೆ ತೋರಿ ಕೊನೆಗೆ ಇಲ್ಲದಂತಾಗುವಂತಹದು. ಇಷ್ಟೊಂದು ಕ್ಲಿಷ್ಟತರವಾದ ಈ ಮಾಯೆಯ ಸ್ವರೂಪವೇನೆಂಬುದನ್ನು ನಮಗೆ ಮನದಟ್ಟಾಗುವಂತೆ ವಿವರಿಸಲೋಸುಗ ಅದ್ವೈತ ಸಿದ್ಧಾಂತವು ನಾನಾರೀತಿಯ ಉಪಮಾನಗಳನ್ನು ಹಾಗೂ ಸಾಹಿತ್ಯಕ ಪ್ರತಿಮೆಗಳನ್ನು ಹೇರಳವಾಗಿ ಬಳಸುತ್ತದೆ. ರಜ್ಜುಸರ್ಪಭ್ರಾಂತಿ, ಶುಕ್ತಿ ರಜತಭ್ರಾಂತಿ - ಈ ಮೊದಲಾದ ಉಪಮೆಗಳ ಉದ್ದೇಶ ಈ ಅಂಶವನ್ನು ಚೆನ್ನಾಗಿ ಮನವರಿಕೆ ಮಾಡಿಕೊಡಬೇಕೆಂಬುದೇ. ಹಗ್ಗವನ್ನು ಕಂಡು ಹಾವೆಂದು ಭ್ರಮಿಸಿ ಓಡುವವನಂತೆ, ಬ್ರಹ್ಮವನ್ನರಿಯದ ನಾವು, ವಿಶ್ವವನ್ನೇ ಸತ್ಯವೆಂದು ತಿಳಿದು ಈ ಭವಸಾಗರದಲ್ಲಿ ತೊಳಲುತ್ತಿದ್ದೇವೆ. ವಿಶ್ವದ ಅಸ್ತಿತ್ವವನ್ನು ನಂಬಿ ಕೀರ್ತಿ ಪೂಜಾಲಾಭದಿಂದ ಪಡೆಯುವ ನಮ್ಮ ಈ ಜಗದ್ವ್ಯಾಪಾರವನ್ನು ವ್ಯವಹಾರಿಕ ಸತ್ಯ ಎಂದು ಅದ್ವೈತ ಸಿದ್ಧಾಂತದಲ್ಲಿ ಗುರುತಿಸಲಾಗಿದೆ.[೧೦೨] ಪಾರಮಾರ್ಥಿಕ ಸತ್ಯದ ಅರಿವು ನಮಗಾಗುವವರೆಗೂ ನಮಗೆ ಈ ಜಗತ್ತಿನ ಅಸ್ತಿತ್ವದ ವಿಚಾರದಲ್ಲಿ ಯಾವ ಅರಿವೂ ಮೂಡುವುದಿಲ್ಲ. ಒಂದು ರೀತಿಯಲ್ಲಿ ಮಾಯೆಯ ಸಂತಾನವೆನಿಸಿದ ಜೀವ ಮತ್ತು ಜಗತ್ತಿನ ಪ್ರಶ್ನೆ ಪೂರ್ಣವಾಗಿ ನಂದಿಹೋದಾಗ, ಅದ್ವೈತ ಬ್ರಹ್ಮದ ಪ್ರಶ್ನೆಯೊಂದೇ ಕೊನೆಗುಳಿಯುವಂತಹದು. ಆ ಸ್ಥಿತಿಯನ್ನು ಮುಟ್ಟಿದವನೇ ಜೀವನ್ಮುಕ್ತ. ಅದ್ವೈತಾನುಭವಕ್ಕೆ ಜೀವನ್ಮುಕ್ತನೊಬ್ಬನೇ ನಿಜವಾದ ಸಾಕ್ಷಿ. ಮೊದಲಿನಿಂದ ಕೊನೆಯವರೆಗೂ ಇರುವ ಸತ್ಯ ಒಂದೇ, ಅದೇ ಬ್ರಹ್ಮಸತ್ಯ. ಅದಕ್ಕೆ ಹೊರತಾದದ್ದೆಲ್ಲ ತೋರಿಕೆಯ ಸತ್ಯ. ಆದ್ದರಿಂದಲೇ ಇದು ಅದ್ವೈತಸಿದ್ಧಾಂತ.

ಅದ್ವೈತ ದರ್ಶನದಲ್ಲಿ ಬರುವ ಮಾಯೆಯ ವಸ್ತುಸ್ಥಿತಿಯನ್ನು ಒಪ್ಪಿದ್ದೇ ಆದರೆ, ಇನ್ನು ಆ ದರ್ಶನದಲ್ಲಿ ಬರುವ ಈಶ್ವರ, ಜೀವನ್ಮುಕ್ತಿ, ವಿದೇಹಮುಕ್ತಿ - ಈ ಮುಂತಾದ ಪ್ರಕ್ರಿಯೆಗಳನ್ನು ಒಪ್ಪುವುದು ಅನಿವಾರ್ಯವಾಗುತ್ತದೆ. ಇಲ್ಲದ ಮಾಯೆ, ಇದ್ದಂತಾಗಿ, ಆಮೇಲೆ ಇಲ್ಲದಂತಾಗುತ್ತದೆ ಎಂಬ ಈ ಮಾಯೆಯ ವಿವರಣೆ ಬಹುರೀತಿಯ ವಿವಾದಕ್ಕೆ ಕಾರಣವಾಗಿದೆ. ಮಾಯೆಯೆಂಬುದು ಅದ್ವೈತದ ಪ್ರಕಾರ ಬ್ರಹ್ಮದ ಪರಿಣಾಮವೂ ಅಲ್ಲ, ಅಥವಾ ಬ್ರಹ್ಮದ ಗುಣವೂ ಅಲ್ಲ. ಆ ಕಾರಣದಿಂದಲೇ ಅದ್ವೈತದ ಪ್ರಕಾರ ಬ್ರಹ್ಮ ನಿರ್ಗುಣನೆನಿಸಿರುವುದು. ಮಾಯೆಯು ಬ್ರಹ್ಮನಂತೆ ಆದಿ ಅಂತ್ಯರಹಿತವಾಗಿದ್ದು ನಿತ್ಯವಸ್ತುವಾಗಿದ್ದರೆ, ಆಗ ಅದು ಬ್ರಹ್ಮನಿಗೆ ಸರಿಸಾಟಿಯಾಗಿ ನಿಂತು ದ್ವೈತ ತತ್ವವೆನಿಸುತ್ತಿದ್ದಿತು. ಆ ರೀತಿಯ ದ್ವೈತಕ್ಕೆಡೆಗೊಡದೆ, ಬ್ರಹ್ಮನ ನಿರ್ಗುಣತ್ವವನ್ನು ಕಾಪಾಡಿಕೊಂಡು ಬಂದಿರುವುದೇ ಅದ್ವೈತ ಸಿದ್ಧಾಂತದ ಒಂದು ವೈಶಿಷ್ಟ್ಯ. ಬಹುಸೂಕ್ಷ್ಮತರವಾದ ಈ ಮಾಯಾವಾದವು ಆಚಾರ್ಯ ಶಂಕರರ ಬುದ್ಧಿಮತ್ತೆಗೊಂದು ಸಾಕ್ಷಿ.

ಆದರೆ ಮಾಯಿದೇವನ ಪ್ರಕಾರ ಅದ್ವೈತ ವಿವರಿಸುವ ವಿವರ್ತವಾದವು ತರ್ಕಸಂಗತವೆನಿಸದು. ಹಗ್ಗದಲ್ಲಿ ಸರ್ಪಭ್ರಮೆಯನ್ನು ಹೊಂದುವವನಿಗೆ ಮೊದಲು ಸರ್ಪಜ್ಞಾನವು ಆಗಿರಲೇಬೇಕಷ್ಟೆ!. ಪೂರ್ವದಲ್ಲಿ ಸರ್ಪದ ಜ್ಞಾನವೇ ಇಲ್ಲದವನಿಗೆ ಹಗ್ಗದಲ್ಲಿ ಹಾವಿನ ಭ್ರಾಂತಿಯು ಎಂದೂ ಆಗದು! ಅದರಂತೆ ಬ್ರಹ್ಮನಲ್ಲಿ ಜಗತ್ತನ್ನು ನೋಡುವವರಿಗೆ ಬ್ರಹ್ಮಾತಿರಿಕ್ತ ಜಗತ್ತಿನ ಜ್ಞಾನವಾಗುವ ಸ್ಥಳ ಯಾವುದು? ಬ್ರಹ್ಮಾತಿರಿಕ್ತವಾದ ಸ್ಥಳವೇ ಇಲ್ಲದ್ದರಿಂದ ಬ್ರಹ್ಮನಲ್ಲಿ ಅಧ್ಯಾಸವಾಗುವದಾದರೂ ಹೇಗೆ?

---

೧೦೧. ಧರ್ಮಾ ಯ ಇತಿ ಜಾಯಂತೇ ನ ತತ್ವಮ್ ।
ಜನ್ಮ ಮಾಯೋಪಮಂ ತೇಷಾಂ ಸಾ ಚ ಮಾಯಾ ನ ವಿದ್ಯತೆ ॥ ಗೌಡಪಾದಕಾರಿಕಾ ೧-೫೮.

೧೦೨. Dr. Radhakrishnan (1988) Indian Philosophy, Vol. II, p. 582.

ಜಗತ್ತಿನಲ್ಲಿ ವ್ಯಾವಹಾರಿಕ ಸತ್ಯವನ್ನು ಹೇಳಿದಂತೆ ಪಾರಮಾರ್ಥಿಕ ಸತ್ಯವನ್ನೇಕೆ ಹೇಳಬಾರದಾಗಿತ್ತು? ಜಗತ್ತು ಅಸತ್ಯ. ಅದು ಇದ್ದ ಸ್ಥಿತಿಯಲ್ಲಿ ಕಡೆತನಕ ಉಳಿಯುವುದಿಲ್ಲವೆಂದು ಹೇಳುವದಾದರೆ, ಕಾರ್ಯರೂಪದಿಂದಷ್ಟೇ ಅಸತ್ಯ, ಕಾರಣ ರೂಪದಿಂದ ಸತ್ಯವೆಂದು ಹೇಳುವಲ್ಲಿ ತಪ್ಪೇನು ಇಲ್ಲವಲ್ಲ. ಬಂಗಾರದ ಆಭರಣಗಳು ಕಾರ್ಯರೂಪದಲ್ಲಿ ಅಸತ್ಯವಾಗಿದ್ದರೂ ಕಾರಣರೂಪದಲ್ಲಿ ಸತ್ಯವಾಗಿಲ್ಲವೆ? ಒಡವೆಗಳ ಕಾಲದಲ್ಲಿಯೂ ಅವು ಬಂಗಾರವೇ ಆಗಿರುವುದಿಲ್ಲವೆ? ಹಾಗೆಯೇ ಜಗತ್ತನ್ನು ಕುರಿತು ಹೇಳುವುದಾದರ ವಿವರ್ತವಾದವು ಅಸಮಂಜಸವೆನಿಸಿದೆ. ಜಗತ್ತನ್ನು ಈಶ್ವರನ ಐಶ್ವರ್ಯವೆಂದು ತಿಳಿದ ವೀರಶೈವ ಮುಂತಾದ ಸಿದ್ಧಾಂತಗಳು ಮೇಲಿನಂತೆ ಅದ್ವೈತಕ್ಕೆ ವಿರೋಧ ವ್ಯಕ್ತಪಡಿಸಿವೆ.

ಅದ್ವೈತದಲ್ಲಿ ಕಾಣುವ ಮಾಯೆಗೂ ಶಿವಾದ್ವೈತದ ಶಕ್ತಿಗೂ ಯಾವ ರೀತಿಯ ಹೋಲಿಕೆಯೂ ಇರಲಾರದು. ಮಾಯೆ ಪರಬ್ರಹ್ಮದ ಗುಣವಲ್ಲವಾದುದರಿಂದ, ಅದ್ವೈತದಲ್ಲಿ ಪರಬ್ರಹ್ಮ ನಿರ್ಗುಣನೆಂದೆನಿಸಬಲ್ಲನು. ಆದರೆ ಜೀವ ಮತ್ತು ಜಗತ್ತಿನ ಕಲ್ಪನೆಗೆ ಮಾಯೆಯೇ ಕಾರಣವಾದುದರಿಂದ ಶಂಕರರ ಸಿದ್ಧಾಂತದಲ್ಲಿ ಮಾಯೆಗೆ ಮಹತ್ವದ ಸ್ಥಾನವೇನೋ ಇದೆ. ಈ ಮಾಯೆಯ ಉಗಮ ಮತ್ತು ಅದರ ವಿನಾಶ ಒಂದು ರೀತಿಯಲ್ಲಿ ನಿಗೂಢವಾಗಿಯೇ ಉಳಿಯುತ್ತದೆ. ಪರಬ್ರಹ್ಮನಂತೆ ನಿತ್ಯ ಹಾಗೂ ಸಚ್ಚಿದಾನಂದ ಸ್ವರೂಪಿಯಲ್ಲದ ಹಾಗೂ ಅವನೊಂದಿಗೆ ಯಾವ ರೀತಿಯ ಸಂಬಂಧವನ್ನು ಹೊಂದದ ಈ ಮಾಯೆ ಪರಬ್ರಹ್ಮವನ್ನು ಆಚ್ಛಾದಿಸಲು ಶಕ್ತವಾಗುತ್ತದೆ ಎಂಬುದು ಅದ್ವೈತ ಸಿದ್ಧಾಂತದಲ್ಲಿ ಕಾಣುವ ಒಂದು ಜಟಿಲವಾದ ಸಮಸ್ಯೆ. ಶಕ್ತಿಯನ್ನು ಪರಶಿವನ ಒಂದು ವಿಶೇಷಣ ಎಂದು ಗುರುತಿಸಿದ ಶಿವಾದ್ವೈತದಲ್ಲಿ ಈ ಸಮಸ್ಯೆ ಇಲ್ಲವಾದರೂ ಜಡ ಹಾಗೂ ಚೇತನಾತ್ಮಕವಾದ ಈ ವಿಶ್ವವೆಲ್ಲವೂ ಪರಶಿವನ ಶಕ್ತಿಯಿಂದಲೇ ಆವಿರ್ಭವಿಸಿ ಬಂದಿದೆ ಎಂಬುದು ಮತ್ತೊಂದು ರೀತಿಯ ತೊಡಕಿಗೆ ಕಾರಣವಾಗುತ್ತದೆ ಎಂದು ವೇದಾಂತಿಗಳು ವಾದಿಸುತ್ತಾರೆ. ಒಟ್ಟಿನಲ್ಲಿ ಹೇಳುವದಾದರೆ ವೀರಶೈವ ಸಿದ್ಧಾಂತದಲ್ಲಿ ಕಾಣುವ ಶಕ್ತಿ ಅದ್ವೈತದರ್ಶನದಲ್ಲಿ ಬರುವ ಮಾಯೆಯಂತೆ ಅನಿತ್ಯವಾದದ್ದಲ್ಲ.[೧೦೩] ಹೀಗಾಗಿ ಪರಶಿವನು ನಿರ್ಗುಣನೂ ಅಲ್ಲ.[೧೦೪]

ಮಾಯಿದೇವನ ಪ್ರಕಾರ ಜಗತ್ತು ಅನಿತ್ಯವಾದದ್ದಲ್ಲ. ಹಾಗೂ ಅದು ತಾನು ತೋರುವಷ್ಟು ಜಡಸ್ವರೂಪಿಯೂ ಅಲ್ಲ. ಭಗವಂತನ ಲೀಲೆಯ ಒಂದು ಪ್ರಸಂಗ, ಈ ಜಗತ್ತು. ಇಲ್ಲಿ ಕಾಣುವ ಜೀವಿಗಳು ಪರಶಿವನ ಅಂಶಮಾತ್ರರು. ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟ, ಅದು ಒಂದು ಕಾರ್ಖಾನೆ. ಈ ಟಂಕಶಾಲೆಯಲ್ಲಿ ರೂಪಗೊಂಡ ಜೀವಿಗಳು ಈ ವಿಶ್ವವ್ಯಾಪಾರದಲ್ಲಿ ಚೆನ್ನಾಗಿ ಚಲಾವಣೆಯಾಗಬೇಕು. ಈ ಜಗದ್ವ್ಯಾಪಾರದಲ್ಲಿ ಮಾನವನು ಪೂರ್ಣವಾಗಿ ಪಾಲ್ಗೊಂಡು ಇದರ ಶ್ರೇಷ್ಠತೆಯೊಂದಿಗೆ ಸ್ಪಂದಿಸಬೇಕೆಂಬುದೇ ಸೃಷ್ಟಿಯ ಉದ್ದೇಶ.[೧೦೫] ಈ ಕಾರಣದಿಂದಲೇ

---

೧೦೩. ಶಕ್ತಿರಪ್ರತಿಮಾ ಸಾಕ್ಷಾಚ್ಛಿವೇನ ಸಹ ಧರ್ಮಿಣೀ।
ಸಾಕ್ಷಿಣೀ ಸತ್ಯಸಂಪೂರ್ಣಾನಿರ್ವಿಕಲ್ಪಾ ಮಹೇಶ್ವರೀ ॥ ಶಿವಾನುಭವಸೂತ್ರಂ, ಅಧಿಕರಣ ೨, ಶ್ಲೋಕ ೨೬.

೧೦೪. "ಲಿಂಗಸ್ಥಲಂ ಶಿವಃ ಸಾಕ್ಷಾತ್" ಅದೇ, ಶ್ಲೋಕ ೩೩.

೧೦೫. (i) ಪರಿಪೂರ್ಣಂಗಡ ಬೊಮ್ಮಮಕ್ಕಟ ಮುಗುಳ್ದೇಕೊಂದುಕಾವಿಂಗೆ ಪೋ-
ಪರೊ ತಾವಿರ್ದೆಡೆಯಲ್ಲಿ ಕಾಣದೆ ವೃಥಾ ವಾಗ್‌ಬ್ರಹ್ಮದದ್ವೈತಿಗಳ್
ಗಿರಿಯೆಂದಂಬುಧಿಯೆಂದು ಪುಣ್ಯನದಿಯೆಂದು ಕ್ಷೇತ್ರದೈವಂಗಳಿಂ
ದಿರದಯ್ಯೋ ನಿಜನಿಷ್ಠೆಯಿಲ್ಲದವರಂ ನೋಡಾ ಶಿವಾವಲ್ಲಭಾ ॥
(ii) ದ್ವೈತಂ ನೋಳ್ಪೊಡೆ ಬೊಮ್ಮಮಂ ನುಡಿವ ವಾಗದ್ವೈತಿಗಳ್ಗೆಲ್ಲಮುಂ
ಮಾತೊಂದಲ್ಲದೆ ಮಿಕ್ಕ ವರ್ತನಮದೇಂ ಸದ್ಯುಕ್ತನಂತಲ್ಲ ಕೇಳ್
ದ್ವೈತಾದ್ವೈತವಿಹೀನನನ್ಯವರಿಯಂ ತಾನೆಂಬ ಹಮ್ಮಿಲ್ಲ ಮಾ
ಯಾತೀತಂ ಬರಿ ಬೊಮ್ಮಗಿಮ್ಮದೊಡಕಂ ಪೊರ್ದಂ ಶಿವಾವಲ್ಲಭಾ ॥ ಶಿವಾವಲ್ಲಭಶತಕ, ಪದ್ಯ ೪೮, ೪೯.

ಕೇವಲ ವೈರಾಗ್ಯದ ಹೆಸರಿನಲ್ಲಿ ಬದುಕಿನಿಂದ ವಿಮುಖವಾಗುವುದು ಶಿವಾದ್ವೈತಕ್ಕೆ ಸಮ್ಮತವಲ್ಲ. ಜಗತ್ತು ಪರಶಿವನ ಒಂದು ಲೀಲೆ ಎಂದಾದಮೇಲೆ, ಈ ಲೀಲೆಯಲ್ಲಿ ಪಾಲ್ಗೊಳ್ಳುವಾಗ ನಾವು ಮೈಮರೆಯುವುದು ಸಹಜವೇ ಸರಿ. ಏಕೆಂದರೆ, ಲೀಲೆ, ಅದೆಂತಹದೇ ಇರಲಿ, ಅದು ನಮ್ಮನ್ನು ತನ್ಮಯಗೊಳಿಸಿ ಮೈಮರೆಸುತ್ತದೆ. ಈ ಮರೆವಿನಿಂದ ಎಚ್ಚೆತ್ತು ಅರಿವಿನತ್ತ ಸಾಗಬೇಕೆಂಬುದೇ ಮಾಯಿದೇವನ ಷಟ್‌ಸ್ಥಲದ ಬೋಧನೆಯಸಾರ.

ವಿಶಿಷ್ಟಾದ್ವೈತ:

ರಾಮಾನುಜರು ಒಂದೇ ತತ್ವವನ್ನು ಮೂರು ಸ್ವರೂಪಗಳಲ್ಲಿ ವಿಂಗಡಿಸಲೆತ್ನಿಸಿದ್ದಾರೆ. ಅವು ಈಶ್ವರ ಜೀವ ಮತ್ತು ಜಗತ್ತು ಎಂದು. ಈಶ್ವರನೇ ಇಲ್ಲಿ ಶ್ರೇಷ್ಠವಾದ ತತ್ವ. ಜೀವ ಮತ್ತು ಜಗತ್ತು ನಿತ್ಯವಾಗಿವೆ. ಆದರೆ ಅವು ಸ್ವತಂತ್ರವಾಗಿರದೆ ಈಶ್ವರನ ಆಧೀನದಲ್ಲಿರುತ್ತವೆ. ಈಶ್ವರನು ಅವುಗಳಲ್ಲಿ ಅಂತರ್ಯಾಮಿಯಾಗಿ ಇರುತ್ತಾನೆ. ಚಿತ್ ಹಾಗೂ ಅಚಿತ್ ಈಶ್ವರನ ಉಭಯ ಶರೀರುಗಳು. ರಾಮಾನುಜರಿಗೆ ಸಗುಣಬ್ರಹ್ಮದಲ್ಲಿ ವಿಶ್ವಾಸವಿದೆ. ಅವನು ಚಿತ್ ಹಾಗೂ ಅಚಿತ್ತಾಗಿದ್ದರೂ ಒಂದೇ ರೂಪದಲ್ಲಿರುತ್ತಾನೆ. ಅವನು ಕಲ್ಯಾಣಗುಣಗಳ ಭಂಡಾರ. ಅವನಲ್ಲಿ ಅನಂತಶಕ್ತಿಗಳು ಹಾಗೂ ಅನಂತ ಆನಂದಗಳು ಸಂಚಯಗೊಂಡಿವೆ. ಅಲ್ಲದೆ ಅವನು ಸರ್ವಜ್ಞ ಮತ್ತು ಸರ್ವಶಕ್ತಿಮಾನ್ ಆಗಿದ್ದಾನೆ. ರಾಮಾನುಜರೂ ನಿರ್ಗುಣಬ್ರಹ್ಮನನ್ನು ಒಪ್ಪುತ್ತಾರೆ. ಆದರೆ ಅವರು ನಿರ್ಗುಣಬ್ರಹ್ಮನಿಗೆ ಬಳಸಿದ ಶಬ್ದಗಳು ವಿಶಿಷ್ಟವಾಗಿವೆ. ನಿರ್ಗುಣ ಎಂದರೆ ಸಮಸ್ತಗುಣರಹಿತ ಎಂದು ತಿಳಿಯದೆ ಜೀವಾತ್ಮನ ರಾಗದ್ವೇಷಗಳಿಗಿಂತ ಬ್ರಹ್ಮನು ಅತೀತನಾಗಿದ್ದಾನೆಂದು ತಿಳಿಯಬೇಕೆನ್ನುತ್ತಾರೆ.[೧೦೬]

ಬ್ರಹ್ಮನು ಸೃಷ್ಟಿಸ್ಥಿತಿಲಯ ಕರ್ತೃವಾಗಿದ್ದಾನೆ. ಪ್ರಳಯಾನಂತರವೂ ಚಿತ್ ಹಾಗೂ ಅಚಿತ್‌ಗಳು ಅವನಲ್ಲಿ ಬೀಜರೂಪವಾಗಿರುತ್ತವೆ. ಈ ಅವಸ್ಥೆಯಲ್ಲಿ ಬ್ರಹ್ಮನು ಶುದ್ಧ ಹಾಗೂ ಅವ್ಯಕ್ತ ಚಿತ್ತಿನೊಂದಿಗಿರುತ್ತಾನೆ.

ರಾಮಾನುಜದರ್ಶನಕ್ಕನುಸಾರವಾಗಿ ಜಗತ್ತು, ಚೇತನ ಹಾಗೂ ಅಚೇತನಾತ್ಮಕವಾಗಿದೆ. ಇದರ ಸೃಷ್ಟಿ, ಸ್ಥಿತಿ ಮತ್ತು ವಿನಾಶವು ಈಶ್ವರ(ನಾರಾಯಣ)ನಿಂದಲೇ ಉಂಟಾಗುತ್ತದೆ. ಚೇತನನು ನಿತ್ಯನಾಗಿದ್ದರೂ ಅಚೇತನದ ಸಂಪರ್ಕದಿಂದ ಸೃಷ್ಟಿಯ ವ್ಯವಹಾರಕ್ಕೊಳಗಾಗುತ್ತಾನೆ. ಪರಮಾತ್ಮನು ಜಗತ್ತಿಗೆ ಉಪಾದಾನ ಹಾಗೂ ನಿಮಿತ್ತ ಕಾರಣ; ಅಚೇತನವೆಂದರೆ ಪ್ರಕೃತಿ. ಚೇತನವೆಂದರೆ ಜೀವ. ಅಪ್ರಾಕೃತ ಶರೀರಿಯಾದ ಪರಮಾತ್ಮನು ಜಗತ್ತಿಗೆ ಉಪಾದಾನ ಕಾರಣ.[೧೦೭] ಜಗತ್ತಿನ ಸೃಷ್ಟಿಯಲ್ಲಿ ಎರಡು ಅವಸ್ಥೆಗಳಿವೆ. ಒಂದು ತತ್ವಗಳ ಸೃಷ್ಟಿ. ಇದನ್ನೇ ಸಮಸೃಷ್ಟಿ ಎನ್ನುತ್ತಾರೆ. ಮತ್ತೊಂದು ಪಂಚೀಕರಣಸೃಷ್ಟಿ. ಇದನ್ನು ವ್ಯಷ್ಟಿಸೃಷ್ಟಿ ಎನ್ನುತ್ತಾರೆ. ಪಂಚಭೂತಗಳು ಒಂದು ನಿರ್ದಿಷ್ಟವಾದ ಕ್ರಮದಲ್ಲಿ ಮಿಶ್ರಣವಾಗಿ ವಸ್ತುವಿನ ಸೃಷ್ಟಿಗೆ ಕಾರಣವಾಗುತ್ತವೆ. ಹಿಂದೆ ಪ್ರಸ್ತಾಪವಾದಂತೆ ಈ ಮಿಶ್ರ ಸಂಯೋಜನೆಯನ್ನೇ ಪಂಚೀಕರಣವೆನ್ನುತ್ತಾರೆ. ಈ ಜಗತ್ತು ಪ್ರತ್ಯೇಕ ವಸ್ತುವಾದರೂ ಪರಮಾತ್ಮನಿಗಿಂತ ಅದಕ್ಕೆ ಸ್ವತಂತ್ರವಾದ ಅಸ್ತಿತ್ವವಿಲ್ಲ. ಜೀವಾತ್ಮನಿಗೆ ಸ್ಥೂಲ ಶರೀರವಿರುವಂತೆ ಜಗತ್ತು ಪರಮಾತ್ಮನ ಶರೀರವಾಗಿರುತ್ತದೆ. ಇವರು ಜಗತ್ತಿನಲ್ಲಿ ಕಾರ್ಯ-ಕಾರಣಭಾವ ಸ್ಥಲದಲ್ಲಿ ಪರಿಣಾಮವಾದವನ್ನೊಪ್ಪಿದ್ದಾರೆ.

---

೧೦೬. ನಿರ್ಗುಣವಾದಾಶ್ಚ ಪರಸ್ಯಬ್ರಹ್ಮಣೋ ಹೇಯಗುಣಾಸಂಬಂಧನಾತ್ ಉಪಪದ್ಯಂತೆ, ಶ್ರೀಭಾಷ್ಯ ೧-೧-೧.

೧೦೭. ಪುರುಷೋತ್ತಮೋ ವಾಸುದೇವಾದಿಪದವೇದನೀಯಃ ॥
ತಸ್ಯ ಜಗತಃ ಕರ್ತೋಽಪಾದಾನಂ ಚೇಶ್ವರಪದಾರ್ಥಃ ।
ಸರ್ವದರ್ಶನ ಸಂಗ್ರಹ (೧೯೬೬) ಪು. ೧೮೬. ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಜೀವನು ಚೈತನ್ಯಸ್ವರೂಪನಾಗಿದ್ದು ಚೈತನ್ಯಕ್ಕೆ ಆಶ್ರಯನಾಗಿದ್ದಾನೆ. ಇವನು ಅಣು. ಪರಿಮಾಣಜ್ಞಾನವೆಂಬುದು ದ್ರವ್ಯವೇ ಹೊರತು ಗುಣವಲ್ಲ.[೧೦೮] ದೀಪ ಮತ್ತು ಅದರ ಪ್ರಭೆಯು ದ್ರವ್ಯವಾಗಿದ್ದರೂ ಒಂದನ್ನೊಂದಾಶ್ರಯಿಸಿರುವಂತೆ ಧರ್ಮಭೂತಜ್ಞಾನವು ಆತ್ಮರೂಪವಾದ ದ್ರವ್ಯವನ್ನಾಶ್ರಯಿಸಿರುತ್ತದೆ. ಜೀವಾತ್ಮನು ಸ್ವತಂತ್ರನಲ್ಲ. ಆತನು ಎಂದೂ ಪರಮಾತ್ಮನ ಅಧೀನನಾಗಿರುತ್ತಾನೆ. ಶರೀರ ಹಾಗೂ ಆತ್ಮ ಒಂದನ್ನೊಂದು ಬಿಟ್ಟಿರಲಾರದಂತೆ ಜೀವಾತ್ಮನು ಪರಮಾತ್ಮನನ್ನು ಬಿಟ್ಟಿರಲಾರ. ಇದನ್ನೇ ಶರೀರ-ಶರೀರಿಭಾವವೆನ್ನುತ್ತಾರೆ. ಬದ್ಧ, ಮುಕ್ತ ಎಂಬ ವಿಭಾಗವನ್ನಷ್ಟೇ ಅಲ್ಲದೆ ನಿತ್ಯಸಿದ್ಧರಾದ ಜೀವಾತ್ಮರನ್ನೂ ಒಪ್ಪಿದೆ ಈ ಸಿದ್ಧಾಂತ. ಇವರೆಂದೂ ಕರ್ಮಚಕ್ರಕ್ಕೆ ಸಿಲುಕಿದವರಲ್ಲ. ಈ ಸಿದ್ಧಾಂತದಲ್ಲಿ ಕೆಲವರು ನಿತ್ಯ ಸಂಸಾರಿಗಳು ಎಂಬ ವಿಭಾಗವನ್ನೂ ಒಪ್ಪಿದ್ದಾರೆ.

ರಾಮಾನುಜರ ಪ್ರಕಾರ ಜೀವಾತ್ಮನಿಗಿಂತ ಈಶ್ವರನು ಬೇರೆ. ಈತನೇ ಜಗತ್ತಿನ ಸೃಷ್ಟಿ, ಸ್ಥಿತಿ ಎಲ್ಲಕ್ಕೂ ಕಾರಣ. ಈತನು ನಿತ್ಯ, ಅನಾದಿ, ದಯಾ, ವಾತ್ಸಲ್ಯಾದಿ ಸರ್ವಗುಣ ಪರಿಪೂರ್ಣ. ಅದ್ವೈತಮತದಂತೆ ಕೇವಲ ನಿರ್ಗುಣನಲ್ಲ, ನಿರಾಕಾರನೂ ಅಲ್ಲ, ನಿರ್ವಿಶೇಷನೂ ಅಲ್ಲ. ಜೀವಾತ್ಮ ಹಾಗೂ ಪ್ರಪಂಚ ಈತನ ಶರೀರವಾಗಿರುತ್ತದೆ. ಇವನು ಅಂತರ್ಯಾಮಿಯಾಗಿರುವುದರಿಂದ ಜಗತ್ತನ್ನು ಪರಮಾತ್ಮನ ಶರೀರವೆಂದಿದ್ದಾರೆ. ಈತನೇ ವಿಷ್ಣು.[೧೦೯]

ಜೀವಾತ್ಮನು ಮಾಡುವ ಸತ್ಕರ್ಮ ಮತ್ತು ದುಷ್ಕರ್ಮಗಳಿಗನುಗುಣವಾಗಿ ಉಂಟಾಗುವ ಪುಣ್ಯ-ಪಾಪವೇ ರಾಮಾನುಜ ಮತದಲ್ಲಿ ಬಂಧ. ಅದೂ ಸಹ ಈಶ್ವರನ ಅಧೀನವಾಗಿಯೇ ತನ್ನ ಕೆಲಸವನ್ನು ನೆರವೇರಿಸುತ್ತದೆ. ಜೀವಾತ್ಮನಲ್ಲಿರುವ ಜ್ಞಾನಸಂಕೋಚಾವಸ್ಥೆಯೇ ಬಂಧ.

ಭಕ್ತಿಯೇ ಮೋಕ್ಷಕ್ಕೆ ಸಾಧನ. ಭಕ್ತಿಯು ಜ್ಞಾನದ ಮತ್ತೊಂದು ರೂಪ. ಭಕ್ತಿಯೇ ಸಾಕ್ಷಾತ್ಕಾರರೂಪವನ್ನು ತಾಳುತ್ತದೆ. ಉಪಾಸನೆ, ಧ್ಯಾನ ಇವೆಲ್ಲವೂ ಭಕ್ತಿಯ ಪರ್ಯಾಯ ಪದಗಳು. ಈ ದರ್ಶನದಲ್ಲಿ ವಿದ್ಯೆ ಎಂದರೆ ಭಕ್ತಿರೂಪದಲ್ಲಿ ವಿಕಾಸ[೧೧೦]ಹೊಂದಿದ ಧ್ಯಾನವೇ. ಮೋಕ್ಷವು ಲಭಿಸುವವರೆಗೂ ಕರ್ಮವು ಭಕ್ತಿಯ ಅಂಗವಾಗಿರುತ್ತದೆ. ಕರ್ಮವನ್ನಾಚರಿಸುವುದು ಅದ್ವೈತಮತದಂತೆ ಕೇವಲ ಚಿತ್ತಶುದ್ಧಿಗಾಗಿ ಅಲ್ಲ. ಕರ್ಮ ಮೂಲಕವಾಗಿಯೇ ಬೆಳೆದ ಭಕ್ತಿಯು ಅಂತರ್ಬೋಧೆಯಾಗಿ ಪರಿಣಮಿಸುತ್ತದೆ. ವೇದವಿಹಿತವಾದ ನಿತ್ಯಕರ್ಮಗಳನ್ನು ಮಾನವನು ಬಿಡಲೇಕೂಡದು, ಎಂಬ ಅಂಶದಲ್ಲಿ ಕುಮಾರಿಲನಮತಕ್ಕೆ ಸಮಾನವಾಗಿದೆ. ಭಕ್ತಿಯು ಮೋಕ್ಷಸಾಧನವಾದರೂ ಪರಮಾತ್ಮನ ಕರುಣೆಯಂತೂ ಆತ್ಯಗತ್ಯ. ಇದೇ ರೀತಿ ಪ್ರಪತ್ತಿಯೂ ಮೋಕ್ಷ ಸಾಧನ. ಪರಮಾತ್ಮನಲ್ಲಿ ಸಂಪೂರ್ಣ ಶರಣು ಹೋಗುವುದು ಅಥವಾ ಆತ್ಮ ಸಮರ್ಪಣೆಯೇ ಪ್ರಪತ್ತಿ.

ವಿಶಿಷ್ಟಾದ್ವೈತ ದರ್ಶನದಲ್ಲಿ ಜೀವಾತ್ಮನಿಗೂ ಪರಮಾತ್ಮನಿಗೂ ಅಪೃಥಕ್‌ಸಿದ್ಧ ಸಂಬಂಧವಿರುವದರಿಂದ ಭೇದವಿದ್ದರೂ ಪರಮಾತ್ಮನೊಡನೆ ಅರ್ಪಣಾಭಾವದಿಂದಿದ್ದು ಅಪ್ರಾಕೃತ ಕ್ಷೇತ್ರವನ್ನು ಸೇರಿ ಆತನೊಡನೆ ಆನಂದವನ್ನನುಭವಿಸುವುದೇ ಮುಕ್ತಿ. ಮುಕ್ತಜೀವಾತ್ಮನಲ್ಲಿ ಸರ್ವಜ್ಞತ್ವ, ಸತ್ಯಸಂಕಲ್ಪತ್ವ ಮುಂತಾದ ಗುಣಗಳಿದ್ದರೂ ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳಲ್ಲಿ ಆತನಿಗೆ ಅಧಿಕಾರವಿಲ್ಲ. ಅದ್ವೈತ ಮತದಂತೆ ಜೀವನ್ಮುಕ್ತಿಯನ್ನೊಪ್ಪದೆ ಇವರು ವಿದೇಹಮುಕ್ತಿಯನ್ನೊಪ್ಪಿದ್ದಾರೆ.

---

೧೦೮. ತತ್ರಬದ್ಧಬ್ಬವಾಟ್ಯಾ ಜೀವಾತ್ಮನಃ ಪರಮಾತ್ಮನಃ ಸಕಾಶಾದ್ ಭಿನ್ನಾ ನಿತ್ಯಾಶ್ಚ, ಅದೇ, ಪು. ೧೮೪.

೧೦೯. ಹೆಚ್. ಜಿ. ರಾಮಯ್ಯಂಗಾರ್, (೧೯೮೬) ರಾಮಾನುಜರಬ್ರಹ್ಮಸೂತ್ರಭಾಷ್ಯ, ಪು. ೬೭.

೧೧೦. Dr. R.G. Bhandarkar (1983) Vaisnavism Saivism, p. 77.

ವಿಶಿಷ್ಟಾದ್ವೈತ ದರ್ಶನದ ನಾರಾಯಣ, ಮಾಯಿದೇವ ನಿರೂಪಿಸುವ ಶಿವ(ಲಿಂಗಸ್ಥಲ) ನನ್ನು ಒಂದು ವಿಧದಲ್ಲಿ ಹೋಲುತ್ತಾನೆಂದು ಹೇಳಬಹುದು. ಏಕೆಂದರೆ ಎರಡೂ ದರ್ಶನಗಳಲ್ಲಿ ಪರಬ್ರಹ್ಮ (ನಾರಾಯಣ ಅಥವಾ ಶಿವ) ಸವಿಶೇಷ ಬ್ರಹ್ಮ. ರಾಮಾನುಜರ ಸಿದ್ಧಾಂತದಲ್ಲಿ ಪರಬ್ರಹ್ಮಕ್ಕೆ ಜೀವ ಮತ್ತು ಜಗತ್ ಎಂಬ ಎರಡು ವಿಶೇಷಣಗಳಿದ್ದರೆ, ಮಾಯಿದೇವನ ಸಿದ್ಧಾಂತದಲ್ಲಿ ಶಕ್ತಿ ಎಂಬ ಒಂದೇ ವಿಶೇಷಣವಿದೆ. ವಿಶಿಷ್ಟಾದ್ವೈತ ದರ್ಶನದ ನಾರಾಯಣ ನಿರ್ಗುಣನಲ್ಲ. ಅವನು ಸಗುಣ: ಅನಂತ ಕಲ್ಯಾಣಗುಣ ಪರಿಪೂರ್ಣ, ದಯಾಮಯ, ಸರ್ವಜ್ಞ, ಸರ್ವಶಕ್ತ, ಸರ್ವಾಂತರ್ಯಾಮಿ, ತ್ರಿಲೋಕ ಸುಂದರ, ಬಂಧು, ಕಾರಣ್ಯಮೂರ್ತಿ. ಶಿವಾದ್ವೈತದರ್ಶನದಲ್ಲಿ ಶಿವ ಸಗುಣ, ಸರ್ವಜ್ಞ, ಸರ್ವಾಂತರ್ಯಾಮಿ, ಸೃಷ್ಟಿಸ್ಥಿತಿಲಯಕರ್ತನೂ ಆಗಿದ್ದಾನೆ. ವಿಶಿಷ್ಟಾದ್ವೈತ ದರ್ಶನದಲ್ಲಿರುವಂತೆ ಇಲ್ಲಿಯೂ ಸಹ ಶಿವ ಮತ್ತು ಶಕ್ತಿಯರ ಸಂಬಂಧ ಅತ್ಯಂತ ಆತ್ಮೀಯವಾಗಿದೆ. ಆದರೆ ವಿಶಿಷ್ಟಾದ್ವೈತಿಗಳ ಬ್ರಹ್ಮ ಮತ್ತು ಶಕ್ತಿಯರ ಸಂಬಂಧ, ಅವಿನಾಭಾವ ಸಂಬಂಧವಲ್ಲ. ಏಕೆಂದರೆ ಬ್ರಹ್ಮನು ಜಗತ್ತನ್ನು ಯಾವ ರೀತಿಯಲ್ಲಿಯೂ ಅವಲಂಬಿಸುವುದಿಲ್ಲ. ಅಲ್ಲದೆ ಅದು ಅವನೊಡನೆ, ಅಥವಾ ಅವನು ಅದರೊಡನೆ ಪ್ರಲಯಕಾಲದಲ್ಲಿ ಬೆರೆಯುವುದಿಲ್ಲ. ಆದರೆ ಮಾಯಿದೇವನ ದರ್ಶನದಲ್ಲಿ, ಶಕ್ತಿಯೊಡನಿಲ್ಲದ ಪರಶಿವನನ್ನಾಗಲೀ ಪರಶಿವನಿಲ್ಲದ ಶಕ್ತಿಯನ್ನಾಗಲಿ ಊಹಿಸಲೂ ಅವಕಾಶವಿಲ್ಲ. ಶಕ್ತಿಯೊಡಗೂಡಿದ ಶಿವ ಸಚ್ಚಿದಾನಂದಸ್ವರೂಪನು.

ಜೀವಿಯಸ್ವರೂಪದ ವಿಷಯದಲ್ಲೂ ಈ ಎರಡೂ ದರ್ಶನಗಳಲ್ಲಿ ಕೆಲವು ವೈದೃಶ್ಯಗಳನ್ನು ನಾವು ಗುರುತಿಸಬಹುದು. ಪರಶಿವನೇ (ಸ್ಥಲ) ಸ್ವಾತಂತ್ರ್ಯದಿಂದ ತನ್ನ ಲೀಲಾವಿಲಾಸಕ್ಕೋಸ್ಕರ ಜೀವಿಯಾಗುತ್ತಾನೆ. ವಾಸ್ತವಿಕನಾದ ಶಿವನ ಸ್ವಾಭಾವಿಕ ಅವಸ್ಥೆಯೇ ಜೀವ ಎಂಬ, ಮಾಯಿದೇವನ ದರ್ಶನದ ಪ್ರತಿಪಾದನೆಯನ್ನು ವಿಶಿಷ್ಟಾದ್ವೈತದರ್ಶನ ಎಳ್ಳಷ್ಟೂ ಒಪ್ಪುವುದಿಲ್ಲ. ಜೀವಿಯ ಸ್ವರೂಪದ ಬಗ್ಗೆ ವಿಶಿಷ್ಟಾದ್ವೈತದರ್ಶನದ ನಿಲುವು ಮಾಯಿದೇವನ ಅಭಿಪ್ರಾಯಕ್ಕಿಂತ ಭಿನ್ನವಾಗಿದೆ. ವಿಶಿಷ್ಟಾದ್ವೈತವು ನಾರಾಯಣನೇ (ಪರಬ್ರಹ್ಮವೇ) ಜೀವನಾಗಿದ್ದಾನೆ ಅಥವಾ ಜೀವನಾಗಿ ರೂಪಾಂತರ ಹೊಂದಿದ್ದಾನೆ ಎಂಬುದನ್ನು ಪ್ರತಿಪಾದಿಸುವುದಿಲ್ಲ. ಜೀವನು ನಾರಾಯಣನನ್ನು ಬಿಟ್ಟಿರಲಾರದ ಸೇವಕ ಹಾಗೂ ದಾಸ. ಜೀವರು ರಾಮಾನುಜ ಮತದಲ್ಲಿ ನಿತ್ಯರಾಗಿದ್ದಾರೆ. ತಮ್ಮ ತಮ್ಮ ಕರ್ಮಫಲಕ್ಕನುಗುಣವಾಗಿ ಸಂಸಾರದಲ್ಲಿ ಸುಖದುಃಖಾದಿಗಳನ್ನು ಅನುಭವಿಸುತ್ತಾ ಇರುವ ಜೀವಿಗಳು, ನಾರಾಯಣನಿಗಿಂತ ಭಿನ್ನರಾಗಿದ್ದು ಮೋಕ್ಷಕ್ಕಾಗಿ ಆತನ ಅನುಗ್ರಹವನ್ನೇ ಅವಲಂಬಿಸಿರುತ್ತಾರೆ.

ಜಗತ್ ಸ್ವರೂಪದ ಬಗ್ಗೆಯೂ ಎರಡೂ ದರ್ಶನಗಳಲ್ಲಿ ಸಾದೃಶ್ಯಗಳ ಜೊತೆಗೆ ವೈದೃಶ್ಯಗಳನ್ನು ಕಾಣಬಹುದು. ಎರಡೂ ದರ್ಶನಗಳು ಪ್ರಪಂಚದ ಸತ್ಯತ್ವವನ್ನು ತೆರೆದ ಮನಸ್ಸಿನಿಂದ ಒಪ್ಪಿಕೊಂಡಿವೆ. ಶಂಕರದರ್ಶನ ಹೇಳುವಂತೆ ಈ ಜಗತ್ತು ಮಾಯೆಯಲ್ಲ. ಅದು ನಾರಾಯಣನಷ್ಟೇ ಅಥವಾ ಪರಶಿವ(ಸ್ಥಲ)ನಷ್ಟೇ ಸತ್ಯವಾದುದೆಂದು ಎರಡೂ ದರ್ಶನಗಳು ಸಾರುತ್ತವೆ. ಪರಶಿವನ ಪರಿಣಾಮವೇ ಜಗತ್ತಾದುದರಿಂದ ಅಲ್ಲಿಯೂ ಚಿದಂಶವಿದೆ, ಶಕ್ತಿಯಿದೆ ಎಂದು ಶಿವಾದ್ವೈತಸಾರಿದರೆ, ವಿಶಿಷ್ಟಾದ್ವೈತದರ್ಶನವು ಜಗತ್ತು ನಾರಾಯಣನ ಒಂದು ವಿಶೇಷಣವೆಂದೂ, ನಾರಾಯಣ ರೂಪಾಂತರವಲ್ಲವೆಂದೂ, ನಾರಾಯಣನಿಗಿಂತ ಭಿನ್ನವಾದ ಆದರೆ ಆತನನ್ನು ಬಿಟ್ಟಿರಲಾರದ ಹಾಗೂ ಆತನ ನಿಯಂತ್ರಣಕ್ಕೊಳಗಾದ ಸತ್ವರಜಸ್ತಮೋಗುಣಗಳನ್ನು ಹೊಂದಿರುವಂಥದೆಂದು ಸಾರುತ್ತದೆ.

ಎರಡೂ ದರ್ಶನಗಳಲ್ಲಿ ಜೀವಿ ಅಣುಸ್ವರೂಪನು. ವಿಶಿಷ್ಟಾದ್ವೈತದರ್ಶನಗಳಲ್ಲಿ ಜೀವಿ ಅಣುಸ್ವರೂಪನು. ಈ ದರ್ಶನದಲ್ಲಿ ಜೀವ ತನ್ನ ನಿರಂತರ ಗುಣ ವಿಶೇಷವಾದ ಧರ್ಮಭೂತ ಜ್ಞಾನದಿಂದ ಪ್ರಪಂಚಜ್ಞಾನವನ್ನು ಹೊಂದುತ್ತಾನೆ. ಮಾಯಿದೇವನ ದರ್ಶನದಲ್ಲಿ ಜೀವನನ್ನು ಅಂಗನೆಂದು ಕರೆಯಲಾಗಿದೆ. ಅಂಗ ಪರಶಿವ ಅಥವಾ ಲಿಂಗದ ಕೈಂಕರ್ಯವನ್ನು

ಮಾಡಿಕೊಂಡು ತನ್ನ ಸಹಜಸ್ವಭಾವವಾದ ಅಂದರೆ ಅಂಗಸ್ಥಿತಿಯಲ್ಲಿ ಮಲತ್ರಯಗಳಿಂದ ಮುಚ್ಚಿಹೋಗಿರುವ ಸಚ್ಚಿದಾನಂದ ಸ್ವರೂಪವನ್ನು ಪುನಃ ಹೊಂದಲು ಹಂಬಲಿಸುತ್ತಾನೆ.

ಎರಡೂ ದರ್ಶನಗಳಲ್ಲಿ ನಾರಾಯಣ ಮತ್ತು ಪರಶಿವ ಜಗತ್ತಿನ ಉಪಾದಾನ ಹಾಗೂ ನಿಮಿತ್ತ ಕಾರಣರಾಗಿದ್ದಾರೆ. ಪ್ರಪಂಚದ ಸೃಷ್ಟಿಕಾರ್ಯದಲ್ಲಿ ನಾರಾಯಣನಿಗೆ ಲಕ್ಷ್ಮಿದೇವಿ ಸಹಕರಿಸಿದರೆ, ಪರಶಿವನಿಗೆ ಶಕ್ತಿ ಅಥವಾ ಉಮಾದೇವಿ ಸೃಷ್ಟಿಕಾರ್ಯದಲ್ಲಿ ಸಹಕರಿಸುತ್ತಾಳೆ. ಮಾಯಿದೇವನ ಪ್ರಕಾರ ಮೋಕ್ಷವು ವ್ಯಕ್ತಿಯು ಬದುಕಿರುವಾಗಲೇ ಸಾಕ್ಷಾತ್ಕರಿಸಿಕೊಳ್ಳಬಹುದಾದ ಆದರ್ಶ. ಇಲ್ಲಿಯೇ ಮತ್ತು ಈಗಲೇ ಮುಕ್ತಿಸಾಧ್ಯವೆಂದು ಅವನ ಅಬಿಪ್ರಾಯ.[೧೧೧] ಆದರೆ ವಿಶಿಷ್ಟಾದ್ವೈತವು, ಮುಕ್ತಿಯು ಜೀವಿತಕಾಲದಲ್ಲಿ ಸಾಧ್ಯವಿಲ್ಲವೆಂದು ನಿರೂಪಿಸುತ್ತದೆ. ಎರಡೂ ದರ್ಶನಗಳಲ್ಲಿ ಭಗವಂತನ ಅನುಗ್ರಹ ಅಥವಾ ಪ್ರಸಾದಕ್ಕೆ ಪ್ರಾಶಸ್ತ್ಯವನ್ನು ಕೊಡಲಾಗಿದೆ. ಶಿವಾದ್ವೈತದ ಮೋಕ್ಷಸ್ಥಿತಿಯಲ್ಲಿ, ಜೀವನು ಪರಶಿವನಲ್ಲಿ (ಅಂಗಲಿಂಗದಲ್ಲಿ) ಲೀನಗೊಳ್ಳುತ್ತಾನೆ, ಅಥವಾ ಐಕ್ಯಹೊಂದುತ್ತಾನೆ. ಅಂದರೆ ಲಿಂಗಾಂಗಸಾಮರಸ್ಯ ಉಂಟಾಗುತ್ತದೆ. ಅಂಗನಿಗೂ ಲಿಂಗನಿಗೂ ಪರಸ್ಪರ ಭೇದವಿರುವುದಿಲ್ಲ; ತಾದಾತ್ಮ್ಯ ಉಂಟಾಗುತ್ತದೆ.; ದ್ವಂದ್ವ ಇಲ್ಲವಾಗುತ್ತದೆ[೧೧೨] ಆದರೆ ವಿಶಿಷ್ಟಾದ್ವೈತ ವೇದಾಂತ·ದಲ್ಲಿ ಮೋಕ್ಷಸ್ಥಿತಿಯಲ್ಲಿಯೂ ಜೀವನು ಈಶ್ವರನಿಗಿಂತ ಬೇರೆಯಾಗಿಯೇ ಇರುತ್ತಾನೆ. ಹಾಗೆ ಇದ್ದು ಆನಂದವನ್ನು ಅನುಭವಿಸುತ್ತಾನೆ. ಜೀವ ಈಶ್ವರರ ದ್ವಂದ್ವ ಮತ್ತು ಭೇದ ಆ ಅತ್ಯುನ್ನತವೆನ್ನುವ ಸ್ಥಿತಿಯಲ್ಲಿಯೂ ಮುಂದುವರಿಯುತ್ತದೆ.

೬. ದ್ವೈತಸಿದ್ಧಾಂತ:

ಮಾಧ್ವರು ಹತ್ತು ಪದಾರ್ಥಗಳನ್ನೊಪ್ಪುತ್ತಾರೆ.[೧೧೩] ಅವು ಇಂತಿವೆ - ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ವಿಶಿಷ್ಟ, ಅಂಶ, ಶಕ್ತಿ, ಸಾದೃಶ್ಯ ಮತ್ತು ಅಭಾವ. ಇವುಗಳಲ್ಲಿ ಕೆಲವು ನ್ಯಾಯ - ವೈಶೇಷಿಕದೊಡನೆ ಸಾಮ್ಯವನ್ನು ಹೊಂದಿವೆ.

ದ್ರವ್ಯವು ಇಪ್ಪತ್ತು ವಿಧ - ಈಶ್ವರ, ಲಕ್ಷ್ಮಿ, ಜೀವ, ಅವ್ಯಾಕೃತ, ಆಕಾಶ, ಪ್ರಕೃತಿ, ಗುಣತ್ರಯ, ಮಹತ್ತತ್ತ್ವ, ಅಹಂಕಾರತತ್ತ್ವ, ಬುದ್ಧಿ, ಮನಸ್ಸು, ಇಂದ್ರಿಯತನ್ಮಾತ್ರ, ಭೂತ, ಬ್ರಹ್ಮಾಂಡ, ಅವಿದ್ಯೆ, ವರ್ಣ, ಅಂಧಕಾರ, ವಾಸನೆ, ಕಾಲ ಮತ್ತು ಪ್ರತಿಬಿಂಬ. ಗುಣವು ಅನೇಕ ವಿಧ - ವೈಶೇಷಿಕರು ಹೇಳಿರುವ ಗುಣಗಳ ಜೊತೆಗೆ ಶಮ, ದಮ, ಕೃಪೆ, ತಿತೀಕ್ಷಾ,

---

೧೧೧. ಜೀವಾತ್ಮಾ ಪರಮಾತ್ಮಾ ಚ ತಯೋರ್ಭೇದಶ್ಚ ಭೇದಕಃ ।
ಸರ್ವಮಾತ್ಮತಯಾ ಭಾತಿ ಪ್ರಸಾದಾತ್ ಪಾರಮೇಶ್ವರಾತ್ ॥
ಶರೀರಮಿಂದ್ರಿಯಂ ಪ್ರಾಣಾ ಮನೋ ಬುದ್ಧಿರಹಂ ಕೃತಿಃ
ಸರ್ವಮಾತ್ಮತಯಾ ಭಾತಿ ಪ್ರಸಾದಾತ್ ಪಾರಮೇಶ್ವರಾತ್ ॥ ಶಿವಾನುಭವಸೂತ್ರಂ, ಅಧಿಕರಣ ೮, ಶ್ಲೋಕ ೪೦, ೪೧.

೧೧೨. ಆತ್ಮಾನಂ ಚ ಪೃಥಕ್ಕೃತ್ವಾ ಪ್ರೇರಿತಾರಂ ತಥಾ ಪೃಥಕ್।
ಅಸೌ ಜುಷ್ಟಸ್ತತಸ್ತೇನಹ್ಯಮೃತತ್ವಾಯ ಕಲ್ಪತೇ॥
ಆತ್ಮೋಪಾಸಕ ಈಶ್ವರಸ್ತ್ವಯಮುಪಾಸ್ಯಸ್ಸರ್ವದೈವೇತ್ಯಸೌ।
ಭಕ್ತಿರ್ಭೋಗಕರೀ ಕರೋತಿ ಶಿವಮಾತ್ಮಾನಂ ಚಕೃತ್ವಾ ಪೃಥಕ್॥
ಯತ್ತತ್ ಕ್ಷೀರಘೃತಾರಣೀಹುತವಹಸ್ರೋತೋಂಬುವತ್ಸಂಯುತಂ।
ಜೀವೇಶೈಕ್ಯಪದಂ ವಿಭಜ್ಯ ಪರತೋಽಪ್ಯಸ್ಯಾಮೃತತ್ವಾಯ ಹಿ॥ ಶಿವಾನುಭವಸೂತ್ರಂ, ಅಧಿಕರಣ ೮, ಶ್ಲೋಕ ೩೩, ೩೪.

೧೧೩. ಎಚ್.ಎನ್. ರಾಘವೇಂದ್ರಾಚಾರ್ (೧೯೭೧) ಯುಗಯಾತ್ರೀ ಭಾರತೀಯ ಸಂಸ್ಕೃತಿ, (ಸಂಪುಟ-೩) ಪು. ೨೧೮.

ಸೌಂದರ್ಯ ಮುಂತಾದವನ್ನೂ ಸೇರಿಸಿದ್ದಾರೆ. ಇವರ ದೃಷ್ಟಿಯಲ್ಲಿ ಕೇವಲ ಸದ್ಗುಣಗಳೇ ಗುಣಗಳು. ಕರ್ಮವು ಮೂರು ವಿಧ - ವಿಹಿತ, ನಿಷಿದ್ಧ ಮತ್ತು ಉದಾಸೀನ. ಪಾಪ ಮತ್ತು ಪುಣ್ಯಕ್ಕೆ ಅಸಾಧಾರಣ ಕಾರಣವಾಗಿರುವುದೇ ಕರ್ಮ. ನ್ಯಾಯ ಮತವು ಹೇಳುವ ಉತ್ಕ್ಷೇಪಣ, ಅಪಕ್ಷೇಪಣ ಮುಂತಾದ ಕರ್ಮವು ಉದಾಸೀನಕರ್ಮದಲ್ಲಿ ಸೇರಿದೆ.

ಸಾಮಾನ್ಯವು ಎರಡು ವಿಧ.[೧೧೪] ನಿತ್ಯಾನಿತ್ಯಭೇದ ಹಾಗೂ ಜಾತ್ಯುಪಾಧಿಭೇದ. ಭೇದವಿಲ್ಲದಿದ್ದರೂ ಭೇದ ವ್ಯವಹಾರಕ್ಕೆ ಕಾರಣವಾಗಿರುವ ಪದಾರ್ಥವೇ ವಿಶೇಷ. ಜಗತ್ತಿನಲ್ಲಿರುವ ಪ್ರತಿಯೊಂದು ಪದಾರ್ಥದಲ್ಲಿಯೂ ಒಂದೊಂದು 'ವಿಶೇಷ'ವಿದ್ದೇ ಇರುತ್ತದೆ. ಒಂದು ವಸ್ತು ಮತ್ತೊಂದಕ್ಕಿಂತ ಬೇರೆ ಎಂದು ತೋರುವುದಕ್ಕೆ ಈ 'ವಿಶೇಷ'ವೇ ಕಾರಣ.

ವಿಶೇಷದಿಂದ ಕೂಡಿದ ಪದಾರ್ಥವನ್ನೇ ವಿಶಿಷ್ಟ ಎನ್ನುತ್ತಾರೆ. ಹಸ್ತ, ಪಾದಗಳಿಗಿಂತ ಬೇರೆಯಾದ ಸಮಗ್ರ ಅವಯವಗಳಿಂದ ಕೂಡಿದ ಪದಾರ್ಥವೇ ಅಂಶಿ.

ಒಂದು ವಸ್ತು ಮತ್ತೊಂದು ವಸ್ತುವಿನಂತೆ ಇದೆ ಎಂದು ಹೇಳಬೇಕಾದರೆ ಸಾದೃಶ್ಯವು ಪ್ರತ್ಯೇಕವಾದ ಪದಾರ್ಥವಾಗಿದ್ದರೆ ಮಾತ್ರ ಸಾಧ್ಯ ಎಂಬುದು ಮಾಧ್ವರ ವಾದ. ಈ ದೃಷ್ಟಿಯಿಂದ ಪ್ರಾಭಾಕರಮತವನ್ನು ಹೋಲಿದರೂ, ಮಾಧ್ವರಲ್ಲಿ ಸಾದೃಶ್ಯವು ಅನಂತ. ನಿತ್ಯಸಾದೃಶ್ಯವು ಈ ದರ್ಶನದಲ್ಲಿದೆ.

ಅಭಾವವು ನೈಯಾಯಿಕರಂತೆಯೇ ಪ್ರಾಗಭಾವ, ಪ್ರಧ್ವಂಸಾಭಾವ, ಅತ್ಯಂತಾಭಾವ ಮತ್ತು ಅನ್ಯೋನ್ಯಾಭಾವವೆಂದು ನಾಲ್ಕು ವಿಧ.

ಶಕ್ತಿಯೂ ನಾಲ್ಕು ವಿಧ - ಅಚಿಂತ್ಯಶಕ್ತಿ, ಆಧೇಯಶಕ್ತಿ, ಸಹಜಶಕ್ತಿ ಮತ್ತು ಪದಶಕ್ತಿ. ಪೂರ್ಣಪ್ರಜ್ಞದರ್ಶನದಲ್ಲಿ ಸತ್ವರಜಸ್ತಮೋಗುಣಗಳನ್ನುಳ್ಳ ಪ್ರಕೃತಿಯ ಪರಿಣಾಮವೇ ಈ ಜಗತ್ತು. ಇದರ ಸೃಷ್ಟಿ, ಸ್ಥಿತಿ ಹಾಗೂ ವಿನಾಶವೂ ಈಶ್ವರನಿಂದಾಗುತ್ತದೆ. ಜಗತ್ತು ಈಶ್ವರನಿಗೆ ಎಂದೆಂದಿಗೂ ಅಧೀನವಾಗಿರುತ್ತದೆ. ಕಾರ್ಯಕಾರಣಭಾವದ ವಿಷಯದಲ್ಲಿ ನೈಯಾಯಿಕರಂತೆ ಇವರೂ ಸಂಪೂರ್ಣ ಭೇದವಾದಿಗಳು[೧೧೫] ನೈಯಾಯಿಕರಂತೆಯೇ ಈ ಮತದಲ್ಲಿ ಈಶ್ವರನು ಜಗತ್ತಿಗೆ ನಿಮಿತ್ತ ಕಾರಣ.

ಮಾಧ್ವದರ್ಶನದಲ್ಲಿ ರಾಮಾನುಜದರ್ಶನದಲ್ಲಿರುವ ಶರೀರ-ಶರೀರಿಭಾವವನ್ನು ಬಿಟ್ಟು ಉಳಿದ ಎಲ್ಲ ಅಂಶಗಳಲ್ಲೂ ಜೀವಾತ್ಮನು ಸಮಾನನೇ. ಆದರೆ ಜೀವಾತ್ಮರ ಸ್ವರೂಪವೇ ತರ-ತಮಭಾವವುಳ್ಳದ್ದಾಗಿದೆ. ಜೀವಾತ್ಮರು ಅಣುವಾಗಿದ್ದರೂ ಅನುಭಾವದಲ್ಲಿಯೂ ಪರಸ್ಪರ ತಾರತಮ್ಯವಿದೆ. ಜೀವಾತ್ಮನು ಜ್ಞಾನಸ್ವರೂಪನೇ ಹೊರತು ಜ್ಞಾನಾಶ್ರಯನಲ್ಲ. ಧರ್ಮವಾದ ಜ್ಞಾನವು ಸಾಂಖ್ಯರಂತೆ, ಅಂತಃಕರಣಧರ್ಮವೆ ಹೊರತು ಆತ್ಮನ ಧರ್ಮವಲ್ಲ.

---

೧೧೪. ಡಾ. ಮಂಡನಮಿಶ್ರಾ, (೧೯೮೬) ಸರ್ವದರ್ಶನ ಸಮನ್ವಯಃ, ಪು. ೩೧.

೧೧೫. ಜೀವೇಶ್ವರಭಿದಾ ಚೈವ ಜಡೇಶ್ವರಭಿದಾ ತಥಾ।
ಜೀವಭೇದೋ ಮಿಥಶ್ಚೈವ ಜಡಜೀವಭಿದಾ ತಥಾ॥
ಮಿಥಶ್ಚಜಡಭೇದೋಯಃ ಪ್ರಪಂಚೋ ಭೇದಪಂಚಕಃ।
. . . . . . . . . . . . . . . . . . . . ॥ ಸರ್ವದರ್ಶನಸಂಗ್ರಹ, (ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೬)
ಪು. ೨೨೫ (೧೯೭೬).

ಇಲ್ಲಿನ ಈಶ್ವರ ತತ್ವವು ರಾಮಾನುಜಮತದಂತೆಯೇ ಆದರೂ ಜಗತ್ತಿಗೂ ಈಶ್ವರನಿಗೂ ಶರೀರ-ಶರೀರಿಭಾವವನ್ನೊಪ್ಪುವುದಿಲ್ಲ. ಈಶ್ವರನಿಗೂ ಪ್ರಪಂಚಕ್ಕೂ, ಜೀವಾತ್ಮನಿಗೂ ಭೇದವಿದ್ದೇ ಇರುತ್ತದೆ. ಇವರು ಸಂಪೂರ್ಣಭೇದವಾದಿಗಳು. ಜ್ಞಾನ, ಅಜ್ಞಾನ, ಬಂಧ ಮತ್ತು ಮೋಕ್ಷ ಎಲ್ಲವೂ ಈಶ್ವರನ ಅಧೀನ.

ಮಾಧ್ವರಲ್ಲಿ ಕರ್ಮ ಪರವಶತೆಯೇ ಬಂಧ. ಈ ಕರ್ಮವು ದ್ರವ್ಯ ಹಾಗೂ ಗುಣ ಇವೆರಡಕ್ಕಿಂತಲೂ ಬೇರೆಯಾಗಿದೆ. ಗುಣದಂತೆಯೇ ಕರ್ಮವು ದ್ರವ್ಯವನ್ನಾಶ್ರಯಿಸಿದ್ದರೂ ಅದರಂತೆ ನಿತ್ಯವಲ್ಲ; ಪಾಪ-ಪುಣ್ಯಗಳಿಗೆ ಅಸಾಧಾರಣ ಕಾರಣವಾಗಿರುವುದೇ ಕರ್ಮ.

ಇವರ ಸಾಧನ ಮಾರ್ಗ ಬಹುಪಾಲು ವಿಶಿಷ್ಟಾದ್ವೈತವನ್ನೇ ಹೋಲುತ್ತದೆ. ಶ್ರವಣ, ಮನನ, ನಿಧಿಧ್ಯಾಸನದಿಂದ ಪರಮಾತ್ಮನಿಗೂ ನಮಗೂ ಇರುವ ತಾರತಮ್ಯಜ್ಞಾನವನ್ನು ಅರಿಯುವುದಲ್ಲದೆ ಪಂಚವಿಧ ಭೇದಗಳನ್ನು ಅರಿಯುವುದೇ ಸಾಧನದ ಮುಖ್ಯ ವಿಚಾರ.

(ಜೀವ-ಈಶ್ವರಭೇದ, ಜಡ ಈಶ್ವರಭೇದ, ಜೀವ-ಜೀವರಲ್ಲಿಭೇದ, ಜಡ-ಜೀವರಲ್ಲಿಭೇದ, ಜಡ-ಜಡವಸ್ತುಗಳಲ್ಲಿ ಭೇದ- ಹೀಗೆ ಇವು ಭೇದಪಂಚಕ) ವೇದವಿಹಿತವಾದ ಕರ್ಮಾನುಷ್ಠಾನವನ್ನು ಮಾಡುತ್ತಾ ಭಗವಂತನಲ್ಲಿ ಭಕ್ತಿಯನ್ನು ಬೆಳೆಸಿಕೊಳ್ಳಬೇಕು. ಇದರಿಂದ ಪರಮಾತ್ಮನ ಅನುಗ್ರಹದ ಮೂಲಕವೇ ಮೋಕ್ಷವು ಲಭಿಸುತ್ತದೆ. ಭಕ್ತಿ ಮಾತ್ರವಲ್ಲದೆ ಪ್ರಪತ್ತಿ, ಶಾಸ್ತ್ರಶ್ರವಣ ಮುಂತಾದ ಇಪ್ಪತ್ತೊಂದು ಸಾಧನಗಳನ್ನು ಹೇಳಲಾಗಿದೆ.

ಮಾಧ್ವದರ್ಶನದಲ್ಲಿ ಜೀವಾತ್ಮರ ಸ್ವರೂಪದಲ್ಲೇ ತಾರತಮ್ಯವಿರುವದರಿಂದ ಮುಕ್ತಿಯ ಅವಸ್ಥೆಯಲ್ಲಿಯೂ ಅವರ ಆನಂದದಲ್ಲಿಯೂ ತಾರತಮ್ಯವಿದೆ. ದುಃಖದ ಗಂಧವೂ ಇಲ್ಲದ ಪೂರ್ಣ ಆನಂದದಾವಸ್ಥೆಯಿದು. ಈ ಸ್ಥಿತಿಯಲ್ಲಿ ಪರಮಾತ್ಮನು ಅನುಭವಿಸುವ ಎಲ್ಲ ಭೋಗಗಳನ್ನು ಜೀವಾತ್ಮ ಅನುಭವಿಸುತ್ತಾನೆ. ಆದರೆ ಈಶ್ವರನ ಜ್ಞಾನ ಮತ್ತು ಆನಂದಗಳಿಗೆ ಹೋಲಿಸಿದರೆ ಜೀವಾತ್ಮನ ಜ್ಞಾನ ಮತ್ತು ಆನಂದಗಳು ಪರಿಮಿತ. ಈ ಮತದಲ್ಲಿ ಸಾಯುಜ್ಯವೇ ಎಲ್ಲಾ ಮುಕ್ತಿಗಳಿಗಿಂತಲೂ ಶ್ರೇಷ್ಠವಾಗಿದೆ. ಸಾಯುಜ್ಯವೆಂದರೆ ಭಗವಂತನಲ್ಲಿ ಪ್ರವೇಶಿಸಿ, ಆತನ ಶರೀರದ ಮೂಲಕ ಆನಂದವನ್ನನುಭವಿಸುವುದೇ ಆಗಿದೆ.

ಮಾಯಿದೇವನ ವೀರಶೈವದರ್ಶನದೊಂದಿಗೆ ಮಾಧ್ವದರ್ಶನವನ್ನು ಹೋಲಿಸಿ ನೋಡಿದರೆ ಮೂಲತಃ ಇವು ಭಿನ್ನವಾದುವೇ ಎಂದೆನಿಸುವುದರಲ್ಲಿ ಸಂದೇಹವಿಲ್ಲ. ವಿವರಗಳನ್ನು ನೋಡಿದಾಗ ಕೆಲವು ಸಾದೃಶ್ಯ-ವೈದೃಶ್ಯಗಳು ಕಾಣುತ್ತವೆ. ವೀರಶೈವವು ವೇದಗಳ ಕಲೆಭಾಗಗಳನ್ನು ಮಾತ್ರ ಆಧರಿಸಿದರೆ, ಮಾಧ್ವದರ್ಶನವು ಸಂಪೂರ್ಣವಾಗಿ ವೇದಗಳನ್ನೇ ತಳಹದಿಯನ್ನಾಗಿ ಉಳ್ಳುದಾಗಿದೆ. ಎರಡೂ ಸಿದ್ಧಾಂತಗಳು ಪ್ರಪಂಚ ಸತ್ಯ ಎಂದು ಅಂಗೀಕರಿಸಿ ಸಾಧನೆ, ಆ ಸಾಧನೆಗೆ ಭಕ್ತಿ ಅಗತ್ಯ ಎಂದೂ ಹೇಳಿವೆ. ಇಬ್ಬರೂ ಏಕದೈವವಾದಿ (ಶ್ರೀಹರಿ-ಶಿವ)ಗಳೇ ಆಗಿದ್ದಾರೆ. ವರ್ಣಾಶ್ರಮಧರ್ಮ ಪರಿಪಾಲಿಸಬೇಡ ಎಂದು ಒಬ್ಬರು, ಬೇಕು ಎಂದು ಮತ್ತೊಬ್ಬರು ಹೇಳುತ್ತಾರೆ. ವೀರಶೈವ ಷಟ್‌ಸ್ಥಲಾತ್ಮಕ ಷಡ್ವಿಧಭಕ್ತಿಗಳನ್ನು ನಿರೂಪಿಸಿದರೆ, ಮಾಧ್ವರು ನವವಿಧಭಕ್ತಿಗಳನ್ನು ಹೇಳುತ್ತಾರೆ. ಮಾಧ್ವರ ಪ್ರಕಾರ ಭಕ್ತರು ಜ್ಞಾನಿಗಳು ಶ್ರೇಷ್ಠರೇ ಆದರೂ, ಪೂಜ್ಯರಾದರೂ ಅವರೇ ದೇವರಲ್ಲ. ಅವರು ಅಂತರ್ಯಾಮಿಯಾಗಿದ್ದು ಸರ್ವವ್ಯಾಪಾರಗಳನ್ನು ನಡೆಸುವವನು ದೇವರು. ವೀರಶೈವರಪ್ರಕಾರ ಸ್ಥಾವರಕ್ಕಿಂತ ಜಂಗಮ ಶ್ರೇಷ್ಠ. ಜಂಗಮನು ಜಗದೀಶ್ವರ. ಶಿವದೀಕ್ಷೆ ಪಡೆದವರೆಲ್ಲ ವೀರಶೈವರಲ್ಲಿ ಸಮಾನರು. ಆದರೆ ಮಾಧ್ವರಲ್ಲಿ ವೈಷ್ಣವದೀಕ್ಷೆ ಉಳ್ಳವರೆಲ್ಲ ಸಮಾನರಲ್ಲ. ಅವರ ಭಕ್ತಿ-ಜ್ಞಾನ ಸಾಧನಗಳಲ್ಲಿ ವ್ಯತ್ಯಾಸವಿದೆ.

ವೀರಶೈವ ಪ್ರಕಾರ ಜೀವ ಚಿದ್ರೂಪಿಯಾದರೂ ಮಲತ್ರಯದಿಂದ ಬಂಧಿತ. ಜೀವಾತ್ಮ ವಸ್ತುತಃ ಶಿವಸ್ವರೂಪಿಯೇ ಆದರೂ ಶಕ್ತಿ ಸಂಕೋಚದಿಂದ ಜನನಮರಣವುಳ್ಳ ಸಂಸಾರಿಯಾದನು. ಶಕ್ತಿವಿಕಾಸದಿಂದ ತನ್ನ ನಿಜರೂಪವನ್ನು ಪಡೆದು ಶಿವನೇ ಆಗುತ್ತಾನೆ. ಮಾಧ್ವರ ಪ್ರಕಾರ ಜೀವ ಚಿದಾನಂದಸ್ವರೂಪವುಳ್ಳವನೇ ಆದರೂ ಆವನ ಚಿದಾನಂದಸ್ವರೂಪಕ್ಕೂ ಶ್ರೀಹರಿಯಸ್ವರೂಪಕ್ಕೂ ತುಂಬ ವ್ಯತ್ಯಾಸವಿದೆ. ಜೀವ ಈಶ್ವರನ ಪ್ರತಿಬಿಂಬಸ್ವರೂಪಿ; ಅವನ ಅಧೀನ, ಯಾವಾಗಲೂ ವಿಮುಕ್ತಿಯಲ್ಲೂ ಕೂಡ.[೧೧೬] ಹೀಗೆ ಈ ಎರಡೂ ಸಿದ್ಧಾಂತಗಳಲ್ಲಿ ಸಾಮ್ಯವೈಷಮ್ಯ ಅಥವಾ ಸಾದೃಶ್ಯ ವೈದೃಶ್ಯಗಳೆರಡೂ ಉಂಟೆಂಬುದು ಈ ಸಮೀಕ್ಷೆಯಿಂದ ತಿಳಿಯಬಹುದಾಗಿದೆ.

ಇಲ್ಲಿಯವರೆಗೆ ಮುಖ್ಯದರ್ಶನಗಳನ್ನು ಶಿವಾನುಭವಸೂತ್ರದ ಹಿನ್ನೆಲೆಯಲ್ಲಿ ವಿವರಿಸಿದ್ದಾಯ್ತು. ಇನ್ನು ಮುಂದೆ ಶೈವದರ್ಶನಗಳಲ್ಲಿ ಮಾಯಿದೇವನ ನಿರ್ಣಯವೈಶಿಷ್ಟ್ಯವನ್ನು ಕಾಣಬಹುದು.

ನಕುಲೀಶಮತದಲ್ಲಿ ಜೀವತ್ಮರಕರ್ಮಗಳನ್ನು ಅಪೇಕ್ಷಿಸದೆಯೇ ಈಶ್ವರನು ಸ್ವಾತಂತ್ರ್ಯದಿಂದಲೇ ವಿಷಮವಾದ ಈ ಪ್ರಪಂಚವನ್ನು ಸೃಷ್ಟಿಸುತ್ತಾನೆ.[೧೧೭] ಮುಕ್ತಿಯಲ್ಲೂ ಜೀವೇಶ್ವರರಿಗೆ ಭೇದವೇ ಇರುತ್ತದೆ, 'ಮುಕ್ತಃ ಶಿವಸಮೋಭವೇತ್' ಎಂಬಂತೆ ಶಿವಸಮಾನ ರೂಪವನ್ನೂ ಪಡೆಯುವುದೇ ಈ ದರ್ಶನದಲ್ಲಿ ಮುಕ್ತಿ. ಪಾಶುಪತದರ್ಶನ ಭೇದಾಭೇದವನ್ನು ನಿರೂಪಿಸುತ್ತದೆ. ಪಶು-ಪತಿ-ಪಾಶ ಭೇದದಿಂದ ತತ್ತ್ವವು ಮೂರು ಬಗೆಯಾಗಿ ಅಂಗೀಕೃತವಾಗಿದೆ. ಆದುದರಿಂದಲೇ ಇದನ್ನು ತ್ರಿಕಸಿದ್ಧಾಂತವೆಂದು ಕರೆಯುತ್ತಾರೆ.[೧೧೮] ಇದರಲ್ಲಿ ಮುಕ್ತಿಯಲ್ಲೂ ಜೀವನಿಗೆ ಈಶ್ವರನೊಡನೆ ಭೇದವೂ ಅಭೇದವೂ ಇರುತ್ತವೆ. ಆದರೆ ಪೂರ್ಣ ಅಭೇದವಿರುವದಿಲ್ಲ. ಶೈವಪರಿಭಾಷೆಯ[೧೧೯] ಕೊನೆಯ ಮುಕ್ತಿ ಪ್ರಕರಣದಲ್ಲಿ ಈಷದ್ಭೇದ ಗರ್ಭಿತವಾದ ಅಭೇದವೇ ಐಕ್ಯವೆಂದು ಸ್ಪಷ್ಟವಾಗಿ ಹೇಳಲಾಗಿದೆ. ಹೀಗೆಯೇ ತತ್ತ್ವ ಪ್ರಕಾಶದಲ್ಲಿ[೧೨೦] 'ಮುಕ್ತಾತ್ಮನೋಽಪಿ ಶಿವಾ ಏವ, ಕಿಂತು ಏತೇ ತತ್ಪ್ರಸಾದತೋ, ಮುಕ್ತಾಃ ಸೋಽನಾದಿ ಮುಕ್ತ ಏಕಃ' ಎಂದು ಹೇಳಿರುವುದರಿಂದ ಮುಕ್ತರೂ ಶಿವನೇ ಆದರೂ ಅವನ ಪ್ರಸಾದದಿಂದ ಮುಕ್ತರಾಗಿರುವರೆಂದೂ ಅನಾದಿಕಾಲದಿಂದಲೂ ಮುಕ್ತನಾದ ಶಿವನೊಬ್ಬನು ಬೇರೆ ಇರುವನೆಂದು ಹೇಳಿದೆ. ಹೀಗೆ ಪಾಶುಪತದಲ್ಲಿ ಶಿವನಿಗೂ ಮುಕ್ತರಿಗೂ ಭೇದಾಭೇದವೇ ಅಂಗೀಕೃತವಾಗಿದ್ದು, ಪೂರ್ಣ ಅಭೇದವು ಸಂಭವಿಸುವುದಿಲ್ಲ.

---

೧೧೬. ಅನ್ಯೋನ್ಯಪ್ರಾರ್ಥಕಂ ದ್ವೈತಂ ಸಮಸಂಯೋಗಯೋಸ್ತಯೋಃ।
ಕಃ ಕಂ ಭಜತಿ ಭಕ್ತ್ಯಾ ಸಾ ಭಕ್ತಿರದ್ವೈತಗಾ ನ ಹಿ॥
ಅದ್ವೈತ ಪದರೂಢಾ ಯಾ ಭಕ್ತಿರದ್ವೈತಲಕ್ಷಣಾ।
ಸೈವಾದ್ವೈತಾಭಿಧಾ ಭಕ್ತಿರನ್ಯಾ ಕೇವಲ ಕಲ್ಪಿತಾ॥ ಶಿವಾನುಭವಸೂತ್ರಂ, ಅಧಿಕರಣ ೮, ಶ್ಲೋಕ ೪೫, ೪೭.

೧೧೭. ಜೀವಿಗಳ ಸುಖ-ದುಃಖಗಳಿಗೆ ಅವರವರ ಕರ್ಮ ಕಾರಣವಲ್ಲ; ಈಶ್ವರನೇ ಕಾರಣ - ಎಂದು ಹೇಳುವುದಾದರೆ ಈಶ್ವರನಲ್ಲಿ ಎರಡು ದೋಷಗಳಿವೆ ಎಂದು ಒಪ್ಪಿಕೊಳ್ಳಬೇಕು. ಕೆಲವರು ಸುಖಿಗಳಾಗಿರುವುದರಿಂದ, ಮತ್ತೆ ಕೆಲವರು ದುಃಖಿಗಳಾಗಿರುವದರಿಂದ, ಈಶ್ವರನು ಕೆಲವರ ಬಗೆಗೆ ಪಕ್ಷಪಾತದಿಂದಲೂ, ಕೆಲವರ ಬಗೆಗೆ ನಿಷ್ಕರುಣೆಯಿಂದಲೂ ವರ್ತಿಸುತ್ತಾನೆ ಎಂದು ಹೇಳಬೇಕಾಗುತ್ತದೆ. ಹೀಗೆ ಪಕ್ಷಪಾತ ಮತ್ತು ನಿರ್ದಯೆ ಈ ಎರಡು ದೋಷಗಳಿಂದ ಕೂಡಿದ ಈಶ್ವರನನ್ನು ಅಂಗೀಕರಿಸುವದದರೂ ಹೇಗೆ? ಆದ್ದರಿಂದ ಈ ನಕುಲೀಶದರ್ಶನ ಸಮಂಜಸವಲ್ಲವೆಂದು ಉಳಿದ ಶೈವದರ್ಶನದವರ ಅಭಿಪ್ರಾಯ.

೧೧೮. ಡಾ. ಎಚ್.ಪಿ. ಮಲ್ಲೇದೇವರು (ಅನು) ಬಿ.ಎಸ್. ಪರ್ವತರಾಜು, 'ವೀರಶೈವಧರ್ಮ ಮತ್ತು ಶೈವಸಿದ್ಧಾಂತ' ಅರ್ಚನ, ಪು. ೬೨೫ (೧೯೮೪).

೧೧೯. ಶೈವಪರಿಭಾಷಾ, ಪು. ೮೫ (೧೯೨೮) ಶ್ರೀ ಸೂರ್ಯ ಶಿವದೇವ ಕೊಟ್ಟ ಶೈವಾಗಮಸಂಘ ಪರಿಪಾಲನ.

೧೨೦. ತತ್ವಪ್ರಕಾಶಿಕಾ - ೨.

ಮುಕ್ತ್ಯಾವಸ್ಥೆಯಲ್ಲಿ ಜೀವಬ್ರಹ್ಮಂಗೆ ಅಭೇದವನ್ನು ಹೇಳುವುದೇ ವೀರಶೈವ ಸಿದ್ಧಾಂತಕ್ಕೆ ಸಮ್ಮತ. ವಿವರ್ತವಾದವಂತೂ ಶೈವದರ್ಶನದಲ್ಲಿ ಯಾರಿಂದಲೂ ಅಂಗೀಕೃತವಾಗಿಲ್ಲವೆಂಬುದು ವಿಸ್ಮಯವೆನಿಸಿದೆ.[೧೨೧] ಕಾಶ್ಮೀರ ಶೈವಮತವೂ ಸಹ ಮುಕ್ತಿಯಲ್ಲಿ ಅಭೇದವನ್ನು ಅಂಗೀಕರಿಸುತ್ತದೆ. ತತ್ತ್ವಸ್ವರೂಪವನ್ನು ನಿರೂಪಿಸುವ ವಿಷಯದಲ್ಲಿ ಎರಡು ಮತಗಳಿಗೂ ಸಾಮಾನ್ಯವಾಗಿ ಸಾಮ್ಯವಿದೆ. ಕಾಶ್ಮೀರಶೈವಮತದಲ್ಲಿ ೩೬ ತತ್ತ್ವಗಳನ್ನು ಒಪ್ಪಲಾಗಿದೆ. ಜಗತ್‌ಸೃಷ್ಟಿಗೆ ಶಿವನು ನಿಮಿತ್ತಕಾರಣನಾದರೆ ಶಕ್ತಿ ಉಪಾದಾನ ಕಾರಣವೆಂಬ ನಿಷ್ಕರ್ಷೆಯಿದೆ.[೧೨೨] ಅದ್ವೈತ ವೇದಾಂತದಂತೆ ಕಾಶ್ಮೀರಶೈವಮತದಲ್ಲೂ ಜ್ಞಾನದಿಂದಲೇ ಮುಕ್ತಿ ನಿಶ್ಚಿತವೆನಿಸಿದೆ. ೩೬ ತತ್ತ್ವಗಳಲ್ಲಿ ಮೊದಲನೆಯದಾದ ಶಿವತತ್ತ್ವವೇ ಮಾಯಾಶಕ್ತಿಯಲ್ಲಿ ಪ್ರವೇಶಿಸಿ ಜೀವನೆನಿಸಿರುವುದರಿಂದ ಜೀವನು ಶಿವೋऽಹಂಭಾವವನ್ನು ನಿತ್ಯವೂ ಸ್ಮರಣ ಮಾಡುತ್ತಿರಬೇಕು. ಈ ಬಗೆಯ ಪ್ರತ್ಯಭಿಜ್ಞಾ ಬಲದಿಂದ ಶಿವಜ್ಞಾನವನ್ನು ಪಡೆದು ಜೀವನು ಶಿವಾಭೇದವನ್ನು ಹೊಂದುವನೆಂದು ಕಾಶ್ಮೀರಶೈವಮತವು ಬೋಧಿಸುತ್ತದೆ. ಆದುದರಿಂದಲೇ ಇದನ್ನು ಪ್ರತ್ಯಭಿಜ್ಞಾದರ್ಶನವೆಂದು ಕರೆಯಲಾಗಿದೆ.[೧೨೩]

ಶೈವದರ್ಶನದಿಂದ ವಿಸ್ತಾರಗೊಂಡ ವೀರಶೈವದರ್ಶನದಲ್ಲಿ ಸಚ್ಚಿದಾನಂದ ಸ್ವರೂಪನೂ ಮೂರ್ತಾಮೂರ್ತಸ್ವರೂಪನೂ ಆದ ಪರಮಾತ್ಮನೊಬ್ಬನೇ ಪರಮಾರ್ಥವೆನಿಸಿರುವನು. ಅವನಲ್ಲಿ ಶಕ್ತಿಯು ಸಚ್ಚಿದಾನಂದ ಅನುಭವ ರೂಪವಾಗಿ ನೆಲಸಿರುವುದು. ಇದನ್ನು ಚಿಚ್ಛಕ್ತಿಯೆಂದೂ ಸತ್ಯಜ್ಞಾನಾನಂದಗಳ ವಿಮರ್ಶಾತ್ಮಕವಾದ ವಿಮರ್ಶ ಶಕ್ತಿಯೆಂದೂ ಮಾಯಿದೇವ ಹೇಳುತ್ತಾನೆ.[೧೨೪] ಇದು ಅವನ ಪ್ರಾಣಸ್ವರೂಪವಾದ್ದರಿಂದ ಸಹಜಧರ್ಮವೆನಿಸಿದೆ. ಈ ಶಕ್ತಿಯ ಒಂದಂಶವು ಅವನ ಇಚ್ಛೆಯಂತೆ ಅವನ ವಿನೋದಕ್ಕಾಗಿ ಜಡರೂಪದಿಂದ ಹೊರಪಡುವುದು. ಪೂಜ್ಯಪೂಜಕ ಲೀಲೆಯ ವಿನೋದಕ್ಕಾಗಿ ಪರಮಾತ್ಮನು ಈ ಜಡಶಕ್ತಿಯಲ್ಲಿ ಪ್ರವೇಶಿಸಿ ೩೬ ತತ್ತ್ವಗಳಾಗಿ ಪರಿಣಮಿಸುವನು. ಆದುದರಿಂದ ವೀರಶೈವಸಿದ್ಧಾಂತದಲ್ಲಿ ಕೇವಲ ಶಿವನಿಗಾಗಲಿ ಕೇವಲ ಶಕ್ತಿಗಾಗಲಿ ಜಗದ್‌ವ್ಯಾಪಾರ ನಿರ್ವಾಹವು ಸಂಬಂಧಿಸದೆ ಶಕ್ತಿ ವಿಶಿಷ್ಟ ಪರಮಾತ್ಮನಿಗೇ ಅದು ಸಂಬಂಧಿಸಿದೆ. ಪರಮಾತ್ಮನು ಮೂರ್ತಸ್ಥಿತಿಯಲ್ಲೂ ಅಮೂರ್ತಸ್ಥಿತಿಯಲ್ಲೂ ಉಭಯರೂಪದಲ್ಲೂ ಇರುವನೆಂಬುದು ಇಲ್ಲಿ ಒಪ್ಪಿತ್ತದೆ.ಅಮೂರ್ತ ಸ್ಥಿತಿಯಲ್ಲಿ ಅವನು ಸ್ವಯಂಭುವಾಗಿದ್ದು ತನ್ನ ಶಕ್ತ್ಯಂಶದಿಂದ ದಿವ್ಯ ಮೂರ್ತಸ್ಥಿತಿಯನ್ನು ಹೊಂದಿ ಲೀಲಾವಿಭೂತಿಯನ್ನು ನಡೆಸುತ್ತಿರುವನು. ಕಾಶ್ಮೀರ ಶೈವಮತದಲ್ಲಿ ಉಪಾದಾನ ಕಾರಣವಾದ ಶಕ್ತಿಗೆ ಹೆಚ್ಚು ಪ್ರಾಶಸ್ತ್ಯದೊರಕಿದೆ.[೧೨೫] ಈ ಶಕ್ತಿಯ ಪ್ರಭಾವದಿಂದಲೇ ನಿಮಿತ್ತ ಕಾರಣನಾದ ಶಿವನಿಗೆ ಪೂಜ್ಯತೆ ಗೌರವಗಳು ಸಂಭವಿಸುತ್ತವೆ. ಇದರಿಂದ ಶಾಕ್ತರ ಪ್ರಭಾವ ಕಾಶ್ಮೀರಶೈವದ ಮೇಲಾದಂತೆ ತೋರುತ್ತದೆ.

---

೧೨೧. H.J. Peit (195) A Logical presentation of the Saiva Siddhanta Philosophy, p. 72.

೧೨೨. ಸ ಏವ ವಿಶ್ವಮೇಷಿತುಂಜ್ಞಾತುಂ ಕರ್ತುಂ ಚೋನ್ಮುಖೋ ಭವನ್।
ಶಕ್ತಿಸ್ವಾಭಾವಃ ವ್ಯಥಿತೋಽಹೃದಯತ್ರಿಕೋಣಮಧುಮಾಂಸಲೋಲ್ಲಾಸಃ॥ ಮಹಾರ್ಥಮಂಜರೀ, ಪು. ४೦.

೧೨೩. "ಗ್ರಹಣ ಸ್ಮರಣಯೋಃ ಐಕ್ಯಂ ಪ್ರತ್ಯಭಿಜ್ಞಾ"- ಪ್ರತ್ಯಭಿಜ್ಞಾಹೃದಯಂ (ಅನು: ಡಾ. ಜಯದೇವಸಿಂಹ, ೧೯೭೩) ಪು. ೬೬.

೧೨೪. (i) ಶಕ್ತಿರಪ್ರತಿಮಾ ಸಾಕ್ಷಾಚ್ಛಿವೇನ ಸಹಧರ್ಮಿಣೀ, ಶಿವಾನುಭವಸೂತ್ರ, ಅಧಿಕರಣ.೨, ೧೯, ೨೦.
(ii) ಶಾಂತ್ಯತೀತೋತ್ತರಾ ಶಕ್ತಿಃ ಚಿನ್ಮಾತ್ರಾನಂತವಿಗ್ರಹಾ।
ಶಿವಾಸನ್ನಾ ಶಿವಾಸಾಕ್ಷಾತ್ ಶಿವಸ್ಯಾಪಿ ಶಿವಂಕರೀ॥
ಶಾಂತ್ಯತೀತೋತ್ತರಾ ನಾಮ ಚಿಚ್ಛಕ್ತಿರಿತಿ ಕೀರ್ತಿತಾ।
ಶಾಂತ್ಯತೀತಾ ಪರಾಶಕ್ತಿಃ ಶಾಂತಿರೇವಾದಿಸಂಜ್ಞಿತಾ॥ ಶಿವಾನುಭವಸೂತ್ರಂ, ಅಧಿಕರಣ. ೩, ೨೪-೨೬.

೧೨೫. (ಆಂಗ್ಲಮೂಲ) ಜಿ. ರುದ್ರಪ್ಪ (ಅನು) ಪ್ರಧಾನ ಗುರುದತ್ತ, 'ವೀರಶೈವಧರ್ಮ ಮತ್ತು ಕಾಶ್ಮೀರ ಶೈವಧರ್ಮ' ಅರ್ಚನ, ಪು ೮೭೦.

ಜೀವರು ಸಹಜವಾಗಿ ಮಾಯಾರೂಪವಾದ ಮಲದ ಪ್ರಭಾವಕ್ಕೆ ವಶರಾಗಿರುವುದರಿಂದ ಕೇವಲ ಪ್ರತ್ಯಭಿಜ್ಞೆಯಿಂದಲೇ ಅವರು ತಮ್ಮ ಸ್ವರೂಪವನ್ನು ಗಮನಿಸಲಾರರು, ಎಂದು ವೀರಶೈವರು ವಾದಿಸುತ್ತಾರೆ. ತಾವು ಶಿವಸ್ವರೂಪರೇ ಇರುವವೆಂಬ ಪ್ರತ್ಯಭಿಜ್ಞೆ ಅಥವಾ ಸ್ವಸ್ವರೂಪದ ಸ್ಮರಣವು ಜೀವರಿಗೆ ಅವಶ್ಯಕವೆಂದು ಕಾಶ್ಮೀರಶೈವವು ಹೇಳುತ್ತದೆ.[೧೨೬] ಸತಿಪತಿಗಳು ಸಂಸಾರವನ್ನು ನಿರ್ವಹಿಸುತ್ತಿದ್ದರೂ ಸಂಸಾರದಲ್ಲಿ ಅವರಿಗೆ ಪರಸ್ಪರ ಹೊಂದಿಕೆಯುಂಟಾಗಬೇಕಿದ್ದರೆ ನಾನು ಇಂಥವನಿಗೆ ಸತಿಯಾಗಿರುವೆನೆಂಬ ಸ್ಮರಣವು ಹೆಂಗಸಿಗೂ, ತಾನು ಇಂಥವಳಿಗೆ ಪತಿಯಾಗುವೆನೆಂಬ ಸ್ಮರಣವು ಗಂಡಸಿಗೂ ನಿಯತವಾಗಿರಲೇಬೇಕು. ಇದರಿಂದಲೇ ಅವರು ಒಬ್ಬರನ್ನೊಬ್ಬರು ಸಮರಸವಾಗಿ ಹೊಂದಿಕೊಂಡು ಬಾಳುವರು. ಹಾಗೆ ಜೀವನು ಶಿವನೇ ಆದರೂ ಮಲಾವೃತನಾಗಿರುವದರಿಂದ ಶಿವೋಽಹಂ ಭಾವದ ಸ್ಮರಣೆಯಿಂದಲೇ ತನ್ನ ಮಲವನ್ನು ಕಳೆದುಕೊಳ್ಳಬಲ್ಲನು. ಈ ರೀತಿಯಾಗಿ ಜೀವನಿಗೆ ಶಿವವಿಷಯಕವಾದ ನಿತ್ಯಸ್ಮರಣವೇ ಮೋಕ್ಷದ ಪರಮಸಾಧನವೆಂದು ಕಾಶ್ಮೀರಶೈವಮತವು ತಿಳಿಸುತ್ತದೆ.[೧೨೭] ಜೀವನಿಗೆ ತಾನು ವಾಸ್ತವವಾಗಿ ಶಿವನೇ ಆಗಿರುವೆನೆಂಬ ಸ್ಮರಣವೂ ತಾನು ಪಶುವಲ್ಲವೆಂಬ ವಿವೇಕವೇ ಆಗಿರುವುದರಿಂದ ಈ ಪ್ರತ್ಯಭಿಜ್ಞಾರೂಪವಾದ ಸ್ವರೂಪ ಸ್ಮರಣವೂ ಜ್ಞಾನದಲ್ಲಿಯೇ ಸೇರುವುದರಿಂದ ಜ್ಞಾನದಿಂದಲೇ ಮುಕ್ತಿಯೆಂದು ಕಾಶ್ಮೀರಶೈವಮತವು ಅಂಗೀಕರಿಸಿದೆ. ಹೀಗೆ ಜೀವನು ಸ್ವಸ್ವರೂಪದ ಸ್ಮರಣದಿಂದಲೇ ಪಾಶವಿಮುಕ್ತನಾಗಿ ಶಿವಸ್ವಭಾವವನ್ನು ಪಡೆಯುವನೆಂದು ಕಾಶ್ಮೀರಶೈವವು ಬೋಧಿಸುತ್ತದೆ.[೧೨೮] ಮಾಯಿದೇವನ ಪ್ರಕಾರ ವೀರಶೈವಸಿದ್ಧಾಂತದಲ್ಲಿ ಕೇವಲ ಸ್ಮರಣದಿಂದಲೇ ಜೀವರಿಗೆ ಮಲಾವರಣವು ನಿವಾರಣವಾಗಲಾರದು. ಪರಮಾತ್ಮ ಶಕ್ತಿಯೇ ಸಹಜವಾಗಿ ಜೀವರಿಗೆ ಭೇದಭಾವನೆಯನ್ನು ಹುಟ್ಟಿಸಿರುವುದರಿಂದ ಈ ಬಗೆಯ ಅಣುತ್ವಾವರಣವೂ, ಶಕ್ತಿ ಸಂಕೋಚವೂ ಕೇವಲ ಸ್ಮರಣೆಯೊಂದರಿಂದಲೇ ಸಾಧ್ಯವಾಗದು. ಆದುದರಿಂದ ವೀರಶೈವವು, ಶಿವಾನುಗ್ರಹ ರೂಪವಾದ ಭಕ್ತಿಯನ್ನೇ ಮೋಕ್ಷಸಾಧನವೆಂದು ಕರೆದಿದೆ. ಈ ಭಕ್ತಿಯ ಆಚರಣೆಯಿಂದ ಜೀವನಿಗೆ ಒಳಗೂ ಹೊರಗೂ ಶಿವನ ನಿರಂತರ ಸಂಬಂಧವು ಸಂಭವಿಸುತ್ತದೆ. ಆದ್ದರಿಂದಲೇ ಮಾಯಿದೇವನು ಶಿವಾನುಗ್ರಹಕ್ಕೆ ಹೆಚ್ಚಿನ ಮಹತ್ವವಿತ್ತಿದ್ದಾನೆ. ಶತಕತ್ರಯದಲ್ಲಿ ಶಿವಾನುಗ್ರಹ ಕುರಿತು ಹೀಗೆ ಹೇಳಲಾಗಿದೆ:

ಕರುಣಮೆ ಕಾರಣಂ ಬಯಲ ಮಾತಿನ ಮಾಲೆಯ ಗೋಳುಮಂಡೆಯಂ
ತಿರಲರಿವೇತಕಾಚರಣೆಯೇತಕೆ ನಂಬುಗೆಯೇತಕಯ್ಯನಿ-
ನ್ನುರುತರಮಪ್ಪ ಸತ್ಕೃಪೆಯ ಸತ್ಯಮಭೀಷ್ಟ ಪದಾರ್ಥ ಸಿದ್ಧಿಯಂ
ಪರಿಪರಿದೆಯ್ದುವಂಗೆ ಪರಮ ಪ್ರಭುವೇ ಮಹದ್ಯೈಪುರೀಶ್ವರಾ ||[೧೨೯]

ಇನ್ನೊಂದು ಶತಕದಲ್ಲಿ ಕೀಟಭ್ರಮರ ನ್ಯಾಯ ಕುರಿತು ಹೀಗೆ ವಿಮರ್ಶಿಸಲಾಗಿದೆ. 'ಕೀಟಭ್ರಮರವಾಗಲು ಕಾರಣವೇನು? ಭ್ರಮರದ ಶಕ್ತಿಪಾತದಿಂದಲೋ? ತುಂಬಿಯ ಭಾವದಿಂದಲೋ? ತುಂಬಿಯು ಹುಳುವನ್ನು ಕೊಂಡೊಯ್ಯುವುದೋ? ಹುಳುವೆ ತುಂಬಿಯ ಬೆಂಬಳಿವಿಡಿದು ಹೋಗುವುದೋ? ತಿಳಿದು ನೋಡಿದರೆ ತುಂಬಿಯ ಶಕ್ತಿಪಾತ ಗುಣವೆ ಕಾರಣವೆಂಬುದು ಮನದಟ್ಟಾಗುತ್ತದೆ. ಇದರಂತೆ ಮುಕ್ತಿಗೆ ಶಿವನ ಅನುಗ್ರಹಶಕ್ತಿಯ ಕಾರಣವಲ್ಲದೆ ಕೇವಲ ನಂಬುಗೆ

---

೧೨೬. L.N. Sharma (1972) Kashmir Saivism p. 147.

೧೨೭. ಡಾ. ಜಯದೇವಸಿಂಹ (೧೯೭೩) (ಅನು) ಪ್ರತ್ಯಬಿಜ್ಞಾಹೃದಯಮ್, ಪು. ೬೮.

೧೨೮. ಪ್ರತ್ಯಭಿಜ್ಞಾಚ ಭಾತಭಾಸಮಾನ ರೂಪಾನುಸಂಧಾನಾತ್ಮಿಕಾ ಸ ಏವಾಯಂ
ಚೈತ್ರ ಇತಿ ಪ್ರತಿಸಂಧಾನೇನ ಅಭಿಮುಖೀಭೂತೆ ವಸ್ತುವಿಜ್ಞಾನಮ್ । ಈಶ್ವರ ಪ್ರತ್ಯಭಿಜ್ಞಾ. ಕಾರಿಕಾ ೧-೧-೧.

೧೨೯. ಮಹದ್ಯೈಪುರೀಶ್ವರಶತಕ, ೪೨.

ಮುಖ್ಯವಲ್ಲ. ಕರುಣವೇ ಕಾರಣವಲ್ಲದೆ ಅರಿವು ಆಚರಣೆ ನಂಬುಗೆಗಳು ಕಾರಣವಲ್ಲ - ಎಂದು ಮೇಲಿನ ಪದ್ಯದ ಭಾವಾರ್ಥ. ಮಹಾಲಿಂಗದಿಂದ ಹೊರಟ ಪ್ರವೃತ್ತಿಪರವಾದ ಚಿತ್‌ಶಕ್ತಿಯೇ ಗುರುವಿನಿಂದ ದೀಕ್ಷೆಹೊಂದಿ ಭಕ್ತನಾದ ಜೀವನಲ್ಲಿ ಅದೇ ಶಕ್ತಿಯು[೧೩೦] ವೃತ್ತಿಪರವಾಗಿ ಲಿಂಗಾಂಗಸಾಮರಸ್ಯಕ್ಕೆ ಕಾರಣವಾಗುತ್ತದೆ. ಈ ಬಗೆಯ ಮುಕ್ತಿಸಾಧನವನ್ನು, ಶಿವಜೀವೈಕ್ಯರೂಪವಾದ ಸಾಮರಸ್ಯವನ್ನು ಕಾಶ್ಮೀರಶೈವಮತದ ಮೋಕ್ಷದಲ್ಲಿ ನಾವು ಕಾಣಲಾರೆವು. ಅಲ್ಪಶಕ್ತನಾದ ಜೀವನು ಕೇವಲ ಸ್ಮರಣೆಯಿಂದಾಗಲಿ, ಜ್ಞಾನದಿಂದಾಗಲಿ ಮಲಾವರಣವನ್ನು ಕಳೆದುಕೊಂಡು ನಿರ್ಮಲನಾಗಲಾರನು. ಭಕ್ತಿಯ ಪ್ರಭಾವದಿಂದಲೇ ಶಿವೈಕ್ಯಸ್ಥಿತಿಯಲ್ಲಿ ಮುಕ್ತನು ಪೂರ್ಣಶಕ್ತಿವಿಶಿಷ್ಟನೂ ಸ್ವತಂತ್ರನೂ ಆಗುವುದರಿಂದ ವೀರಶೈವಮತವು ಕಾಶ್ಮೀರಶೈವಮತಕ್ಕಿಂತಲೂ ವಿಲಕ್ಷಣವೆನಿಸುತ್ತದೆ.

ತತ್ತ್ವನಿರೂಪಣ ಪ್ರಕ್ರಿಯೆಯಲ್ಲಿ ಕಾಶ್ಮೀರಶೈವಕ್ಕೂ ವೀರಶೈವಮತಕ್ಕೂ ಹೆಚ್ಚು ಭೇದವಿರದಿದ್ದರೂ ಸಾಧನಮಾರ್ಗದಲ್ಲಿ ವೀರಶೈವಮತವು ಕಾಶ್ಮೀರಶೈವಮತದಿಂದ ಪೂರ್ಣ ಭಿನ್ನವಾಗಿ ತನ್ನದೇ ಆದ ಷಟ್‌ಸ್ಥಲೋಪಾಸನವೆಂಬ ಸ್ವತಂತ್ರ ಮಾರ್ಗವನ್ನವಲಂಬಿಸಿದೆ. ಕೇವಲ ಸ್ಮರಣದಿಂದಲೇ ಜೀವಭಾವವೂ, ಮಲಾವರಣವೂ ಹೋಗಲಾರದೆಂದು ವೀರಶೈವದರ್ಶನವು ದೃಢತರವೂ ವೀರ್ಯವತ್ತರವೂ ಆದ ಸಾಧನ ಮಾರ್ಗವನ್ನು ಅವಲಂಬಿಸಿದೆ. ಮಲವು ಪರಮಾತ್ಮನ ಸಂಕುಚಿತ ಶಕ್ತಿಯೇ ಆದುದರಿಂದ ಅಂತಹ ಪ್ರಬಲ ಪಾಶವನ್ನು ಪರಿಹರಿಸಲು ಅದರಷ್ಟೇ ಪ್ರಬಲವೆನಿಸಿದ ಭಕ್ತಿರೂಪವಾದ ಸಾಧನವನ್ನು ಭಕ್ತನು ಪರಮಾತ್ಮನಿಂದಲೇ ಅನುಗ್ರಹರೂಪವಾಗಿ ಪಡೆಯಬೇಕೆಂದು ಮಾಯಿದೇವ ಶತಕತ್ರಯಗಳಲ್ಲಿ ವಿವರಿಸುತ್ತಾನೆ. ಹೀಗೆ ವೀರಶೈವದರ್ಶನದಲ್ಲಿ ಭಕ್ತಿಯೂ, ತತ್ಪ್ರಯುಕ್ತವಾದ ಉಪಾಸನವೂ ಪ್ರಧಾನಸ್ಥಾನದಲ್ಲಿದೆ.

ಸಾಮಾನ್ಯವಾಗಿ ಶೈವದರ್ಶನದಲ್ಲಿ ದಾಕ್ಷಿಣಾತ್ಯಶೈವ, ಕಾಶ್ಮೀರಶೈವ ಎಂಬ ಎರಡು ಬಗೆಯ ಶಾಖೆಗಳನ್ನು ನಾವು ಕಾಣುತ್ತೇವೆ. ಉಳಿದ ಶೈವಶಾಖೆಗಳು ಇವುಗಳಲ್ಲಿ ಯಾವುದಾದರೊಂದರ ಛಾಯೆಯನ್ನು ಅನುಸರಿಸಿಕೊಂಡೇ ಬರುತ್ತವೆ ಎಂಬುದನ್ನು ಅದರಲ್ಲಿ ಹಿಂದೆ ಹೇಳಲಾಗಿದೆ. ಅದರಲ್ಲಿ ಕಾಶ್ಮೀರಶೈವವು ಪ್ರತ್ಯಭಿಜ್ಞೆಯೆಂತಲೂ, ದಾಕ್ಷಿಣಾತ್ಯಶೈವವು ಸಾಮಾನ್ಯವಾಗಿ ಪಾಶುಪತವೆಂತಲೂ ಕರೆಯಿಸಿಕೊಂಡಿವೆ. ವೀರಶೈವದರ್ಶನದಲ್ಲಿ ದಕ್ಷಿಣಾತ್ಯಶೈವದಂತೆಯೇ ಭಕ್ತಿಗೆ ಪ್ರಾಧಾನ್ಯವು ಸಂಭವಿಸುತ್ತದೆ. ಆದರೂ ಭಕ್ತಿಯ ಬೆಳವಣಿಗೆಯ ಕ್ರಮದಲ್ಲಿ ಮಾತ್ರ ದಾಕ್ಷಿಣಾತ್ಯಶೈವಕ್ಕೂ ವೀರಶೈವದರ್ಶನಕ್ಕೂ ಪೂರ್ಣ ಭೇದವಿದೆ. ವೀರಶೈವದ ಭಕ್ತಿ ಮಾರ್ಗದಲ್ಲಿ ಜೀವನು ಕ್ರಮಕ್ರಮವಾಗಿ ತನ್ನ ಸಹಜವಾದ ಭೇದ ದೃಷ್ಟಿಯನ್ನು ತೊರೆದು ಕೊನೆಯಂತಸ್ತಿನಲ್ಲಿ ತನ್ನ ಅರಿವಿಲ್ಲದೆ ಅಭೇದಾನಂದವನ್ನು ಅನುಭವಿಸುತ್ತಾನೆ. ಜೀವನು ಮಲಗಳ ತೀವ್ರಬಾಧೆಯನ್ನು ಕ್ರಮವಾಗಿ ಪರಿಹರಿಸಿಕೊಂಡು ನಿರ್ಮಲನಾಗುವನು, ಅವನು ಭಕ್ತಸ್ಥಲದಿಂದ ಆರಂಭಿಸಿ ಪ್ರಾಣಲಿಂಗಿಸ್ಥಲದ ವೇಳೆಗೆ ಭೇದವನ್ನು ಕಡಿಮೆ ಮಾಡಿಕೊಂಡು ಪ್ರಾಣಲಿಂಗದ ಅನುಭವವನ್ನು ಪಡೆದು ಶರಣಸ್ಥಿತಿಯ ಆನಂದದಲ್ಲಿ ಬೆರೆಯುತ್ತಾನೆ. ಇಂಥ ಸ್ಥಿತಿಯಲ್ಲಿ ಆತ್ಮಾರ್ಪಣಪೂರ್ವಕವಾಗಿ ಆನಂದಾನುಭವದಲ್ಲಿ ಮಗ್ನನಾಗಿ ಜೀವನು ಭೇದವಿದ್ದರೂ ತಿಳಿಯದವನಾಗುತ್ತಾನೆ. ಐಕ್ಯಸ್ಥಿತಿಯಲ್ಲಿ ಆ ಬಗೆಯ ಭೇದಜ್ಞಾನವೂ ಇಲ್ಲದಂತಾಗಿ ಅವನು ಜೀವಭಾವದ ಬದಲಾಗಿ ಶಿವಭಾವದಲ್ಲಿ ನಿಂತು ದಗ್ಧಪಟದಂತೆ ನಿರಂಜನನೆನಿಸುತ್ತಾನೆ.[೧೩೧] ಈ ಬಗೆಯ ಮಲ ನಿವೃತ್ತಿ ಕ್ರಮವನ್ನೂ,

---

೧೩೦. ತುಂಬಿಯ ಶಕ್ತಿಪಾತಗುಣದಿಂ ಪುಳು ತುಂಬಿಯದಾಯ್ತೊ ತನ್ನಭಾ
ವಂಬಲಿದಾಯ್ತೊ ತುಂಬಿ ಪುಳುವಂ ಪಿಡಿದೊಯ್ಯುದೊ ತಾನೆಪೋದುದೋ
ಬೆಂಬಳಿಗೊಂಡು ಪೇಳ್ವೊಡೆಯನುಗ್ರಹಶಕ್ತಿಯ ಮುಕ್ತಿಕಾರಣಂ
ನಂಬುಗೆ ಎಂಬುದೇನು ಪರಮಪ್ರಭುವೇ ಮಹದೈಪುರೀಶ್ವರಾ, ಅದೇ, ೪೦.

೧೩೧. ಪ್ರೊ. ಶಿ.ಶಿ. ಬಸವನಾಳ (೧೯೪೮) ವೀರಶೈವತತ್ತ್ವಪ್ರಕಾಶ, ಪು. ೧೮೪.

ಜೀವನಲ್ಲಿ ಜೀವಭಾವ ಹೋಗಿ ಶಿವಭಾವ ನೆಲಸುವುದನ್ನೂ ದಾಕ್ಷಿಣಾತ್ಯ ಶೈವಮತದಲ್ಲಿ ನಾವು ಕಾಣಲಾರೆವು. ಅಲ್ಲಿಯೂ ಭಕ್ತಿಯ ಪ್ರಭಾವವೇನೋ ಇರುತ್ತದೆ. ಆದರೂ ಷಟ್‌ಸ್ಥಲದ ವಿಕಾಸಕ್ರಮವೂ ನಿತ್ಯ ಯಜ್ಞದಲ್ಲಿ ಅದರ ಅನುಷ್ಠಾನಕ್ರಮವೂ ದಾಕ್ಷಿಣಾತ್ಯ ಶೈವದಲ್ಲಿ ಕಾಣಬರುವುದಿಲ್ಲ. ಜೀವನು ಸ್ವಸ್ವರೂಪವನ್ನು ಸಮಾಧಿಯಲ್ಲಿ ಮಾತ್ರ ಅನುಭವಿಸಿದ್ದರೂ ಅನಂತರ ಅವನು ಶಿವನ ನಿತ್ಯ ಸಂಪರ್ಕವಿಲ್ಲದಿದ್ದರೆ ಮಲದ ಪ್ರಭಾವಕ್ಕೆ ಪುನಃ ವಶನಾಗುವನು.[೧೩೨] ದೇಹಕ್ಕೆ ಶಿವನ ನಿತ್ಯಸಂಬಂಧವೂ ಮನಸ್ಸಿಗೆ ನಿತ್ಯ ಸ್ಮರಣವೂ ಆಗದೆ ಮಲಪಾಶವು ಪೂರ್ಣವಾಗಿ ಹರಿಯದು. ಪಾಶವಾದರೋ ಆಶೆಯ ರೂಪದಲ್ಲಿ ಶಿವಪ್ರಕಾಶವನ್ನು ಮುಚ್ಚಿರುತ್ತದೆ. ಶಿವನು ಜ್ಞಾನಪ್ರಕಾಶನಾದುದರಿಂದ ಆ ಪ್ರಕಾಶದ ಸಂಪರ್ಕವಿಲ್ಲದೆ ಮನದ ಮುಂದಣ ವ್ಯಾಮೋಹವೆಂಬ ಆಶಾಪಾಶವು ನಾಶವಾಗದು. ವ್ಯಾಮೋಹಾಭಿಮಾನ ರೂಪವಾದ ಆಶೆಯೇ ನಮಗೆ ಪಾಶವಾಗಿರುವುದು. ಪರಮಾತ್ಮನ ಕಡೆಗೆ ನಮ್ಮ ಆಶೆ ನಿಯತವಾಗಿ ತಿರುಗಿದಾಗಲೇ ಎಲ್ಲೆಲ್ಲೂ ಅವನೇ ಕಾಣತೊಡಗುವನು.

ಲಿಂಗದೊಳಿರ್ದ್ದು ಲಿಂಗಮನೆ ತಾಳ್ದು ನಿರಂತರಲಿಂಗ ಪೂಜೆಯಂ
ಲಿಂಗದಿನೊಲ್ದು ವಿಸ್ತರಿಸಿ ಲಿಂಗಕ್ಕೆ ಲಿಂಗಮನರ್ಪಿಸುತ್ತುಮಾ-
ಲಿಂಗಪದಾರ್ಥಮಂ ಸವಿದು ಲಿಂಗಸುಖಾಸ್ಪದನಾಗಿ ರಾಜಿಪಂ
ಲಿಂಗನಿಜೈಕ್ಯನಯ್ಯ ಪರಮಪ್ರಭುವೇ ಮಹದೈಪುರೀಶ್ವರಾ ।[೧೩೩]

ಈ ಬಗೆಯ ಭಾವನೆ ನಮ್ಮಲ್ಲಿ ಹುಟ್ಟಲಿಕ್ಕೂ, ಬೆಳೆಯಲಿಕ್ಕೂ, ಶಿವನ ನಿತ್ಯಾಭಿಯೋಗರೂಪವಾದ ಲಿಂಗಧಾರಣವನ್ನು ವೀರಶೈವದರ್ಶನವು ಜೀವನಿಗೆ ಅವಶ್ಯೋಪಾದೇಯವೆಂದು ಭಾವಿಸಿದೆ. ಇದರಿಂದ ತನ್ನಲ್ಲೂ, ಇತರರಲ್ಲೂ ಕೇವಲ ಶಿವದೃಷ್ಟಿಯೇ ಬೆಳೆಯಲಿಕ್ಕೆ ಅವಕಾಶವಾಗುತ್ತದೆ ಎಂದು ಅದು ನಂಬಿದೆ.

ಶೈವ ಮತದಲ್ಲೂ ಈ ಬಗೆಯ ಶಿವಸಂಬಂಧವಿದ್ದರೂ ಅದು ಶಾಶ್ವತವಾಗಿರುವುದಿಲ್ಲ. ಸ್ಥಾವರಲಿಂಗಗಳನ್ನು ಶೈವರು ಅರ್ಚನೆ ಮಾಡಿದರೂ ಅದರಿಂದ ಶಿವಪ್ರಕಾಶದ ನಿತ್ಯಾಭಿಯೋಗವು ಅವರಿಗೆ ದೊರೆಯುವುದಿಲ್ಲ. ಶಿವನ ನಿತ್ಯಚಿಂತನ ಸ್ಮರಣ ಧ್ಯಾನಗಳಲ್ಲಿಯೇ ಅವರು ಜೀವನವನ್ನು ಕಳೆದು ಕೈಲಾಸದಲ್ಲಿ ಸಾಲೋಕ್ಯ, ಸಾಮೀಪ್ಯ, ಸಾರೂಪ್ಯವೆಂಬ ದಿವ್ಯಲೀಲಾ ವಿಭೂತಿಗಳನ್ನು ಕ್ರಮವಾಗಿ ಅನುಭವಿಸಬೇಕಾಗುವುದು.[೧೩೪] ಕೈಲಾಸದಲ್ಲಿಯೂ ಶಿವನ ಕೈವಲ್ಯಸ್ಥಿತಿಯ ಧ್ಯಾನದಲ್ಲಿ ಇರುತ್ತಲೇ ಕೊನೆಗೆ ಸಾಯುಜ್ಯರೂಪವಾದ ಕೈವಲ್ಯವಿಭೂತಿಯನ್ನು ಪಡೆಯುವರು. ಶೈವಮತದ ಪ್ರಕಾರ ಮುಕ್ತರಿಗೆ ಆನಂದಾನುಭವವಿದ್ದರೂ ವಿಶಿಷ್ಟಾದ್ವೈತಮತದಂತೆ ಆಗಲೂ ಅವರು ಶಿವನ ಕೇವಲಾನಂದ ಸ್ವರೂಪವನ್ನು ಧ್ಯಾನಿಸುತ್ತ ಶಿವೋಪಾಸನದಲ್ಲಿ ನಿರತರಾಗಿರುವರು.[೧೩೫] ಆದರೆ ನಿಷ್ಕಲ ಶಿವನೊಡನೆ ಸಮರಸವಾಗಿ ಬೆರೆತು ಕೈವಲ್ಯ ವಿಭೂತಿಯನ್ನು ಅನುಭವಿಸುವವರೆಗೂ ಜೀವಾತ್ಮನ ಆಶೆ ಪೂರ್ಣವಾಗಿ ಈಡೇರಿದಂತಾಗುವುದಿಲ್ಲ. ಶಿವಲೋಕದಲ್ಲಿ ಶಿವನಂತೆ

---

೧೩೨. ಮುಕ್ತಾತ್ಮನೋಽಪಿ ಶಿವಾಃ ಕಿಂತ್ವೇತೇ ಯತ್ಪ್ರಸಾದತೋ ಮುಕ್ತಾಃ ।
ಸೋಽನಾದಿಮುಕ್ತ ಏಕೋ ವಿಜ್ಞೇಯಃ ಪಂಚಮಂತ್ರತನುಃ ಇತಿ॥ ತತ್ವಪ್ರಕಾಶ - ೧.೬.

೧೩೩. ಮಹದೈಪುರೀಶತಕ, ೫೬.

೧೩೪. "ತತ್ರ ಆದ್ಯಾನ್ ಕಾಲುಷ್ಯಪರಿಪಾಕವತಃ ಪುರುಷಧೌರೇಯಾನ್
ಅಧಿಕಾರಿಯೋಗ್ಯಾನನುಗೃಹ್ಯ ಅನಂತಾದಿ ವಿದ್ಯೇಶ್ವರಾಷ್ಟಪದಂ ಪ್ರಾಪಯತಿ" - ಸರ್ವದರ್ಶನ ಸಂಗ್ರಹ, ೨೬೬.(೧೯೬೬)

೧೩೫. "ರುದ್ರಪದಂ ಗಣೇಶ್ವರಪದಂ ಮೊದಲಾದ ಸಮಸ್ತ ಸಂಪದಂ
ಕ್ಷುದ್ರತರಂ ಶಿವಾಂಗ ಶಿವಲಿಂಗ ನಿಜೈಕ್ಯಸುಖಾಸ್ಪದಂಗೆ. . . .
. . . . . . . . . . . . . . . . . . . . . . . . . . . ॥" ಮಹದೈಪುರೀಶತಕ, ೬೦.

ದಿವ್ಯರೂಪದಲ್ಲೂ, ಅವನ ಸಮೀಪದಲ್ಲೂ, ವಾಸಮಾಡಿದ ಮಾತ್ರಕ್ಕೆ ಶಿವಾನಂದದ ಪೂರ್ಣ ಅನುಭವವಾಗುವುದಿಲ್ಲ. ಶಿವನ ಅಖಂಡಾನಂದಾನುಭವವೂ ಸಾಮರಸ್ಯರೂಪವಾದ ಐಕ್ಯವೊಂದರಿಂದಲೇ ಸಾಧ್ಯವಾಗುವುದು. ಮುಕ್ತನು ಸಾಮರಸ್ಯರೂಪವಾದ ಅಖಂಡಾನಂದವನ್ನು ಅನುಭವಿಸುವವನಾದುದರಿಂದ ಅವನು ಪೂರ್ಣಕಾಮನೂ ಸ್ವತಂತ್ರನೂ ಪರಿಪೂರ್ಣನೂ ಆಗುವನು.[೧೩೬] ಆದುದರಿಂದ ಶೈವಮತದಂತೆ ವೀರಶೈವಮತದಲ್ಲೂ ಭಕ್ತಿಯ ಪ್ರಾಮುಖ್ಯತೆಯಿದ್ದರೂ ಇಲ್ಲಿಯ ಭಕ್ತಿಯ ವಿಕಾಸ ಕ್ರಮವೇ ಬೇರೆಯಾಗಿದೆ. ಭಕ್ತಿಯ ಆಚರಣೆಯಿಂದ ಭಕ್ತನು ಇಲ್ಲಿ ಪಡೆಯುವ ಫಲವೇ ಬೇರೆಯಾಗಿದೆ. ಶೈವಮತದಲ್ಲಿ ಮುಕ್ತನು ಕೈಲಾಸದಲ್ಲಿ ಲೀಲಾವಿಭೂತಿಯನ್ನು ಪಡೆದರೆ ಇಲ್ಲಿ ಮುಕ್ತನು ಕೈವಲ್ಯವಿಭೂತಿಯನ್ನು ಈ ದೇಹದಲ್ಲಿಯೇ ಈ ಇಂದ್ರಿಯಗಳ ಮೂಲಕವೇ ಪಡೆದು ಅನುಭವಿಸಿ ನಿತ್ಯತೃಪ್ತನೂ ನಿರ್ಲಿಪ್ತನೂ ಆಗುವನು. ಹೀಗೆ ದಾಕ್ಷಿಣಾತ್ಯಶೈವ, ಕಾಶ್ಮೀರಶೈವ, ವೀರಶೈವ ಈ ಮೂರು ಮತಗಳಲ್ಲಿಯೂ ಪರಮಾತ್ಮನನ್ನು ಶಿವನೆಂಬ ಹೆಸರಿನಿಂದ ಕರೆದಿರುವುದೊಂದೇ ಇವಕ್ಕಿರುವ ಸಾಮ್ಯವೆನಿಸಿದ್ದರೂ ಸಾಧನ ಮಾರ್ಗದಲ್ಲೂ, ಭಕ್ತಿಯ ಆಚರಣೆಯಲ್ಲೂ ಮಾಯಿದೇವ ಪ್ರತಿಪಾದಿಸುವ ವೀರಶೈವ ಷಟ್‌ಸ್ಥಲದರ್ಶನವು ಇತರ ಶೈವಸಿದ್ಧಾಂತಗಳಿಗಿಂತ ಭಿನ್ನವಾಗಿದೆ.

ಹೀಗೆ ಶೈವದರ್ಶನದಂತೆ ವೀರಶೈವವು ಪ್ರಾಚೀನ ಕಾಲದಿಂದಲೂ ಸ್ವಾವಲಂಬಿಯಾಗಿ ಬೆಳೆದುಬಂದಿರುವುದರಿಂದ ದಾಕ್ಷಿಣಾತ್ಯ ಶೈವದಿಂದಲೇ ವೀರಶೈವ ಮತವು ಭಕ್ತಿಮಾರ್ಗವನ್ನು ಪಡೆಯಿತೋ ಅಥವಾ ವೀರಶೈವದಿಂದಲೇ ದಾಕ್ಷಿಣಾತ್ಯ ಶೈವವು ಇದನ್ನು ಪಡೆಯಿತೋ ಎಂಬುದನ್ನು ನಿಷ್ಕರ್ಷಿಸುವುದು ಸಾಹಸದ ಕೆಲಸ.

ಶೈವದ ಭಕ್ತಿ ಪ್ರಭಾವ ವೀರಶೈವದ ಮೇಲೆ ಬಿದ್ದಿರಬಹುದಾದರೂ ಅದನ್ನದು ಕಟ್ಟಿ ಬೆಳಸಿದ ಕ್ರಮ ಹೊಸತು. ಭಕ್ತಿ ಎಲ್ಲ ದರ್ಶನಗಳಲ್ಲಿ ಸಾಮಾನ್ಯವಾಗಿ ಕಂಡುಬಂದರೂ ವೀರಶೈವ ಅದನ್ನು ಗ್ರಹಿಸಿದ ದೃಷ್ಟಿಕೋನ ಬೇರೆ ರೀತಿಯದ್ದು. ಹೀಗೆ ದಾಕ್ಷಿಣಾತ್ಯ ಶೈವದ ಭಕ್ತಿಪಂಥವನ್ನು, ಕಾಶ್ಮೀರಶೈವದ ಶಿವೋऽಹಂ ಭಾವವನ್ನು ವೀರಶೈವದರ್ಶನವು ತನ್ನಲ್ಲಿ ಹೊಂದಿಸಿಕೊಂಡು ತನ್ನದೇ ಆದ ಕೆಲವು ನಿಲುವುಗಳನ್ನು ತಾಳಿತು. ಕಾಶ್ಮೀರಶೈವದಲ್ಲಿ ಶಿವೋऽಹಂ ಭಾವನೆಯನ್ನು 'ಪ್ರತ್ಯಭಿಜ್ಞೆ'ಯೆಂದು ಕರೆದಿದ್ದರೆ ವೀರಶೈವಮತದಲ್ಲಿ ಇದನ್ನು 'ಭಾವ'ವೆಂದು ಕರೆಯಲಾಗಿದೆ. ಇಲ್ಲಿ ಕರ್ಮ, ಜ್ಞಾನ, ಭಾವ ಈ ಮೂರನ್ನೂ ಮೋಕ್ಷಸಾಧನಗಳೆಂದು ಹೇಳಲಾಗಿದೆ.[೧೩೭] ಹೀಗೆ ಭಾರತದೇಶದ ಮಧ್ಯಭಾಗದಲ್ಲಿ ಪ್ರವರ್ತಿಸಿದ ಈ ದರ್ಶನವು ಉತ್ತರದ ಕಾಶ್ಮೀರಶೈವಮತದಿಂದಲೂ, ದಕ್ಷಿಣದ ಪಾಶುಪತಶೈವದಿಂದಲೂ ಉತ್ತಮಾಂಶಗಳನ್ನು ಸಂಗ್ರಹಿಸಿಕೊಂಡು ವೈಶಿಷ್ಟ್ಯಮಯವಾಗಿ ಸ್ವತಂತ್ರವಾಗಿ ಬೆಳೆದು ಬಂದಿದೆ ಎಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.

---

೧೩೬. ದ್ವೈತ ಭಕ್ತ್ಯಾಹಿ ಸಂಸಾರ ವರ್ಧನಂ ಭಿನ್ನರೂಪತಃ।
ಅಭಿನ್ನರೂಪತೋऽದ್ವೈತಭಕ್ತ್ಯಾ ಸಂಸಾರನಾಶನಂ ॥
ದ್ವೈತಭಕ್ತಿಃ ಪ್ರಪಂಚಾಖ್ಯಾಕೇನಚಿತ್ ಕಲ್ಪಿತಾಮೃಷಾ।
ಅದ್ವೈತಭಕ್ತಿರಚಲಾನಿರ್ವಿಕಲ್ಪಾ ನಿರಂಜನಾ ॥ ಶಿವಾನುಭವಸೂತ್ರಂ, ಅಧಿಕರಣ ೮, ಶ್ಲೋಕ ೪೭, ೪೮.

೧೩೭. (i) ಸ್ಥೂಲಶರೀರ ಸೂಕ್ಷ್ಮತನು ಕಾರಣದೇಹಮನಿಪ್ಪ ಮೂರರೊಳ್
ಮೇಲೆ ಗುರೂಪದಿಷ್ಟ ಶಿವಲಿಂಗ ಮಖಂಡಿತ ನಿತ್ಯಚಿತ್ಪ್ರಕಾ
ಶಾಲಯಮಾಗಿ ತೋರಲು ತನುತ್ರಯದೊಳ್ ತೆರಹಿಲ್ಲದಿರ್ಪ್ಪತ
ಲ್ಲೀಲೆಯ ಶುದ್ಧಪೂಜೆ ಪರಮಪ್ರಭುವೇ ಮಹದೈಪುರೀಶ್ವರಾ ॥ ಮಹದೈಪುರೀಶತಕ, ಪ. ೫೧.
(ii) ಲಿಂಗದೊಳಿಟ್ಟು ದೃಷ್ಟಿ ನಿಜದೃಷ್ಟಿಯೊಳಿಟ್ಟ ಮನಂ ಮನಸ್ಸಿನೊಳ್
ಪಿಂಗದೆ ನಿಂದೆ ಭಾವಮದರೊಳ್ ನೆಲೆಗೊಂಡ ಶಿವಾತ್ಮಲಿಂಗವಾ-
ಲಿಂಗದೊಳಿರ್ದು ನಿತ್ಯಸುಖಿಯಾಗಿ ವಿರಾಜಿಸುವಂಗೆ . . . . . .
. . . . . . . . . . . . . . . . . . . . . . . ॥ ಮಹದೈಪುರೀಶತಕ, ೫೨.

ಶೈವದರ್ಶನದ ಪ್ರಭೇದಗಳನ್ನು ಪರಾಮರ್ಶಿಸುತ್ತಾ ನವಕಲ್ಯಾಣಮಠದ ಕುಮಾರಸ್ವಾಮಿಗಳು[೧೩೮] ಹೀಗೆ ಹೇಳುತ್ತಾರೆ : ಮೂರು ಶೈವಮತಗಳೂ ಪ್ರಕೃತಿ ಪುರುಷ ಪರಬ್ರಹ್ಮವೆಂಬ ಮೂರು ತತ್ತ್ವಗಳನ್ನು ಒಪ್ಪಿವೆ. ಎಂದರೆ ಪರಮಾತ್ಮನಲ್ಲಿರುವ ಪರಾಶಕ್ತಿಯನ್ನು ಯಾವ ಮತಗಳೂ ಪ್ರಾಮುಖ್ಯತೆಯಿಂದ ಪರಿಗಣಿಸಿಲ್ಲ. ಈ ಎಲ್ಲಾ ಮತಗಳೂ ಶಕ್ತಿಯಲ್ಲಿ ಪೂರ್ಣವಿಶ್ವಾಸವುಳ್ಳವಾದರೂ ಶಕ್ತಿಯನ್ನು ಬೆಳಕಿಗೆ ತಂದಿಲ್ಲ. ಶಾಕ್ತಾಗಮಗಳಲ್ಲಿ ಶಕ್ತಿಯು ಪ್ರಧಾನ ಪಾತ್ರವಹಿಸುವುದನ್ನು ನಾವು ಕಾಣುತ್ತೇವೆ. ಆದರೆ ಅಲ್ಲಿ ಶಿವನು ಪ್ರಧಾನವಾಗಿದ್ದರೂ, ಶಕ್ತಿಯು ಶಿವನ ಮೇಲೆ ಅಧಿಕಾರ ನಡೆಸುತ್ತದೆ. ಪರಾಶಕ್ತಿಯು ಪರಮಾತ್ಮನ ಪ್ರಾಣಸ್ವರೂಪಿಣಿಯೆಂದು ತಿಳಿಸುವುದರಿಂದ ವೀರಶೈವ ಸಿದ್ಧಾಂತವು ಶಿವಶಕ್ತಿಯರಿಗೆ ಪರಿಪೂರ್ಣವಾದ ಸಾಮರಸ್ಯವನ್ನು ಪ್ರತಿಪಾದಿಸುತ್ತದೆ.[೧೩೯]

ಹೀಗೆ ಶೈವದರ್ಶನಗಳಿಂದ ಉತ್ತಮಾಂಶಗಳನ್ನು ಸ್ವೀಕರಿಸಿ ಬೆಳೆದರೂ ವೀರಶೈವದರ್ಶನವು ಬಹಳ ಪ್ರಾಚೀನ ಕಾಲದಲ್ಲಿಯೇ ಶಿವಶಕ್ತಿಯರ ಸಾಮರಸ್ಯವನ್ನು ಸಿದ್ಧಾಂತಸ್ವರೂಪವೆಂದು ಸ್ಥಾಪಿಸಿದ್ದಾಗಿ ತಿಳಿದುಬರುತ್ತದೆ. ಶಕ್ತಿವಿಲಾಸರೂಪವಾದ ಶಿವಸಾಮರಸ್ಯವನ್ನು ಈ ಜನ್ಮದಲ್ಲಿಯೇ ಪಡೆದು ಅನುಭವಿಸುವ ವೀರವ್ರತವನ್ನು ಈ ದರ್ಶನವು ಬೋಧಿಸುವುದರಿಂದಲೂ, ಮುಕ್ತನು ಕೇವಲ ಶಿವನೇ ಆಗುವುದರಿಂದಲೂ ಈ ದರ್ಶನಕ್ಕೆ "ವೀರಶೈವ ದರ್ಶನ"ವೆಂದು ಹೆಸರಿಸಿರಬಹುದು. ಅಥವಾ ಶಿವಯೋಗದಿಂದ 'ಏಕೇನ ಜನ್ಮನಾ ಮುಕ್ತಿಃ ವೀರಾಣಾಂತು ಮಹೇಶ್ವರೀ'[೧೪೦] ಎಂಬ ಆಗಮದ ಅಭಿಪ್ರಾಯದಂತೆ ಒಂದೇ ಜನ್ಮದಲ್ಲಿ ಪರಶಿವ ಸಾಮರಸ್ಯರೂಪವಾದ ಮುಕ್ತಿ ದೊರೆಯಲಿರುವದರಿಂದ ಈ ದರ್ಶನಕ್ಕೆ ವೀರಶೈವ ದರ್ಶನವೆಂದಿರಬಹುದು. ವೀರ ಎಂಬ ಪದಕ್ಕೆ ಶ್ರೀ ಜ.ಚ.ನಿ."ಅವಸ್ಥಾತ್ರಯವನ್ನು ಗೆದ್ದು ತುರೀಯಾವಸ್ಥೆಗೇರಿದವನಿಗೆ ವೀರಶೈವ" ಎಂದು ಕರೆಯಬೇಕೆನ್ನುತ್ತಾರೆ. ಪ್ರೊ. ಎಸ್.ಕೆ. ರಾಮಚಂದ್ರರಾವ್ ವೀರಶೈವದ ಉತ್ಪತ್ತಿಯನ್ನು ವಿಶಿಷ್ಟವಾಗಿ ಗಮನಿಸಿದ್ದಾರೆ : "ಶಿವಾ ರುದ್ರಸ್ಯ ಭೇಷಜೀ" (ಪಾತಂಜ ಮಹಾಭಾಷ್ಯ) ಎನ್ನುವಾಗ ರುದ್ರನಿಂದ ಕೆಡರು, ಶಿವನಿಂದ ಒಳಿತು ಎನ್ನುವ ಧ್ವನಿಯಿದೆ. ಉಗ್ರ-ಸೌಮ್ಯ ಎರಡೂ ಕಳೆಗಳು ಕಲೆತಾಗ 'ವೀರಶೈವ'[೧೪೧]ವೆಂದಾಯಿತೋ ಎನ್ನುವ ವಿಚಾರವಾಗಿ (ವಿದ್ವಾಂಸರು) ಗಮನಹರಿಸಿಲ್ಲ. ಈ ವಿಷಯ ಕುರಿತು ಹಿಂದೆ ಮಾಯಿದೇವನ ಆಕರಸಾಹಿತ್ಯದ ಹಿನ್ನೆಲೆಯಲ್ಲಿ "ಸ್ಥಲ" ತತ್ತ್ವದ "ಉಗಮ ಹಾಗೂ ವಿಕಾಸ"ವೆಂಬ ಮೂರನೆಯ ಅಧ್ಯಾಯದಲ್ಲಿ ಸಮಗ್ರವಾಗಿ ವಿವರಿಸಲಾಗಿದೆ. ಸಿದ್ಧಾಂತಶಿಖಾಮಣಿಯಲ್ಲಿ 'ವೀರಶೈವ' ಶಬ್ದದ ನಿರ್ವಚನವನ್ನು ಹೀಗೆ ಹೇಳಲಾಗಿದೆ :

ವಿದ್ಯಾಯಾಂ ಶಿವರೂಪಾಯಾಂ ವಿಶೇಷಾದ್ರಮಣಂ ಯತಃ ।
ತಸ್ಮಾದೇತೇ ಮಹಾಭಾಗಾ ವೀರಶೈವಾ ಇತಿ ಸ್ಮೃತಾಃ ॥[೧೪೨]

ಪರಶಿವನ ಸಚ್ಚಿದಾನಂದಸ್ವರೂಪದ ಜ್ಞಾನವೇ ವಿದ್ಯೆ. ಆ ವಿದ್ಯೆಯಲ್ಲಿ ಯಾರಿಗೆ ವಿಶೇಷವಾದ ಆಸಕ್ತಿ ಇರುವುದೋ ಅವರು ವೀರಶೈವರು. ಇನ್ನೊಂದು ರೀತಿಯಲ್ಲಿ ಕೊಟ್ಟ ನಿರ್ವಚನವು ಹೀಗಿದೆ :

ವೀ ಶಬ್ದೇನೋಚ್ಯತೇ ವಿದ್ಯಾಶಿವಜೀವೈಕ್ಯಬೋಧಿನೀ ।
ತಸ್ಯಾಂ ರಮಂತೇ ಯೇ ಶೈವಾ ವೀರಶೈವಾಸ್ತುತೇ ಮತಾಃ ॥[೧೪೩]

---

೧೩೮. ವೀ.ರು. ಕೊಪ್ಪಳ (ಸಂ) (೧೯೪೯) ವೀರಶೈವದರ್ಶನ (ಶ್ರೀ ಕುಮಾರಸ್ವಾಮಿಗಳ ಉಪನ್ಯಾಸಗಳು) ಪು. ೧೩.

೧೩೯. ಟಿ.ಜಿ. ಸಿದ್ಧಪ್ಪಾರಾಧ್ಯ (೧೯೭೪) ಶಕ್ತಿವಿಶಿಷ್ಟಾದ್ವೈತದರ್ಶನಂ, ಪು.೯.

೧೪೦. ಎಂ.ಜಿ. ನಂಜುಂಡಾರಾಧ್ಯ (೧೯೮೬) ಶಿವಾಗಮಸೌರಭ, ಪು. ೧೬೦.

೧೪೧. ಎಚ್. ಕೆ. ರಾಮಚಂದ್ರರಾವ (೧೯೮೧) ಶೈವಧರ್ಮದ ಹಿನ್ನೆಲೆ, ಸಿದ್ಧಗಂಗಾಶ್ರೀ, ಪು. ೫೨೯.

೧೪೨. ಸಂ.ಶಿ. ಭೂಸನೂರಮಠ (೧೯೯೨) ವೀರಶೈವಸಿದ್ಧಾಂತ ಶಿಖಾಮಣಿ ೫೫-೫-೧೫.

೧೪೩. ಅದೇ, ೫೫-೫-೧೬.

'ವೀ' ಎಂದರೆ ವಿದ್ಯೆ, ಶಿವ-ಜೀವೈಕ್ಯವನ್ನು ಬೋಧಿಸುವ ವಿದ್ಯೆ. ಯಾವ ಶೈವರು ಅದರಲ್ಲಿ ಆನಂದವನ್ನು ಪಡೆಯುತ್ತಾರೋ ಅವರು ವೀರಶೈವರು. 'ವೀರ' ಎಂಬ ಶಬ್ದದಲ್ಲಿಯೇ 'ವಿದ್ಯೆ' ಮತ್ತು ಅದರಲ್ಲಿ 'ರತಿ' ಎಂಬ ಎರಡು ಅರ್ಥಗಳೂ ಸಮನ್ವಿತವಾಗಿವೆ.

ವೇದಾಂತಜನ್ಯಂ ಯದ್ ಜ್ಞಾನಂ ವಿದ್ಯೇತಿ ಪರಿಕೀರ್ತ್ಯತೇ ।
ವಿದ್ಯಾಯಾಂ ರಮತೇ ತಸ್ಯಾಂ ವೀರ ಇತ್ಯಭಿಧೀಯತೇ ॥[೧೪೪]

ವೇದಾಂತವು ಪ್ರತಿಪಾದಿಸುವ ಜ್ಞಾನವು ವಿದ್ಯೆ. ಅದರಲ್ಲಿ ಆನಂದಿಸುವವರು ವೀರರು. ಇವು ಸಿದ್ಧಾಂತಶಿಖಾಮಣಿ ಕೊಡುವ 'ವೀರಶೈವ' ಪದಕ್ಕೆ ವೈಶಿಷ್ಟ್ಯ ಪ್ರತಿಪಾದಕಗಳಾದ ನಿಷ್ಪತ್ತಿಗಳು.

ಸಿದ್ಧಾಂತಶಿಖಾಮಣಿಯ ವೀರಶೈವದ ಈ ನಿರ್ವಚನವನ್ನು ಕ್ರಿಯಾಸಾರವು ಮನ್ನಿಸಿದೆ.[೧೪೫] ಆದರೆ ಮಾಯಿದೇವ ವಿಭು ಅದನ್ನು ಸಮರ್ಥಿಸಿರುವುದು ಕಂಡುಬರುವುದಿಲ್ಲ. ಬೇರೊಂದು ವಿಧವಾಗಿ ಮಾಯಿದೇವ ಹೀಗೆ ಹೇಳಿದ್ದಾನೆ.

. . . . . . . . . . . . . . . . . . . . . . . . . ।
ವೀರಶೈವನಿರುಕ್ತಿರ್ಯಾ ದ್ವಯಮೇವಾಧುನೋಚ್ಯತೇ ॥
ವಿಶಬ್ದೋऽತ್ರ ವಿಕಲ್ಪಾರ್ಥೋ ರ ಶಬ್ದೋ ರಹಿತಾರ್ಥಕಃ ।
ವಿಕಲ್ಪರಹಿತಂ ಶೈವಂ ವೀರಶೈವಮಿತಿ ಸ್ಮೃತಂ ॥
ಏಕಮೇವಾದ್ವಿತೀಯಂ ಯದವಿಕಲ್ಪಂ ಪರಂ ಪದಂ ।
ತದ್ವೀರಶೈವಮಿತ್ಯುಕ್ತಂ ನೇತರಂ ಸವಿಕಲ್ಪಕಂ ॥[೧೪೬]

ವೀರಶೈವ ಶಬ್ದಾರ್ಥವು ದ್ವಿವಿಧವಾಗಿದೆ. ವೀರ ಶಬ್ದದಲ್ಲಿ 'ವಿ' ಶಬ್ದವು ವಿಕಲ್ಪಾರ್ಥದಲ್ಲಿಯೂ 'ರ' ಶಬ್ದವು ರಹಿತಾರ್ಥದಲ್ಲಿಯೂ ಇರುವುದು. ಆದುದರಿಂದ ವಿಕಲ್ಪರಹಿತವಾದ ಶೈವವು ವೀರಶೈವವಾಗುವುದೆಂದು ವೀರಶೈವ ಶಬ್ದಾರ್ಥವಿರುವುದು. ಹಾಗೂ ಯಾವುದು ವಿಕಲ್ಪರಹಿತವಾಗಿ ಒಂದೇ ಇದ್ದು ದ್ವಿತೀಯರಹಿತವಾದ ಶ್ರೇಷ್ಠಪದವೆನಿಸುವುದೋ ಅದು ವೀರಶೈವವೆಂದು ಹೇಳಲಾಗುತ್ತದೆ. ವೀರಶೈವೇತರವು ಸವಿಕಲ್ಪಕವೆನಿಸುತ್ತದೆ.

ಸಿದ್ಧಾಂತಶಿಖಾಮಣಿಯು ಶಿವ-ಜೀವೈಕ್ಯ ಸಾಮರಸ್ಯ ಕುರಿತು ಹೇಳಿದರೆ, ತಾನೇ ಶಿವನೆಂದು ತಿಳಿದು ಲಿಂಗಾಂಗಸಾಮರಸ್ಯ ಹೊಂದುವ ಮರ್ಮವನ್ನು ಶಿವಾನುಭವ ಸೂತ್ರದ ಉತ್ತರಭಾಗವಾದ ವಿಶೇಷಾರ್ಥಪ್ರಕಾಶಿಕೆ ಹೇಳಿದೆ. ಹೀಗೆ ಮಾಯಿದೇವನು ವೀರಶೈವದ ನಿರುಕ್ತಿ ಬಗೆಗೆ ಸ್ವತಂತ್ರ ನಿಲುವು ತಾಳಿದ್ದಾನೆ.

❑

---

೧೪೪. ಅದೇ, ೫೫-೫-೧೪.

೧೪೫. ಕ್ರಿಯಾಸಾರ (೧೯೫೪) R. Ramashastri. 1,2; p. 11.

೧೪೬. ವೈ. ನಾಗಭೂಷಣಶಾಸ್ತ್ರಿಗಳು (ಸಂ)(೧೯೬೧). ಅಧಿಕರಣ-೨. ಶ್ಲೋಕ ೩೦-೩೨, ಪು. ೧೯.

## ಅಧ್ಯಾಯ : ಐದು

# ಷಟ್‌ಸ್ಥಲ

ವೀರಶೈವಧರ್ಮದ ಒಂದು ವಿಶಿಷ್ಟವಾದ ಕೊಡುಗೆ ಷಟ್‌ಸ್ಥಲದರ್ಶನ. ಸಾಧಕನ ಆಧ್ಯಾತ್ಮಿಕ ಅನುಭವದ ವಿಕಾಸವನ್ನು ತಳಹದಿಯನ್ನಾಗಿ ಉಳ್ಳ ಇದರ ವಿವೇಚನೆಯಲ್ಲಿ ವೀರಶೈವಧರ್ಮದ ಸಾರವೆಲ್ಲಾ ಅಡಕವಾಗಿದೆ. ತಾತ್ವಿಕ ಸಿದ್ಧಾಂತ ಮತ್ತು ಆಚರಣೆಯ ಮಾರ್ಗಗಳೆರಡೂ ಇಲ್ಲಿ ಸಮಾವೇಶಗೊಂಡಿವೆ. ಈ ಧರ್ಮದ ತಾತ್ವಿಕ ಹಿನ್ನೆಲೆಗೆ ಅನುಗುಣವಾಗಿ ಭೇದಾಭೇದಗಳ ಸಮನ್ವಯ ಇಲ್ಲಿ ರೂಪುಗೊಂಡಿದೆ. ಭಕ್ತಿಜ್ಞಾನಕರ್ಮಗಳು ಇಲ್ಲಿ ಮುಪ್ಪುರಿಗೊಂಡು, ಸಾಮರಸ್ಯಕ್ಕೇರಿಸುವ ಸೋಪಾನಗಳನ್ನು ನಿರ್ಮಿಸಿವೆ. ೧೨ನೇ ಶತಮಾನದ ಶರಣರು ಈ ಮಾರ್ಗದಲ್ಲಿ ನಡೆದು ಈ ಸೋಪಾನಗಳಿಂದ ಮೇಲೇರಿ ತಮ್ಮ ಗುರಿಯನ್ನು ಸಾಧಿಸಿದರು. ಇವರಿಗಿಂತ ಹಿಂದೆಯೇ ಷಟ್‌ಸ್ಥಲವನ್ನು ಕುರಿತ ಉಲ್ಲೇಖ ಕಂಡಬಂದರೂ ಅದಕ್ಕೊಂದು ವ್ಯಾಪಕತೆಯನ್ನು ತಂದುಕೊಟ್ಟವರು ಶರಣರು. ಅವರ ಸಾಧನೆಯಿಂದ ಅದು ಹೊಸಕ್ರಾಂತಿಯನ್ನು ಪಡೆಯಿತು. ವಿವಿಧ ಹಂತಗಳಲ್ಲಿರುವ ವಿಭಿನ್ನ ಮನೋಧರ್ಮದ ಎಲ್ಲ ವರ್ಗದ ಸಾಧಕರನ್ನೂ ಯಾವ ತಾರತಮ್ಯವೂ ಇಲ್ಲದೆ ಶರಣರು ಈ ಮಾರ್ಗಕ್ಕೆ ಸ್ವಾಗತಿಸಿದರು. ವಾಸ್ತವಿಕ ದೃಷ್ಟಿಯ ವಿಚಾರಶೀಲತೆಯಿಂದ ಬಹುಜನರ ಹಿತಕ್ಕೆ ಸಾಧನವಾಗುವಂತೆ, ಹೊಸ ಸಮಾಜದ ನಿರ್ಮಾಣಕ್ಕೆ ಕಾರಣವಾಗುವಂತೆ ಇದನ್ನು ಬೆಳೆಸಿದರು.

**'ಷಟ್‌ಸ್ಥಲ' ಪದದ ಸಮೀಕ್ಷೆ:**

ಷಟ್‌ಸ್ಥಲ ಪಾರಿಭಾಷಿಕ ಪದವು ವೀರಶೈವ ತತ್ವಜ್ಞಾನಿಗಳಿಂದ ಭಿನ್ನಭಿನ್ನ ಸಂದರ್ಭಗಳಲ್ಲಿ ಬಳಸಲಾಗಿರುವದರಿಂದ ಅದರ ಅರ್ಥ ಸಂದರ್ಭಕ್ಕನುಗುಣವಾಗಿ ಭಿನ್ನಭಿನ್ನವಾಗುತ್ತ ಹೋಗುತ್ತದೆ. ತಾತ್ವಿಕಪದಗಳ ಅರ್ಥವಿವರಣೆಯನ್ನು ಪ್ರತಿಯೊಂದು ಯುಗದಲ್ಲಿ ಎಲ್ಲ ತತ್ತ್ವಜ್ಞಾನಿಗಳು ಮಾಡಿದ್ದುಂಟು. ಪಾಶ್ಚಿಮಾತ್ಯರಲ್ಲಿ ಸಾಕ್ರೇಟೀಸನಿಂದ ರಸೆಲ್ಲನವರೆಗೆ, ಪೌರ್ವಾತ್ಯರಲ್ಲಿ ಋಷಿಗಳಿಂದ ಹಿಡಿದು ಅರವಿಂದರವರೆಗೆ ಈ ಕಾರ್ಯ ಅವ್ಯಾಹತವಾಗಿ ನಡೆದು ಬಂದಿದೆ.

'ಷಟ್‌ಸ್ಥಲ' ಎಂಬಲ್ಲಿ ಆರು ಸ್ಥಲ ಎಂಬ ಸಂಖ್ಯಾವಾಚಕವಿದ್ದು, ಇದು ಅನೇಕತಾವಾದವನ್ನು ಏನಾದರು ಸೂಚಿಸುತ್ತದೆಯೆ? ಎಂಬ ಸಂದೇಹ ಬಂದರೂ ಬರಬಹುದು ಏಕೆಂದರೆ ತ್ರಿಕ್, ದ್ವೈತ, ಅದ್ವೈತ, ಮುಂತಾದವುಗಳಂತೆ 'ಷಟ್' ಎಂಬುದು ಸಂಖ್ಯಾವಾಚಕ ಪದವೇ ಆಗಿದೆ, ಅಲ್ಲದೆ, ಅದು ಸಿದ್ಧಾಂತ ಸೂಚಕ ಪಾರಿಭಾಷಿಕ ಪದದ ಅಂಗವೂ ಆಗಿದೆ. 'ಷಟಸ್ಥಲ' ಎಂಬಲ್ಲಿ 'ಷಟ್' ಎಂಬುದು 'ಸ್ಥಲ'ವೆಂಬ ಅದ್ವೈತ ಪದದ ಉಪಸರ್ಗವಾಗಿದ್ದು 'ಷಟ್' ಇದು 'ಸ್ಥಲ' ಎಂಬ ಪದವನ್ನು ವಿಶೇಷಿಸುತ್ತದೆ. ಶೈವಾಗಮಗಳಲ್ಲಿ ಷಟ್‌ಸ್ಥಲವೆಂದರೆ ಷಡ್ಗುಣಯುತ್ತ ಪರಬ್ರಹ್ಮವೆಂದು ಹೇಳಲಾಗುತ್ತದೆ. ೧) ಸರ್ವ, ೨) ಅನಂತ, ೩) ನಿರಂಕುಶಬೋಧ, ೪) ಸ್ವಾತಂತ್ರ್ಯ, ೫) ಅಲುಪ್ತಶಕ್ತಿ, ೬) ಊರ್ಧ್ವಶಕ್ತಿ, ಇವು ಪರಬ್ರಹ್ಮದ ಶಕ್ತಿ ಷಟ್ಕಗಳಾಗಿರುತ್ತವೆ.[೧] ಇವುಗಳ ಪರ್ಯಾಯ ಪದಗಳು, ಭಕ್ತಾದಿ ಐಕ್ಯಾಂತ ಆರು ಸ್ಥಲಗಳು. ಈ ಷಟ್‌ಶಕ್ತಿ ವಿಶಿಷ್ಟವಾದ

---

೧. ಪಾರಮೇಶ್ವರತಂತ್ರ, vi, ೨೨, ಮೂರುಸಾವಿರಮಠ, ಹುಬ್ಬಳ್ಳಿ.

ಪರ ಬ್ರಹ್ಮವು. ಪಾಶ್ಚಿಮಾತ್ಯ ತತ್ವಜ್ಞ ಸ್ಪಿನೋಝಾನ ಪರಬ್ರಹ್ಮ ತತ್ವವನ್ನು ಹೋಲುತ್ತದೆ. ಅವನ ಪರಿಭಾಷೆಯಲ್ಲಿ ಪರಬ್ರಹ್ಮ ಶಕ್ತಿಗಳು ನಿತ್ಯ ಅನಂತ ಸ್ವರೂಪಗಳು (Entarnal, infinite modes) ಆಗಿವೆ. ಹಿಂದೆ ಹೇಳಿದಂತೆ ಪಾರಮೇಶ್ವರ ಆಗಮವು ಷಟ್‌ಸ್ಥಲವೆಂದರೆ ಷಡ್‌ವಿಧ ಸ್ವರೂಪವುಳ್ಳ ಪರಬ್ರಹ್ಮವೆಂದು ಹೇಳುತ್ತದೆ.[೨] ಸೃಷ್ಟಿ, ಸ್ಥಿತಿ, ಲಯಗಳು ಈ ಷಟ್‌ಸ್ಥಲದಲ್ಲಿ ನಡೆಯುತ್ತವೆ ಎಂದು ಅದರ ಅಭಿಪ್ರಾಯ.

ಶೈವಾಗಮಗಳಂತೆ ಚನ್ನಬಸವಪುರಾಣವು ಸಹ ಸಚ್ಚಿದಾನಂದ ಸ್ವರೂಪವಾದ ಪರಬ್ರಹ್ಮವೇ ಷಟ್‌ಸ್ಥಲವೆಂದು ಸೂಚಿಸುತ್ತದೆ.[೩] ಈ ಷಟ್‌ಸ್ಥಲ ಆಧ್ಯಾತ್ಮಿಕ ಅರ್ಥ (The Metaphysical Meaning )ವನ್ನು ಹೊಂದಿದೆ. ಮೇಲೆ ವಿವರಿಸಿದ ಆಗಮ ಹಾಗೂ ಚೆನ್ನಬಸವ ಪುರಾಣಗಳ ಪ್ರಕಾರ ವೀರಶೈವ ದಾರ್ಶನಿಕರು ಸರ್ವಮೂಲ ಬ್ರಹ್ಮವನ್ನು ಷಟ್‌ಸ್ಥಲವೆಂದು ಕರೆದಿದ್ದಾರೆ. ಷಟ್‌ಸ್ಥಲಾದ್ವೈತ ವೆಂಬ ಅಖಂಡಾರ್ಥವನ್ನು ಇದು ಕೊಡುವದರಿಂದ ಷಟ್‌ಸ್ಥಲ ಮತ್ತು ಷಟ್‌ಸ್ಥಲಬ್ರಹ್ಮ ಇವೆರಡೂ ಒಂದೇ ಎಂಬ ನಿರ್ಣಯಕ್ಕೆ ನಾವು ಬರುವಂತೆ, ಷಟ್‌ಸ್ಥಲ ಎಂಬುದು ಏಕಾರ್ಥ ಪ್ರತಿಪಾದಕ ಶಬ್ದವೆಂಬುದೂ ಇದರಿಂದ ನಿರ್ಣೀತ ಷಟ್‌ಸ್ಥಲದ ಈ ವಿವರಣೆಗೆ ವಸ್ತುಶಾಸ್ತ್ರ (ontalogy) ಎಂದು ಕರೆಯಲಾಗಿದೆ. ಮೇಲೆವಿವರಿಸಿದ ವಸ್ತುವು ಲಕ್ಷಣಯುಕ್ತವಾಗಿರುತ್ತದೆಯೆಂದು ತಿಳಿದುಕೊಳ್ಳುವುದು ಷಟ್‌ಸ್ಥಲದ ಇನ್ನೊಂದು ಮುಖವಾಗಿರುತ್ತದೆ. ಇದನ್ನು ಜ್ಞಾನಶಾಸ್ತ್ರ (Epistemology)ವೆಂದು ಕರೆಯುತ್ತಾರೆ. ಇದನ್ನು ವೀರಶೈವದಾರ್ಶನಿಕರು ಷಟ್‌ಸ್ಥಲವೆಂದೇ ಗುರುತಿಸಿದ್ದಾರೆ. ಈ ಷಟ್‌ಸ್ಥಲಜ್ಞಾನ ಆರು ವಿಧವಾಗಿದೆ ೧) ಮತಿಜ್ಞಾನ, ೨) ಶೃತಿಜ್ಞಾನ, ೩) ಖಂಡಿತಜ್ಞಾನ, ೪) ಕೇವಲಜ್ಞಾನ, ೫) ಜ್ಯೋತಿರ್ಜ್ಞಾನ, 6) ಮಹಾ ಜ್ಯೋತಿರ್ಜ್ಞಾನ ಎಂದು.[೪] ಇವೇ ಅನುಕ್ರಮವಾಗಿ ಭಕ್ತ ಮಹೇಶ ಮುಂತಾಗಿ ಆರುಸ್ಥಲಗಳಾಗಿರುತ್ತವೆ. ಇವುಗಳ ಸ್ವರೂಪ ಕುರಿತು ಚನ್ನಬಸವಣ್ಣನವರ ವಚನವೊಂದು ಹೀಗಿದೆ.

ಮತಿಜ್ಞಾನ, ಶೃತಿಜ್ಞಾನ, ಖಂಡಜ್ಞಾನ, ಕೇವಲಜ್ಞಾನ, ಜ್ಯೋತಿರ್ಜ್ಞಾನ,
ಮಹಾಜ್ಯೋತಿರ್ಜ್ಞಾನವೆಂದಿಂತು ಜ್ಞಾನವಾರರಿನು.
ಮತಿಜ್ಞಾನದಿಂದ ಶ್ರುತಿಜ್ಞಾನವಹುದು,
ಶ್ರುತಿಜ್ಞಾನದಿಂದ ಖಂಡಜ್ಞಾನವಹುದು,
ಖಂಡಜ್ಞಾನದಿಂದ ಕೇವಲಜ್ಞಾನವಹುದು,
ಕೇವಲಜ್ಞಾನದಿಂದ ಜ್ಯೋತಿರ್ಜ್ಞಾನವಹುದು,
ಜ್ಯೋತಿರ್ಜ್ಞಾನದಿಂದ ಮಹಾಜ್ಯೋತಿರ್ಜ್ಞಾನವಹುದು.
ಮತಿಜ್ಞಾನವೆ ಭಕ್ತ, ಶ್ರುತಿಜ್ಞಾನವೆ ಮಹೇಶ್ವರ, ಖಂಡಜ್ಞಾನವೆ ಪ್ರಸಾದಿ,
ಕೇವಲಜ್ಞಾನವೆ ಪ್ರಾಣಲಿಂಗಿ, ಜ್ಯೋತಿರ್ಜ್ಞಾನವೆ ಶರಣ,
ಮಹಾಜ್ಯೋತಿರ್ಜ್ಞಾನವೆ ಐಕ್ಯ.
ಈ ಷಟ್‌ಸ್ಥಲದ ನೆಲೆಯಬಲ್ಲಾತನೆ,
ಕೂಡಲಚನ್ನಸಂಗಯ್ಯನಲ್ಲಿ ಐಕ್ಯನು.[೫]

---

೨. ಅದೇ, vi, ೨೫.

೩. ಚನ್ನಬಸವಪುರಾಣ, v, ೮-೬೧, st; ೬೫. (L.E. Association Dharwar, 1934).

೪. ಪ್ರೊ. ಭೂಸನೂರಮಠ (ಸಂ.) (೧೯೫೮) ಶೂನ್ಯಸಂಪಾದನೆ, xx, ೩೬.

೫. ಡಾ. ಆರ್.ಸಿ. ಹಿರೇಮಠ(ಸಂ.) ೧೯೬೫, ಚೆನ್ನಬಸವಣ್ಣನವರ ವಚನಗಳು, ವ. ೧೪೦೨, ಪು. ೬೨೭.

ಈ ಆರು ವಿಧದ ಜ್ಞಾನಮೂಲಗಳು ಭಿನ್ನಭಿನ್ನವಾಗಿವೆ. ಅನುಕ್ರಮವಾಗಿ ಇವು ಒಂದನ್ನೊಂದು ಅವಲಂಬಿಸಿವೆ. ನಿರಾಲಂಬಜ್ಞಾನವು ಮೂಲಭೂತ ಶಂಕಾತೀತ ಮತ್ತು ಅನುಭವಮೂಲವಾಗಿದ್ದು, ಇದು ಸರ್ವಶ್ರೇಷ್ಠ ಪ್ರಮಾಣವಾಗಿರುತ್ತದೆ. ಇದರ ವಿವರಣೆ ಪ್ರೊ. ಭೂಸನೂರಮಠರ ಶಬ್ದಗಳಲ್ಲಿ ಇಂತಿದೆ : "ಅಣುವನ್ನು ಬಿಚ್ಚಿ ನೋಡಿದರೆ ಇಂದು ನಮಗೆ ಇಲೆಕ್ಟ್ರಾನ್ ಪ್ರೋಟಾನುಗಳು ಮತ್ತು ಆಕಾಶ ತೋರಬಹುದು. ಆದರೆ ಈ ಚಿದ್ಘನಗಳ ಮಹಾಘನಬಯಲು ಅಲ್ಲಿ ಕಾಣುವುದಿಲ್ಲ. ಆದರೆ ಅಣುರೇಣುವಿನೊಳಗೆ, ತೃಣ ಕಾಷ್ಠದೊಳಗೆ 'ಸೂಕ್ಷ್ಮ ನಕ್ಷಯನಿಂದ ನಿರಾಳ ಗೊಹೇಶ್ವರ' ಈ ಸೂಕ್ಷ್ಮ ಈ ಅಕ್ಷಯ, ಅಣು ಮೊದಲು ಆಕಾಶ ಕಡೆಯಾಗಿ ಎಲ್ಲೆಲ್ಲಿನಿಂದ ನಿರಾಳ ಕರಣೇಂದ್ರಿಯಗಳಿಗೆ ಅಗಮ್ಯ ಅಗೋಚರವಾಗಿ, ನಿತ್ಯ ಪರಿಪೂರ್ಣವಾಗಿ ನಿಂದ ನಿರಾಳ ಅನುಭಾವಿಗಳ ನಿತ್ಯ ಸತ್ಯವಾದ ನಿರಂತರ ದರ್ಶನ".[೬] ಈ ನಿರಾಲಂಬ ಜ್ಞಾನ ಅನುಭವಿಗೆ ಗಮ್ಯ. ಈ ಜ್ಞಾನದಿಂದ ಉಳಿದ ಜ್ಞಾನಗಳ ಶಂಕಾರಾಹಿತ್ಯವನ್ನು ಸಿದ್ಧಗೊಳಿಸಬಹುದು. ಷಟ್‌ಸ್ಥಲ ಸಂಪಾದನೆಯೆಂದರೆ ಷಡ್‌ವಿಧವಾದ ಜ್ಞಾನ ಸಂಪಾದನೆಯಾಗಿರುತ್ತದೆ. ಇವುಗಳ ವಿವೇಚನೆ ಷಟ್‌ಸ್ಥಲ ವೈವಿಧ್ಯದಲ್ಲಿ ಬಂದಿದೆ. ಇದೇ ಮಾದರಿಯ ಷಡ್ವಿಧವಾದ ಜ್ಞಾನಗಳನ್ನು ಬೌದ್ಧ ಜೈನ ಮುಂತಾದ ದರ್ಶನಗಳಲ್ಲಿ ಕಾಣಬಹುದು.

ಷಟ್‌ಸ್ಥಲ ದರ್ಶನ, ವಿಕಾಸಮಾರ್ಗವನ್ನು ಸೂಚಿಸುತ್ತದೆ. ಅದು ದ್ವಿವಿಧಗತಿಯಲ್ಲಿ ನಡೆಯುತ್ತದೆ. ಅನುಕ್ರಮವಾಗಿ ಪ್ರವೃತ್ತಿಮಾರ್ಗ ಮತ್ತು ನಿವೃತ್ತಿಮಾರ್ಗ ಎಂದು ಇವುಗಳನ್ನು ಷಟ್‌ಸ್ಥಲದಲ್ಲಿ ಗುರುತಿಸಲಾಗಿದೆ. ವಿಕಾಸಕಾರ್ಯವು ಕಾರಣ, ಸೂಕ್ಷ್ಮ ಮತ್ತು ಸ್ಥೂಲವೆಂದು ಮೂರು ಹಂತಗಳಲ್ಲಿ ಜರುಗುತ್ತದೆ. ೧) ನಿರಂಜನಾತೀತ ಷಟ್‌ಸ್ಥಲ ೨) ನಿರಾಮಯ ಷಟ್‌ಸ್ಥಲ ಮತ್ತು ೩) ಷಟ್‌ಸ್ಥಲ (ಪ್ರಾಕೃತ ಷಟ್‌ಸ್ಥಲ).[೭] ಇವು ಅನುಕ್ರಮವಾಗಿ ಶಿವಸ್ಥಲದ ಕಾರಣ, ಸೂಕ್ಷ್ಮ, ಹಾಗೂ ಸ್ಥೂಲರೂಪವಾಗಿವೆ. ನಿರಂಜನಾತೀತ ಷಟ್‌ಸ್ಥಲ ನಿಷ್ಕಲ ಪರಶಿವಸ್ವರೂಪ, ನಿರಂಜನಾತೀತ ಷಟ್‌ಸ್ಥಲವು ಪ್ರವೃತ್ತಿಗೆ ಅವಕಾಶವೀಯುತ್ತದೆ. ಇಲ್ಲಿ ಚಿತ್ ಅಥವಾ ಸರ್ವ ಮೂಲಾಹಂಕಾರದ ಉಗಮವು ಪ್ರವೃತ್ತಿಪರವಾಗಿರುತ್ತದೆ. ಅದನ್ನು ಸಿದ್ಧಲಿಂಗ ಶಿವಯೋಗಿಗಳು ಹೀಗೆ ಹೇಳಿದ್ದಾರೆ :

ಲೋಕಾಧಿಲೋಕಂಗಳೇನು ಏನೂ ಇಲ್ಲದಂದು
ಏಕಮೇವ ಪರಬ್ರಹ್ಮವು ತಾನೊಂದೇ ನೋಡಾ!
ಅದು ತನ್ನನ್ನು ನೆನೆಯದೆ, ಇದಿರನು ನೆನೆಯದೆ
ನೆನಹು ನಿಷ್ಪತ್ತಿಯಾಗಿದ್ದಿತ್ತು ನೋಡಾ.
ಆ ನೆನಹಿಲ್ಲದ ಘನವಸ್ತು ನೆನೆದ ನೆನಹೆ
ಸಾವಯವಾಗಿ ಚಿತ್ತೆನಿಸಿಕೊಂಡಿತ್ತು
. . . . . . . . . . . . . . . . . . .[೮]

ತೋಂಟದ ಸಿದ್ಧಲಿಂಗ ಶಿವಯೋಗಿಗಳ ಈ ವಚನದಿಂದ, ಸರ್ವಶೂನ್ಯ ನಿರಾಲಂಬಸ್ಥಲದಿಂದ ಸೃಷ್ಟಿಯ ಉನ್ಮುಖಸ್ಥಿತಿ ಎಂತಾಯಿತೆಂಬುದರ ಕಲ್ಪನೆಯಾಗಬಲ್ಲುದು. ಸಿದ್ಧಲಿಂಗ ಶಿವಯೋಗಿಗಳು ಈ ಅವಸ್ಥೆಗಳನ್ನು ಸರ್ವಶೂನ್ಯ ನಿರಾಲಂಬಸ್ಥಲ, ಶೂನ್ಯಲಿಂಗಸ್ಥಲ, ನಿಃಕಲಲಿಂಗಸ್ಥಲ, ಮಹಾಲಿಂಗಸ್ಥಲ ಎಂದು ಮುಂತಾಗಿ ವಿವರಿಸುವರು. ಮಾಯಿದೇವನು ಈ ಎಲ್ಲ ಕಲ್ಪನೆಯನ್ನು "ಸ್ಥಲ" ಎಂಬ ಒಂದೇ ಪದದಲ್ಲಿ ಸಂಗ್ರಹಿಸಿದ್ದಾನೆ.

---

೬. ಪ್ರೊ. ಭೂಸನೂರಮಠ (೧೯೬೯) ಶೂನ್ಯಸಂಪಾದನೆಯ ಪರಾಮರ್ಶೆ, ಪು. ೬೨.

೭. ಡಾ. ವ್ಹಿ.ಎಸ್. ಕಂಬಿ (೧೯೭೧) ವೀರಶೈವದರ್ಶನ ಸಮೀಕ್ಷೆ, ಪು. ೫೪.

೮. ಡಾ. ಆರ್.ಸಿ. ಹಿರೇಮಠ (ಸಂ.) (೧೯೮೩), ಷಟ್‌ಸ್ಥಲಜ್ಞಾನ ಸಾರಾಮೃತ, ವ. ೩೯, ಪು. ೧೪.

ನಿರಾಮಯ ಷಟ್‌ಸ್ಥಲವು ಸದ್‌ಭಾವದ ಆವಿರ್ಭಾವವಾಗಿರುತ್ತದೆ. ಇದು ಮಹಾಲಿಂಗವಾಗಿ ಮಹಾಸಾದಾಖ್ಯವಾಗಿರುತ್ತದೆ. ಷಟ್‌ಸ್ಥಲ(ಪ್ರಾಕೃತ ಷಟ್‌ಸ್ಥಲ)ದ ಪರ್ಯಾಯಪದಗಳು ಷಟ್‌ಸಾದಾಖ್ಯ ಮತ್ತು ಷಡ್ಲಿಂಗಗಳು, ಷಡಂಗಗಳು ಆಗಿರುತ್ತವೆ. ನಿರಾಮಯ ಷಟ್‌ಸ್ಥಲವು ಷಡ್ಲಿಂಗ ಹಾಗು ಷಡಂಗಗಳನ್ನು ಗರ್ಭೀಕರಿಸಿಕೊಂಡಿರುವ ತತ್ತ್ವವಾಗಿರುತ್ತದೆ. ಇದನ್ನೇ ಆಗಮದಲ್ಲಿ ಬೇರೊಂದು ರೀತಿಯಲ್ಲೂ ಹೇಳಲಾಗುತ್ತದೆ. ಅಲ್ಲಿ ಸಾದಾಖ್ಯಗಳನ್ನು ಷಟ್‌ಸ್ಥಲದ ಪರ್ಯಾಯ ಪದಗಳೆಂದು ಸ್ವೀಕರಿಸಿಲ್ಲ.

ವಾತುಲದ ಪ್ರಕಾರ ಅಖಂಡಗೋಳಕಾಕಾರ ತೇಜೋಮೂರ್ತಿಯಾದ ಮಹಾಲಿಂಗದಿಂದ ಪಂಚಸಾದಾಖ್ಯಗಳು ವ್ಯುತ್ಪತ್ತಿಯಾಗುತ್ತವೆ. ಶಿವನ ಚಿಚ್ಛಕ್ತಿಯ ಸಹಸ್ರಾಂಶದಲ್ಲಿ ಪರಾಶಕ್ತಿ; ಆ ಪರಾಶಕ್ತಿಯ ಸಹಸ್ರಾಂಶದಿಂದ ಆದಿಶಕ್ತಿ; ಆ ಆದಿಶಕ್ತಿಯ ಸಹಸ್ರಾಂಶದಿಂದ ಇಚ್ಛಾಶಕ್ತಿ; ಆ ಇಚ್ಛಾಶಕ್ತಿಯ ಸಹಸ್ರಾಂಶದಿಂದ ಜ್ಞಾನಶಕ್ತಿ; ಆ ಜ್ಞಾನಶಕ್ತಿಯ ಸಹಸ್ರಾಂಶದಿಂದ ಕ್ರಿಯಾಶಕ್ತಿ ಉದ್ಭವಿಸಿದುವು. ಹೀಗೆ ಒಂದೇ ಶಿವಶಕ್ತಿ ಆರುತೆರನಾಯಿತು. ಇವುಗಳಿಗೆ ಕ್ರಮವಾಗಿ ಶಾಂತ್ಯತೀತೋತ್ತರೆ, ಶಾಂತ್ಯತೀತೆ, ಶಾಂತಿ, ವಿದ್ಯಾ, ಪ್ರತಿಷ್ಠಾ, ನಿವೃತ್ತಿಗಳೆಂಬ ಕಲಾಪರ್ಯಾಯ ನಾಮಗಳುಂಟು.[೯] ಇವುಗಳಿಂದ ಸಾದಾಖ್ಯಗಳು ಹೀಗೆ ಸಂಭವಿಸುತ್ತವೆ. ಪರಾಶಕ್ತಿಯ ದಶಾಂಶದಲ್ಲಿ ಶಿವಸಾದಾಖ್ಯವು ಸಂಭವಿಸುತ್ತದೆ. ಅದು ಪರಾಶಕ್ತಿಯಿಂದ ಉದ್ಭವಿಸಿದುದರಿಂದಲೂ ಸಿದ್ಧತ್ವವನ್ನು ತಳೆದಿರುವುದರಿಂದಲೂ ಶಿವ ಎಂಬ ಹೆಸರನ್ನು ಪಡೆದಿದೆ. ಅದು ಸೂಕ್ಷ್ಮರೂಪವನ್ನು ತಾಳಿ ಜ್ಯೋತಿರ್ಮಯವಾಗಿರುತ್ತದೆ. ಆಕಾಶದಲ್ಲಿ ವಿದ್ಯುತ್ ಹೊಳೆಯುವಂತೆ ಪ್ರತ್ಯಕ್ಷದಲ್ಲಿ ಇದು ಸರ್ವತೋಮುಖವಾಗಿರುತ್ತದೆ. ಈ ಶಿವತತ್ತ್ವವೇ ಅಖಿಲ ತತ್ತ್ವಗಳ ಆಲಯವಾಗಿದೆ. ಶಿವಸಾದಾಖ್ಯವಾದ ಮೇಲೆ ಬರುವುದು ಅಮೂರ್ತಸಾದಾಖ್ಯ. ಶಾಂತಿಯೆಂಬ ಪರ್ಯಾಯನಾಮವುಳ್ಳ ಆದಿಶಕ್ತಿಯ ದಶಾಂಶದಿಂದ ಅಮೂರ್ತಸಾದಾಖ್ಯವು ಹುಟ್ಟುತ್ತದೆ. ಆದಿಶಕ್ತಿಯ ಅಮೃತತ್ತ್ವದ ಮೂಲಕ ಇದಕ್ಕೆ ಆ ಹೆಸರು ಪ್ರಾಪ್ತವಾಗಿದೆ. ಇದು ಕೋಟಿಸೂರ್ಯರ ಬೆಳಗನ್ನು ಪಡೆದು ಜ್ಯೋತಿಸ್ತಂಭಾಕೃತಿಯನ್ನು ತಳೆದಿರುತ್ತದೆ. ಈ ಲಿಂಗದಿಂದಲೇ ಸಚರಾಚರಸೃಷ್ಟಿಯ ಉತ್ಪತ್ತಿ, ಲಯ ಉಂಟಾಗುತ್ತದೆ. ಇದರಂತೆ ಇಚ್ಛಾಶಕ್ತಿ, ಜ್ಞಾನಶಕ್ತಿ ಮತ್ತು ಕ್ರಿಯಾಶಕ್ತಿ ಇವುಗಳ ಹತ್ತನೆಯ ಒಂದಂಶದಲ್ಲಿ ಕ್ರಮವಾಗಿ ಮೂರ್ತಸಾದಾಖ್ಯ, ಕರ್ತೃಸಾದಾಖ್ಯ ಮತ್ತು ಕರ್ಮಸಾದಾಖ್ಯಗಳು ಉದ್ಭವಿಸುತ್ತವೆ.[೧೦] ಮಾಯಿದೇವನು ಇಷ್ಟುಸುದೀರ್ಘವಾಗಿ ವಿವೇಚಿಸಿಲ್ಲ. ಆದರೆ ಮಾಯಿದೇವ ವಾತುಲಾಗಮದ ಕ್ರಮವನ್ನೇ ಅನುಸರಿಸಿದ್ದರೂ, ಷಡ್ಲಿಂಗಗಳ ಕುರಿತಾದ ಅವನ ವಿವರಣೆಯಲ್ಲಿ ಸ್ಪಷ್ಟವಾಗಿ ಭೇದ ಕಂಡುಬರುತ್ತದೆ. ಚನ್ನಬಸವಣ್ಣನವರ ಕರಣ ಹಸಿಗೆ[೧೧] ಮತ್ತು ಸಿದ್ಧಲಿಂಗ ಶಿವಯೋಗಿಗಳ ವಚನಗಳು ಆಗಮೋಕ್ತ ಕ್ರಮವನ್ನೇ ವಿಭಿನ್ನ ರೀತಿಯಲ್ಲಿ ಹೇಳುತ್ತವೆ. ಆದರೆ ಷಡ್ಲಿಂಗಗಳು ಸಾದಾಖ್ಯಗಳ ಪರ್ಯಾಯ ಪದಗಳಂತು ಅಲ್ಲ ಎಂದು ಮೇಲಿನ ವಿವೇಚನೆಯಿಂದ ಸ್ಪಷ್ಟವಾಗುತ್ತದೆ.

ಅರ್ಧನಾರೀಶ್ವರ: ನಿರಾಮಯ ಷಟ್‌ಸ್ಥಲವು ಅರ್ಧನಾರೀಶ್ವರ ಸ್ವರೂಪವಾಗಿರುತ್ತದೆ. ಇಂಥ ತತ್ತ್ವವನ್ನು ನಾವು ಬೃಹದಾರಣ್ಯಕದಲ್ಲಿ ನೋಡಬಹುದು. (ಅದರ ಕಲ್ಪನೆಯ ಬೆಳವಣಿಗೆಯನ್ನು ಹಿಂದೆ ಗಮನಿಸಲಾಗಿದೆ)

ಸ ವೈ ನೈವ ರೇಮ ತಸ್ಮಾದೇಕಾಕಿ ನ ರಮತೆ ಸ ದ್ವಿತೀಯಮೈಚ್ಛತ್ ಸಹೈತಾವಾನಾ ಸ ಯಥಾ ಸ್ತ್ರೀಪುಮಾಂಸೌ ಸಂಪರಿಷ್ವಕ್ತೌ ಸ ಇಮಮೇವಾತ್ಮಾನಂ ದ್ವೇಧಾ ಪಾತಯತ್ತತಃ ಪತಿಶ್ಚ ಪತ್ನೀ ಚಾ ಭವತಾ ತಸ್ಮಾದಿ ಧರ್ಮರ್ಧಗಲಮಿವ ಸ್ವ ಇತಿ ಹ ಸ್ಮಾಹ ಯಾಜ್ಞವಲ್ಕ್ಯ ಸ್ತಸ್ಮಾದಯಮಾಕಾಶಃ ಸ್ತ್ರಿಯಾ ಪರ್ವತ ಏವ ತಾಂ ಸಮಭವತ್ತತೋ ಮನಷೋ ಅಜಾಯಂತ.......[೧೨]

೯. ವಾತುಲಾಗಮ, ತತ್ತ್ವಭೇದಪಟಲ, ೪೨-೬೫.

೧೦. ವಾತುಲಾಗಮ, ತತ್ತ್ವಭೇದಪಟಲ, ೪೨-೬೫.

೧೧. ಡಾ. ಆರ್.ಸಿ.ಹಿರೇಮಠ (೧೯೬೬) ಷಟ್‌ಸ್ಥಲಪ್ರಭೆ, ೩೮೩.

೧೨. ಬೃಹದಾರಣ್ಯಕೋಪನಿಷತ್, ಪ್ರ.ಅ.ಚ.ಬ್ರಾಹ್ಮಣ, ಮಂತ್ರ ೨.

ಇದರಿಂದ ಸಕಲ ನಿಷ್ಕಲ ವೈವಿಧ್ಯ ಅಭಿವ್ಯಕ್ತವಾಗುತ್ತದೆ. ವಾತುಲಾಗಮದಲ್ಲಿ ಶಿವಸ್ಥಲವೇ ನಿಷ್ಕಲ. ಅದು ಯೋಗಿಗಳ ಆತ್ಮಕಲ್ಯಾಣಕ್ಕಾಗಿ ತನ್ನ ಶಕ್ತ್ಯನ್ವೇಷ ಕ್ರಿಯೆಯಿಂದ ಸಕಲ ನಿಷ್ಕಲರೂಪ ಧರಿಸುತ್ತದೆ. ಮುಂದೆ ಸಕಲರೂಪ ಧಾರಣಮಾಡುವುದು. ವಾತುಲಾಗಮದನ್ವಯ ಸಕಲನಿಷ್ಕಲರೂಪವೇ ಮಾಯಿದೇವ ಹೆಸರಿಸಿರುವ ಮಹಲಿಂಗವೆಂದು ವಿದಿತವಾಗುತ್ತದೆ. ಇದೇ ವಿಧಾನವನ್ನು ಕಲ್ಲುಮಠದ ಪ್ರಭುದೇವನ ಲಿಂಗಲೀಲಾವಿಲಾಸದ ಚಾರಿತ್ರದಲ್ಲಿ ನಿಷ್ಕಲ ಲಿಂಗ ಸ್ಥಲ, ಮಹಾಲಿಂಗ ಸ್ಥಲ, ಲಿಂಗಮೂರ್ತಿಸ್ಥಲ ಎಂದು ಸ್ಥಲವಿಭಜನೆಯಲ್ಲಿ ಮುಂದುವರೆದಿದೆ. ಹೀಗೆ ಷಟ್‌ಸ್ಥಲವು ಸಕಲ ಪರಶಿವಸ್ವರೂಪವಾಗಿದೆ. ದೃಶ್ಯ ಪ್ರಪಂಚವೇ ಷಟ್‌ಸ್ಥಲ. ಎಂದರೆ, ವ್ಯಕ್ತಬ್ರಹ್ಮ. ಇಲ್ಲಿ ನಿವೃತ್ತಿ ಪ್ರಾರಂಭವಾಗುವುದು. ನಿರಾಮಯ ಷಟ್‌ಸ್ಥಲವು ನಿರಂಜನಾತೀತ ಷಟ್‌ಸ್ಥಲವಾಗುವ ಅವಸ್ಥೆಯಿದು. ಇದನ್ನೇ ಸರ್ವಶೂನ್ಯ ನಿರಾಲಂಬವೆಂದು ಕರೆಯಲಾಗಿದೆ. ಇದು ಷಟ್‌ಸ್ಥಲದ ವಿಕಾಸಮಾರ್ಗ.

ಉಪನಿಶತ್ ಸಾಂಖ್ಯ, ಮಹಾಭಾರತ ಸಾಂಖ್ಯಗಳು ಕಾರಿಕಾ ಸಾಂಖ್ಯಕ್ಕಿಂತ ಭಿನ್ನವಾಗಿವೆ. ಏಕೆಂದರೆ ಅವು ಅದ್ವೈತ ಬೋಧಕವಾಗಿವೆ. ಅವುಗಳ ಪ್ರಕಾರ ಪ್ರಕೃತಿಯು ಪುರುಷಾಧೀನ ತತ್ತ್ವ. ಇದೇ ವಿಚಾರವಾದವನ್ನು ಶ್ವೇತಾಶ್ವತರೋಪನಿಷತ್ತಿನಲ್ಲಿ ಕಾಣುತ್ತೇವೆ.[೧೩] ಪುರುಷನೇ ಪರಮತತ್ತ್ವವಾಗಿರುವದಲ್ಲದೆ ಶಕ್ತಿಯುಳ್ಳವನೂ ಆಗಿರುವದರಿಂದ ಇದು ಶಿವಾದ್ವೈತ ಅಥವಾ ಶಕ್ತಿವಿಶಿಷ್ಟತತ್ತ್ವವನ್ನು ಬೋಧಿಸುವ ಪ್ರಪ್ರಥಮ ಶೈವೋಪನಿಷತ್ತು. ಷಟ್‌ಸ್ಥಲ ಸಿದ್ಧಾಂತವು ಈ ಉಪನಿಷತ್ತಿನಿಂದ ಶಕ್ತಿವಿಶಿಷ್ಟತತ್ತ್ವವಿಚಾರವನ್ನು ಸ್ವೀಕರಿಸಿದುದರಲ್ಲಿ ಸಂದೇಹವಿಲ್ಲ.

ಷಟ್‌ಸ್ಥಲವೆಂದರೆ ಷಟ್‌ಸ್ಕಂದವೆಂದು ವಚನಕಾರರು ಹೇಳುತ್ತಾರೆ. ಬೌದ್ಧರೂ ಕೂಡ ಸ್ಕಂದದ ವಿಚಾರವನ್ನು ಪ್ರತಿಪಾದಿಸುತ್ತಾರೆ. ಇವರ ಪ್ರಕಾರ ಅದು ಪಂಚಸ್ಕಂದ. ಪಂಚಸ್ಕಂದಗಳೆಂದರೆ, ಪಂಚತತ್ತ್ವಗಳಾಗಿರುವಂತೆ ಷಟ್ ಸ್ಕಂದವೆಂದರೆ ಷಟ್‌ತತ್ತ್ವಗಳಾಗಿವೆ. ಅವು ಆತ್ಮ, ಆಕಾಶ, ವಾಯು ಇತ್ಯಾದಿ. ಇವುಗಳ ಪರ್ಯಾಯ ಪದಗಳು ಭಕ್ತ್ಯಾಂತ ಆರು ಸ್ಥಲಗಳು. ಬೌದ್ಧರ ಸ್ಕಂದದ ಅಂಗಗಳು ಮನೋಸಂಭೂತ. ಮಾಯಿದೇವ ಮತ್ತು ಶರಣರು ಹೇಳುವ ಸ್ಕಂದಗಳು ಆತ್ಮಸಂಭೂತ. ಈ ವಿವರಣೆಯಿಂದ ಬೌದ್ಧ ಹಾಗೂ ವೀರಶೈವರ ಸ್ಕಂದಗಳ ತತ್ತ್ವಾಂತರದಲ್ಲಿ ಖಚಿತವಾದ ಅಂತರ ಕಂಡುಬರುತ್ತದೆ. ವೀರಶೈವದ ಸ್ಕಂದದ ವಿಕಾಸ ಕ್ರಮವನ್ನು ನಾವು ಬೌದ್ಧರ ಪೂರ್ವದ ಸಾಹಿತ್ಯವಾದ ಉಪನಿಷತ್ತುಗಳಲ್ಲಿ ಕಾಣುತ್ತೇವೆ. ಅದನ್ನು ಕೆಳಗಿನಂತೆ ಗುರುತಿಸಬಹುದು.

ತೈತ್ತರೀಯೋಪನಿಷತ್ತಿನಲ್ಲಿ ಸ್ಕಂದದ ವಿಕಾಸವು ಆತ್ಮನಿಂದ ಹೀಗೆ ಪ್ರಾರಂಭಗೊಳ್ಳುತ್ತದೆ :

ತಸ್ಮಾದ್ವಾಏತಸ್ಮಾದಾತ್ಮನಾ ಆಕಾಶಃ ಸಂಭೂತಃ। ಆಕಾಶಾದ್ವಾಯುಃ। ವಾಯೋರಗ್ನಿಃ॥
ಅಗ್ನೇರಾಪಃ॥ ಅದ್ಭ್ಯಃ ಪೃಥಿವೀ ॥ ಪೃಥಿವ್ಯಾ ಔಷಧಯಃ॥ ಔಷಧಿಭ್ಯೋಽನ್ನಮ್॥
ಅನ್ನಾತ್ಪುರುಷಃ॥ ಸವಾ ಏಷಪುರುಷೋಽನ್ನರಸಮಯಃ॥ ತಸ್ಯ ಇದಮೇವ ಶಿರಃ॥
ಅಯಂ ದಕ್ಷಿಣಃ ಪಕ್ಷಃ॥ ಅಯಮುತ್ತರಃ ಪಕ್ಷಃ ॥ ಅಯಮಾತ್ಮಾ॥ ಇದಂ ಪುಚ್ಛ ಪ್ರತಿಷ್ಠಾ॥[೧೪]
ತದಪ್ಯೇಷ ಶ್ಲೋಕೊ ಭವತಿ ॥ ಇತಿ ಪ್ರಥಮೋನುವಾಕಃ॥

ಛಾಂದೋಗ್ಯದಲ್ಲಿ ಮೇಲಿನದರಕ್ಕಿಂತ ಸ್ಪಷ್ಟವಾಗಿದೆ :

---

೧೩. "ಮಾಯಾಂತು ಪ್ರಕೃತಿಂ ವಿದ್ಯಾನ್ಮಾಯಿನಂ ತುಮಹೇಶ್ವರಂ" ಶ್ವೇತಾಶ್ವತರೋಪನಿಷತ್, ೪-೧೦.

೧೪. ತೈತ್ತರೀಯೋಪನಿಷತ್ತು, ದ್ವಿತೀಯಬ್ರಹ್ಮಾನಂದವಲ್ಲಿ, I, II.

ಸದೇವ ಸೋಮ್ಯೇದಮಗ್ರ ಆಸೀದೇಕಮೇವಾದ್ವಿತೀಯಂ ತದ್ಧೈಕ
ಆಹುರಸದೇವೇದಮಗ್ರ ಆಸೀದೇಕಮೇವಾದ್ವಿತೀಯಂ ತಸ್ಮಾದಸತಃ
ಸಜ್ಜಾಯೇತೇತಿ ಸತ್ವೇವ ಸೋಮ್ಯೇದಮಗ್ರ ಆಸೀದೇಕಮೇವಾದ್ವತೀಯಮ್ ||೨|| ತದೈಕ್ಷತ
ಬಹುಸ್ಯಾಂ ಪ್ರಜಾಯೇಯೇತಿ ತತ್ತೇಽಸೃಜತ ತತ್ತೇಜ ಬಹುಸ್ಯಾಂ ಪ್ರಜಾಯೇ
ಯೇತಿ ತದಪೋಽಸೃಜತ ತಸ್ಮಾದ್ಯತ್ರ ಕ್ವಚ ಶೋಚತಿ
ಸ್ವೇದತಿ ವಾ ಪುರುಷತೇಜಸ ಏವ ತದಧ್ಯಾಪೊ ಜಾಯಂತೆ ||೩||
ತಾ ಆಪಃ ಐಕ್ಷಂತ ಬಹ್ವ್ಯಃ ಸ್ಯಾಮ ಪ್ರಜಾಯೇಮಹೀತಿ ತಾ ಅನ್ನಮಸೃಜಂತ ತಸ್ಮಾದ್ಯತ
ಕ್ವಚ ವರ್ಷತಿ ತದೇವ ಭುಯಿಷಮನ್ನಂ ಭವತದ್ಭ್ಯ ಏವ ತದಧ್ಯನ್ನಾದ್ಯ ಜಾಯತೆ ||[೧೫]

ಐತರೇಯದಲ್ಲಿ ಇಂತಿದೆ :

ಆತ್ಮಾವಾ ಇದಮೇಕ ಏವಾಗ್ರ ಆಸೀನ್ನಾನ್ಯತ್ಕಿಂಚನಮಿಷತ್ ಸ ಈಕ್ಷತ
ಲೋಕಾನ್ನುಸೃಜಾಇತಿ ||೧|| ಸ ಇಮಾಂ ಲೋಕಾನಸೃಜತ
ಅಂಭೋಮರೀಚೀರ್ಮರಮಾಪೋಽದೋಽಂಭಃ ಪರೇಣದಿವಂ ದ್ಯೌಃ
ಪ್ರತೀಷ್ಠ್ಯಾಽಂತರಿಕ್ಷಂ ಮರೀಚಯಃ|| ಪೃಥಿವೀಮರೋಯಾ ಅಧಸ್ತಾತ್ತಾ ಆಪಃ ||೨||[೧೬]

ಹೀಗೆ ಷಟ್‌ಸ್ಕಂದ ಅಥವಾ ಷಟ್‌ಸ್ಥಲದ ಮೂಲವು ಉಪನಿಷತ್ತುಗಳಲ್ಲಿದ್ದುದನ್ನು ಕಾಣುತ್ತೇವೆ. ಇದೇ ಅರ್ಥದಲ್ಲಿ ಷಟ್‌ಸ್ಥಲದರ್ಶನವು ವೇದೋಪನಿಷತ್ತುಗಳಲ್ಲೂ ಇದೆ ಎಂಬುದಾಗಿ ವಿದ್ವಾಂಸರು ವಾದಿಸುತ್ತಾರೆ.

**ಷಟ್‌ಸ್ಥಲವೆಂದರೆ ಷಡಾಶ್ರಮ :**

ಷಟ್‌ಸ್ಥಲವೆಂದರೆ ಷಡಾಶ್ರಮಗಳೆಂದು ಶಿವಾನುಭವಸೂತ್ರದ ಚತುರ್ಥಾಧಿಕರಣದ ಶ್ಲೋಕ ೩೭ರಲ್ಲಿ ಮಾಯಿದೇವ ಹೀಗೆ ಹೇಳುತ್ತಾನೆ.

ಐಕ್ಯಸ್ಥಲಾದಿಭಕ್ತಾಂತಸ್ಥಲಸಂಭೂತಿರೀರಿತಾ।
ಐಕ್ಯದಭಕ್ತಪರ್ಯಂತಾಶ್ರಮಿಣಾಂ ಷಟ್‌ಸ್ಥಲಾತ್ಮನಾಂ.||

ಈ ಷಡಾಶ್ರಮದ ಕಲ್ಪನೆ ಬೌದ್ಧ ಸಾಹಿತ್ಯದಲ್ಲಿಯೂ ಕಾಣುತ್ತೇವೆ[೧೭] ಆಶ್ರಮ ವಿಚಾರದ ಕಲ್ಪನೆ ಇವೆರಡೂ ದರ್ಶನಗಳ ಪೂರ್ವದ ವೈದಿಕಸಾಹಿತ್ಯದಲ್ಲಿ ಪ್ರಥಮವಾಗಿ ವ್ಯಕ್ತವಾಗಿದೆ. ವೈದಿಕ ಸಾಹಿತ್ಯದಲ್ಲಿ ಇವು ಕ್ರಮವಾಗಿ ವಿಕಾಸಗೊಂಡಿವೆ. ವೈದಿಕಸಾಹಿತ್ಯದ ಆಶ್ರಮವಿಚಾರಕ್ಕೂ ವೀರಶೈವ ಷಡಾಶ್ರಮಕ್ಕೂ ಗಮನಾರ್ಹವಾದ ಅಂತರವಿದೆ. ಚಾತುರ್ವರ್ಣ್ಯದಲ್ಲಿ ಕೆಲವೇ ವರ್ಣದವರಿಗೆ ಆ ಆಶ್ರಮಗಳು ಮೀಸಲಾಗಿವೆ. ವೀರಶೈವರ ಈ ಷಡಾಶ್ರಮದಲ್ಲಿ ಇಂಥ ವಿಂಗಡಣೆ ಕಾಣಬರುವುದಿಲ್ಲ. ಚತುರಾಶ್ರಮದಲ್ಲಿ ಕರ್ತವ್ಯಗಳನ್ನು ವಯೋಮಾನದ ಮೇಲೆ ನಿರ್ಧರಿಸಲಾಗಿದೆ.

---

೧೫. ಛಾಂದೋಗ್ಯೋಪನಿಷತ್, ಅ. vi ಖಂಡ. II.

೧೬. ಐತರೇಯ, ದ್ವಿತೀಯ ಖಂಡ.

೧೭. In the Niddeca (I p.58) Munis are subdivided into six classes as quoted in Early Monastic Buddhism, p.67. fn 6 Nalinaksha Dutt (Calcutt Oriental Book Agency, Calcutta, 1960.)

ಷಡಾಶ್ರಮದಲ್ಲಿ ವಯಸ್ಸಿನ ಕಟ್ಟಳೆ ಇಲ್ಲ. ಅಲ್ಲಿ ಕಾಲತತ್ವಕ್ಕೆ ಅಷ್ಟಾಗಿ ಮಹತ್ವ ಕೊಟ್ಟಿಲ್ಲ. ಚತುರಾಶ್ರಮದಲ್ಲಿ ಸಂನ್ಯಾಸಕ್ಕೆ ಅಂದರೆ ಜ್ಞಾನಕ್ಕೆ ಮಹತ್ವವಿದೆ. ಅದಕ್ಕೆ ಪರಮೋನ್ನತ ಸ್ಥಾನವಿರಿಸಿ ಕರ್ಮವನ್ನು ಗೌಣಗೊಳಿಸಲಾಗಿದೆ. ಸಂನ್ಯಾಸವೆಂದರೆ ಕರ್ಮ ಸಂನ್ಯಾಸವೆಂದೂ ಅಲ್ಲಿ ಅರ್ಥೈಸಲಾಗುತ್ತದೆ. ಷಡಾಶ್ರಮದಲ್ಲಿ ಜ್ಞಾನ ಮತ್ತು ಕರ್ಮ ಇವೆರಡಕ್ಕೂ ಸಮಾನವಾದ ಸ್ಥಾನವಿದೆ. ವೈದಿಕ ಸಾಹಿತ್ಯದ ಪ್ರಕಾರ ಚತುರಾಶ್ರಮಗಳಲ್ಲಿ ಕ್ರಮಬದ್ಧತೆಯಿದೆ. ಅದೇ ಪ್ರಕಾರ ಷಡಾಶ್ರಮಗಳನ್ನು ಕ್ರಮಯುಕ್ತವಾಗಿ ಆಚರಿಸಬೇಕೆಂಬುದನ್ನು ವೀರಶೈವಶಾಸ್ತ್ರ ತಿಳಿಸುತ್ತದೆ. ಆಶ್ರಮವನ್ನು, ಅನುಷ್ಠಾನ ಮಾಡುವ ವಿಧಾನವು ಎರಡೂ ಶಾಸ್ತ್ರಗಳಲ್ಲಿ ಒಂದೇ ವಿಚಾರವನ್ನು ಇಟ್ಟುಕೊಂಡಿರುವುದು ಅದರ ಚರಿತ್ರೆಯನ್ನು ಅವಲೋಕಿಸುವದರಿಂದ ಇನ್ನೂ ಸುಸ್ಪಷ್ಟವಾಗುತ್ತದೆ. ಚತುರಾಶ್ರಮಗಳನ್ನು ಕ್ರಮಯುಕ್ತವಾಗಿ ಆಚರಿಸಬೇಕೆಂದು ವೈದಿಕ ಸಾಹಿತ್ಯದ ಅಭಿಪ್ರಾಯವಿತ್ತು. ಆದರೆ ಮಹಾಭಾರತದ ಕಾಲಕ್ಕೆ ಈ ಕ್ರಮಪದ್ಧತಿಯಲ್ಲಿ ಪರಿವರ್ತನೆಯಾಯಿತು. ಇದರಿಂದಾಗಿ ವಿಕಲ್ಪ ಪದ್ಧತಿ ಬಳಕೆಗೆ ಬಂದಿತು. ಹೀಗಾದುದರಿಂದ ಒಂದನೆಯ ಆಶ್ರಮಿಯು ನೇರವಾಗಿ ಕೊನೆಯ ಆಶ್ರಮವನ್ನು ಅಥವಾ ಮೂರನೆಯ ಆಶ್ರಮವನ್ನು ಆಚರಿಸಲು ಅವಕಾಶ ದೊರೆಯಿತು. ಇದೇರೀತಿ ಕ್ರಾಂತಿಕಾರೀ ಬದಲಾವಣೆಯು ಚನ್ನಬಸವಣ್ಣನಿಂದ ಷಟ್‌ಸ್ಥಲ ಕ್ರಮಪದ್ಧತಿಯಲ್ಲಿಯೂ ಆದುದನ್ನು ನಾವು ನೋಡುತ್ತೇವೆ. ಪ್ರವೃತ್ತಿಪರವಾಗಿ ಷಡಾಶ್ರಮವನ್ನು ಕ್ರಮವಾಗಿ ಆಚರಿಸುವಂತೆ, ನಿವೃತ್ತಿ ಪರವಾಗಿ ಷಡಾಶ್ರಮವನ್ನು ಕ್ರಮವಾಗಿ ಆಚರಿಸುವ ರೂಢಿಯಿದ್ದು ಅನುಕ್ರಮವಾಗಿ ಭಕ್ತಸ್ಥಲದಿಂದ ಪ್ರಾರಂಭವಾಗುವಂತೆ ಐಕ್ಯಸ್ಥಲದಿಂದ ಪ್ರಾರಂಭವಾಗುವುದು. ಪ್ರಕರಣ ಗ್ರಂಥಗಳೆಂದು ಹೇಳಲಾದ ಸಿದ್ಧಾಂತ ಶಿಖಾಮಣಿ, ಕ್ರಿಯಾಸಾರ, ಶ್ರೀಕರ ಭಾಷ್ಯ ಮತ್ತು ಕೈವಲ್ಯಸಾರ ಮುಂತಾದ ಸಂಸ್ಕೃತ ಗ್ರಂಥಗಳು ಭಕ್ತಸ್ಥಲದಿಂದ ಪ್ರಾರಂಭಗೊಂಡರೆ ಮಾಯಿದೇವನ ಶಿವಾನುಭವ ಸೂತ್ರವು ಐಕ್ಯಸ್ಥಲದಿಂದ ಆರಂಭಗೊಳ್ಳುವದನ್ನು ಗಮನಿಸಬಹುದು.

> ಐಕ್ಯಂಚ ಶರಣಂ ನಾಮ ಪ್ರಾಣಲಿಂಗಿ ಪ್ರಸಾದಿ ಚ ।
> ಮಾಹೇಶ್ವರಂ ಭಕ್ತಮಿತಿ ಪ್ರವೃತ್ತಿಃ ಸೃಷ್ಟಿಮಾರ್ಗತಃ॥[೧೮]

ಇದರ ಬದಲು ವಿಕಲ್ಪ ಪದ್ಧತಿ ಮತ್ತು ಸಮಸಮಾಚಾರ ಪದ್ಧತಿಗಳೆರಡೂ ರೂಢಿಯಲ್ಲಿ ಬಂದವು. ಈ ಎರಡು ಪದ್ಧತಿಗಳಲ್ಲಿ ಒಂದಾದ ವಿಕಲ್ಪದ ಪ್ರಕಾರ ಯಾವುದಾದರೂ ಆಶ್ರಮದಿಂದ ಪ್ರಾರಂಭಮಾಡಿಬಿಡಬಹುದು. ಷಡಾಶ್ರಮಕ್ಕೆ ಅತ್ಯಾಶ್ರಮವೆಂದೂ ಹೆಸರಿದೆ[೧೯] ಉಪನಿಷತ್ತಿನಲ್ಲಿಯೂ ಅತ್ಯಾಶ್ರಮವನ್ನೂ ಬೋಧಿಸಲಾಗಿದೆ. ಚತುರಾಶ್ರಮದಿಂದ ಕೈವಲ್ಯವು ಅಸಾಧ್ಯವಾದಾಗ ಅತ್ಯಾಶ್ರಮ ರೂಢಿಯಲ್ಲಿ ಬಂದಿತೆಂದು ಡಾ. ಎ.ಬಿ. ಕೀಥರ ಅಭಿಪ್ರಾಯ.[೨೦] ನಂತರ ಈ ಅತ್ಯಾಶ್ರಮವನ್ನೂ ಚತುರಾಶ್ರಮದಲ್ಲಿಯೇ ವಿಲೀನಗೊಳಿಸಿಕೊಳ್ಳಲಾಯಿತೆಂದು ಹೇಳಲಾಗುತ್ತದೆ. ಶ್ವೇತಾಶ್ವತರಕ್ಕಿಂತ ಕೇನ, ಮುಂಡಕ, ಕಠೋಪನಿಷತ್ತುಗಳಲ್ಲಿ ಆಶ್ರಮಗಳ ವಿಚಾರ ಇನ್ನೂ ಸ್ಫುಟವಾಗಿದೆ. ಈ ಅತ್ಯಾಶ್ರಮ ಕಲ್ಪನೆ ವೇದಗಳಲ್ಲಿ ಮೂಡಿ ಆಗಮಗಳಲ್ಲಿ ಸ್ಥಿರವಾದ ಸ್ಥಾನಪಡೆದಂತಿದೆ. ಶ್ರೌತಾಗಮಗಳಲ್ಲಿ ಅದರ ಸ್ವರೂಪ ಲಕ್ಷಣಗಳನ್ನು ವಿವೇಚಿಸಲಾಗಿದೆ. ವೀರಶೈವವು ವೈದಿಕ ಮತ್ತು ತಾಂತ್ರಿಕಗಳ ಸಾರವೆಂಬುದನ್ನು ಈಗಾಗಲೇ ವಿದ್ವಾಂಸರು ಒಪ್ಪಿದ್ದುಂಟು.

**'ಷಟ್‌ಸ್ಥಲ'ವೆಂದರೆ ಅನುಭಾವ:**

ಷಟ್‌ಸ್ಥಲವೆಂದರೆ ಬ್ರಹ್ಮ ಎಂಬುದಾಗಿ ಹಿಂದೆ ಹೇಳಲಾಗಿದೆ. ಅನುಭಾವವೆಂದರೂ ಒಂದರ್ಥದಲ್ಲಿ ಬ್ರಹ್ಮವೇ ಆಗಿದೆ. ಆದ್ದರಿಂದ ಇಲ್ಲಿ ಷಟ್‌ಸ್ಥಲವೆಂದರೆ ಅನುಭಾವ. ಇವೆರಡರ ಪರ್ಯಾಯ ಪದ ಯೋಗ. ಷಟ್‌ಸ್ಥಲವು

---

೧೮. ಶಿವಾನುಭವಸೂತ್ರಂ ಅಧಿಕರಣ, ೪, ಶ್ಲೋಕ ೪೩.

೧೯. ಶ್ವೇತಾಶ್ವತರೋಪನಿಷತ್, vi, ೨೧, ii, ಸೂಕ್ಷ್ಮತಂತ್ರ, vii, ೮೭.

೨೦. Dr. A.B. Keith, (1926) Religion and Philosophy of the Vedas, p.68.

ಅಳಿಯದೆ ಕೂಡುವ ಯೋಗವೆಂದು ಅಲ್ಲಮ ಪ್ರಭುದೇವರ ಅಭಿಪ್ರಾಯ.[೨೧] ಷಟ್‌ಸ್ಥಲೋಪಾಸನೆಯಲ್ಲಿ ಅಧಿದೇವತೆಗಳ ವಿಚಾರ ಬಂದಿದೆ.

ಬ್ರಹ್ಮಹರಿಶ್ಚರುದ್ರಶ್ಚ ಈಶ್ವರಶ್ಚ ಸದಾಶಿವಃ
ಸಾಕ್ಷಾತ್ಪರ ಶಿವಶ್ಚೇತಿ ಕ್ರಮಶಃ ಷಟ್‌ಸ್ಥಲಾತ್ಮಕಾ:||[೨೨]

ಈ ಅಧಿದೇವತಾ ಪದ್ಧತಿಯನ್ನು ಉಪನಿಷತ್ತುಗಳಲ್ಲಿಯೂ ಕಾಣಬಹುದು. ಷಡಿಂದ್ರಿಯಗಳೇ ಷಡಂಗಗಳಾಗಿರುತ್ತವೆ. ಆ ಷಡಂಗಗಳಿಗೆ ಷಡ್ಲಿಂಗ ಸಂಬಂಧವನ್ನು ಷಟ್‌ಸ್ಥಲದರ್ಶನ ತಿಳಿಸುತ್ತದೆ.

ಷಟ್‌ಸ್ಥಲವೆಂದರೆ ಭಕ್ತ ಹಾಗೂ ಜಂಗಮದ ಸಾಮರಸ್ಯ. ಹೀಗೆ ಹೇಳುವಲ್ಲಿ ಎರಡು ವಿಚಾರಗಳು ಸ್ಪಷ್ಟವಾಗುತ್ತವೆ. ಪರಬ್ರಹ್ಮವು ತನ್ನನ್ನು ತಾನು ಪೂಜಿಸಿಕೊಳ್ಳುವದಕ್ಕಾಗಿ ಭಕ್ತ (ಪೂಜಕ) ಮತ್ತು ಜಂಗಮ (ಪೂಜ್ಯ) ವಾಯಿತು. ಒಂದೇ ಎರಡಾದಂತೆ ಆ ಎರಡು ಉರಿಕರ್ಪೂರದಂತೆ ಒಂದಾದವು. ಪೂಜ್ಯಪೂಜ್ಯಕ ವಿಚಾರವನ್ನು ಬೃಹದಾರಣ್ಯಕದಲ್ಲಿ ನಾವು ಕಾಣುತ್ತೇವೆ.[೨೩] ಷಟ್‌ಸ್ಥಲಗಳನ್ನು ಷಡ್ವಿಧ ಫಲಗಳಿಗೂ ಹೋಲಿಸಲಾಗುತ್ತದೆ. ಆ ಫಲಗಳ ವಿವರ ಇಂತಿವೆ. ೧) ಭಕ್ತಿ, ೨) ಕರ್ಮಕ್ಷಯ, ೩) ನಿರ್ಮಲಮತಿ, ೪) ವಿಚಾರ ದರ್ಪಸಂಕ್ಷಯ, ೫) ಸಮ್ಯಕ್‌ಜ್ಞಾನಗಳು.[೨೪] ಷಡ್ವಿಧವೀರಶೈವರನ್ನು ಷಟ್‌ಸ್ಥಲದಲ್ಲಿ ಮುಂದಿನಂತೆ ಗುರುತಿಸಲಾಗಿದೆ. ೧) ಭಕ್ತ, ೨) ಮಹೇಶ, ೩) ಪ್ರಸಾದಿ, ೪)ಪ್ರಾಣಲಿಂಗಿ, ೫) ಶರಣ, ೬) ಐಕ್ಯ. ಇದೇ ಹಿನ್ನೆಲೆಯಲ್ಲಿ ಡಾ. ಆರ್.ಸಿ. ಹಿರೇಮಠ "ಒಂದು ವೀರಶೈವವೇ ಆರು ವೀರಶೈವವಾಗಿ ವರ್ತಿಸುವುದು"[೨೫] ಎಂದು ಹೇಳುತ್ತಾರೆ. ಏಕೋತ್ತರ ಶತಸ್ಥಲ ಮತ್ತು ದ್ವಿಶತಷೋಡಶಸ್ಥಲ(೨೧೬) ಗಳೆಂದರೂ, ಷಟ್‌ಸ್ಥಲಗಳೇ ಆಗಿವೆ. ಇವೆರಡನ್ನು ಷಟ್‌ಸ್ಥಲದರ್ಶನದ ವಿಶ್ಲೇಷಣಾಸ್ಥಲಗಳೆಂದು ಹೇಳಬಹುದು. ಇವುಗಳಿಗೆ ಅವಾಂತರ ಸ್ಥಲಗಳೆಂದು ಸಿದ್ಧಾಂತಶಿಖಾಮಣಿ ಹೆಸರಿಸಿದೆ. ಷಟ್‌ಸ್ಥಲವೆಂದರೆ, ಉಭಯಮಾರ್ಗ, ಅಂತರಂಗಮಾರ್ಗ, ಬಹಿರಂಗ ಮಾರ್ಗವೆಂದು ಗೌರೀನಾಥಶಾಸ್ತ್ರೀ ವಿವರಿಸುತ್ತಾರೆ.[೨೬] ಷಟ್‌ಸ್ಥಲವೆಂದರೆ ಷಟ್‌ವಿಧವಾದ (sixview points) ಎಂದು ಡಾ. ವ್ಹಿ.ಎಸ್. ಕಂಬಿ ಹೇಳುತ್ತಾರೆ.[೨೭]

ಒಟ್ಟಾಗಿ ಷಟ್‌ಸ್ಥಲದರ್ಶನವು, ಸಾಂಖ್ಯದಂತೆ ತತ್ವಗಳನ್ನು ತಿಳಿಸುತ್ತದೆ, ಯೋಗದಂತೆ ಷಡಂಗಮಾರ್ಗಹೇಳಿದೆ, ನ್ಯಾಯದಂತೆ ಸುಸಂಬಂಧವಾದ ತರ್ಕನೀಡಿದೆ, ವೈಶೇಷಿಕದಂತೆ ವಿಶೇಷ(ಶಕ್ತಿವಿಶೇಷ)ವನ್ನು ವಿಶದ ಪಡಿಸುತ್ತದೆ. ಮೀಮಾಂಸದಂತೆ ಆಚಾರದ ಹಿರಿಮೆಯನ್ನು ಸಾರುತ್ತದೆ. ವೇದಾಂತದಂತೆ ಜ್ಞಾನವನ್ನು ಎತ್ತಿ ತೋರುತ್ತ

---

೨೧. ಪ್ರೊ. ಸಂ.ಶಿ. ಭೂಸನೂರಮಠ, (ಸಂ) (೧೯೫೬) ಶೂನ್ಯಸಂಪಾದನೆ, ಪು. ೩೪.

೨೨. ಶಿವಾನುಭವಸೂತ್ರಂ ಅಧಿಕರಣ, ೫, ಶ್ಲೋಕ ೮೭.

೨೩. ಬೃಹದಾರಣ್ಯಕೋಪನಿಷತ್, ೧-೪-೧೦.

೨೪. ವಿವೇಕಚಿಂತಾಮಣಿ (೧೯೬೯) ಸಂ. ಉಮಾಪತಿಶಾಸ್ತ್ರಿಗಳು, ಪು. ೧೧೦.

೨೫. ಡಾ. ಆರ್.ಸಿ.ಹಿರೇಮಠ, (ಸಂ) (೧೯೫೭) ಷಟ್‌ಸ್ಥಲಜ್ಞಾನಸಾರಾಮೃತ, ವ. ೯, ಪು. ೫.

೨೬. ಪಂ. ಗೌರೀನಾಥಶಾಸ್ತ್ರಿಗಳು (೧೯೫೭), ಷಟ್‌ಸ್ಥಲಶಾಸ್ತ್ರದ ಉಭಯಮಾರ್ಗ ಬೋಧಿನಿ, ಪು. ೫, ಶ್ರೀ ಗೌರೀನಾಥ ಗ್ರಂಥಮಾಲೆ.

೨೭. One may compare this with the six view points in Doctrines and Arguments in Indian Philosophy, on pp. 25-27, N. smart, George Allen an Unwin, 1964.

ಕ್ರಿಯೆಯನ್ನು ಅಳವಡಿಸಿಕೊಂಡಿದೆ. ಭಗವದ್ಗೀತೆಯು ಯೋಗಪದವನ್ನು ಎಷ್ಟು ವೈವಿಧ್ಯಮಯವಾಗಿ ಬಳಸಿದೆಯೋ ಹಾಗೆ ಷಟ್‌ಸ್ಥಲಶಾಸ್ತ್ರವು 'ಷಟ್‌ಸ್ಥಲ' ಪದವನ್ನು ಅಷ್ಟೇ ವೈವಿಧ್ಯವಾಗಿ ಬಳಸಿಕೊಂಡಿದೆ. 'ಷಟ್‌ಸ್ಥಲ' ವೆಂಬ ಪದವು ವೀರಶೈವ ದರ್ಶನ ಸಾಹಿತ್ಯದಲ್ಲಿ ಅತಿಮಹತ್ವದ ಪಾರಿಭಾಷಿಕ ಪದವಾಗಿದೆ.

**ಶಿವಾನುಭವ ಸೂತ್ರದ ಪ್ರಕಾರ ಪ್ರಮಾಣ-ಪ್ರಮೇಯಗಳು:**

ಶಿವಾನುಭವಸೂತ್ರದಲ್ಲಿ ತತ್ವ ಹಾಗೂ ತತ್ವಾತೀತವಸ್ತುವಿನ ಸ್ವರೂಪ ಸಂಬಂಧಗಳನ್ನು ಯಾವ ಪ್ರಮಾಣಗಳ ಮೇಲೆ ನಿರ್ಣಯಿಸಲಾಗಿದೆ ಎಂಬುದು ವಿಚಾರಾರ್ಹವಾಗಿದೆ. ಪ್ರತಿಯೊಂದು ದರ್ಶನದಲ್ಲಿಯೂ ಯುಕ್ತಿಯುಕ್ತಿಯಿಂದ ಈ ವ್ಯವಸ್ಥೆಯನ್ನು ಏರ್ಪಡಿಸಲಾಗಿದೆ. ಷಟ್‌ಸ್ಥಲದರ್ಶನವು ಅನುಭವಪ್ರಮಾಣವನ್ನವಲಂಬಿಸಿದ್ದರೂ ಅಲ್ಲಿಯೂ ಶಾಸ್ತ್ರೀಯವಾದ ತತ್ವವಿವೇಚನೆ ಇಲ್ಲದಿಲ್ಲ. ಯತಾರ್ಥಜ್ಞಾನವೇ ಪ್ರಮೇಯ. ನಿತ್ಯಾನಿತ್ಯ ವಸ್ತುಗಳ ಸ್ವರೂಪವನ್ನು ತಿಳಿದು ಕೊನೆಯಲ್ಲಿ ಸರ್ವಶೂನ್ಯನಿರಾಲಂಬವಾದ ಸ್ಥಲದ ಸಹಜಸ್ಥಿತಿಯೇ ಮೂಲವೆಂಬ ಜ್ಞಾನವು ಈ ದರ್ಶನದಲ್ಲಿ ಅನುಭವ ಪ್ರಮಾಣಕ್ಕೆ ಸಂವಿದಿತವಾಗುತ್ತದೆ. ಇದು ಪ್ರಮೆ. ಇದಕ್ಕೆ ಆಶ್ರಯವಾಗಿರುವಾತನು ಪ್ರಮಾತನು. ಅಂದರೆ ಅಂಗ (ಜೀವ). ವಿಷಯವಾಗಿರುವುದು ಪ್ರಮೇಯ, ಕೊನೆಗೆ ಅಲ್ಲಿ ಉಂಟಾಗುವ ಜ್ಞಾನ ಪ್ರಮಿತಿ. ಹೀಗೆ ಪ್ರಮಾಣ, ಪ್ರಮೇಯ, ಪ್ರಮಾತೃ, ಪ್ರಮಿತಿಯೆಂಬ ನಾಲ್ಕು ವಿಧದಲ್ಲಿ ಷಟ್‌ಸ್ಥಲ ತತ್ವಜ್ಞಾನವು ಪ್ರಪಂಚವನ್ನು ವಿಭಜಿಸುತ್ತದೆ. ಈ ಷಟ್‌ಸ್ಥಲದರ್ಶನದಲ್ಲಿಯೂ ಅನುಬಂಧ ಚತುಷ್ಟಯವಿದೆ. ಅಂಗ ಲಿಂಗದಲ್ಲಿ ಸಾಮರಸ್ಯವನ್ನು ಪಡೆಯುವುದೇ ವಿಷಯ. ಮಲತ್ರಯ ಕಳೆದು ಸಾಮರಸ್ಯ ರೂಪವಾದ ಕೈವಲ್ಯಪಡೆಯುವುದು ಪ್ರಯೋಜನ. ಅಷ್ಟಾವರಣ ಪಂಚಾಚಾರನಿಷ್ಠನಾಗಿ ಷಟ್‌ಸ್ಥಲ ನಿರತನಾದವನೇ ಅಧಿಕಾರಿ. ಲಿಂಗಾಂಗಸಾಮರಸ್ಯರೂಪವಾದ ವಿಷಯಕ್ಕೂ ಶಿವಾನುಭವಸೂತ್ರದಲ್ಲಿ ಪ್ರತಿಪಾದಿಸಲಾದ ಷಟ್‌ಸ್ಥಲದರ್ಶನಕ್ಕೂ ಇರುವ ಪ್ರತಿಪಾದ್ಯ - ಪ್ರತಿಪಾದಕ ಭಾವವೇ ಸಂಬಂಧ. ಇದೇ ಅನುಬಂಧ ಚತುಷ್ಟಯ. ಹೀಗೆ ಶಾಸ್ತ್ರೋಕ್ತವಾಗಿ ತತ್ವವಿವೇಚನೆ ಮಾಡಿರುವ ಷಟ್‌ಸ್ಥಲಕ್ಕೆ ವಿಶಿಷ್ಟವಾದ ಪ್ರಮಾಣಗಳಿರುವುದು ಸ್ವಾಭಾವಿಕವಾಗಿದೆ.

**ಪ್ರಮಾಣಗಳು:**

ಷಟ್‌ಸ್ಥಲದರ್ಶನದಲ್ಲಿ ಪ್ರತ್ಯಕ್ಷ, ಅನುಮಾನ ಮತ್ತು ಶಬ್ದ ಎಂಬ ಮೂರು ಪ್ರಮಾಣಗಳನ್ನು ಸ್ವೀಕರಿಸಲಾಗಿದೆ.[೨೮] ಇಂದ್ರಿಯಾರ್ಥ ಸನ್ನಿಕರ್ಷಜನ್ಯವಾದ, ವ್ಯಭಿಚಾರ ದೋಷರಹಿತವಾದ ಜ್ಞಾನವು ಪ್ರತ್ಯಕ್ಷವೆನಿಸುತ್ತದೆ. ವ್ಯಾಪ್ತಿಜ್ಞಾನದಿಂದ ಉಂಟಾಗುವ ಪರೋಕ್ಷ ವಸ್ತುವಿನ ಜ್ಞಾನ ಅನುಮಾನ. ಆಪ್ತವಾಕ್ಯದಿಂದ ಜನ್ಯವಾದ ಜ್ಞಾನ ಶಬ್ದಪ್ರಮಾಣದ ವಿಷಯ.[೨೯] ಈ ಲಕ್ಷಣಗಳಲ್ಲಿ ನ್ಯಾಯಾದಿಶಾಸ್ತ್ರಗಳು ಹೇಳುವುದನ್ನು ಶಿವಾದ್ವೈತ ಷಟ್‌ಸ್ಥಲದರ್ಶನದಲ್ಲಿಯೂ ಒಪ್ಪಿಕೊಳ್ಳಲಾಗಿದೆ. ಆದರೆ ಶಬ್ದಪ್ರಮಾಣದ ವಿಷಯದಲ್ಲಿ ಸ್ವಲ್ಪ ವೈಶಿಷ್ಟ್ಯವು ಕಂಡುಬರುತ್ತದೆ. ಆಪ್ತವಾಕ್ಯವಾದ ಶಬ್ದ ವೇದಗಳಂತೆ ಆಗಮಗಳೂ ಕೂಡ ಪ್ರಮಾಣ ಎಂಬುದು ಈ ದರ್ಶನ ಎತ್ತಿಹಿಡಿಯುವ ವಿಚಾರವಾಗಿದೆ. ವೇದಗಳು ಈಶ್ವರನ ನಿಶ್ವಸಿತರೂಪ (ಯಸ್ಯನಿಸ್ವಸಿತಂ ವೇದಾಃ) ಎಂದು ನಂಬಲಾದ

---

೨೮. 'ಪೂರ್ವಭಾಗನನುಮಾನದೃಷ್ಟವಿಮಳಶ್ರುತದಿಂದರಿದಲ್ಲಿ', ಶಿವಾಧವಶತಕ, ೫೦.

೨೯. ಮಾಯಿದೇವ ಇವುಗಳ ಲಕ್ಷಣವನ್ನು ಎಲ್ಲೂ ಹೇಳಿಲ್ಲ. ವಾತುಲಾಗಮದ ಉಪೋದ್ಘಾತ ಈ ಪ್ರಮಾಣಗಳ ಲಕ್ಷಣ ಇಂತಿದೆ.
(I) ಸಂಶಯಾದಿವಿನಿರ್ಮುಕ್ತಾ ಬಿಬ್ಯಕ್ತಿರ್ಮಾನಮುಚ್ಯತೇ
(ii) ಅನುಮಾನಂ ದೃಢವ್ಯಾಪ್ತ್ಯಾ ಪರೋಕ್ಷಾರ್ಥಾವಬೋಧಕಂ ।
(iii) ಪ್ರತ್ಯಕ್ಷೇಣಾನುಮಾನೇನಯದೇತತ್ತು ಸುನಿಶ್ಚಿತಂ ।
ಯೋವ್ಯಕ್ತಿ ಸೋಽಯಮಾಪ್ತಃ ಸ್ಯಾತ್ತಸ್ಮಾದಾಪ್ತತರಶ್ಶಿವಃ ॥
ಉದ್ಧೃತ : ಡಾ.ಜಿ. ಮರುಳಸಿದ್ಧಯ್ಯ(ಸಂ) (೧೯೭೭) ಶ್ರೀಕರಭಾಷ್ಯ (ಸಂ.೨), ಪು. ೧೭೮.

ಇವುಗಳಿಗೆ ಅನೇಕ ಭಾರತೀಯ ದರ್ಶನಗಳು ಪ್ರಮಾಣ್ಯವನ್ನು ಘೋಷಿಸಿವೆ. ಹೀಗೆಯೇ ಆಗಮಗಳಿಗೂ ಸಮಪ್ರಾಮಾಣ್ಯವನ್ನು ಶಿವಾದ್ವೈತವು ಒಪ್ಪಿಕೊಳ್ಳುತ್ತದೆ.

ಆಗತಂ ಶಿವವಕ್ತ್ರೇಭ್ಯೋಗತಂಚ ಗಿರಿಜಾಶ್ರುತೌ ।
ಮತಂ ಚ ವಾಸುದೇವಸ್ಯ ತಸ್ಮಾದಾಗಮ ಮುಚ್ಯತೇ ॥[೩೦]

ಎಂಬ ನಿರ್ವಚನದಿಂದ ಆಗಮಗಳು ಶಿವನಿಂದ ಬುದ್ಧಿ ಪೂರ್ವಕವಾಗಿ ಉಪದೇಶಿಸಲಾಯಿತೆಂದು ನಂಬಲಾಗಿದೆ. "ಕೇವಲ ನಿಶ್ವಾಸದಂತೆ ಪರಮಾತ್ಮನಿಂದ ಹೊರಹೊಮ್ಮಿದ ವೇದಗಳಿಗಿಂತಲೂ ಭಕ್ತರನ್ನು ಉದ್ಧಾರಮಾಡುವ ಪರಮೋದ್ದೇಶದಿಂದ ಶಿವನು ಬುದ್ಧಿಪೂರ್ವಕವಾಗಿ ಉಚ್ಚರಿಸಿದ ಆಗಮಗಳಿಗೆ ಹೆಚ್ಚಿನ ಪ್ರಾಮಾಣ್ಯವನ್ನು ಕೊಡುವುದು ಯುಕ್ತಿಯುಕ್ತವಾಗಿದೆ"[೩೧] ಎಂದು ಎಂ. ಶಿವಕುಮಾರಸ್ವಾಮಿ ಹೇಳುತ್ತಾರೆ. ವಾತುಲಾಗಮ ಪಾರಮೇಶ್ವರ ಮತ್ತು ಪೌಷ್ಕರಾಗಮವನ್ನು ಆಧರಿಸಿ ವೀರಶೈವಕ್ಕೆ ಅನ್ವಯವಾಗುವ ಅರ್ಥಾಪತ್ತಿಯೊಂದನ್ನು ಪ್ರಮಾಣವಾಗಿ ಸ್ವೀಕರಿಸಿ ನಾಲ್ಕು ಪ್ರಮಾಣಗಳನ್ನು ಗುಬ್ಬಿ ಮಲ್ಲಣಾರ್ಯನು ಚರ್ಚಿಸುತ್ತಾನೆ. ಅರ್ಥಾಪತ್ತಿ ಕುರಿತು ಅವನು ಹೇಳುವುದು ಹೀಗೆ :

ದೃಶ್ಯಮಾನಮಸರ್ವಜ್ಞಂ ಕಲ್ಪಯೇತ್ ಸೋಪಪಾದಕಮ್ ।
ಪಶುಸ್ಯೇವ ಪಶುತ್ವಾಖ್ಯಂ ಸರ್ವಜ್ಞೇ ಶಾಸ್ತ್ರತಃ ಸ್ಥಿತೇ ॥[೩೨]

ಶಿವನು ಸರ್ವಜ್ಞನೆಂದರೆ, ದೃಶ್ಯಮಾನ ಸೃಷ್ಟಿಯೆಲ್ಲಾ ಅಸರ್ವಜ್ಞವೆಂದು ಅರ್ಥವಾಗುತ್ತದೆ. ಇದು ಅರ್ಥಾಪತ್ತಿ. ಈ ಪ್ರಮಾಣ ಚತುಷ್ಟಯದಲ್ಲಿ ಆಗಮಪ್ರಮಾಣವೇ ಅತಿಶಯವಾದುದೆಂದು ಹೇಳಲಾಗುತ್ತದೆ.[೩೩] ಕೆಲವರು ಪ್ರತ್ಯಕ್ಷ, ಅನುಮಾನ, ಶಬ್ದ ಎಂಬ ಮೂರು ಪ್ರಮಾಣಗಳಲ್ಲಿಯೇ ಮಿಕ್ಕ ಪ್ರಮಾಣಗಳು ಅಂತರ್ಗತವಾಗಿವೆಯೆಂದು ಹೇಳುತ್ತಾರೆ.[೩೪] ಅನುಪಲಬ್ಧಿಯನ್ನು ಪ್ರತ್ಯಕ್ಷದಲ್ಲಿಯೂ ಉಪಮಾನ, ಅರ್ಥಾಪತ್ತಿ, ಸಂಭವಗಳನ್ನು ಅನುಮಾನದಲ್ಲಿಯೂ ಐತಿಹ್ಯವನ್ನು ಶಬ್ದದಲ್ಲಿಯೂ ಅಂತರ್ಗತಮಾಡುವರೆಂದು ವಿಧಿತವಾಗುತ್ತದೆ.[೩೫] ಶರಣರು ಎಲ್ಲ ಪ್ರಮಾಣಗಳನ್ನು ಒಪ್ಪಿರುವದಾಗಿ ಡಾ. ಮರುಳಸಿದ್ಧಯ್ಯ ಹೇಳುತ್ತಾರೆ.[೩೬] ಶರಣರು ಈ ಬಾಹ್ಯಪ್ರಮಾಣಗಳಿಗಿಂತ ನಿತ್ಯಸತ್ಯವಾದ ಆಂತರಿಕ ಅಥವಾ ಆಧ್ಯಾತ್ಮ ಪ್ರಮಾಣಗಳಿಗೆ (Mystic perceptions) ಆದ್ಯತೆ ಕೊಡುತ್ತಾರೆಂದು ಅವರ ಅಭಿಪ್ರಾಯ. ಶಾಸ್ತ್ರೀಯ ಚಿಂತನಕ್ಕಿಂತ ಅನುಭವಪ್ರಮಾಣಕ್ಕೆ ವೀರಶೈವರು ಹೆಚ್ಚು ಒತ್ತುಕೊಟ್ಟಿದ್ದರಿಂದ 'ಅನುಭವ' 'ಅನುಭಾವ' 'ಶಿವಾನುಭವ' ಮುಂತಾದ ಈ ಪದಗಳು ಇಂದಿಗೂ ಬಳಕೆಯಲ್ಲಿವೆ. ಶಿವಾನುಭಾವಿಗಳಾದ ಶಿವಶರಣರ ವಚನಗಳು ವೀರಶೈವರಿಗೆ ಪರಮಪ್ರಮಾಣವಾಗಿವೆ. ಮಾಯಿದೇವನು ಸಂಸ್ಕೃತ ಮತ್ತು ಕನ್ನಡ ಶತಕತ್ರಯಗಳಲ್ಲಿ ಇದೇ ಅಭಿಪ್ರಾಯ ಹೊಂದಿದ್ದಾನೆ.

---

೩೦. ಉದ್ಧೃತ . ಪಂ. ಚಂದ್ರಶೇಖರ ಶಾಸ್ತ್ರಿ (೧೯೬೦) ಬಸವತತ್ತ್ವರತ್ನಾಕರ, ಹೊಳಲ.

೩೧. ಎಂ. ಶಿವಕುಮಾರಸ್ವಾಮಿ (೧೯೯೧) ಶಕ್ತಿವಿಶಿಷ್ಟಾದ್ವೈತದರ್ಶನ, ವಿಶ್ವಪ್ರಭೆ ೩, ಪು. ೧೫೨.

೩೨. ಡಾ.ಜಿ. ಮರುಳಸಿದ್ಧಯ್ಯ(ಸಂ) (೧೯೭೭) ಶ್ರೀಕರಭಾಷ್ಯ, ಪು. ೧೭೭.

೩೩. ಡಾ. ಆರ್.ಸಿ. ಹಿರೇಮಠ (೧೯೬೬) ಷಟ್‌ಸ್ಥಲಪ್ರಭೆ, ಪು. ೩೬೨.

೩೪. ಪಂ. ಗುರುಶಾಂತಶಾಸ್ತ್ರಿಗಳು (೧೯೮೨) ಕನ್ನ ಡ ವೀರಶೈವಾನಂದ ಚಂದ್ರಿಕೆ, ಪು. ೩೬೪.

೩೫. ಡಾ. ಟಿ.ಜಿ. ಸಿದ್ಧಪ್ಪಾರಾಧ್ಯ, ೧೯೭೪, ಶಕ್ತಿವಿಶಿಷ್ಟಾದ್ವೈತದರ್ಶನಂ, ಪು. ೨೯.

೩೬. ಡಾ. ಜಿ. ಮರುಳಸಿದ್ಧಯ್ಯ, ೧೯೮೪, 'ವೀರಶೈವರಲ್ಲಿ ಪ್ರಮಾಣಗಳು' ಅರ್ಚನ, ಪು. ೬೭೬.

ವೇದಾಃ ಪ್ರಮಾಣಂ ಸ್ಮೃತಯಃ ಪ್ರಮಾಣಮ್
ಧರ್ಮಾರ್ಥಯುಕ್ತಂ ವಚನಂ ಪ್ರಮಾಣಮ್
ಯಸ್ಯಪ್ರಮಾಣಂ ನ ಭವೇತ್ ಪ್ರಮಾಣಮ್
ಕಸ್ತಸ್ಯ ಕುರ್ಯಾದ್ವಚನಂ ಪ್ರಮಾಣಮ್[೩೭]

ಇದನ್ನೇ ಕನ್ನಡದಲ್ಲಿ ಹೀಗೆ ಹೇಳಿದ್ದಾನೆ.

ಗುರುವಚನಂ ಪ್ರಮಾಣಮಖಿಲಾರ್ಯ ಪುರಾತನ ದಿವ್ಯ ಸೂಕ್ತಿಗಳ್
ನಿರವಧಿಕಂ ಪ್ರಮಾಣಮಮಲಾಗಮ ಶೈವರಹಸ್ಯವಾಕ್ಯತ
ತ್ಪರಮತವೇ ಪ್ರಮಾಣ ಮಸುವಾಸರಮಂಗದಲಿಂಗದೈಕ್ಯನಿ
ರ್ಭರಮತವೇ ಪ್ರಮಾಣವೆರಡೆಂಬುದು ಬಂಧಕರಂ ಶಿವಾಧವಾ||[೩೮]

ಹೀಗೆ ವೀರಶೈವದಲ್ಲಿ ಅನುಭವ ಪ್ರಮಾಣಕ್ಕೆ ಆದ್ಯತೆ ಕೊಡಲಾಗಿದೆ. 'ಷಟ್‌ಸ್ಥಲ ದರ್ಶನ ರೂಪುಗೊಂಡದ್ದೇ ಶಿವಶರಣರಿಂದ. ಅದು ಅನುಭವ ದರ್ಶನವಾದ್ದರಿಂದ ಶಿವಾನುಭಾವಿಗಳ ಸಾಕ್ಷಾತ್ಕಾರದ ನುಡಿಗಳು ಪರಮಪ್ರಮಾಣವೆಂಬುದರಲ್ಲಿ ಸಂಶಯವಿಲ್ಲ. ಅಂತೆಯೇ ಮಾಯಿದೇವನು ಷಟ್‌ಸ್ಥಲವನ್ನು ಸೂತ್ರಗಳಲ್ಲಿ ಪ್ರತಿಪಾದಿಸಿ ಅದಕ್ಕೆ ಶಿವಾನುಭವಸೂತ್ರವೆಂದು ಹೆಸರಿಸಿದ್ದಾನೆ.[೩೯]

ತೃತೀಯಾಧಿಕರಣದಲ್ಲಿ ಬರುವ ಮಾಯಿದೇವನ 'ಅಪ್ರಮಾಣ'ವೆಂಬ ಶಬ್ದವು ಇದನ್ನು ದೃಢೀಕರಿಸುತ್ತದೆ. ಶ್ಲೋಕ ರೂಪದಲ್ಲಿ ಅದು ಹೀಗಿದೆ:

ಆದ್ಯಂತ ಶೂನ್ಯಮಮಲಂ ಪರಿಪೂರ್ಣಮೇಕಂ
ಸೂಕ್ಷ್ಮಂ ಪರಾತ್ಪರಮನಾಮಯಮಪ್ರಮೇಯಂ|
ಭಾವೈಕಗಮ್ಯಮಜಡಂ ಶಿವತತ್ತ್ವಮಾಹು-
ಶ್ಚಿಚ್ಛಕ್ತಿ ಸಂಸ್ಫುರಣರೂಪಮಹಾತ್ಮಲಿಂಗಂ||[೪೦]

ಹೀಗೆ ಮಹಾಲಿಂಗವು ಅಪ್ರಮೇಯ (ಸ್ವತಃಸಿದ್ಧ) ಹಾಗೂ ಜಡರಹಿತ (ಚೇತನಾತ್ಮಕ) ಶಿವತತ್ತ್ವ. ಅದು ಭಾವಗಮ್ಯವಾದುದರಿಂದ ಪ್ರಮಾಣ ಪ್ರಮೇಯಗಳಿಗೆ ಅತೀತ. ಮಾಯಿದೇವನ ಪ್ರಕಾರ ಶಿವಾನುಭವದ ಮೂಲವಾದ ಷಟ್‌ಸ್ಥಲವೇ ಪ್ರಮೇಯ. ಶರಣರ ನುಡಿಗಳೇ ಪ್ರಮಾಣಗಳೆಂದು ಹೇಳಬೇಕಾಗುತ್ತದೆ.

---

೩೭. ಚನ್ನಮಲ್ಲಿಕಾರ್ಜುನರು, ೧೯೬೨ 'ಮೊಗ್ಗೆ ಮಾಯಿದೇವ ಪ್ರಭುವಾಣಿ' ಸಂಸ್ಕೃತಶತಕತ್ರಯ, ಪು. ೮.

೩೮. ಶಿವಾಧವಶತಕ, ಪದ್ಯ, ೪೨.

೩೯. "ಅನುಭಾವಿಗಳಂತೂ ತಮ್ಮ ಚಿಂತನೆಯಲ್ಲಿ ಶಬ್ದವನ್ನು ಈ ಲೋಕದಿಂದ ಬಿಡುಗಡೆ ಮಾಡಿ, ನಮ್ಮೆಲ್ಲರಿಗೂ ಮೀರಿದ ಅತೀಂದ್ರಿಯ ಸತ್ಯವನ್ನು ಪ್ರಕಟಿಸುವ ಶಕ್ತಿಯನ್ನು ಶಬ್ದಕ್ಕೆ ತಂದುಕೊಡುತ್ತಾರೆ, ಗಮನಾತೀತ ಅನುಭಾವದ ನೆಲೆಯಲ್ಲಿ ಶಬ್ದಸೂತಕವೂ ಆಗುತ್ತದೆ", ಮಲ್ಲೇಪುರಂ ಜಿ. ವೆಂಕಟೇಶ (೧೯೯೩) ಸ್ಫೋಟವಾದ, ಪು.೧೨.

೪೦. ಶಿವಾನುಭವಸೂತ್ರ, ಅಧಿಕರಣ, ೩. ಶ್ಲೋಕ ೨೮.

**ಶಿವಾನುಭವ ಸೂತ್ರದ ಪ್ರಕಾರ (ತತ್ತ್ವಗಳು) ಪ್ರಮೇಯಗಳು:**

ಶಿವಾನುಭವಸೂತ್ರದ ಪ್ರಾರಂಭದಲ್ಲಿ ಮಾಡಲಾದ ಮಂಗಲವು ಶಿವಾದ್ವೈತ ಸಿದ್ಧಾಂತದ ಸಾರಸರ್ವಸ್ವವನ್ನೇ ಒಳಗೊಂಡಿದೆ. ಅದು ಹೀಗಿದೆ:

ಜಯತಿ ಷಡಧ್ವವಿಶುದ್ಧಿರ್ಜಯತಿ ಶ್ರೀಮತ್ ಷಡಕ್ಷರೀ ವಿದ್ಯಾ।
ಜಯತಿ ಷಡಂಗಸುಭಕ್ತಿರ್ಜಯತಿ ಸ್ಮೃತ ಏವ ಷಟ್‌ಸ್ಥಲಬ್ರಹ್ಮ॥[೪೧]

ಇದನ್ನು ಹೀಗೆ ವಿಂಗಡಿಸಬಹುದು:

| | |
|---|---|
| ಷಡಧ್ವಗಳು: | ೧. ವರ್ಣ, ೨. ಪದ, ೩. ಮಂತ್ರ, ೪. ತತ್ತ್ವ, ೫. ಕಲಾ, ೬. ಭುವನ. |
| ಷಡಕ್ಷರೀವಿದ್ಯಾ: | ೧. ಓಂ, ೨. ನ, ೩. ಮ, ೪. ಶಿ, ೫. ವಾ, ೬. ಯ. |
| ಷಡಂಗ: | ೧. ಭಕ್ತ, ೨. ಮಹೇಶ, ೩. ಪ್ರಸಾದಿ, ೪. ಪ್ರಾಣಲಿಂಗಿ, ೫. ಶರಣ, ೬. ಐಕ್ಯ. |
| ಸುಭಕ್ತಿ: | ೧. ಶ್ರದ್ಧೆ ೨. ನಿಷ್ಠೆ ೩. ಅವಧಾನ, ೪. ಅನುಭವ, ೫. ಆನಂದ, ೬. ಸಮರಸ. |
| ಷಟ್‌ಸ್ಥಲ ಬ್ರಹ್ಮ: | ೧. ಆಚಾರಲಿಂಗ, ೨. ಗುರುಲಿಂಗ, ೩. ಶಿವಲಿಂಗ, ೪. ಚರಲಿಂಗ, ೫. ಪ್ರಸಾದಲಿಂಗ, ೬. ಮಹಾಲಿಂಗ. |

ಹೀಗೆ ಷಡಧ್ವಗಳು ಷಡಕ್ಷರೀ ವಿದ್ಯೆ, ಭಕ್ತಾದಿ ಆರು ಲಿಂಗಸ್ಥಲಗಳಲ್ಲಿ ನೆಲೆಸಿರುವ ಶ್ರದ್ಧೆ ಮುಂತಾದ ಷಡ್ವಿಧಭಕ್ತಿ ಪ್ರಭೇದಗಳು, ಆ ಭಕ್ತಿಗಳಿಂದ ಸಿದ್ಧವಾದ ಷಟ್‌ಸ್ಥಲಬ್ರಹ್ಮಸ್ತುತಿ ಪರವಾದ ಈ ಮಂಗಳವು ಶಿವಾದ್ವೈತ ಸಿದ್ಧಾಂತದ ಪ್ರಮುಖ ಪ್ರಮೇಯಗಳನ್ನು ಒಳಗೊಂಡಿದೆ.

**ಷಡಧ್ವಗಳು:**

ವಾಕ್ ಮತ್ತು ಅರ್ಥರೂಪವಾದದ್ದು ಜಗತ್ತು. ಅಧ್ವಗಳು ಆರು: ವರ್ಣ, ಪದ, ಮಂತ್ರ, ತತ್ತ್ವ, ಕಲಾ ಮತ್ತು ಭುವನ ಎಂದು ಅವು ವಿಭಕ್ತವಾಗಿವೆ. ಇವುಗಳಲ್ಲಿ ವರ್ಣ, ಪದ, ಮಂತ್ರ ಎಂಬ ಮೊದಲಿನ ಮೂರು ವಾಗ್ರೂಪ. ಕಡೆಯವು ಅರ್ಥರೂಪ. ಅಧ್ವ ಎಂದರೆ ಮಾರ್ಗ. ಸಾಧಕನು ವಿಶ್ವವನ್ನು ತನ್ನ ಅನುಭವಕ್ಕೆ ತಂದುಕೊಳ್ಳಲು ಸ್ವೀಕರಿಸಿದ ಸಾಧನೆಯ ಮಾರ್ಗವೇ ಅದು.[೪೨] ವರ್ಣಪದ ಮಂತ್ರಗಳು ವಾಚಕ, ಎಂದರೆ ಶಬ್ದರೂಪ. ಮುಂದಿನ ತತ್ತ್ವ, ಕಲಾ, ಭುವನಗಳು ವಾಚ್ಯ (ಅರ್ಥ)ಗಳು. ಜಗತ್ತಿನ ಸೃಷ್ಟಿಕ್ರಮವನ್ನು ಈ ವಿವರಣವು ಒಳಗೊಂಡಿದೆ. ವೀರಶೈವ ಸಿದ್ಧಾಂತದಲ್ಲಿ ಬರುವ ಸ್ಥಲ ಸಿದ್ಧಾಂತವು ಇದನ್ನು ಸೂಚಿಸುತ್ತದೆ. ಶ್ರುತಿಯಲ್ಲಿ ಅಸತ್ತಿನಿಂದ ಸತ್ ಉದಿಸಿತು ಎಂದು ಹೇಳಲಾಗಿದೆ.[೪೩] ಹಿಂದೆ ಬೌದ್ಧ ದರ್ಶನದ ಸಂದರ್ಭದಲ್ಲಿ ಹೇಳಿದಂತೆ, ಇಲ್ಲಿ ಅಸತ್ ಎಂದರೆ ಏನೂ ಇಲ್ಲದ ಶೂನ್ಯವಲ್ಲ. ಅದು ಎಲ್ಲವನ್ನು ಒಳಗೊಂಡ ನಿಃಶೂನ್ಯ. ಇದನ್ನೇ 'ಬಯಲು', 'ನಿರ್ವಯಲು' ಎಂದು ಶರಣರು ಕರೆದಿದ್ದಾರೆ. ಅದು ಪರಬ್ರಹ್ಮದ "ಸಹಜ"

---

೪೧. ಶಿವಾನುಭವಸೂತ್ರಂ, ಪ್ರಥಮಾಧಿಕರಣ, ಶ್ಲೋಕ ೧.

೪೨. ವಾತುಲಶುದ್ಧಾಗಮ (೧೯೮೮) ಡಾ. ಎಚ್.ಪಿ. ಮಲೇದೇವ (ಸಂ) ಪು. ೧೨.

೪೩. ಕಾರ್ಯಸ್ಯ ಚ ಅಭಿವ್ಯಕ್ತಿಲಿಂಗತ್ವಾತ್ । ಕಾರ್ಯಸ್ಯ ಚ ಸದ್ಭಾವಃ ಪ್ರಾಗುತ್ಪತ್ತೇಃ ಸಿದ್ಧಃ, ೧.೨.೧. ಬೃಹದಾರಣ್ಯಕೋಪನಿಷತ್‌ಶಂಕರಭಾಷ್ಯ (೧೯೮೪) ಹೊಳೆನರಸೀಪುರ.

ಸ್ಥಿತಿ ಅದು ಅಸತ್, ಅವ್ಯಕ್ತ. ಬೇಸಿಗೆಯಲ್ಲಿ ಮಣ್ಣಿನ ಧೂಳಿಯಲ್ಲಿ ಅವ್ಯಕ್ತವಾಗಿದ್ದ ಹುಲ್ಲುಬೀಜಗಳು ಮಳೆ ಬಿದ್ದ ಮೇಲೆ ಮೊಳೆಯುವಂತೆ; ಮಣ್ಣಿನ ರಾಶಿಯಲ್ಲಿ ವೃಕ್ಷಿಕಾದಿಗಳು ಉದಿಸುವಂತೆ ಸೂಕ್ಷ್ಮವಾಗಿದ್ದ ಸೃಷ್ಟಿಬೀಜಗಳು, ಆ ಪರವಸ್ತು ಸಂಕಲ್ಪಿಸಿದಾಗ (ಸೃಷ್ಟಿಗೆ ಉನ್ಮುಖವಾದಾಗ) ಬಹಿರ್ಗತವಾಗುತ್ತವೆ, 'ನಾನೇ ಬಹುವಾಗಿ ಆಗುವೆನು'[೪೪] ಎಂಬುದೇ ಆ ಸಂಕಲ್ಪ. ಇದನ್ನೇ 'ವಿಮರ್ಶಶಕ್ತಿ' ಎಂದು ವೀರಶೈವ ಕರೆದಿದೆ.

ಪಂಚಸಾದಾಖ್ಯಗಳು:

ವ್ಯಕ್ತ ಸೃಷ್ಟಿ ಮತ್ತು ಅವ್ಯಕ್ತ ಪರಬ್ರಹ್ಮಗಳ ಮಧ್ಯದಲ್ಲಿ ಆ ಪರವಸ್ತುವಿನ ಸಂಕಲ್ಪದಿಂದ ನಡೆಯುವ ಸಾಧನ ಸಾಮಗ್ರಿಗೆ ಪಂಚಸಾದಾಖ್ಯಗಳು ಎಂದು ಕರೆಯಲಾಗಿದೆ. ವೀರಶೈವದರ್ಶನವು ಪರವಸ್ತುವನ್ನು 'ಸ್ಥಲ' ಮಹಾಲಿಂಗ ಮುಂತಾಗಿ ಕರೆದಿದೆ. ಯಾವುದರಿಂದ, ಸಮಸ್ತ ಚರಾಚರ ವಸ್ತುಗಳನ್ನೊಳಗೊಂಡ ವಿಶ್ವವು ಹೊರಹೊಮ್ಮಿದೆಯೋ, ಯಾವುದರ ಆಸರೆಯನ್ನು ವಿಶ್ವವು ಹೊಂದಿದೆಯೊ ಮತ್ತು ಯಾವುದರಲ್ಲಿ ಇಡೀ ವಿಶ್ವ ವಿಲೀನವಾಗುತ್ತದೆಯೋ ಅದೇ 'ಸ್ಥಲ'.

ಯತ್ರಾದೌಸ್ಥೀಯತೇ ವಿಶ್ವಂ ಪ್ರಾಕೃತಂ ಪೌರುಷಂ ಯತಃ।
ಲೀಯತೇ ಪುನರಂತೇ ಚ ಸ್ಥಲಂ ತತ್ಪ್ರೋಚ್ಯತೇ ತತಃ॥[೪೫]

ಹೀಗೆ ಸ್ಥಲತತ್ವ (ಮಹಾಲಿಂಗ)ದಿಂದ ಜಗತ್ತು ಹೊರಹೊಮ್ಮುವ ಕ್ರಮವನ್ನೇ ಐದು ಸಾದಾಖ್ಯಗಳು ಚಿತ್ರಿಸುತ್ತವೆ. ಅವು ಇಂತಿವೆ:

೧. ಸಾದಾಖ್ಯ ೨. ಅಮೂರ್ತಸಾದಾಖ್ಯ ೩. ಮೂರ್ತಸಾದಾಖ್ಯ ೪. ಕರ್ತೃಸಾದಾಖ್ಯ ೫. ಕರ್ಮಸಾದಾಖ್ಯ[೪೬] ಹೀಗೆ ಇವು ಐದು ಬಗೆಯಾಗಿವೆ.

ಇವು ಮೊದಮೊದಲು ಅತಿ ಸೂಕ್ಷ್ಮವಾಗಿದ್ದು, ಮುನ್ಮುಂದೆ ಸ್ಥೂಲರೂಪ ತಳೆಯುತ್ತವೆ. ಈ ಸಾಮಗ್ರಿಗಳು; ಶಕ್ತಿಗಳು, ಪಂಚಮಹಾಭೂತಗಳು, ಕಲೆಗಳು, ಪ್ರಣವಗಳು ಮುಂತಾಗಿ ಇರುತ್ತವೆ. ಇವು ಜಗತ್ತು ಪ್ರಕಟವಾಗಲು ಬೇಕಾಗುವ ಸಾಧನಸಾಮಗ್ರಿಗಳು: 'ಸತ್+ಆಖ್ಯಾ' ಸಾದಾಖ್ಯಾ; ಎಂದರೆ, 'ಇರು' ಎಂದು ಇದಕ್ಕೆ ಅರ್ಥ.[೪೭] ಅವ್ಯಕ್ತದಿಂದ ವ್ಯಕ್ತಸ್ಥಿತಿಗೆ ಬರುವ ಸತ್‌ದ ಸೂಕ್ಷ್ಮರೂಪವಾದ 'ಅದು' ಅಮೂರ್ತ (ಅತಿ ಸೂಕ್ಷ್ಮ)ವಾಗಿ, ಮೂರ್ತ (ಸೂಕ್ಷ್ಮ) ಸಾದಾಖ್ಯವಾಗಿ, ಕರ್ತೃ (ಸೂಕ್ಷ್ಮಸ್ಥೂಲ) ಸಾದಾಖ್ಯವಾಗಿ, ಕರ್ಮ(ಸ್ಥೂಲ) ಸಾದಾಖ್ಯವಾಗಿ ಜಗತ್ತು ವ್ಯಕ್ತರೂಪ ತಾಳುತ್ತದೆ. ಈ ಸಾದಾಖ್ಯಗಳು ಮುಂದೆ ಹೇಳಲಾಗುವ ಆಚಾರಾದಿ ಲಿಂಗಗಳ ಪ್ರಕಾಶವೆಂದು ವರ್ಣಿತವಾಗಿವೆ.

---

೪೪. 'ತದೈಕ್ಷತಬಹುಸ್ಯಾಂ ಪ್ರಜಾಯೇಯ', ಛಾಂದೋಗೋಪನಿಷತ್ತು, ೬-೨-೩.

೪೫. ಶಿವಾನುಭವಸೂತ್ರಂ, ಅಧಿಕರಣ ೨, ಶ್ಲೋಕ ೪.

೪೬. ಶಿವಾನುಭವಸೂತ್ರಂ, ಅಧಿಕರಣ ೩, ಶ್ಲೋಕ ೨೮-೩೩.

೪೭. ಪಂ. ವ್ರಜವಲ್ಲದ್ವಿವೇದಿ (೧೯೨೫) ಆಗಮ ಔರ ತಂತ್ರಸಾರ, ಪು. ೧೦.

ತತ್ತ್ವೋದಯ:

ಸಾದಾಖ್ಯಗಳ ತರುವಾಯ ಷಡಧ್ವಗಳು ಪ್ರಕಟವಾಗುವಲ್ಲಿ ವಿಶ್ವದಲ್ಲಿ ಒಂದು ಸಂಚಲನವುಂಟಾಗುತ್ತದೆ. ಈ ಸಂಚಲನವು ಯಾವ ಯಾವ ಮಾರ್ಗಗಳಿಂದ ಪ್ರವಹಿಸುತ್ತದೆಯೋ ಆ ಮಾರ್ಗಗಳೇ ಅಧ್ವಗಳಾಗಿ ಪರಿಣಮಿಸುತ್ತವೆ. ಇವುಗಳ ಮೂಲಕವೇ ಸಂಚಲನ ಎಂದರೆ ಶಕ್ತಿ ಮೊದಲಾದವು ಜಗತ್ತಿನಲ್ಲಿ ವ್ಯವಸ್ಥಿತವಾಗಿ ಪ್ರವಹಿಸುತ್ತವೆ. ಕಂಬಿಗಳ ಮೂಲಕ ಎಂಜಿನ್ ಡಬ್ಬಿಗಳನ್ನು ಮುನ್ನಡೆಸುವಂತೆ: ಅಧ್ವಗಳೆಂಬ ಕಂಬಿಗಳ ಮೂಲಕ ಜಗತ್ತು ಮುಂದುವರಿಯುತ್ತದೆ.

ವರ್ಣ-ಪದ-ಮಂತ್ರ:

ವರ್ಣ, ಪದ, ಮಂತ್ರಾಧ್ವಗಳು ಸಾದಾತ್ಮಕ (ವಾಚಕ) ತತ್ತ್ವಕಲೆ, ಭುವನಗಳು ಬಿಂದು(ವಸ್ತು)ರೂಪ, ಅಕಾರಾದಿ ವರ್ಣಗಳೇ ವರ್ಣಾಧ್ವ, ಈ ವರ್ಣಗಳಿಂದ ಪದಗಳುಂಟಾಗುತ್ತವೆ. ಇದೇ ಪದಾಧ್ವ, ಪದಗಳಿಂದ ಮಂತ್ರಗಳುಂಟಾಗುತ್ತವೆ. ಮಂತ್ರಗಳು ಎಲ್ಲೆಲ್ಲಿಯೂ ತುಂಬಿವೆ. ಇದೇ ಮಂತ್ರಾಧ್ವ.

ತತ್ತ್ವ-ಕಲಾ-ಭುವನ:

ತತ್ತ್ವಾಧ್ವ ೩೬ ವಿಧವಾಗಿದೆ. ೧. ಶಿವ, ೨. ಶಕ್ತಿ, ೩. ಸದಾಶಿವ, ೪. ಈಶ್ವರ, ೫. ವಿದ್ಯೆ, ೬. ಕಾಲ, ೭.ನಿಯತಿ, ೮. ಕಲೆ, ೯. ಅವಿದ್ಯೆ, ೧೦. ರಾಗ, ೧೧. ಪುರುಷ, ೧೨. ಪ್ರಕೃತಿ, ೧೩. ಗುಣ, ೧೪. ಬುದ್ಧಿ, ೧೫. ಅಹಂಕಾರ, ೧೬. ಚಿತ್ತ, ೧೭. ಶ್ರೋತ್ರ, ೧೮. ತ್ವಕ್ಕು, ೧೯. ನೇತ್ರ, ೨೦. ಜಿಹ್ವೆ, ೨೧. ಘ್ರಾಣ, ೨೨. ವಾಕ್ಕು, ೨೩. ಪಾಣಿ, ೨೪.ಪಾದ, ೨೫. ಪಾಯು, ೨೬. ಉಪಸ್ಥ, ೨೭. ಶಬ್ದತನ್ಮಾತ್ರೆ, ೨೮. ಸ್ಪರ್ಶತನ್ಮಾತ್ರೆ, ೨೯. ರೂಪತನ್ಮಾತ್ರೆ, ೩೦. ರಸತನ್ಮಾತ್ರೆ, ೩೧. ಗಂಧತನ್ಮಾತ್ರೆ, ೩೨. ನಭ, ೩೩. ವಾಯು, ೩೪. ವಹ್ನಿ, ೩೫. ಜಲ, ೩೬. ಭೂಮಿ - ಇದೇ ತತ್ತ್ವಾಧ್ವ. ಇವುಗಳ ಸೃಷ್ಟಿಕ್ರಮ-ಸ್ವರೂಪಸಿದ್ಧಿ-ಗುಣ-ಕರ್ಮ-ಪ್ರಯೋಜನಾದಿಗಳ ವಿವರವನ್ನು ಆಗಮಗಳಲ್ಲಿ ಕಾಣಬಹುದು.[೪೮] ಮಾಯಿದೇವನು ಇವುಗಳನ್ನು ಶಿವಾನುಭವಸೂತ್ರದಲ್ಲಿ ಉಲ್ಲೇಖಿಸಿದ್ದರೂ, ವಿವರಿಸಿಲ್ಲ. ಮಾಯಿದೇವನ ತತ್ತ್ವವಿವೇಚನೆಯು ಷಟ್‌ಸ್ಥಲಕ್ಕನುಗುಣವಾಗಿದೆ. ಅದು ಮುಂದೆ ಸ್ಪಷ್ಟವಾಗಿ ವ್ಯಕ್ತವಾಗುವುದು.

ಕಲೆಗಳು ಆರು. ಶಾಂತ್ಯತೀತೋತ್ತರಾ ಶಾಂತ್ಯತೀತ ಮುಂತಾಗಿ ಇವು ಮುಂದೆ ಅಷ್ಟತ್ರಿಂಶತ್ (೩೮) ಕಲೆಗಳಾಗುತ್ತವೆ.(ಆದರೆ ಮಾಯಿದೇವ ಸ್ವೀಕರಿಸಿದ್ದು ಮೇಲೆ ಹೇಳಿದ ಆರನ್ನು ಮಾತ್ರ.) ಇದೇ ಕಲಾಧ್ವವೆಂದು ಹೇಳಲಾಗಿದೆ.

ಭುವನಗಳು ೨೨೪. ನಿಜಗುಣರು[೪೯] ತಮ್ಮ ವಿವೇಕಚಿಂತಾಮಣಿಯ ನಾಲ್ಕು ಮತ್ತು ಐದನೇ ಪರಚ್ಛೇದಗಳಲ್ಲಿ ಲೋಕಗಳನ್ನು ಈ ಮುಂದಿನ ಕ್ರಮದಲ್ಲಿ ಹೆಸರಿಸುತ್ತಾರೆ.

೧. ಕಾಲಾಗ್ನಿರುದ್ರಲೋಕ ೨. ಯಮಲೋಕ ೩. ಕುಷ್ಮಾಂಡರುದ್ರಲೋಕ ೪-೧೦. ಪಾತಾಳಾದಿ ಏಳುಲೋಕ ೧೧. ಹಾಟಕೇಶ್ವರ ರುದ್ರಭುವನ ೧೨. ಭೂಮಿ ೧೩. ಭುವಲೋಕ ೧೪. ವಿಷ್ಣುಲೋಕ ೨೦. ಷಣ್ಮುಕಲೋಕ ೨೧. ಉಮಾಲೋಕ ೨೨. ಕಾಮಧೇನುಲೋಕ ೨೩. ರುದ್ರಲೋಕ ೨೪. ಶಿವಲೋಕ ಈ ಲೋಕಗಳ ವಿವರಣೆಯೂ ಶಿವಾನುಭವ ಸೂತ್ರದಲ್ಲಿ ಕಂಡುಬರುವುದಿಲ್ಲ.

೪೮. ಪ್ರೊ. ಶಿ.ಶಿ. ಬಸವನಾಳ, ವೀರಶೈವತತ್ತ್ವಪ್ರಕಾಶ, ಪು.೪೧.

೪೯. ಡಾ. ಎಲ್. ಬಸವರಾಜು, ೧೯೯೧ ನಿಜಗುಣಯೋಗಿಯ ತತ್ತ್ವದರ್ಶನ ಪು. ೧೧೧-೧೨೯.

**ಷಡಧ್ವಶುದ್ಧಿ:**

ಮೇಲಿನ ಅಧ್ವಗಳ ಮೂಲಕವೇ ವಿಶ್ವದ ವ್ಯವಹಾರಗಳು ನಡೆಯುತ್ತವೆ.[೫೦] ಇವು ಬ್ರಹ್ಮಾಂಡದಲ್ಲಿರುವಂತೆ ಮಾನವದೇಹದ (ಪಿಂಡಾಂಡ)ದಲ್ಲಿಯೂ ಇರುವುದಾಗಿ ಮಾಯಿದೇವ ಹೀಗೆ ಹೇಳುತ್ತಾನೆ.

ಷಡಧ್ವಶುದ್ಧಿರ್ಯತ್ರೋಕ್ತಾ ಷಟ್‌ಸ್ಥಲಬ್ರಹ್ಮಶಾಂಭವೇ ।
ಉಪದೇಶೇ ಷಡಧ್ವಾನೋ ಮಂತ್ರಾಧ್ವಾದ್ಯಾಶ್ಚ ವೈ ಕ್ರಮಾತ್ ॥
ಮಂತ್ರಾಧ್ವಾ ಚ ಪದಾಧ್ವಾ ಚ ವರ್ಣಾಧ್ವಾ ಚೇತಿ ಶಬ್ದತಃ ।
ಭುವನಾಧ್ವಾ ಚ ತತ್ತ್ವಾಧ್ವಾ ಕಲಾಧ್ವಾ ಚೇತಿ ತೇ ಸ್ಮೃತಾಃ ॥
ಕೃತ್ವಾ ಸರ್ವಂ ಯಥಾಕಾಲಂ ಯಥಾಶಕ್ತಿ ಯಥಾವಿಧಿ ।
ಯಥೋಚಿತಂ ವಿಧಾತವ್ಯಂ ತತ್ರ ಭಕ್ತ್ಯಾ ಸಮಾಹಿತಃ ॥[೫೧]

ಮಾನವನಿಗೆ ಷಡಧ್ವಗಳ ಜ್ಞಾನ ಅಗತ್ಯ. ಇವುಗಳ ಜ್ಞಾನದಿಂದ ಅವನ ಪ್ರಗತಿಯ ದ್ವಾರವು ತೆರೆಯುತ್ತದೆ. ಅದಕ್ಕಾಗಿಯೇ ಷಡಧ್ವಗಳನ್ನು ದೀಕ್ಷಾವಸರದಲ್ಲಿ ತಿಳಿಸಲಾಗುತ್ತದೆ. ಬಾಹ್ಯ ಜಗತ್ತಿಗೆ ಸೇರಿದ ಈ ಷಡಧ್ವಗಳು, ದೀಕ್ಷೆ ಪಡೆಯುವ ಸಾಧಕನ ಶರೀರ ಮತ್ತು ಆ ಶರೀರದ ಮೇಲೆ ಧರಿಸುವ ಇಷ್ಟಲಿಂಗದಲ್ಲಿಯೂ ಇವುಗಳ ಶುದ್ಧಿಯನ್ನು ಆಚಾರ್ಯನು ವಿಧ್ಯುಕ್ತವಾಗಿ ನೆರವೇರಿಸುತ್ತಾನೆ. ಅನಂತರ ತ್ರಿವಿಧವಾದ ದೀಕ್ಷೆಗಳಿಂದ ತ್ರಿಮಲವು ನಷ್ಟವಾಗುತ್ತದೆ.[೫೨] ಹೀಗೆ ಶಿವಾನುಭವಸೂತ್ರದ ಪ್ರಕಾರ ಪ್ರಮಾಣ ಪ್ರಮೇಯಗಳು ಷಟ್‌ಸ್ಥಲಕ್ಕನುಗುಣವಾಗಿಯೇ ಇರುತ್ತವೆ.

ಇನ್ನು ಮುಂದೆ ಮಾಯಿದೇವ ನಿರೂಪಿಸಿದ ೧. ಸ್ಥಲನಿರ್ದೇಶ, ೨. ಲಿಂಗ(ಈಶ್ವರ) ಸ್ಥಲನಿರೂಪಣ, ೩.ಅಂಗ (ಜೀವ) ಸ್ಥಲನಿರೂಪಣ, ೪. ಲಿಂಗಾಂಗ (ಬಂಧಮೋಕ್ಷ) ಸಂಯೋಗವಿಧಿ, ೫. ಸರ್ವಾಂಗಲಿಂಗ (ಮೋಕ್ಷಸ್ವರೂಪ) ಸಾಹಿತ್ಯ, ೬. ಅರ್ಪಣ (ಕ್ರಿಯಾ-ಜ್ಞಾನ ಸಮುಚ್ಚಯ) ಸದ್ಭಾವ, ೭. ಕ್ರಿಯಾವಿಶ್ರಾಂತಿ - ಈ ಕುರಿತು ಒಂದೊಂದಾಗಿ ವಿವರಿಸಲಾಗುವುದು.

**ಸ್ಥಲ ನಿರ್ದೇಶ (ಶಿವಾತ್ಮಕ ಜಗತ್ತು):**

ಏಕಮೇವಾದ್ವಿತೀಯವೂ ಸಚ್ಚಿದಾನಂದ ಲಕ್ಷಣವುಳ್ಳದ್ದೂ ಆದ ಶಿವತತ್ತ್ವವನ್ನೇ ಸ್ಥಲ ಎಂದು ಕರೆಯಲಾಗಿದೆ. ಅದು ಮಹದಾದಿ ತತ್ತ್ವಗಳಿಗೆ ಸ್ಥಾನವೂ ಲಯಭೂತವೂ ಆಗಿದೆ. 'ಸ್ಥಲ' ಎಂಬಲ್ಲಿ 'ಸ್ಥ' ಎಂಬುದು ಸ್ಥಾನ ವಾಚಕ 'ಲ' ಎಂಬುದು ಲಯವಾಚಕ; ಎಂದರೆ ಸೃಷ್ಟಿಲಯಗಳಿಗೆ ಯಾವುದು ಅಭಿನ್ನ ನಿಮಿತ್ತೋಪಾದಾನ ಕಾರಣವಾಗಿದೆಯೋ ಅದನ್ನೇ 'ಸ್ಥಲ' ಎಂದು ಕರೆಯಲಾಗಿದೆ. ಅದು ಚರಾಚರಾತ್ಮಕವಾದ ಜಗತ್ತಿಗೆ ಆಶ್ರಯ. ಅದರಲ್ಲಿ ಜಗತ್ತಿನ ಎಲ್ಲ ತೇಜ ಪದಾರ್ಥಗಳೂ ಆಶ್ರಯಪಡೆದಿವೆ. ಎಲ್ಲ ಭೂತಗಳಿಗೆ, ಲೋಕಗಳಿಗೆ, ಸಂಪತ್ತುಗಳಿಗೆ ಅದು ಆಲಯವಾಗಿದೆ.

---

೫೦. ಷಡಧ್ವಗಳನ್ನು ಕುರಿತು ವಿವರವಾಗಿ ಪ್ರಸ್ತಾಪಿಸುವ ವಚನಗಳು ಹೇರಳವಾಗಿವೆ. ನೋಡಿ. ಡಾ. ಫ.ಗು. ಹಳಕಟ್ಟಿ(೧೯೩೮) ವಚನಶಾಸ್ತ್ರಸಾರ ಭಾಗ ೨. ಪು. ೩೪-೪೩.

೫೧. ವಿಶೇಷಾರ್ಥ ಪ್ರಕಾಶಿಕೆ, ಅಧಿಕರಣ ೧, ಶ್ಲೋಕ. ೧೧-೧೩.

೫೨. ಷಡಧ್ವಾತ್ಮಕ ದೀಕ್ಷೆ ಕುರಿತು ವಿಶೇಷಾರ್ಥ ಪ್ರಕಾಶಿಕೆಯಲ್ಲಿ ಸುದೀರ್ಘವಾಗಿ ಹೇಳಲಾಗಿದೆ. ನೋಡಿ. ಪು. ೯-೧೦.

"ಅಧಿಷ್ಠಾನಂ ಸಮಸ್ತಸ್ಯ ಸ್ಥಾವರಸ್ಯ ಚರಸ್ಯ ಚ ।
ಜಗತೋ ಯದ್ಭವೇತ್ತತ್ತ್ವಂ ತದ್ಧಿ ವೈ ಸ್ಥಲಮುಚ್ಯತೇ ॥
ಆಧಾರಂ ಸರ್ವಶಕ್ತೀನಾಂ ಜ್ಯೋತಿಷಾಮಖಿಲಾತ್ಮನಾಂ ।
ಯತ್ತತ್ತ್ವಂ ಭವತಿ ಪ್ರಾಜ್ಞೈಃ ಸ್ಥಲಂ ತತ್ಪರಿಗೀಯತೇ" ॥[೫೩]

ಸಂಸಾರದಿಂದ ಮುಕ್ತರಾಗಬಯಸುವವರಿಗೆ ಅದು ಅಂತಿಮಸ್ಥಾನವಾಗಿದೆ. ಅದನ್ನೇ ಜ್ಞಾನಿಗಳು'ಸ್ಥಲ' ಎಂದು ಕರೆದಿದ್ದಾರೆ. 'ಸ್ಥಲ' ಪದವು 'ಶಿವ' ಪದದ ಪರ್ಯಾಯವಾಚಕವಾಗಿದೆ. ಸ್ಥಲ ಶಬ್ದವು ಶಿವಶಬ್ದದ ಅರ್ಥವನ್ನೊಳಗೊಂಡಿದೆ. ಶಿವನು ಜಗತ್ತಿನ ಜನ್ಮಸ್ಥಿತಿಲಯಾದಿಗಳಿಗೆ ಕಾರಣವೆಂಬುದನ್ನು"ಯತೋವಾ ಇಮಾನಿ ಭೂತಾನಿ ಜಾಯಂತೆ । ಯೇನ ಜಾತಾನಿ ಜೀವಂತಿ ಯತ್ಪ್ರಯಂತ್ಯಭಿಸಂವಿಶಂತಿ ತದ್ವಿಜಿಜ್ಞಾಸಸ್ವ । ತದ್ ಬ್ರಹ್ಮೇತಿ"[೫೪] ಈ ಮೊದಲಾದ ಶೃತಿಗಳು ಸಮರ್ಥಿಸುತ್ತವೆ. "ಜನ್ಮಾದ್ಯಸ್ಯಯತಃ" ಎಂಬ ಬ್ರಹ್ಮಸೂತ್ರವೂ ಮೇಲಿನದನ್ನೇ ಸಮರ್ಥಿಸುತ್ತದೆ.[೫೫]

ಶಿವನು ಸಚ್ಚಿದಾನಂದ ಸ್ವರೂಪ:

ಶಿವನು ಎಲ್ಲ ಪ್ರಪಂಚಕ್ಕೆ ಕಾರಣನಾಗಿ, ತನಗೆ ಮತ್ತೊಂದು ಕಾರಣವಿಲ್ಲದುದರಿಂದ ಅವನು ಸದ್ರೂಪ. ತಾನು ಎಲ್ಲರ ತೋರಿಕೆಗೆ ಕಾರಣನಾಗಿ, ತನ್ನ ತೋರಿಕೆಗೆ ಮತ್ತೊಂದು ಚೈತನ್ಯ ಪ್ರಕಾಶವನ್ನು ಬಯಸದಿರುವದರಿಂದ ಅವನು ಚಿದ್ರೂಪ. ಪ್ರಪಂಚವು ಅನುಭವಿಸುವ ಆನಂದಕ್ಕೆ ಮೂಲಕಾರಣನಾಗಿ, ಸ್ವಯಂ ಆನಂದಸ್ವರೂಪನೇ ಆಗಿರುವ ಕಾರಣ ಆತ ಆನಂದರೂಪ.

"ಏಕಮೇವ ಪರಂ ಬ್ರಹ್ಮ ಸಚ್ಚಿದಾನಂದಲಕ್ಷಣಂ।
ಶಿವತತ್ತ್ವಂ ಶಿವಾಚಾರ್ಯಾಃ ಸ್ಥಲ ಮಿತ್ಯಾಹುರಾದರಾತ್॥[೫೬]

ಜಡಜಗತ್ತು ಕೇವಲ ಸದ್ರೂಪ. ಅಲ್ಲಿ ಚಿತ್ (ಪ್ರಕಾಶ ಚೈತನ್ಯ) ಮತ್ತು ಆನಂದಗಳಿಲ್ಲ. ಜೀವನು ಸಚ್ಚಿತ್‌ರೂಪ. ಎಂದರೆ ಜೀವನಲ್ಲಿ ಸತ್ (ಇರುವಿಕೆ) ಮತ್ತು ಚಿತ್ (ಬೆಳಗುವಿಕೆ=ಜ್ಞಾನ ಚೈತನ್ಯ) ಎಂದರೆ ಇರುವಿಕೆ ಮತ್ತು ಚೈತನ್ಯಗಳಿವೆ. ಆದರೆ ಜೀವನ ಆನಂದ ಪರಿಮಿತವಾದದ್ದು. ಆ ಆನಂದವೂ ಉಪಾಧಿ (ವಂಶ)ಯಿಂದ ದೊರೆತಿದೆ. ಶಿವನಲ್ಲಿರುವ ಸತ್ (ಇರುವಿಕೆ) ಚಿತ್ (ಬೆಳಗುವಿಕೆ) ಮತ್ತು ಆನಂದಮಯತ್ವ, ಎಂದರೆ ನಿರುಪಾಧಿಕ ಮತ್ತು ಅಪರಿಮಿತ ಆನಂದವು ನಿತ್ಯವಾಗಿರುವುದರಿಂದ ಶಿವನು ಸಚ್ಚಿದಾನಂದಸ್ವರೂಪ.

ಶಿವನಲ್ಲಿ ಅವಿನಾಭಾವ ಸಂಬಂಧದಿಂದಿರುವ ಶಕ್ತಿಯನ್ನು "ವಿಮರ್ಶಾಶಕ್ತಿ"ಯೆಂದು ಕರೆಯಲಾಗಿದೆ.[೫೮] ಅಸ್ಮಿ, ಪ್ರಕಾಶೇ, ನಂದಾಮಿ ಎಂಬ ಶಿವನ ಸ್ವಾನುಭಾವವೇ ವಿಮರ್ಶಶಕ್ತಿ. ಈ 'ವಿಮರ್ಶ' ಇಲ್ಲದಿದ್ದಲ್ಲಿ ಶಿವನು

---

೫೩. ಶಿವಾನುಭವಸೂತ್ರಂ, ಅಧಿಕರಣ ೨, ಶ್ಲೋಕ, ೬-೭.

೫೪. ತೈತ್ತರೀಯೋಪನಿಷತ್, ಬೃ.೧.

೫೫. ಬ್ರಹ್ಮಸೂತ್ರ, ಅಧಿಕರಣ ೧, ಸೂತ್ರ ೨.

೫೬. ಶಿವಾನುಭವಸೂತ್ರಂ, ಅಧಿಕರಣ ೨, ಶ್ಲೋಕ ೨.

೫೭. ತೈತ್ತರೀಯೋಪನಿಷತ್, ೨.೨.೧.

೫೮. ಭೂಸನೂರಮಠ ಸಂ.ಶಿ.(ಸಂ) (೧೯೯೨) "ತಥಾಶಕ್ತಿವಿಮರ್ಶಾಖ್ಯಾಪ್ರಕಾಶೇ ಬ್ರಹ್ಮಣಿಸ್ಥಿರಾ", ವೀರಶೈವಸಿದ್ಧಾಂತ ಶಿಖಾಮಣಿ ಶ್ಲೋ. ೩೭, ಪು. ೩೯೩.

ಜಡನಾಗುತ್ತಿದ್ದ. ಈ ಶಕ್ತಿಯನ್ನು ಕೆಲವೆಡೆ ವಚನಕಾರರು 'ಮಾಯೆ' ಎಂದು ಕರೆದಿರುವರು. "ಅನಾದಿಯಾಗಿ ಶಿವನುಂಟು, ಮಾಯೆಯುಂಟು. ಇಂತು ಮಾಯಾ ಶಕ್ತಿಯಿಂದ ಸಮಸ್ತ ಜಗತ್ತಿನ ಜನನ ನೋಡಾ"[೫೯] ಈ ಬಗೆಗೆ ಡಿ.ಎನ್. ರೇಚಣ್ಣ ಹೀಗೆ ಹೇಳುತ್ತಾರೆ. "ವೀರಶೈವ ದರ್ಶನವು ಪ್ರತಿಪಾದಿಸಿರುವ ಶಿವ- ಶಕ್ತಿಯರ ಅವಿನಾಭಾವಸಂಬಂಧವು ಅದರ ಸಮನ್ವಯ ದೃಷ್ಟಿಗೆ ಒಂದು ಜೀವಂತ ನಿದರ್ಶನ".[೬೦] ಡಾ. ಜ.ಚ.ನಿ.ಯವರ ನುಡಿಯಲ್ಲಿ "ಶಿವಪಾರಮ್ಯವನ್ನು ಹೇಳುತ್ತದೆ ಶೈವಮತ. ಶಕ್ತಿಪಾರಮ್ಯವನ್ನು ಹೇಳುತ್ತದೆ ಶಾಕ್ತಮತ. ಶಿವ-ಶಕ್ತಿ ಈ ಉಭಯಸಮಪಾರಮ್ಯವನ್ನು ಹೇಳುತ್ತದೆ ವೀರಶೈವ ಮತ."[೬೧] ಪರಶಿವನು ಶಕ್ತಿ ವಿಶಿಷ್ಟನೆಂದು ಅಂಗೀಕರಿಸದಿದ್ದರೆ ಆಗ ಶಿವಾದ್ವೈತದರ್ಶನದ ಪರವಸ್ತುವಾದ ಸ್ಥಲವು ಶ್ರೀಶಂಕರಾದ್ವೈತದ ಬ್ರಹ್ಮದಂತೆ ನಿಷ್ಕ್ರಿಯವಾಗುತ್ತಿತ್ತು. ತತ್ಪರಿಣಾಮವಾಗಿ ವೀರಶೈವವು ಮಿಥ್ಯಾವಾದವನ್ನು ಆಶ್ರಯಿಸಿ ಕೇವಲಾದ್ವೈತದ ಜಾಡನ್ನೇ ಹಿಡಿದು, ಜಗತ್ತು ಮತ್ತು ಜೀವಿಗಳ ಸ್ವರೂಪವನ್ನು ಪ್ರತಿಪಾದಿಸಬೇಕಾಗುತ್ತಿತ್ತು. ಡಾ. ಆರ್.ಸಿ. ಹಿರೇಮಠ ಅವರ ಅಭಿಪ್ರಾಯದಲ್ಲಿ: "ಪರಶಿವನಲ್ಲಿ ಸ್ವವಿಮರ್ಶರೂಪದ ಶಕ್ತಿಯನ್ನು ಅಂಗೀಕರಿಸದಿದ್ದರೆ, ಅಲ್ಲಿ, ಅಸ್ಮಿ, ಪ್ರಕಾಶೇ, ನಂದಾಮಿ ಎಂಬ ಸಂವಿತ್ತು ಉಂಟಾಗುತ್ತಿರಲಿಲ್ಲ. ಈ ಶಕ್ತಿವಿಶಿಷ್ಟತೆಯನ್ನು ಅಂಗೀಕರಿಸದಿದ್ದರೆ ಸರ್ವಜ್ಞತ್ವ, ಸರ್ವಶಕ್ತಿಮತ್ತ್ವ, ಸರ್ವಕಾರಣತ್ವ, ಸರ್ವ ನಿಯಂತೃತ್ವ, ಸರ್ವಾನುಗ್ರಹತ್ತ್ವ ಮುಂತಾದವುಗಳು ಆ ಬ್ರಹ್ಮದಲ್ಲಿ ತೋರದೆ ಆತನು ತೇಜೋಮಯನಾಗಿ ಬೆಳಗುವ ಶಿಲೆಯಾಗಬಲ್ಲನು. ಇದನ್ನು ದೂರಮಾಡುವದಕ್ಕಾಗಿಯೇ ವೀರಶೈವ ಸಿದ್ಧಾಂತವು ಶಕ್ತಿವಿಶಿಷ್ಟ ಪರಮಾತ್ಮನನ್ನು ಅಂಗೀಕರಿಸಿತು".[೬೨] ಹೀಗೆ ಶಿವನು ಶಕ್ತಿವಿಶಿಷ್ಟನಾಗಿರುವನು.

**ಜಗತ್ತಿಗೆ ಶಿವನು ಅಭಿನ್ನನಿಮಿತ್ತೋಪಾದಾನ ಕಾರಣ:**

ವೀರಶೈವದರ್ಶನದಲ್ಲಿ ಜಗತ್ತು ಎಂದರೆ, ಶಿವಾದಿಯಾಗಿ ಭೂಮ್ಯಂತದವರೆಗೆ ಆತ್ಮ ತತ್ತ್ವವನ್ನೊಳಗೊಂಡು (ಅಥವಾ ಸಕಲಜೀವರಾಶಿಯಿಂದೊಡಗೂಡಿ) ಮೂವತ್ತಾರು ತತ್ತ್ವಗಳಿಂದ ನಿರ್ಮಿತವಾದ ಒಂದು ವ್ಯವಸ್ಥೆ. ತತ್ತ್ವಸಮನಿತ್ವವಾದ ಈ ಜಗತ್ತನ್ನು ಪ್ರಪಂಚ, ಬ್ರಹ್ಮಾಂಡ, ವಿಶ್ವ, ಲೋಕ ಎಂದು ಮುಂತಾಗಿ ಕರೆಯಲಾಗಿದೆ. ಜಗತ್ತು ಒಂದು ಕಾರ್ಯ. ಅದರ ಉತ್ಪತ್ತಿ ನಿಮಿತ್ತ ಮತ್ತು ಉಪಾದಾನ ಕಾರಣಗಳಿಂದಾಗಿದೆ. ಶಿವಾದ್ವೈತದಲ್ಲಿ ಶಿವನೇ ಜಗತ್ತಿನ ನಿಮಿತ್ತಕಾರಣ. ಶಕ್ತಿಯೇ ಅದರ ಉಪಾದಾನ ಕಾರಣ. ಜಗತ್ತಿನ ಉಪಾದಾನ ಕಾರಣವೆನ್ನಲಾದ ಶಕ್ತಿಯು, ಶಿವನಲ್ಲಿ ಅವಿನಾಭಾವ ಸಂಬಂಧದಿಂದ ನೆಲಸಿರುವ ಶಕ್ತಿಯೇ ಹೊರತು ಬೇರೆಯಲ್ಲ. ಆದುದರಿಂದ ಶಿವನೇ ಜಗತ್ತಿನ ನಿಮಿತ್ತ ಹಾಗೂ ಉಪಾದಾನ ಕಾರಣವೆಂಬುದು ಸ್ಪಷ್ಟ. ಜೇಡರಹುಳು ತನ್ನ ಎಂಜಲಿನಿಂದಲೇ ಬಲೆ ಹೆಣೆಯುವಂತೆ, ಶಿವನು ತನ್ನಿಂದ ಬೇರೆಯಾದ ಯಾವವಸ್ತುವಿನ ನೆರವಿಲ್ಲದೆ ತನ್ನಲ್ಲಿಯೇ ಅವಿನಾಭಾವ ಸಂಬಂಧದಿಂದ ಕೂಡಿರುವ ಶಕ್ತಿಯಿಂದ, ಜಗತ್ತನ್ನು ಸೃಷ್ಟಿಸುತ್ತಾನೆ. ಆದುದರಿಂದ ಶಿವನು ಜಗದ "ಅಭಿನ್ನ ನಿಮಿತ್ತೋಪಾದಾನ ಕಾರಣ"ನೆನಿಸಿದ್ದಾನೆ. "ಕಟಕಸೂತ್ರದ ಕೂಡ ಮಾಡಿಕೊಂಡಿಪ್ಪಲ್ಲಿ ಸೂತ್ರಕ್ಕೆ ನೂಲನ್ನು ಅದೆಲ್ಲಿಂದ ತಂದಿತ್ತು? ರಾಟೆ ಇಲ್ಲ, ಹಂಜಿ ಇಲ್ಲ. ತನ್ನಲ್ಲಿಯೇ ನೂಲ ಕಲ್ಪಿಸಿ, ತಾನದ ಮಾಡಿಕೊಂಡು ಆಡಿ ಅಡಗಿಸಿಕೊಂಡು ಹೋಹಂತೆ ತನ್ನ ಲೀಲೆಗೆ ತಾನೇ ಮಾಡಿಕೊಂಡ ವಿಶ್ವಪ್ರಪಂಚ. ತನ್ನಲ್ಲಿಯೇ ಲಯವನ್ನೆದಿಸಿಕೊಂಡು ಕೂಡಲಚನ್ನಸಂಗಯ್ಯ ನಿರ್ವಯಲಾದನು"[೬೩] ಈ ವಚನದಲ್ಲಿ ಶಿವನು ಜಗದ "ಅಭಿನ್ನನಿಮಿತ್ತೋಪಾದಾನಕಾರಣ"ನೆಂಬ ಕಲ್ಪನೆಯೂ ಮತ್ತು ಶಿವನಿಂದ ಸೃಷ್ಟಿ ನಿರ್ಮಾಣಕ್ಕೆ ಕಾರಣವೂ ಸೂಚಿತವಾಗಿರುವುದನ್ನು ಕಾಣಬಹುದು.

---

೫೯. ಡಾ. ಹೆಚ್. ತಿಪ್ಪೇರುದ್ರಸ್ವಾಮಿ (೧೯೮೨) ವಚನಗಳಲ್ಲಿ ವೀರಶೈವಧರ್ಮ, ಪು. ೬೮.

೬೦. ಜಿ.ಎನ್. ರೇಚಣ್ಣ (೧೯೮೪) ವೀರಶೈವದರ್ಶನದಲ್ಲಿ ಜಗತ್ತು, ಅರ್ಚನ, ಪು. ೬೦೩.

೬೧. ಡಾ. ಜ.ಚ.ನಿ. (೧೯೬೬) ಶಿವಾದ್ವೈತದರ್ಶನ, ಪು. ೪೯.

೬೨. ಡಾ. ಆರ್. ಸಿ. ಹಿರೇಮಠ (೧೯೬೬) ಷಟ್‌ಸ್ಥಲ ಜ್ಞಾನಸಾರಾಮೃತ, ಪು. ೧೩೦.

೬೩. ಶೂನ್ಯಸಂಪಾದನೆಯ ಪರಾಮರ್ಶೆ, ಪು. ೬೨.

ಈ ಬ್ರಹ್ಮಾಂಡದ ಸೃಷ್ಟಿಗೆ ಪೂರ್ವದಲ್ಲಿ ಶಿವನು ಏಕೈಕನಾಗಿದ್ದ ಪ್ರಭುದೇವರ ವಚನೋಕ್ತಿಯಂತೆ: "ಆದಿ ಅನಾದಿ ಇಲ್ಲದಂದು ಶೂನ್ಯನಿಃಶೂನ್ಯಗಳಿಲ್ಲದಂದು, ಹಮ್ಮುಬಿಮ್ಮುಗಳಿಲ್ಲದಂದು ಸುರಾಳನಿರಾಳವಿಲ್ಲದಂದು; ಸಚರಾಚರವೆಲ್ಲ ರಚನೆಗೆ ಬಾರದಂದು ಗುಹೇಶ್ವರ ನೀನೊಬ್ಬನೇ ಇದ್ದೆಯಲ್ಲ ಇಲ್ಲದಂತೆ.[೬೪]

ಚರಾಚರಾತ್ಮಕವಾದ ಈ ಜಗತ್ತು ಅಸ್ತಿತ್ವದಲ್ಲಿಲ್ಲದಿದ್ದ ಕಾಲ ಒಂದಿತ್ತು; ಆಗ ಪರವಸ್ತುವೊಂದೇ ಇತ್ತು-ಎಂಬೀ ಭಾವಗಳು ಮೇಲಿನ ವಚನದಿಂದ ಅಭಿವ್ಯಕ್ತವಾಗುತ್ತವೆ. ಆದರೆ ಜಗತ್ತು ಅಸ್ತಿತ್ವಕ್ಕೆ ಬಾರದಿದ್ದ ಕಾಲ ಯಾವುದು? ಜಗತ್ತಿನ ಸೃಷ್ಟಿ ಎಂದಾಯಿತು? ಈ ಪ್ರಶ್ನೆಗಳಿಗೆ ಉತ್ತರವಿಲ್ಲ. ಏಕೆಂದರೆ, ಜಗತ್ತು ಒಂದು ದೃಷ್ಟಿಯಿಂದ ಒಂದು ನಿರಂತರ ಸೃಜನಾತ್ಮಕ (Cretive) ಪ್ರವಾಹವಾಗಿದ್ದು ಅದು ಒಂದು ಗೊತ್ತಾದ ಕಾಲದಲ್ಲಿ ಪ್ರಕಟವಾಯಿತೆಂದು ಹೇಳಲು ಸಾಧ್ಯವಿಲ್ಲ, ಆ ಬಗೆಗೆ ಆಧಾರವೂ ಇಲ್ಲ. ಅಂತೂ ವೀರಶೈವರು ಜಗತ್ತಿನ ಸ್ವರೂಪವನ್ನು ವಿವರಿಸುವಾಗ ಬೋಧನಾ ಸೌಕರ್ಯಕ್ಕಾಗಿಯೋ ಅಥವಾ ಸೃಷ್ಟಿಕರ್ತನ ನಿತ್ಯತ್ವವನ್ನು ಸ್ಪಷ್ಟಪಡಿಸುವ ಸಲುವಾಗಿಯೋ ಜಗತ್ತಿಗೆ ಆದಿಯುಂಟೆಂದು ಊಹಿಸಿಕೊಂಡಿರುವರು.

ಅವಿಕೃತಪರಿಣಾಮವಾದ

ಅದ್ವೈತಿಗಳ ಪ್ರಕಾರ ಮಣ್ಣುಮಡಿಕೆಯಾಗಿ ಪರಿಣಮಿಸುವಂತೆ ಶಿವನು ಜಗದ್ರೂಪನಾಗಿ ಪರಿಣಮಿಸುವುದಿಲ್ಲ. ಏಕೆಂದರೆ ಸಾವಯವವಾದ ಮಣ್ಣಿಗೆ ಪರಿಣಾಮವನ್ನು ಹೇಳಬಹುದಾದರೂ ನಿರವಯನಾದ ಶಿವನಿಗೆ ಪರಿಣಾಮವು ಕೂಡುವುದಿಲ್ಲ. ಆದ್ದರಿಂದ ಎಲ್ಲಕ್ಕೂ ಅಧಿಷ್ಠಾನ (ಆಶ್ರಯ)ವಾಗಿರುವ ಶಿವನಲ್ಲಿ, ಹಗ್ಗದಲ್ಲಿ ಹಾವು ತೋರುವಂತೆ ಜಗತ್ತು, ಅನ್ಯಥಾ ತೋರುತ್ತದೆ. ಎಂದರೆ ಅನ್ಯಥಾ ಬಾವವೇ ವಿವರ್ತ. "ಜಗತ್ತು ಶಿವನ ವಿವರ್ತ (ಅನ್ಯಥಾ ಭಾವ) ಅವಿದ್ಯೆಯ ಪರಿಣಾಮ", ಎಂದು ಅದ್ವೈತಿಗಳು ವಾದಿಸುತ್ತಾರೆ. ಆದರೆ ಇಲ್ಲಿ ಶಿವಾದ್ವೈತಿಗಳು ಈ ವಾದವನ್ನು ಖಂಡಿಸಿ, ಜಗತ್ತು ಶಕ್ತಿವಿಶಿಷ್ಟಬ್ರಹ್ಮದ ಪರಿಣಾಮವೆಂಬುದನ್ನು ಸ್ಥಾಪಿಸುತ್ತಾರೆ. ಹಿಂದೆ ವಿವೇಚಿಸಿದಂತೆ, ಅದ್ವೈತಿಗಳ ವಿವರ್ತವನ್ನು ಒಪ್ಪಿದರೆ, ಜಗತ್ತಿಗೆ ಮಿಥ್ಯಾತ್ವವನ್ನು ಅಂಗೀಕರಿಸಬೇಕಾಗುತ್ತದೆ. ಹಗ್ಗದಲ್ಲಿ ಹಾವು ಎಂದೆಂದಿಗೂ ಇರುವುದಿಲ್ಲ. ಅದರಂತೆ ಬ್ರಹ್ಮದಲ್ಲಿ ವಿವರ್ತವಾಗಿ ತೋರುವ ಜಗತ್ತು ಮಿಥ್ಯೆ ಎನ್ನಬೇಕಾಗುತ್ತದೆ. ಶಿವಾದ್ವೈತದಲ್ಲಿ ಶಿವನೂ ಸತ್ಯ, ಜಗತ್ತೂ ಸತ್ಯ, ಶಿವನು ವಿಶ್ವಮಯ, "ಸರ್ವಂ ಖಲ್ವಿದಂ ಬ್ರಹ್ಮ" ಎಂಬ ಶ್ರುತಿಯು ಜಗತ್ತು ಸತ್ಯವೆಂದು ಸಾರಿದೆ. ಆದುದರಿಂದ ಶಿವನ ಪರಿಣಾಮವೇ ಜಗತ್ತು. ಇಲ್ಲಿನ ಪರಿಣಾಮ ಕುರಿತು ಹೀಗೆ ವಿಶ್ಲೇಷಿಸಲಾಗಿದೆ.

ಪರಿಣಾಮವು ಎರಡು ವಿಧ. ಒಂದು ವಿಕೃತ ಪರಿಣಾಮ, ಮತ್ತೊಂದು ಅವಿಕೃತ ಪರಿಣಾಮ, ಹಾಲು ಮೊಸರಾಗಿ ಪರಿಣಮಿಸುತ್ತದೆ. ಇಲ್ಲಿ ಹಾಲು ಮೊಸರಾಗಿ ಪರಿಣಮಿಸಿದ ನಂತರ ಮತ್ತೆ ಅದನ್ನು ಹಾಲು ಎಂದು ಕರೆಯಲಾಗುವುದಿಲ್ಲ. ಅದರಂತೆ ಶಿವನು ಜಗತ್ತಾಗಿ ಪರಿಣಮಿಸುತ್ತಾನೆ ಎಂಬಲ್ಲಿ ವಿಕೃತ ಪರಿಣಾಮವನ್ನು ಒಪ್ಪಿದರೆ, ಜಗತ್ತಿನಲ್ಲಿ ಶಿವನೇ ಇಲ್ಲವಾಗುತ್ತಾನೆ. ಆಗ ನಾಸ್ತಿಕಮತ ಪ್ರವೇಶ ಮಾಡಬೇಕಾಗುತ್ತದೆ. ಆದ್ದರಿಂದ ಇಲ್ಲಿ ಅವಿಕೃತ ಪರಿಣಾಮವನ್ನು ಈ ಸಿದ್ಧಾಂತವು ಸ್ವೀಕರಿಸಿದೆ.

ಎಂದರೆ ಸುವರ್ಣವು ಆಭರಣವಾಗಿ ಪರಿಣಮಿಸಿದ್ದು ಅವಿಕೃತ ಪರಿಣಾಮ. ಹೇಗೆಂದರೆ ಸುವರ್ಣವು ಆಭರಣವಾಗಿ ಪರಿಣಮಿಸಿದರೂ ಸಹ ಅದರಲ್ಲಿ ಸುವರ್ಣತ್ವದ ವ್ಯವಹಾರಕ್ಕೆ ಚ್ಯುತಿ ಉಂಟಾಗುವುದಿಲ್ಲ. ಅದು ಸುವರ್ಣಾಪೇಕ್ಷೆಗೆ ಸುವರ್ಣವಾಗಿಯೂ, ಆಭರಣಾಪೇಕ್ಷೆಗೆ ಆಭರಣವಾಗಿ ಇದ್ದೇ ಇರುತ್ತದೆ. ಅದರಂತೆ ಶಿವನು "ಏಕೋ

೬೪. ಫ.ಗು. ಹಳಕಟ್ಟಿ, ೧೯೬೫, ವಚನಶಾಸ್ತ್ರಸಾರ, ಭಾಗ ೧, ಪು. ೪೬.

ಹಿರುದ್ರೋ ನ ದ್ವಿತೀಯಾಯ ತಸ್ಥು:",[೬೫] "ರುದ್ರಮೇಕತ್ವಮಾಹುಃ ಶಾಶ್ವತಂ ವೈ ಪುರಾಣಂ",[೬೬] "ಸರ್ವೋ ಹ್ಯೇಷ ರುದ್ರಃ",[೬೭] ಎಂಬಂತೆ ಜಗದ್ರೂಪನಾಗಿ ಪರಿಣಮಿಸಿದರೂ ಕೂಡ ಅವನಿಗೆ ವಿಕಾರತ್ವಾದಿ ದೋಷ ಬರುವುದಿಲ್ಲ. ಏಕೆಂದರೆ "ವಿಶ್ವಾಧಿಕೋ ರುದ್ರೋ ಮಹರ್ಷಿಃ",[೬೮] ಮುಂತಾದ ಶ್ರುತಿಗಳು, ಶಿವನು ಜಗದ್ರೂಪವಾಗಿದ್ದರೂ ಸಹ ಅವನು ಜಗತ್ತಿಗೆ ವಿಲಕ್ಷಣನಾಗಿ ಇರುವನೆಂಬುದನ್ನು ಹೇಳುತ್ತವೆ. ಆದ್ದರಿಂದ ಶಿವನ ಅವಿಕೃತ ಪರಿಣಾಮವೇ ಜಗತ್ತು ಎಂದು ಈ ಸಿದ್ಧಾಂತವು ನಿರ್ಧರಿಸಿದೆ. ಈ ದಿಸೆಯಲ್ಲಿ "ದೇವಾತ್ಮಶಕ್ತಿಂ ಸ್ವಗುಣೈರ್ನಿಗೂಢಾಂ",[೬೯] "ಪರಾಽಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾಚ",[೭೦] "ಸ್ವಶಕ್ತಿ ಪ್ರಚಯೋಽಸ್ಯ ವಿಶ್ವಂ[೭೧] ಎಂಬ ಶ್ರುತಿ ಮತ್ತು ಶಿವಸೂತ್ರಗಳ ಹಿನ್ನೆಲೆಯಲ್ಲಿ ಮಾಯಿದೇವನು ಶಿವನ ಅವಿಕೃತ ಪರಿಣಾಮವೇ ಜಗತ್ತೆಂದು ನಿರ್ಣಯಿಸಿದ್ದಾನೆ.[೭೨]

**ಲಿಂಗಾಂಗಸ್ಥಲ:**

ಈ 'ಸ್ಥಲ' ಅಂದರೆ ಶಿವತತ್ವ, ಹಿಂದೆ ನೋಡಿದಂತೆ ಶಕ್ತಿ ವಿಶಿಷ್ಟವಾದದ್ದು. ತನ್ನಲ್ಲಿ ಅವಿನಾಭಾವದಿಂದ ನಿಹಿತವಾಗಿರುವ ಆ ವಿಮರ್ಶಶಕ್ತಿಯಿಂದ ಈ ಸೃಷ್ಟಿಗೆ ಕಾರಣವಾಗುತ್ತದೆ. ಅಂತೆಯೇ ಎರಡಿಲ್ಲದಂತಿದ್ದ ಆ ಶಿವಸ್ಥಲ, ತನ್ನ ಶಕ್ತಿಯ ಕ್ಷೋಭೆಯಿಂದ ಅಂದರೆ ಚಲನೆಯಿಂದ ಲಿಂಗಸ್ಥಲ ಅಂಗಸ್ಥಲ ಎಂದು ಎರಡಾಗುತ್ತದೆ. ಇದನ್ನು ದ್ವಿತೀಯಾಧಿಕರಣದ ೧ನೇ ಶ್ಲೋಕದಲ್ಲಿ ಹೀಗೆ ಹೇಳಲಾಗಿದೆ:

"ಸ್ವಶಕ್ತಿಕ್ಷೋಭಮಾತ್ರೇಣ ಸ್ಥಲಂ ತದ್ವಿವಿಧಂ ಭವೇತ್।
ಏಕಂ ಲಿಂಗಸ್ಥಲಂ ಪ್ರೋಕ್ತಮನ್ಯದಂಗಸ್ಥಲಂ ಸ್ಮೃತಂ" ॥

ಎಂದರೆ, ಲಿಂಗಸ್ಥಲವೇ ಶಿವ; ಅಂಗಸ್ಥಲವೇ ಜೀವ. ಒಂದು ಉಪಾಸ್ಯ, ಇನ್ನೊಂದು ಉಪಾಸಕ. ಉಪಾಸ್ಯ ಉಪಾಸಕರಲ್ಲಿ ಭೇದವಿಲ್ಲ; ಎರಡೂ ಪರಶಿವಸ್ವರೂಪವೇ. ಅಧಿಕಶಕ್ತಿ ಸಂಪನ್ನವಾದದ್ದು ಲಿಂಗಸ್ಥಲ, ನ್ಯೂನಶಕ್ತಿ ಸಂಪನ್ನವಾದುದು ಅಂಗಸ್ಥಲ. ಮೂಲತಃ ಅದೂ ಶಿವಸ್ವರೂಪವೇ ಆಗಿದೆ. ಆದುದರಿಂದಲೇ ಲಿಂಗತತ್ವಕ್ಕೆ ಹೇಳಿದಂತೆ ಅಂಗತತ್ವಕ್ಕೂ 'ಸ್ಥಲ' ಎಂಬ ಪದವನ್ನೇ ಬಳಸಲಾಗಿದೆ.

---

೬೫. ಶ್ವೇತಾಶ್ವತರೋಪನಿಷತ್ ೩-೨.

೬೬. ಅಥರ್ವಶಿರೋಪನಿಷತ್ ೫.

೬೭. ಮಹಾನಾರಾಯಣೋಪನಿಷತ್, ಅನುವಾಕ, ೧೬.

೬೮. ಅದೇ, ಅನುವಾಕ, ೧೦.

೬೯. ಶ್ವೇತಾಶ್ವತರೋಪನಿಷತ್, ೬-೩.

೭೦. ಅದೇ, ೬-೮.

೭೧. ಜೆ. ರುದ್ರಪ್ಪ, ೧೯೫೮, ಶಿವಸೂತ್ರಗಳು, ಸೂ. ೩೦, ಪು.೭೧.

೭೨. "ಶಕ್ತ್ಯಾಪ್ರಪಂಚಸೃಷ್ಟಿಃಸ್ಯಾತ್", ಶಿವಾನುಭವಸೂತ್ರಂ, ಅಧಿಕರಣ ೨, ಶ್ಲೋಕ ೨೮.

**ಲಿಂಗ ಮತ್ತು ಅಂಗಗತಶಕ್ತಿಗಳು:**

ಶಿವನು ಎರಡು ಸ್ಥಲಗಳಾಗಿ ಪರಿಣಮಿಸಿದಂತೆ, ಅವನಲ್ಲಿರುವ ಶಕ್ತಿಯೂ ಇಬ್ಬಗೆಯಾಗುತ್ತದೆ; ಕಲಾಶಕ್ತಿ, ಭಕ್ತಿಶಕ್ತಿ ಎಂದು. ಇವುಗಳಲ್ಲಿ ಕಲಾಶಕ್ತಿಯನ್ನೂ 'ಶಕ್ತಿ'ಯೆಂಬುದಾಗಿಯೂ, ಭಕ್ತಿಶಕ್ತಿಯನ್ನು 'ಭಕ್ತಿ' ಎಂಬುದಾಗಿಯೂ ಕರೆಯಲಾಗಿದೆ.

. . . . . . . . . . . . . . . . . . . . . . . .।
ಯಥಾಸ್ಥಲಂ ದ್ವಿಧಾಭೂತಂ ತಥಾಶಕ್ತಿರ್ದ್ವಿಧಾ ಭವೇತ್॥
ಲಿಂಗಸ್ಥಲಾಶ್ರಯಾ ಕಾಚಿತ್ಕಾಚಿದಂಗಸ್ಥಲಾಶ್ರಯಾ।
ಲಿಂಗಸ್ಥಲಾಶ್ರಯಾ ಶಕ್ತಿಃ ಕಲಾರೂಪಾ ಪ್ರಕೀರ್ತಿತಾ॥
ಲಿಂಗಸ್ಥಲಾಶ್ರಯಾ ಶಕ್ತಿರ್ಭಕ್ತಿರೂಪಾ ಭವಾಪಹಾ।
ಯಥಾ ಮಹಾನಲಜ್ವಾಲಾ ವಿಭಕ್ತಾದೀಪಿಕಾಕೃತಿಃ॥[೭೩]

'ಶಕ್ತಿ', ಲಿಂಗವನ್ನಾಶ್ರಯಿಸುತ್ತದೆ; 'ಭಕ್ತಿ' ಅಂಗವನ್ನಾಶ್ರಯಿಸುತ್ತದೆ. ಶಕ್ತಿ, ಪ್ರವೃತ್ತಿಪರವಾದುದು; ಭಕ್ತಿ ನಿವೃತ್ತಿಪರವಾದುದು. ಅಂದರೆ ಭಕ್ತಿಯನ್ನಾಶ್ರಯಿಸಿ ಅಂಗ, ಮುಕ್ತಿಯ ಕಡೆಗೆ ನಡೆಯುತ್ತದೆ. ಭಕ್ತಿ-ಶಕ್ತಿಗಳಲ್ಲಿನ ಸೂಕ್ಷ್ಮವಾದ ವ್ಯತ್ಯಾಸ ಗುರುತಿಸಲು ದೀಪದ ಉದಾಹರಣೆಯೊಂದನ್ನು ಕೊಡಲಾಗಿದೆ. ಮಹಾಜ್ವಾಲೆಯಲ್ಲಿ ಹೊಗೆಯ ಮಿಶ್ರಣದಿಂದ ಮಂದಪ್ರಕಾಶ, ಹೊಗೆಯಮಿಶ್ರಣವಿಲ್ಲದ ದೀಪದಲ್ಲಿ ಉತ್ತಮಪ್ರಕಾಶ ಕಾಣುವಂತೆ, ಲಿಂಗಗತ ಶಕ್ತಿಯಲ್ಲಿ ಸೃಷ್ಟಿಯನ್ನು ಸೃಜಿಸಬೇಕೆಂಬ ವಾಸನೆಯಿದ್ದುದರಿಂದ ಅದನ್ನು ಹೊಗೆಮಿಶ್ರಿತ ದೀಪಕ್ಕೆ ಹೋಲಿಸಿದರೆ, ಅಂಗಗತ ಭಕ್ತಿಯಲ್ಲಿ ನಿವೃತ್ತಿಪರನಿರ್ವಾಸನಾ ಭಾವವಿದ್ದುದರಿಂದ, ಅದನ್ನು ಸುಪ್ರಕಾಶಕ್ಕೆ ಹೋಲಿಸಲಾಗಿದೆ. ವಾಸನಾರಹಿತವಾದ ಭಕ್ತಿ, ಶುದ್ಧ ಸೂಕ್ಷ್ಮ, ಶುಭ, ಶ್ರೇಷ್ಠ, ಸಚ್ಚಿದಾನಂದ, ಮಹತ್ತರವಾದುದೆಂದು ಸ್ತುತಿಸಲಾಗಿದೆ.[೭೪] ಇವುಗಳಲ್ಲಿರುವ ಅಂತರ ಹೀಗಿದೆ :

**ಶಕ್ತಿ-ಭಕ್ತಿಗಳಿಗಿರುವ ಅಂತರ:**

| ಶಕ್ತಿ | ಭಕ್ತಿ |
|---|---|
| ೧. ಜ್ವಾಲೆ (ಹೊಗೆಯಿದೆ) | ದೀಪ (ಪ್ರಕಾಶ) |
| ೨. ಶಕ್ತಿ (ಸವಾಸನಾ) | ಭಕ್ತಿ (ನಿರ್ವಾಸನಾ) |
| ೩. .... | ಮಹತ್ತರ, ಶುದ್ಧ, ಸೂಕ್ಷ್ಮ, ಸಚ್ಚಿದಾನಂದರೂಪ, ಭೋಗ |
| ೪. ಭೋಗಪ್ರದ | ಮೋಕ್ಷಪ್ರದ |
| ೫. ಪ್ರವೃತ್ತಿ | ನಿವೃತ್ತಿ |
| ೬. ಪ್ರಪಂಚಸೃಷ್ಟಿ | ಪ್ರಪಂಚಲಯ |
| ೭. ಶಕ್ತಿವೈಚಿತ್ರ್ಯರೂಪ | ಭಕ್ತಿವೈಚಿತ್ರ್ಯರೂಪ |
| ೮. ರೂಪವಿಲ್ಲದ್ದು ರೂಪಗೊಳ್ಳುತ್ತದೆ | ರೂಪ ನಿರೂಪವಾಗುತ್ತದೆ |
| ೯. ಪ್ರಪಂಚಾಗುವ ಬಯಕೆ | ಪ್ರಪಂಚಲಯಾಪೇಕ್ಷೆ |

೭೩. ಶಿವಾನುಭವಸೂತ್ರಂ, ಅಧಿಕರಣ ೨, ಶ್ಲೋಕ ೨೦-೨೩.

೭೪. "ಭಕ್ತಿರ್ಮಹತ್ತರಾ ಶುದ್ಧಾ ಸುಸೂಕ್ಷ್ಮಾ ಶೋಭನಾ ಪರಾ", ಶಿವಾನುಭವಸೂತ್ರಂ, ಅಧಿಕರಣ ೨, ಶ್ಲೋಕ ೨೫.

| | |
|---|---|
| ೧೦. ಅಧೋಮುಖ | ಊರ್ಧ್ವಮುಖ |
| ೧೧. ಸಮಾಯ | ನಿರ್ಮಾಯೆ |
| ೧೨. ಉಪಾಸ್ಯತ್ವ | ಉಪಾಸಕತ್ವ |
| ೧೩. ಲಿಂಗಸ್ಥಲಾಶ್ರಯ | ಅಂಗಸ್ಥಲಾಶ್ರಯ |
| ೧೪. ಲಿಂಗಸ್ಥಲದಲ್ಲಿ ಶಿವ | ಅಂಗಸ್ಥಲದಲ್ಲಿ ಜೀವ |

ಶಕ್ತಿಭಕ್ತಿಗಳಿಗೆ ಅಭೇದವಿದ್ದರೂ ಭಕ್ತಿಯ ಹೆಚ್ಚುಗಾರಿಕೆಯನ್ನು ಹೇಳುವದರ ತಾತ್ಪರ್ಯವೆಂದರೆ, ಶಿವನಶಕ್ತಿಯನ್ನು ಇಚ್ಛಾಶಕ್ತಿ, ಸಂಕಲ್ಪಶಕ್ತಿ ಎಂದು ಗುರುತಿಸಲಾಗಿದೆ. ಶಿವಶಕ್ತಿಯು ಪ್ರವೃತ್ತಿಪರ. ಶಿವನು ಲೀಲಾರ್ಥವಾಗಿ ಲಿಂಗಾಂಗಾದಿ ಭೇದದಿಂದ ಜಗದಾಕಾರವಾಗಿ ಪರಿಣಮಿಸುವದರಲ್ಲಿ ಪ್ರವೃತ್ತಿಯುಳ್ಳವನೆಂದು ಹೇಳಲಾಗಿದೆ. ಆದುದರಿಂದಲೆ ಸೂತ್ರಕಾರನು ಶಿವನ ಆ ಸಂಕಲ್ಪಶಕ್ತಿಗೆ ಪ್ರವೃತ್ತಿಶಕ್ತಿಯೆಂದು ಕರೆದಿದ್ದಾನೆ. ಅಂಗಗತಭಕ್ತಿಯೆಂದರೆ, ಆಣವಾದಿ ಮಲತ್ರಯರಹಿತ ದೀಕ್ಷಿತ ಶುದ್ಧಜೀವನ ಸ್ವಭಾವ. ಈ ಸ್ವಭಾವ ನಿವೃತ್ತಿಪರವಾಗಿದೆ. ಎಂದರೆ, ಶಿವನಲ್ಲಿ ಸಮರಸವಾಗುವುದನ್ನೇ ಅದು ಬಯಸುತ್ತಿರುತ್ತದೆ. ಆದ್ದರಿಂದ ಪ್ರವೃತ್ತಿಪರವಾದ ಶಿವನ ಸ್ವಭಾವಕ್ಕಿಂತ ನಿವೃತ್ತಿಪರವಾದ ಅಂಗನ ಸ್ವಭಾವಕ್ಕೆ ಮಾಯಿದೇವ ಹೆಚ್ಚಿನ ಮಹತ್ವವಿತ್ತಿದ್ದಾನೆ. ಅದೇ ಅಧಿಕರಣದ ೩೧ನೇ ಶ್ಲೋಕದಲ್ಲಿ ಹೀಗೆ ಹೇಳಲಾಗಿದೆ. "ಅಪಿತರ್ಕ ಪ್ರಮಾಣಾಭ್ಯಾಂ ಶಕ್ತೇರ್ಭಕ್ತಿರ್ಗರೀಯಸಿ" ಒಟ್ಟಿನಲ್ಲಿ ಶಕ್ತಿ ಮತ್ತು ಭಕ್ತಿಗಳಿಗೆ ಭೇದವಿಲ್ಲದಿದ್ದರೂ ತರ್ಕ ಮತ್ತು ಪ್ರಮಾಣಗಳಿಂದ ಆಲೋಚಿಸಿದರೆ ಶಕ್ತಿಗಿಂತ ಭಕ್ತಿಯೇ ಗುಣದಲ್ಲಿ ಮಿಗಿಲು. ಈ ಭಕ್ತಿಗೆ ಇತರ ದಾರ್ಶನಿಕರು ಹೇಳುವ 'ಪೂಜ್ಯೇಷ ಅನುರಾಗೋ ಭಕ್ತಿಃ" ಎಂಬ ಸಾಮಾನ್ಯ ಲಕ್ಷಣವು ಅನ್ವಯಿಸುವುದಿಲ್ಲ. ಭಕ್ತನ ಸ್ವಭಾವವೆನಿಸಿರುವ ಭಕ್ತಿಯಲ್ಲಿ ಶಿವಪ್ರೇಮ, ಶಿವಜ್ಞಾನ, ಶಿವಕ್ರಿಯಾದಿಗಳು ಅಡಕವಾಗಿವೆ. ಶಿವತ್ವ ಪ್ರಾಪ್ತಿಯ ಸಾಧನ ಸಾಮಗ್ರಿಯನ್ನು ಹೊಂದಿರುವವಳು ಭಕ್ತಿಮಾತೆ. ಆ ಭಕ್ತಿಮಾತೆಯಿಂದಲೇ ಮುಕ್ತಿ. ಜ್ಞಾನಕ್ರಿಯೆಗಳು ಭಕ್ತಿಯ ಅಂಗಗಳಾಗಿ ಮುಕ್ತಿಸಾಧಕವೆನಿಸಿವೆ. ಈ ಅಧಿಕರಣದ ಕೊನೆಯ ಸೂತ್ರವು, ಮೇಲಿನ ಎಲ್ಲದರ ಸಾರವೆಂಬಂತೆ ಹೀಗೆ ಸೂಚಿಸುತ್ತದೆ.

ಲಿಂಗಸ್ಥಲಂ ಶಿವಃ ಸಾಕ್ಷಾಜ್ಜೀವಾತ್ಮಾಂಗಸ್ಥಲಂ ಭವೇತ್।
ಲಿಂಗಾಂಗಸ್ಥಲಯೋರೈಕ್ಯಂ ಶಿವಜೀವೈಕ್ಯಮೇವ ಹಿ॥[೭೫]

ಲಿಂಗಸ್ಥಲವೆಂದರೆ ಸಾಕ್ಷಾತ್ ಶಿವನಲ್ಲದೆ ಬೇರಲ್ಲ. ಅಂಗಸ್ಥಲವಾದರೂ ಜೀವಾತ್ಮನಲ್ಲದೆ ಅನ್ಯವಲ್ಲ. ಈ ಲಿಂಗಾಂಗ ಐಕ್ಯವೇ ಶಿವಜೀವರ ಐಕ್ಯ.

**ಈಶ್ವರ (ಲಿಂಗಸ್ಥಲ):**

ಭಾರತೀಯ ವಿವಿಧ ತತ್ತ್ವಶಾಸ್ತ್ರಗಳನ್ನು (ವೀರಶೈವವನ್ನುಳಿದು) ವಿಶ್ಲೇಷಣಾತ್ಮಕ ದೃಷ್ಟಿಯಿಂದ ಅವಲೋಕಿಸಿದಾಗ ಅವುಗಳಲ್ಲಿ ಕಂಡುಬರುವ ಈಶ್ವರ ಪರಿಕಲ್ಪನೆ, ಒಂದಿಲ್ಲೊಂದು ಕೊರತೆಯನ್ನು ಹೊಂದಿರುವುದು ಕಂಡುಬರುತ್ತದೆ. ಅಂದರೆ ಅದು ಮಾನವನ ಧಾರ್ಮಿಕ ಅವಶ್ಯಕತೆಗಳನ್ನು ಹಾಗೂ ಅವನ ಧಾರ್ಮಿಕ ಜಿಜ್ಞಾಸೆಯ ಪೂರ್ಣ ಹಸಿವನ್ನು ಹಿಂಗಿಸಲು ಅಸಮರ್ಥವಾಗಿದೆ. ವೀರಶೈವದಾರ್ಶನಿಕರು ಅನೂಚಾನವಾಗಿ ಬಂದತಹ ಯುಗಬಂಧನದಿಂದ ವಿಮುಕ್ತರಾಗಿ ಈಶ್ವರ ಪರಿಕಲ್ಪನೆಗಳ ಎಲ್ಲ ವಿಚಾರಸರಣಿಗಳನ್ನು ಪರೀಕ್ಷಿಸಿ ಅವುಗಳಲ್ಲಿ ಏಕಸೂತ್ರದ ಆಧಾರದ ಮೇಲೆ, ಒಂದು ಸಮನ್ವಯವಾದ ಮತ್ತು ಮಾನವನ ಅನುಭವಕ್ಕೆ ನಿಲುಕುವ ಈಶ್ವರ ಪರಿಕಲ್ಪನೆಯನ್ನು ಸೂತ್ರೀಕರಿಸಿದ್ದಾರೆ.

---
೭೫. ಶಿವಾನುಭವಸೂತ್ರಂ, ಅಧಿಕರಣ ೨, ಶ್ಲೋಕ ೩೩.

ಷಟ್‌ಸ್ಥಲ ಸಿದ್ಧಾಂತದಲ್ಲಿ ಈಶ್ವರ ಪರಿಕಲ್ಪನೆಯು ಮಾನವನ ಧಾರ್ಮಿಕ ಜಿಜ್ಞಾಸೆ ಹಾಗೂ ಅವನ ಅವಶ್ಯಕತೆಗಳನ್ನು ತೃಪ್ತಿಪಡಿಸುವ ಸ್ವರೂಪವನ್ನು ಹೊಂದಿದೆ. ಷಟ್‌ಸ್ಥಲ ಸಿದ್ಧಾಂತದಲ್ಲಿ ದೇವರ ಪರಿಕಲ್ಪನೆ ಸಾಧಕನ ಆತ್ಮವಿಕಾಸದ ಹಂತ ಅಥವಾ ಸ್ಥಲವನ್ನು ಅವಲಂಬಿಸಿದೆ. ಮೊದಲ ಹಂತವಾದ ಭಕ್ತಸ್ಥಲದಲ್ಲಿ ಈಶ್ವರ ಹಾಗೂ ಜೀವ ಅಥವಾ ಲಿಂಗ ಹಾಗೂ ಅಂಗದ ಮಧ್ಯೆ ಭಿನ್ನತೆ ಅಥವಾ ದ್ವೈತಭಾವನೆ ಸ್ಪಷ್ಟವಾಗಿ ಕಂಡುಬಂದರೆ ಕೊನೆಯ ಹಂತವಾದ ಐಕ್ಯಸ್ಥಲದಲ್ಲಿ ಸಂಪೂರ್ಣ ಏಕತೆ ಅಥವಾ ಅದ್ವೈತ ಕಂಡುಬರುತ್ತದೆ.[೭೬] ಷಟ್‌ಸ್ಥಲದಲ್ಲಿ ಬ್ರಹ್ಮ, ವಿಷ್ಣು, ರುದ್ರರ ದ್ವೈತವತ್ವವನ್ನು ನಿರಾಕರಿಸುತ್ತದೆ. ಪುರಾಣಗಳಲ್ಲಿ ಹಿಂದೆ ಕಂಡಂತೆ ಶೈವದರ್ಶನವು ಈ ಮೂವರನ್ನೂ ಅಧೀನ ದೇವರೆಂದು ಭಾವಿಸುತ್ತದೆ. ಷಟ್‌ಸ್ಥಲ ದರ್ಶನಮಾತ್ರ ಒಬ್ಬನೇ ಒಬ್ಬ ದೇವನೆಂದು ಉದ್ಘೋಷಿಸುತ್ತದೆ. ಆ ದೇವನೇ ಶಿವ, ಪರಶಿವ, ಲಿಂಗ, ಸ್ಥಲವೆಂದು ಅಂಗೀಕರಿಸಲಾಗಿದೆ.

**ಸ್ಥಲ ಮತ್ತುಲಿಂಗ ಸ್ಥಲದಲ್ಲಿರುವ ಸೂಕ್ಷ್ಮ ವ್ಯತ್ಯಾಸ:**

ಮಾಯಿದೇವನ ಪ್ರಕಾರ ಲಿಂಗಸ್ಥಲವು ಸ್ಥಲವಿಕಾಸದ ಎರಡನೆಯ ಹಂತ. ಇವುಗಳಿಗೆ ಬೇರೆಬೇರೆಯಾಗಿ ನಿರ್ವಚಿಸಲಾಗಿದೆ.[೭೭] ಇವೆರಡರಲ್ಲಿ ಸೂಕ್ಷ್ಮವಾದ ತಾರತಮ್ಯವಿದೆ ಎಂಬುದು ಸಮೀಕ್ಷೆಯಲ್ಲಿ ಸಂವಿದಿತವಾಗುತ್ತದೆ.[೭೮] ಶಬ್ದಾರ್ಥಗಳು ಸಮಾನವಾಗಿದ್ದರೂ ಅವುಗಳಲ್ಲಿರುವ ಭಾವ ಮತ್ತು ಸ್ವರೂಪಗಳಲ್ಲಿ ಸಮಾನತೆಯಿಲ್ಲ. ಸ್ಥಲ ಮೂಲವಸ್ತು; ಕಾರಣವಸ್ತು, ಲಿಂಗವಾಗುವಂತೆ ಆಗುವ ಉಪಾಧಿ ಸ್ಥಲಕ್ಕಿಲ್ಲ. ಆದ್ದರಿಂದ ಅದು ಅನನ್ಯ. ಅದು ಸರ್ವಶೂನ್ಯನಿರಾಲಂಬಸ್ಥಲ ಸ್ಥಲ ಮತ್ತು ಲಿಂಗದಲ್ಲಿಯ "ಲ", "ಲಿ" ಎಂಬ ಶಬ್ದಗಳಲ್ಲಿ ಸಮಾನಾರ್ಥ ಕಲ್ಪಿಸಬಹುದು. ಹೇಗೆಂದರೆ ಲಿಂಗ ಮತ್ತು ಸ್ಥಲ ಇವೆರಡೂ ಶಬ್ದಗಳಲ್ಲಿನ 'ಲ'ಕಾರವು ಲಯಸೂಚಕವಾಗಿದೆ. ಆದರೆ ಲಿಂಗಶಬ್ದದ 'ಗ' ಕಾರವು ಗಮನಾರ್ಥ ಸೂಚಕವಾಗಿದ್ದರೆ ಸ್ಥಲ ಪದದ 'ಸ್ಥ'ಕಾರವು ಸ್ಥಾನ ಅಥವಾ ಆಧಾರ ಸೂಚಕವಾಗಿದೆ. 'ಯೇ ಗತ್ಯರ್ಥಾಃ ಧಾತವಃ ತೇ ಜ್ಞಾನಾರ್ಥಾಃ'[೭೯] ಎಂದರೆ, ಗತ್ಯರ್ಥಕ ಶಬ್ದಗಳೆಲ್ಲ 'ಜ್ಞಾನ' ಎಂಬ ಅರ್ಥ ಹೊಂದಿವೆ. ಇಲ್ಲಿ 'ಗ' ಕಾರವು ಜ್ಞಾನ ಎಂದು ಅರ್ಥಕೊಡುತ್ತದೆ. ಈ ಹಿನ್ನೆಲೆಯಲ್ಲಿ 'ಲಿಂಗಸ್ಥಲ ಎಂದರೆ ಜ್ಞಾನಯುಕ್ತ ಭಾವಗಮ್ಯ ವಸ್ತು; 'ಸ್ಥಲ' ಎಂದರೆ ಕೇವಲ ಭಾವಗಮ್ಯ 'ಸರ್ವಶೂನ್ಯ ನಿರಾಲಂಬ ಸ್ಥಲ' ಎಂದು ಹೇಳಬೇಕಾಗುತ್ತದೆ. ಅಂತೆಯೇ ಮಾಯಿದೇವನು ಸ್ಥಲಕ್ಕೂ ಹಾಗು ಲಿಂಗಕ್ಕೂ ಪ್ರತ್ಯೇಕವಾಗಿಯೇ ವ್ಯುತ್ಪತ್ತಿ ಹೇಳಿದ್ದಾನೆ. ಅವು ಕೆಳಗಿನಂತಿವೆ.

**ಸ್ಥಲತತ್ತ್ವ:**

ಯತ್ರಾದೌ ಸ್ಥೀಯತೇವಿಶ್ವಂ ಪ್ರಾಕೃತ ಪೌರುಷಂ ಯತಃ।
ಲೀಯತೇ ಪುನರಂತೇಚ ಸ್ಥಲಂ ತತ್ಪ್ರೋತೇ ತತಃ॥[೮೦]

---

೭೬. Dr. S.C. Nandimath (1941), A Hand Book Virasaivism, p.112.

೭೭. ಡಾ. ಆರ್.ಸಿ. ಹಿರೇಮಠ, ೧೯೭೭, ಷಟ್‌ಸ್ಥಲಪ್ರಭೆ, ಪು. ೩೭೩.

೭೮. ಡಾ. ಜ.ಚ.ನಿ., ಷಟ್‌ಸ್ಥಲ ಸಿದ್ಧಾಂತ : ದರ್ಶನ ಸಮೀಕ್ಷೆ, ವಿಶ್ವಪ್ರಭೆ, ೧೯೯೧ (ಸಂ.೩) ಪು. ೧೭೩.

೭೯. ಉದ್ಧೃತ : ಡಾ. ಎಚ್.ಪಿ. ಮಲ್ಲೇದೇವರು (೧೯೮೮) ವಾತುಲಶುದ್ಧಾಗಮ, ಪು.ix

೮೦. ಶಿವಾನುಭವಸೂತ್ರಂ ಅಧಿಕರಣ - ೨, ಶ್ಲೋಕ ೪.

ಲಿಂಗಸ್ಥಲ:

ಲೀಯತೇ ಗಮ್ಯತೇ ಯತ್ರ ಯೇನ ಸರ್ವಂ ಚರಾಚರಂ।
ತದೇತಲ್ಲಿಂಗಮಿತ್ಯುಕ್ತಂ ಲಿಂಗತತ್ತ್ವ ಪರಾಯಣೈಃ ।।[೮೧]

ಇಲ್ಲಿ ಲಿಂಗಶಬ್ದದ 'ಗ' ಕಾರವು ಸೃಷ್ಟಿಯ ಉತ್ಪತ್ತಿ ಮತ್ತು ವಿಕಾಸಗಳನ್ನು ಸೂಚಿಸಿದರೆ. ಸ್ಥಲ ಪದದ ಸ್ಥಕಾರವು ಆದರ ವಿರಮಸ್ಥಾನವನ್ನು ಸೂಚಿಸುತ್ತದೆ. ಈ ಮೂಲಕ ಸ್ಥಲ ಎಂಬುದಕ್ಕೆ ಅಧಿಷ್ಠಾನ, ಸ್ಥಾನ, ಆಧಾರ ಎಂಬ ಪದಗಳನ್ನು ಬಳಸಿ, ಲಿಂಗ ಮತ್ತು ಸ್ಥಲಗಳ ನಡುವೆ ಇರುವ ಅರ್ಥ, ಭಾವ ಮತ್ತು ಸ್ವರೂಪ ವ್ಯತ್ಯಾಸವನ್ನು ಸೂಚಿಸಲಾಗಿದೆ.

ಸಿದ್ಧಾಂತ ಶಿಖಾಮಣಿಯಂತೆ ಶಿವಾನುಭವಸುತ್ರವೂ, ಲಿಂಗ ಸ್ಥಲವು ಪರಶಿವ ಬ್ರಹ್ಮವಾಚಕವೆಂದು ಹೇಳುತ್ತದೆ. ಆದರೆ ಶಿವನುಭವಸೂತ್ರದಲ್ಲಿ ಸಂಕ್ಷಿಪ್ತತೆ ಹೆಚ್ಚು. ಹನ್ನೊಂದು ಶ್ಲೋಕಗಳಲ್ಲಿ[೮೨] ಹೇಳಲಾದ, ಸಿದ್ಧಾಂತ ಶಿಖಾಮಣಿಯ ಲಿಂಗಸ್ಥಲವು, ಶಿವಾನುಭವಸೂತ್ರದ ಮೂರು ಶ್ಲೋಕಗಳಲ್ಲಿ ಹೀಗೆ ಮೂಡಿದೆ.

ಶಿವ ಏವ ಸ್ವಯಂ ಲಿಂಗಮಿತಿ ಲಿಂಗಸ್ಯವೈಭವಂ ।
ನಾನ್ಯಚ್ಛಿಹ್ನಾದಿಕಂ ಲಿಂಗಂ ತತ್ಸರ್ವಂ ಕೃತಕಂ ಚಯತ್ ।।

ಲೀಯತೇ ಗಮ್ಯತೇ ಯತ್ರ ಯೇನ ಸರ್ವಂ ಚರಾಚರಂ।
ತದೇತಲ್ಲಿಂಗಮಿತ್ಯುಕ್ತಂ ಲಿಂಗತತ್ತ್ವ ಪರಾಯಣೈಃ।।

ಲಯಗತ್ಯರ್ಥಯೋರ್ಹೇತುಭೂತತ್ವಾತ್ಸರ್ವದೇಹಿನಾಂ।
ಲಿಂಗಮಿತ್ಯುಚ್ಯತೇ ಸಾಕ್ಷಾಚ್ಛಿವಃ ಸಕಲನಿಷ್ಕಲಃ।।[೮೩]

ಭಕ್ತರಿಂದ ಪೂಜೆಗೊಳ್ಳುವ ಸಂಪತ್ತೇ ಲಿಂಗದವೈಭವ! ಭಕ್ತೋದ್ಧಾರಕ್ಕಾಗಿಯೇ ಶಿವನು ಲಿಂಗರೂಪವಾಗಿದ್ದಾನೆ. ಚಿಹ್ನೆ, ಪ್ರತೀಕ ಮುಂತಾದ ಅರ್ಥಗಳನ್ನು ಲಿಂಗಕ್ಕೆ ಅನ್ವಯಿಸಕೂಡದು. ಲಿಂಗವೆಂದರೆ ಶ್ರೀ ಭೂಸನೂರಮಠರ ಶಬ್ದಗಳಲ್ಲಿ "ಎಲ್ಲ ಎಲ್ಲ ಎಲ್ಲಿ ಹುಟ್ಟಿ, ಎಲ್ಲಿ ಬೆಳೆದು, ಎಲ್ಲಿ ಅಡಗುವವೋ ಅದೇ ಈ ಲಿಂಗ"[೮೪] ರೂಪವಿಲ್ಲದ, ಕುಂದಿಲ್ಲದ, ರಂಜನವಿಲ್ಲದ ವಿಷಯ ಮತ್ತು ಭಾವಕ್ಕೆ ಮೀರದ ಬ್ರಹ್ಮವೇ ಭಕ್ತರಿಂದ ಪೂಜೆಗೊಳ್ಳಲು ಲಿಂಗವಾಗುತ್ತದೆ. ಬಸವಣ್ಣನವರ ವಚನವೊಂದು ಇದನ್ನೇ ಇನ್ನಿಷ್ಟು ತಿಳಿಗೊಳಿಸಿದೆ.

---

೮೧. ಶಿವಾನುಭವಸೂತ್ರಂ, ಅಧಿಕರಣ - ೩, ಶ್ಲೋಕ ೩.

೮೨. ಡಾ. ಎಂ.ಶಿವಕುಮಾರಸ್ವಾಮಿ (೧೯೮೭) ಸಿದ್ಧಾಂತ ಶಿಖಾಮಣಿ (ಮೂರು ಉಪನ್ಯಾಸಗಳು) ಪು. ೭೭.

೮೩. ಶಿವಾನುಭವಸೂತ್ರಂ ಅಧಿಕರಣ - ೩, ಶ್ಲೋಕ ೨, ೩, ೪.

೮೪. ಸಂ.ಶಿ. ಭೂಸನೂರಮಠ, ೧೯೬೯, ಶೂನ್ಯಸಂಪಾದನೆಯ ಪರಾಮರ್ಶೆ, ಪು. ೭೭.

ಜಗದಗಲ, ಮುಗಿಲಗಲ ಮಿಗೆಯಗಲ ನಿಮ್ಮಗಲ;
ಪಾತಾಳದಿಂದತ್ತತ್ತ ನಿಮ್ಮ ಶ್ರೀಚರಣ,
ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀಮುಕುಟ!
ಅಗಮ್ಯ,ಅಗೋಚರ, ಅಪ್ರತಿಮಲಿಂಗವೆ !
ಕೂಡಲಸಂಗಮದೇವ ಎನ್ನ ಕರಸ್ಥಳಕ್ಕೆ ಬಂದು ಚುಳುಕಾದಿರಯ್ಯ! [೮೫]

"ಜ್ಯೋತಿರ್ಮಯಂ ಪರಂ ಲಿಂಗಂ ಶ್ರುತಿರಾಹ ಶಿವಾತ್ಮಿಕಾಂ"[೮೬] ಜ್ಯೋತಿರ್ಮಯವಾದ ಶಿವಲಿಂಗವೇ ಶಿವಾತ್ಮಕವಾಗಿರುವುದಾಗಿ ಮಾಯಿದೇವ ವೇದ ಹೇಳಿದುದನ್ನು ಉಲ್ಲೇಖಿಸುತ್ತಾನೆ.

**ತ್ರಿವಿಧಲಿಂಗ ಸ್ವರೂಪ:**

ಲಿಂಗಸ್ಥಲ ಮೂರು ವಿಧವಾಗಿದೆ. ೧) ಭಾವ ೨) ಪ್ರಾಣ ೩) ಇಷ್ಟ ಎಂದು.

ಲಿಂಗಸ್ಥಲಂ ತ್ರಿಧಾಜ್ಞೇಯಂ ತದ್ಭೇದೋ ವರ್ಣ್ಯತೇಕ್ರಮಾತ್ ।
ಪ್ರಥಮಂ ಭಾವಲಿಂಗಂ ಸ್ಯಾದ್ವಿತೀಯಂ ಪ್ರಾಣಲಿಂಗಕಂ॥
ತೃತೀಯಮಿಷ್ಟಲಿಂಗಂ ಸ್ಯಾದಿತ್ಯೇತತ್ತ್ರಿವಿಧಂ ಸ್ಮೃತಂ। [೮೭]

ಭಾವಗಮ್ಯವಾದುದು ಭಾವಲಿಂಗ ಇದು ನಿಷ್ಕಲ. ಸಕಲ ನಿಷ್ಕಲರೂಪವಾದ ಪ್ರಾಣಲಿಂಗವು, ಮನೋಗ್ರಾಹ್ಯವಾಗಿದೆ, ಇಷ್ಟಪ್ರಾಪ್ತಿ ಹಾಗೂ ಅನಿಷ್ಟ ಪರಿಹಾರಕವಾದುದೇ ಇಷ್ಟಲಿಂಗ 'ಇಷ್ಟಿಃ' ಎಂದರೆ ಪೂಜೆ. ನಿತ್ಯದಲ್ಲಿಯೂ ಪೂಜೆಗೊಂಬುದರಿಂದ ಆದಕ್ಕೆ 'ಇಷ್ಟ' ಲಿಂಗವೆಂದು ಹೆಸರು. ಇದು ಸಕಲರೂಪ.

. . . . . . . . . . . . . . . . . . . . . . . . ।
ನಿಷ್ಕಲಂ ಭಾವಲಿಂಗಂ ಸ್ಯಾದ್ಭಾವಗ್ರಾಹ್ಯಂ ಪರಾತ್ಪರಂ ॥
ಸನ್ಮಾತ್ರಂ ಭಾವಲಿಂಗಂ ಸ್ಯಾದಿತಿ ನಿಷ್ಠಾ ಮಹಾತ್ಮನಾಂ ।
ಪ್ರಾಣಲಿಂಗಂ ಮನೋಗ್ರಾಹ್ಯಂ ಭವೇತ್ಸಕಲನಿಷ್ಕಲಂ ॥
ತತ್ಪ್ರಾಣೇಷ್ವಂತರ್ಮನಸೋ ಲಿಂಗಮಾಹ ಇತಿ ಶ್ರುತಿಃ ।
ಸಕಲಂ ದೃಕ್ಕಲಾಗ್ರಾಹ್ಯಮಿಷ್ಟಲಿಂಗಸ್ಥಲಂ ಮಹತ್॥
ಇಷ್ಟಾವಾಪ್ತಿಕರಂ ಸಾಕ್ಷಾದನಿಷ್ಟಪರಿಹಾರಕಂ ।
ಇಷ್ಟಿಃ ಪೂಜಾ ತಯಾ ನಿತ್ಯಮಿಷ್ಟಂ ಪೂಜಿತಮಾದರಾತ್ ॥
ಇಷ್ಟಲಿಂಗಮಿತಿ ಪ್ರೋಕ್ತಮಾಚಾರ್ಯೈರ್ಲಿಂಗಪೂಜಕೈಃ

೮೫. ಡಾ. ಎಂ.ಎಂ. ಕಲಬುರ್ಗಿ, ೧೯೯೩, ಬಸವಣ್ಣನವರ ವಚನಸಂಪುಟ-೧, ವ. ೭೪೪, ಪು. ೧೮೬.

೮೬. ಶಿವಾನುಭವಸೂತ್ರಂ, ಅಧಿಕರಣ ೩, ಶ್ಲೋಕ ೧೧.

೮೭. ಶಿವಾನುಭವಸೂತ್ರಂ, ಅಧಿಕರಣ ೩, ಶ್ಲೋಕ ೫, ೬.

ಇಷ್ಟಮರ್ಥಂ ಸ್ವಭಕ್ತಾನಾಮನುಯಚ್ಛತಿ ಸರ್ವದಾ ||
ತದಿಷ್ಟಲಿಂಗಮಿತ್ಯಾಹ ತಸ್ಮಾದಾಥರ್ವಣೀ ಶ್ರುತಿಃ ||
. . . . . . . . . . . . . . . . . . . . . . ||[೮೮]

ಶಿವನ ಸಚ್ಚಿದಾನಂದ ರೂಪದಲ್ಲಿ-ಕ್ರಮವಾಗಿ ಭಾವಲಿಂಗವು ಸದ್ರೂಪವನ್ನು, ಪ್ರಾಣಲಿಂಗವು ಚಿದ್ರೂಪವನ್ನು ಇಷ್ಟಲಿಂಗವು ಆನಂದರೂಪವನ್ನು ಹೊಂದುವವು. ಏಕತ್ವ ಬೋಧಕವಾದ "ತತ್ತ್ವಮಸಿ" ಎಂಬ ಉಪನಿಷದ್ವಾಕ್ಯದಲ್ಲಿರುವ 'ತತ್' 'ತ್ವಂ' 'ಅಸಿ' ಎಂಬ ಪದತ್ರಯದ ರೂಪವೇ ಕ್ರಮವಾಗಿ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗಗಳಾಗಿ ರುವವೆಂದು ನಿರೂಪಿಸಲಾಗಿದೆ. ಅಲ್ಲದೆ ಭಾವಲಿಂಗ, ಪ್ರಾಣಲಿಂಗ, ಇಷ್ಟಲಿಂಗ ಇವು ಕ್ರಮವಾಗಿ-ಪರ, ಸೂಕ್ಷ್ಮ, ಮತ್ತು ಸ್ಥೂಲವೆಂದು ಕರೆಯಿಸಿಕೊಂಡಿವೆ. ಸ್ಥೂಲವನ್ನು ಬಾಹ್ಯವೆಂದೂ, ಸೂಕ್ಷ್ಮವನ್ನು ಅಭ್ಯಂತರವೆಂದೂ, ಪರವು ಸಬಾಹ್ಯಾಭ್ಯಂತರವೆಂದೂ ಉಕ್ತವಾಗಿದೆ. ಇಷ್ಟ, ಪ್ರಾಣ, ಭಾವಲಿಂಗಗಳು ಕ್ರಮವಾಗಿ ದೇಹ. ಪ್ರಾಣ, ಆತ್ಮ ರೂಪದಿಂದಲೂ, ಕ್ರಿಯಾ, ಮಂತ್ರ, ಪ್ರಯೋಗ (ಅನುಸಂಧಾನ) ರೂಪದಿಂದಲೂ, ಬಿಂದು, ನಾದ, ಕಲಾಭೇದದಿಂದಲೂ ಇರುವವೆಂದು ಉದಾಹೃತವಾಗಿವೆ. ಕೆಳಗಿನ ಪಟ್ಟಿಕೆಯಲ್ಲಿ ಇವುಗಳನ್ನು ಹೀಗೆ ಗುರುತಿಸಬಹುದು.

**ತತ್ತ್ವಮಸಿ ವಾಕ್ಯಸಮನ್ವಯ:**

| ತತ್ | ತ್ವಂ | ಅಸಿ |
|---|---|---|
| ಸೂಕ್ಷ್ಮ | ಸ್ಥೂಲ | ಪರ |
| ಇಷ್ಟ | ಪ್ರಾಣ | ಭಾವ |
| ಅಭ್ಯಂತರ | ಬಾಹ್ಯ | ಸಬಾಹ್ಯಾಭ್ಯಂತರ |
| ಆತ್ಮ | ಪ್ರಾಣ | ದೇಹ |
| ಪ್ರಯೋಗ (ಅನುಸಂಧಾನ) | ಮಂತ್ರ | ಕ್ರಿಯೆ |
| ಕಲೆ | ನಾದ | ಬಿಂದು |

**ಲಿಂಗಾಂಗಗಳಲ್ಲಿ ತತ್ವಮಸಿವಾಕ್ಯಸಮನ್ವಯ:**

ಮುಂದೆ ಲಿಂಗಾಂಗ ಸಂಯೋಗವಿಧಿಯಲ್ಲಿ 'ತತ್' ಪದವು ಲಿಂಗವನ್ನು 'ತ್ವಂ' ಪದವು ಅಂಗನನ್ನು (ಜೀವ) 'ಅಸಿ' ಪದವು ಲಿಂಗಾಂಗಗಳ ಸಂಯೋಗವನ್ನು ಬೋಧಿಸುವುದಾಗಿ ಹೇಳಲಾಗಿದೆ.

**ಷಡ್ವಿಧಲಿಂಗಗಳು:**

ಇಷ್ಟಾದಿ ಮೂರು ಲಿಂಗಗಳೇ ಆರುವಿಧವಾಗುವ ಕ್ರಮವನ್ನು ಹೀಗೆ ಪ್ರಸ್ತಾಪಿಸಲಾಗಿದೆ :

---

೮೮. ಶಿವಾನುಭವಸೂತ್ರಂ, ಅಧಿಕರಣ ೩, ಶ್ಲೋಕ ೬-೧೧.




ಒಂದೊಂದು ಸ್ಥಲವೇ ಎರಡುವಿಧವಾಗುವದು. ಎಂದರೆ ಭಾವಲಿಂಗದಲ್ಲಿ ೨, ಪ್ರಾಣಲಿಂಗದಲ್ಲಿ ೨, ಇಷ್ಟಲಿಂಗಸ್ಥಲದಲ್ಲಿ ೨. ಈ ಪ್ರಕಾರವಾಗಿ ೩ ಲಿಂಗಗಳೇ ೬ ಲಿಂಗಗಳಾದವು. ಶಿವಾತ್ಮಕವಾದ ಪರಲಿಂಗವೇ ತನ್ನ ಶಕ್ತಿಯ ವೈಭವದಿಂದ ಅಥವಾ ಸ್ವಾತಂತ್ರ್ಯದಿಂದ ಇಲ್ಲವೇ ಲೀಲೆಯಿಂದ, ಈ ಪ್ರಕಾರವಾಗಿ ಮಹಾಲಿಂಗ, ಪ್ರಸಾದಲಿಂಗ, ಚರಲಿಂಗ, ಶಿವಲಿಂಗ, ಗುರುಲಿಂಗ ಆಚಾರಲಿಂಗವೆಂದು ೬ ಬಗೆಯಾಗಿರುವುದು. ಹೀಗೆ ವಿಭಾಗವಾಗುವುದಕ್ಕೆ ಕಾರಣವೇನಂದರೆ, ಭಕ್ತರ ಪೂಜಾ, ಧ್ಯಾನ ಮುಂತಾದ ಸೌರ್ಯಕ್ಕಾಗಿಯಷ್ಟೆ

**ಷಡ್ವಿಧ ಲಿಂಗಗಳಲ್ಲಿರುವ ಷಟ್‌ಕಲಾತ್ಮಕವಾದ ಷಟ್‌ಶಕ್ತಿಗಳು:**

ವಿಮರ್ಶಶಕ್ತಿವಿಶಿಷ್ಟನಾದ ಪರಶಿವನು, ಭಕ್ತಾನುಗ್ರಹಕ್ಕಾಗಿ ಆರುವಿಧವಾದಂತೆ ಶಿವಗತಶಕ್ತಿಯೂ ಆರುವಿಧವಾಗುವುದನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.




**ಶಕ್ತಿವಿಶಿಷ್ಟ ಷಡ್ವಿಧಲಿಂಗಗಳ ಸ್ವರೂಪ**

**೧) ಮಹಾಲಿಂಗ:**

ಆದ್ಯಂತರಹಿತ, ನಿರ್ಮಲ, ಪರಿಪೂರ್ಣ, ಏಕ, ಸೂಕ್ಷ್ಮ, ಪರಾತ್ಪರ, ಭಾವರಹಿತ, ಅಪ್ರಮೇಯ (ಸ್ವತಃ ಸಿದ್ಧ), ಚೇತನಾತ್ಮಕ ಶಿವತತ್ವವು ಚಿಚ್ಛಕ್ತಿ ಸಮೇತವಾಗಿ ಮಹಾಸಾದಾಖ್ಯವೆನಿಸಿ ಭಾವಗಮ್ಯವಾದುದು, ಮಹಾಲಿಂಗವೆನಿಸಿದೆ.

೨) ಪ್ರಸಾದಲಿಂಗ:

ಪರಂಜ್ಯೋತಿಸ್ವರೂಪ, ಸತ್ಯ ಅಖಂಡ, ಇಂದ್ರಿಯ ಅಗೋಚರ, ಅಮೃತರೂಪ, ಜಗತ್ಪರಿಣಾಮಕ್ಕೆ ಕಾರಣ, ಪರಾಶಕ್ತಿಯುಕ್ತವೂ ಶಿವಸಾದಾಖ್ಯತತ್ತ್ವಾಶ್ರಯವೂ ಉಪಾಧಿರಹಿತವೂ ಜ್ಞಾನಗಮ್ಯವೂ ಆಗಿರುವುದೇ ಪ್ರಸಾದಲಿಂಗ.

೩) ಚರಲಿಂಗ:

ಜ್ಯೋತಿಸ್ವರೂಪ, ಬಹಿರಂತರ್ವ್ಯಾಪಾರ, ಪರಮ ಪುರುಷರೂಪ, ಅಮೂರ್ತತತ್ತ್ವಾಶ್ರಯ, ಆದಿಶಕ್ತಿ ಸಮೇತ, ಮನೋಗೋಚರ, ಎಂದರೆ ಮನಸ್ಸಿನಿಂದ ನಿತ್ಯವೂ ಧ್ಯಾನಿಸಲು ಯೋಗ್ಯವಾದುದು ಚರ (ಜಂಗಮ) ಲಿಂಗ

೪) ಶಿವಲಿಂಗ:

ವಿದ್ಯಾಕಲಾಯುಕ್ತ, ದಿವ್ಯಪ್ರಭಾಯುಕ್ತ, ಏಕಮುಖ, ಪ್ರಶಾಂತ, ಇಚ್ಛಾಶಕ್ತಿಯುಕ್ತ, ಮೂರ್ತಸಾದಾಖ್ಯತತ್ತ್ವಾಶ್ರಯವೂ ಆಗಿ, ಅಹಂಕಾರಗಮ್ಯವಾದುದು ಶಿವಲಿಂಗ.

೫) ಗುರುಲಿಂಗ:

ತೇಜೋನಿಧಿ, ಪರಮಸುಖಾಂಬುಧಿ, ಸರ್ವೋಪದೇಶವಿಧಿಕರ್ತೃ, ಜ್ಞಾನಶಕ್ತಿಯುಕ್ತ, ಕರ್ತೃಸಾದಾಖ್ಯ ತತ್ತ್ವಾಶ್ರಮಯವಾಗಿ ಬುದ್ಧಿಗಮ್ಯವಾದದ್ದು ಗುರುಲಿಂಗ.

೬) ಆಚಾರಲಿಂಗ:

ಕರ್ಮಾತ್ಮಕ, ಸಕಲತತ್ತ್ವಾಶ್ರಯ, ನಿವೃತ್ತಿಮಾರ್ಗೋನ್ಮುಖ, ಕ್ರಿಯಾಶಕ್ತಿಯಕ್ತವೂ ಆಗಿ ಚಿತ್ತಗಮ್ಯವಾದುದೇ ಆಚಾರಲಿಂಗ.

ಮೇಲೆ ಹೇಳಿದ ಷಡ್ವಿಧಲಿಂಗಗಳ ಸ್ವರೂಪ ಲಕ್ಷಣದ ಪರಿಜ್ಞಾನದಿಂದ ಭಕ್ತನಿಗೆ (ಅಂಗನಿಗೆ) ಉಪಾಸನಾ ಕ್ರಮವು ಸುಗಮವಾಗುವುದು. ಈ ಷಡ್ವಿಧ ಲಿಂಗಗಳನ್ನು ಯಾವ ಸ್ಥಾನದಲ್ಲಿ ಹೇಗೆ ಉಪಾಸಿಸಬೇಕೆಂಬ ವಿಧಾನವನ್ನು ಮುಂದೆ ವಿವರಿಸಲಾಗುವುದು. ಈ ಲಿಂಗಗಳಿಗೆ ಆಚಾರಾದಿ ನಾಮಗಳು ಹೇಗೆ ಸಂಭವಿಸಿದವು? ಅವುಗಳ ಅರ್ಥವೇನು? ಮುಂತಾದ ವಿಷಯ ವಿವೇಚನೆ ಕ್ರಮವಾಗಿ ಗೊತ್ತಾಗುವುದು.

ಷಡ್ವಿಧ ಲಿಂಗಗಳ ಉತ್ಪತ್ತಿಕ್ರಮ:

ಮೊದಲು ಶಿವನೇ ತನ್ನ ಚಿಚ್ಛಕ್ತಿಯಿಂದ ಮಹಾಲಿಂಗಸ್ಥಲವಾದ. ಆ ಮಹಾಲಿಂಗವನ್ನೇ ಉಪಾಸಿಸಲು ಐಕ್ಯಸ್ಥಲವೆಂಬ ಅಂಗಸ್ಥಲವುಂಟಾಯಿತು. ಮಹಾಲಿಂಗ ಸ್ಥಲದಲ್ಲಿರುವ ಪರಾಶಕ್ತಿರೂಪವಾದ ಶಿವಶಕ್ತಿಯ ಸ್ಫುರಣದಿಂದ ಪ್ರಸಾದಲಿಂಗಸ್ಥಲವು ಪ್ರಾದುರ್ಭವಿಸಿತು. ಆ ಲಿಂಗವನ್ನು ಉಪಾಸಿಸಲು ಶರಣಸ್ಥಲ ಉಂಟಾಯಿತು. ಪ್ರಸಾದಲಿಂಗವನ್ನು ಆಶ್ರಯಿಸಿದ ಆದಿಶಕ್ತಿಯ ಪ್ರಭಾವದಿಂದ ಚರಲಿಂಗವುದಿಸಿತು. ಅದರ ಉಪಾಸನೆಗಾಗಿ ಪ್ರಾಣಲಿಂಗಿಸ್ಥಲವು ಜನಿಸಿತು.

ಚರಲಿಂಗಗತವಾದ ಇಚ್ಛಾಶಕ್ತಿಯಿಂದ ಜ್ಯೋತಿರ್ಮಯ ಶಿವಲಿಂಗವುದಿಸಿತು ಅದರ ಉಪಾಸನೆಗಾಗಿ ಪ್ರಸಾದಿಸ್ಥಲವುಂಟಾಯಿತು. ಶಿವಲಿಂಗದ ಜ್ಞಾನಶಕ್ತಿಯ ಸ್ಫುರಣದಿಂದ ಗುರುಲಿಂಗವುದಿಸಿತು. ಅದರ ಉಪಾಸನೆಗೆ ಮಾಹೇಶ್ವರಸ್ಥಲ ಉಂಟಾಯಿತು. ಗುರುಲಿಂಗದಲ್ಲಿನ ಕ್ರಿಯಾಶಕ್ತಿಸ್ಫುರಣದಿಂದ ಆಚಾರಲಿಂಗವುದಿಸಿತು. ಅದರ ಉಪಾಸನೆಗೆ ಭಕ್ತಸ್ಥಲವುಂಟಾಗುವುದು.

ಹೀಗೆ ಭಕ್ತಾದಿಯಾದ ಆರು ಅಂಗಸ್ಥಲಗಳಿಗೆ ಉಪಾಸನಾರ್ಥವಾಗಿ ಮಹಾಲಿಂಗಾದಿಗಳು ಕ್ರಮವಾಗಿ ಒಂದರಿಂದೊಂದು ಉತ್ಪನ್ನವಾದವು. ಈ ಷಡ್ವಿಧಲಿಂಗೋತ್ಪತ್ತಿಯು ಇಲ್ಲಿ ಸಂಕ್ಷಿಪ್ತವಾಗಿ ವಿವರಿಸಲಾಗಿದೆ. ಪ್ರತಿಯೊಂದು ಸ್ಥಲದಲ್ಲಿಯೂ ಭೇದೋಪಭೇದಗಳಿರುವುದರಿಂದ ಅವುಗಳನ್ನು ಇತರ ಗ್ರಂಥಗಳಿಂದ ತಿಳಿದುಕೊಳ್ಳಬೇಕೆಂದು ಸೂಚಿಸಲಾಗಿದೆ. (ಇದು ಏಕೋತ್ತರ ಶತಸ್ಥಲದಲ್ಲಿ ವ್ಯಾಪಕವಾಗಿ ಬೆಳೆದುದರ ಸೂಚನೆಯಾಗಿರಬಹುದು)

**ಜೀವ (ಅಂಗಸ್ಥಲ):**

ಮಾಯಿದೇವನ ಪ್ರಕಾರ ಷಟ್‌ಸ್ಥಲದರ್ಶನದಲ್ಲಿ ಜೀವಾತ್ಮನಿಗೆ 'ಅಂಗಸ್ಥಲ' ವೆಂದು ಹೆಸರಿದೆ. ಕೇವಲ ಮೂರು ಶ್ಲೋಕಗಳಲ್ಲಿ ಅದರ ಸ್ವರೂಪ ಲಕ್ಷಣ ಕುರಿತು ಹೀಗೆ ಹೇಳಲಾಗಿದೆ:

ಅನಾದ್ಯಂತಮಜಂ ಲಿಂಗಂ ತತ್ಪರಂ ಪರಮಂ ಪ್ರತಿ।
ಯದ್ಗಚ್ಛತಿ ಮಹಾಭಕ್ತ್ಯಾ ತದಂಗಮಿತಿ ನಿಶ್ಚಿತಂ॥

ಅಂ ಭವೇತ್ಪರಮಂ ಬ್ರಹ್ಮ ತದ್ಗತಂ ತತ್ಪರಾಯಣಂ ।
ಅಂಗಸ್ಥಲಮಿತಿ ಪ್ರಾಹುರಂಗತತ್ತ್ವವಿಶಾರದಾಃ ॥

ಅಮಿತಿ ಬ್ರಹ್ಮ ಸನ್ಮಾತ್ರಂ ಗಚ್ಛತೀತಿ ಗಮುಚ್ಯತೇ।
ರೂಪತೇಽಂಗಮಿತಿ ಪ್ರಾಜ್ಞೈರಂಗತತ್ತ್ವವಿಚಿಂತಕೈಃ ॥[೮೯]

ಎಂದರೆ, ಅನಾದ್ಯನಂತವಾದ ಜನ್ಮರಹಿತವಾದ ಪರಾತ್ಪರ ವಸ್ತುವಾದ 'ಲಿಂಗ' ಅಥವಾ 'ಲಿಂಗಸ್ಥಲ' ಮಹಾಭಕ್ತಿಯಿಂದ ಹೊಂದುವ ವ್ಯಕ್ತಿವಿಶೇಷವೇ 'ಅಂಗ' ಅಥವಾ 'ಅಂಗಸ್ಥಲ' ಎಂದು ಹೇಳಲಾಗಿದೆ. 'ಅಂಗ' ಎಂಬ ಶಬ್ದದಲ್ಲಿ 'ಅಂ' ಎಂಬುದು ಪರಬ್ರಹ್ಮ. ಆ ಪರಬ್ರಹ್ಮವನ್ನು ಹೊಂದಿ ತತ್ಪರಾಯಣವಾದುದೇ 'ಅಂಗಸ್ಥಲ' ವೆಂದು ಅಂಗತತ್ತ್ವವಿಶಾರದರ ಮತ. ಅಲ್ಲದೆ 'ಅಂ' ಎಂಬುದು ಸದ್ರೂಪವಾದ ಪರಬ್ರಹ್ಮಬೋಧಕವೂ 'ಗಂ' ಎಂಬುದು 'ಗಚ್ಛತೀ' (ಹೊಂದುತ್ತದೆ) ಎಂಬ ಅರ್ಥಬೋಧಕವೂ ಆಗಿರುವವು. ಆ ಎರಡರಿಂದಲೇ 'ಅಂಗಂ' ಎಂಬುದು ರೂಪಿತವಾಗಿದೆ. ಎಂದರೆ, ಪರಬ್ರಹ್ಮವನ್ನು ಹೊಂದಿ, ತಾದಾತ್ಮ್ಯ ರೂಪದಿಂದಿರುವುದೇ ಅಂಗವೆಂದು, ಪ್ರಾಜ್ಞರಾದ ಅಂಗತತ್ತ್ವ ಚಿಂತಕರ ಮತವಿರುವುದು.

"ಜೀವನು ಶಿವನ ಅಂಶವೇ ಎಂಬುದಾಗಿ ಈ ಸಿದ್ಧಾಂತವು ಪ್ರತಿಪಾದಿಸುವುದರಿಂದ, ಜೀವನಿಗೆ 'ಅಂಗ'ನೆಂದು ಕರೆದಿರುವುದು ಬಹುಸಮಂಜಸವಾಗಿದೆ".[೯೦] 'ಸ್ಥಲ'ವೆಂದರೆ ಚೇತನಾಚೇತನಾತ್ಮಕ ಪ್ರಪಂಚದ ಸೃಷ್ಟಿಸ್ಥಿತಿಲಯಗಳಿಗೆ

೮೯. ಶಿವಾನುಭವಸೂತ್ರಂ, ಅಧಿಕರಣ ೪, ಶ್ಲೋಕ ೨, ೩, ೪.

೯೦. ಎಂ.ಸಿ. ಶಾಂತಮೂರ್ತಿ, 'ಶಕ್ತಿವಿಶಿಷ್ಟಾದ್ವೈತದರ್ಶನದಲ್ಲಿ ಜೀವಾತ್ಮ' ಅರ್ಚನ, ೧೯೮೪, ಪು. ೬೯೫.

ಕಾರಣಭೂತನಾದ ಪರಶಿವತತ್ವವೆಂದೂ, ಈ ದರ್ಶನದಲ್ಲಿ ಹೇಳಿದ್ದರೂ ಜೀವಾತ್ಮನಿಗೂ ಸ್ಥಲವೆಂದೇ ಕರೆದಿರುವುದು ಒಂದು ವೈಶಿಷ್ಟ್ಯ. 'ಸ್ಥಲ'ವು ತನ್ನ ವಿಮರ್ಶ(ಚಿತ್) ಶಕ್ತಿಯ ಕ್ಷೋಭಮಾತ್ರದಿಂದ ಲಿಂಗಸ್ಥಲವೆಂದೂ ಮತ್ತು ಅಂಗಸ್ಥಲವೆಂದೂ ಎರಡಾಗುವುದು. ಮಹಾಕಾಶ ಘಟಾಕಾಶಗಳಂತೆ ಇವೆರಡೂ ಭಿನ್ನವಾದವುಗಳು. ಆದರೆ ಇವೆರಡೂ ಪರಶಿವನ ಸ್ವರೂಪವೇ ಆಗಿರುವದರಿಂದ ಇವೆರಡೂ ಭಿನ್ನವಲ್ಲ. ಹಾಗೂ ತನ್ನ ಲೀಲೆಯಿಂದ ಎರಡರಲ್ಲಿಯೂ ಅವಿಕಾರಿಯಾದ ಚೇತನ ಸ್ವರೂಪನಾದ ಶಿವನಿರುವನು. 'ಶಿವನಲ್ಲದವನಿಗೆ ಕೋಟಿಜನ್ಮಗಳನ್ನೆತ್ತಿದರೂ ಶಿವೋಪಾಸನೆಯು ಸಂಭವಿಸುವುದಿಲ್ಲ'[೯೧]ವಾದುದರಿಂದ ಉಪಾಸಕನೂ ಶಿವನೇ ಉಪಾಸ್ಯನೂ ಶಿವನೇ ಆಗಿರುತ್ತಾನೆ. "ಶಿವೋ ಭೂತ್ವಾ ಶಿವಂ ಯಜೇತ್। ನಾ ರುದ್ರೋ ರುದ್ರಮರ್ಚಯೇತ್। ನಾ ರುದ್ರೋ ಕೀರ್ತಯೇತ್ ರುದ್ರಮ್।"[೯೨] ಇವೇ ಮುಂತಾದ ಶ್ರುತಿಪ್ರಮಾಣಗಳ ಆಧಾರದಿಂದ, ಶುದ್ಧ ಜೀವನಾದ ಅಂಗನು ಶಿವನೇ ಆಗಿರುವುದರಿಂದ, ಅಂಗ ತತ್ವಕ್ಕೂ ಸ್ಥಲವೆಂದೇ ಹೇಳಲಾಗಿದೆ. ಪರಶಿವನೇ ಜೀವನಾಗುವುದೇತಕ್ಕೆ? ಎಂಬ ಪ್ರಶ್ನೆ ಉದ್ಭವಿಸುವುದಿಲ್ಲ ಸಹಜ. ಇದಕ್ಕೆ ಪರಶಿವನ ಲೀಲೆಯೇ ಕಾರಣವೆಂದು ಹೇಳಲಾಗಿದೆ. ಶಿವನು ಲೀಲಾಮಯ. ಅವನಿಗೆ ಪೂಜ್ಯ-ಪೂಜಕ ಅಥವಾ ಉಪಾಸಕ ಲೀಲೆಯುಂಟಾದಾಗ ಸ್ವಯಂ ತಾನಾಗಿಯೇ ಜೀವಭಾವವನ್ನು ಹೊಂದಿ ಸೃಷ್ಟಿಕಾರ್ಯದಲ್ಲಿ ಪ್ರವೃತ್ತನಾಗುತ್ತಾನೆ.[೯೩] 'ಭಗವದ್ಗೀತೆ'[೯೪]ಯಲ್ಲಿಯೂ ಸಹ ಜೀವಬ್ರಹ್ಮರಿಗೆ ಅಂಶ-ಅಂಶಿಭಾವ ಹೇಳಲಾಗಿದೆ.

ಆತ್ಮನ್, ಪುರುಷ, ಹೃದಯಸ್ಥ, ಪಶು, ಪಂಚವಿಂಶಕ್, ಕ್ಷೇತ್ರಜ್ಞ, ಅಣು, ಆತ್ಮಾ, ಪುದ್ಗಲ, ಪಿಂಡ, ಈಶ್ವರ ಚಿತ್‌ಶಕ್ತಿ, ಸಾದಾಖ್ಯನಿಃಸೃತತತ್ವ, ಮುಂತಾಗಿ ವೀರಶೈವರು, ಜೀವಾತ್ಮ ಪದಕ್ಕೆ ವಿಶಿಷ್ಟವಾದ ಅರ್ಥಕೊಡುವ ಮೂಲನೆಲೆಗಳನ್ನು ಚರ್ಚಿಸಿದ್ದಾರೆ.[೯೫]

ಶ್ವೇತಾಶ್ವತರೋಪನಿಷತ್ತಿನಲ್ಲಿ ಶಿವನ ಶಕ್ತಿಯ ಅಮಿತಪ್ರತಾಪ ವರ್ಣನೆ ದೊರೆಯುತ್ತದೆ. ಪರಬ್ರಹ್ಮನ ಅಖಂಡ ಚೈತನ್ಯವೇ ಭೋಕ್ತಾ, ಭೋಜ್ಯ ಮತ್ತು ಪ್ರೇರಕವೆಂದು ಮೂರು ವಿಧವಾಗಿ ವಿಭಕ್ತವಾಗುತ್ತದೆ. ಇವು ಮೂರೂ ಶಿವನ ಅಂಶಗಳು. ಭೋಕ್ತಾ ಎಂದರೆ ಜೀವಾತ್ಮಾ ಭೋಜ್ಯವೇ ಪದಾರ್ಥ ಮತ್ತು ಪ್ರೇರಕನೇ ಈಶ್ವರ.[೯೬] ಋಗ್ವೇದ, ಮುಂಡಕ ಮತ್ತು ಶ್ವೇತಾಶ್ವತರೋಪನಿಷತ್ತುಗಳಲ್ಲಿ ಒಂದೇ ವೃಕ್ಷದಲ್ಲಿರುವ ಎರಡು ಪಕ್ಷಿಗಳ ವರ್ಣನೆ ಇದೆ. ಅವುಗಳಲ್ಲೊಂದು (ಭೋಕ್ತಾ, ಜೀವಾತ್ಮ) ಹಣ್ಣನ್ನೂ ತಿಂದು ಸುಖದುಃಖಗಳನ್ನು ಅನುಭವಿಸುತ್ತಿರುವುದು. ಮತ್ತೊಂದು (ಈಶ್ವರ) ಏನೂ ತಿನ್ನದೆ ನಿರ್ಲಿಪ್ತವಾಗಿ ಬೇರೆ ಹಕ್ಕಿಯ ವರ್ತನೆಯನ್ನು ನೋಡುತ್ತಾ ತಟಸ್ಥವಾಗಿ ಕುಳಿತಿರುವುದು - ಎಂಬುದಾಗಿ ಜೀವ-ಶಿವರ ಸ್ವರೂಪ ಹಾಗೂ ಸಂಬಂಧಗಳನ್ನು ಸ್ಪಷ್ಟವಾಗಿ ಅವುಗಳಲ್ಲಿ ಪ್ರತಿಪಾದಿಸಲಾಗಿದೆ.[೯೭] ಇದನ್ನೇ ಸಿದ್ಧಾಂತಶಿಖಾಮಣಿಯು ಹೀಗೆ ಹೇಳುತ್ತದೆ :

---

೯೧. "ನಾಶಿವಸ್ಯ ಶಿವೋಪಾಸ್ತಿರ್ಘಟತೇ ಜನ್ಮಕೋಟಿಭಿಃ ।", ಶಿವಾನುಭವಸೂತ್ರಂ ೨-೧೫.

೯೨. ಶ್ವೇತಾಶ್ವತರೋಪನಿಷತ್ ೩-೨; ಅಥರ್ವಶಿರ ೫; ಬೃಹದಾರಣ್ಯಕ ೧-೪-೧೦; ಮುಂಡಕ ೩-೨-೯.

೯೩. ಲೋಕವತ್ತು ಲೀಲಾಕೈವಲ್ಯಂ, ಬ್ರಹ್ಮಸೂತ್ರ. ೨-೧-೩.

೯೪. ಮಮೈವಾಂಶೋ ಜೀವಲೋಕೇಜೀವಭೂತಃ ಸನಾತನಃ । - ಭಗವದ್ಗೀತೆ. ೧೫-೭.

೯೫. ಡಾ. ಎಚ್.ಪಿ. ಮಲ್ಲಿದೇವರು, ೧೯೯೧, ವೀರಶೈವಧರ್ಮ ಕೆ ಮೂಲತತ್ತ್ವ (ಅನು) ಡಾ. ಶಿವರಾಜ ಎಚ್. ಪು. ೨೭-೩೪.

೯೬. ಡಾ. ಟಿ.ಜಿ. ಸಿದ್ಧಪ್ಪಾರಾಧ್ಯ, ೧೯೬೫, ಶ್ವೇತಾಶ್ವತರೋಪನಿಷದ್ವೀರಶೈವಭಾಷ್ಯಂ, ಪು. ೫೯.

೯೭.ದ್ವಾಸುಪರ್ಣಾಸಯುಜಾಸಖಾಯಾ
ಸಮಾನಂ ವೃಕ್ಷಂ ಪರಿಷಸ್ವಜಾತೇ ।
ತಯೋರನ್ಯಃ ಪಿಪ್ಪಲ ಸ್ವಾದತ್ತ್ಯೆ
ನಶ್ನನ್ನನ್ಯೋ ಅಭಿಚಾಕಶೀತಿ ।। -ಮುಂಡುಕೋಪನಿಷತ್; ೩-೧-೧.

..................................................|
ದೇವತಿರ್ಯಙ್ಮನುಷ್ಯಾದಿ ಜಾತಿಭೇದೇ ವ್ಯವಸ್ಥಿತಾಃ ||
ಮಾಯೀ ಮಹೇಶ್ವರಸ್ತೇಷಾಂ ಪ್ರೇರಕೋ ಹೃದಿಸಂಸ್ಥಿತಃ|
.................................................. ||[೯೮]

ಎಂದರೆ, ಪರಶಿವನ ಅಂಶರಾದ ಜೀವರು, ದೇವತೆಗಳು, ಪ್ರಾಣಿಗಳು, ಮನುಷ್ಯರು, ಇತ್ಯಾದಿಯಾಗಿ, ವಿವಿಧ ಜಾತಿಯ ದೇಹಗಳಲ್ಲಿ ನೆಲೆಸಿದರು. ಮಾಯಾವಿಶಿಷ್ಟನಾದ ಪರಮೇಶ್ವರನು ಆ ಜೀವರ ಹೃದಯಗಳಲ್ಲಿ ಪ್ರೇರಕನಾಗಿ ನೆಲೆಸಿದ್ದಾನೆ. ಸಿದ್ಧಾಂತಶಿಖಾಮಣಿಯಲ್ಲಿ ಶುದ್ಧಸತ್ವದ ಪ್ರಭಾವದಿಂದಾಗಿ ಬ್ರಹ್ಮನ ಅಖಂಡ ಚೈತನ್ಯವೇ ಈಶ್ವರವಾಗುತ್ತದೆ; ಅಲ್ಪಸತ್ವ ಮತ್ತು ತಮೋಮಿಶ್ರಿತ ರಜೋಗುಣದ ಪ್ರಭಾವದಿಂದಾಗಿ ಬ್ರಹ್ಮನ ಅಖಂಡ ಚೈತನ್ಯವೇ ಜೀವಾತ್ಮವಾಗಿ ಪರಿಣಮಿಸುತ್ತದೆ ಎಂದು ವಿವರಿಸಲಾಗಿದೆ. ಪರಾಮಾಯೆ ಮತ್ತು ಅಧೋಮಾಯೆ ಎಂದು ಎರಡು ವಿಧವಾದ ಮಾಯೆಯನ್ನು ಸಿದ್ಧಾಂತಶಿಖಾಮಣಿ ಚರ್ಚಿಸುತ್ತದೆ. ಇವುಗಳಲ್ಲಿ ಪರಾಮಾಯೆಯು ಶಿವನನ್ನು ಆಶ್ರಯಿಸಿದ್ದರೂ ಅವನಿಗೆ ಮೋಹವನ್ನುಂಟು ಮಾಡುವುದಿಲ್ಲ.[೯೯] ಅಶುದ್ಧಮಾಯೆಯು (ಅವಿದ್ಯಾ) ಜೀವನನ್ನು ಆಶ್ರಯಿಸಿದ್ದು ಅವನಿಗೆ ಮೋಹವನ್ನುಂಟು ಮಾಡುತ್ತದೆ.[೧೦೦] ಜೀವವನ್ನಾಶ್ರಯಿಸಿದ ಅವಿದ್ಯಾಶಕ್ತಿಯು ತ್ರಿಗುಣಾತ್ಮಕವಾದುದರಿಂದ ಜೀವರು ಅನೇಕ ವಿಧವಾಗಿದ್ದಾರೆ.[೧೦೧]

ಶಿವನು ಜೀವನ ಅಂಶ ಎಂಬುದರ ಬಗ್ಗೆ ಭಾಷ್ಯಕಾರರಾದ ನೀಲಕಂಠ ಹಾಗೂ ಶ್ರೀಪತಿ ಪಂಡಿತ[೧೦೨] ಮೊದಲಾದವರೆಲ್ಲ ಬಾದರಾಯಣನ ಅಭಿಪ್ರಾಯವನ್ನೆ ಅನುಸರಿಸಿದ್ದಾರೆ. ಮಾಯಿದೇವನೂ ಇದಕ್ಕೆ ಹೊರತಾಗಿಲ್ಲ. ಆದರೆ ಇವರೆಲ್ಲರಿಗಿಂತ ಮಾಯಿದೇವನ ಜೀವತತ್ವ ಅಥವಾ ಅಂಗತತ್ವದ ಕಲ್ಪನೆ ಬಹಳ ವಿಶಾಲವೂ ಪವಿತ್ರವೂ ಆಗಿದೆ. ಹೇಗೆಂದರೆ ಜೀವನು ಶಿವನೇ ಆಗಿರುತ್ತಾನೆ. ಸಿದ್ಧಾಂತಶಿಖಾಮಣಿ ಹೇಳುವಂತೆ ಹೃದಿಪ್ರೇರಕನಾಗಿ ಅಲ್ಲ. ಅವನು ಶಿವನ ಅಂಶವೆಂಬುದರಲ್ಲಿ ಮಾಯಿದೇವನ ಒಪ್ಪಿಗೆಯಿದೆ, ಆದರೂ ಉಳಿದ ಕೃತಿಗಳಲ್ಲಿಯಂತೆ ಜೀವ, ಅವಿದ್ಯೆಯಿಂದ ದುಃಖಿತನಾದಂತೆ ಶಿವಾನುಭವಸೂತ್ರದಲ್ಲಿ ಕಂಡುಬರುವುದಿಲ್ಲ. ಶಿವನಲೀಲೆಯಿಂದಾಗಿ 'ಅಂಗ' ಎಂಬ ಅಭಿಧಾನ ಹೊಂದಿದುದಾಗಿ ಮಾಯಿದೇವ ಸ್ಪಷ್ಟವಾಗಿ ಹೀಗೆ ಹೇಳಿದ್ದಾನೆ.

ಆತ್ಮಾಯಂ ಕೇವಲಃ ಶುದ್ಧಃ ಶಿವಸ್ಯಾಂಶಃ ಸದ್ಯಾಽಮಲಃ |
ನಿತ್ಯೋ ನಿರಂಜನಃ ಶಾಂತಸ್ತಸ್ಮಾದಾತ್ಮಾ ಸ್ವಯಂ ಶಿವಃ ||[೧೦೩]

---

೯೮. ಪ್ರೊ. ಸಂ.ಶಿ. ಭೂಸನೂರಮಠ, ೧೯೯೨, ವೀರಶೈವಸಿದ್ಧಾಂತಶಿಖಾಮಣಿ, V; ೩೫, ೩೭.

೯೯. 'ಪರಾಮಾಯಾ ಸ್ವಾಶ್ರಯಾಮೋಹಕಾರಿಣೀ', ಅದೇ, V; ೪೧.

೧೦೦. 'ಅವಿದ್ಯಾಶ್ರಯ ಮೋಹಿನೀ', ಅದೇ, V; ೪೨.

೧೦೧. 'ಅವಿದ್ಯಾಶಕ್ತಿಭೇದೇನ ಜೀವಾಬಹುವಿಧಾಃ ಸ್ಮೃತಾಃ', ಅದೇ, V; ೪೨.

೧೦೨. ಅನಾದಿಸ್ವಾಭಾವಿಕ-ಮಾಯಾಪಾಶ ಬದ್ಧಘೋರಾಪಾರನಿಸ್ಸಾರಸಂಸಾರವ್ಯಾಪಾರತಾಪತ್ರಯಾನಲದಂದಹ್ಯಮಾನ ನಾನಾಶರೀರ ಪ್ರವೇಶನಿರ್ಗಮನವರ್ಣಾಶ್ರಮಾಭಿಮಾನವಿಶಿಷ್ಟಕಾಮಕ್ರೋಧಾದ್ಯನುಸ್ಯೂತಸುಖದುಃಖಾಶ್ರಯತ್ವಂ ಜೀವತ್ವಂ| -ಶ್ರೀಕರಭಾಷ್ಯ (೧೯೩೮) ಸಂ. ಕಾಶೀನಾಥಶಾಸ್ತ್ರಿಗಳು, ಪು. ೭.

೧೦೩. ಶಿವಾನುಭವಸೂತ್ರಂ ಅಧಿಕರಣ ೫, ಶ್ಲೋಕ ೩.

ಮಾಯಿದೇವನ ಪ್ರಕಾರ ಜೀವನು ಉಪಾಧಿ ವಶದಿಂದ ಮಲಿನಾತ್ಮನಾದರೂ ಸ್ವಭಾವತಃ ಶುದ್ಧನಿರುತ್ತಾನೆ. 'ತಸ್ಮಾದಾತ್ಮಾ ಸ್ವಯಂ ಶಿವಃ' ಎಂಬಲ್ಲಿ ಮಾಯಿದೇವನ ಗ್ರಹಿಕೆ ಪವಿತ್ರವಾದದ್ದೆಂಬುದು ಸ್ಪಷ್ಟ.

**ಜೀವಬಂಧ:**

ಶುದ್ಧಚೈತನ್ಯನಾದ ಶಿವನಿಗೆ ಜೀವಭಾವವುಂಟಾಗುವುದಕ್ಕೆ ಕಾರಣವಾದ ಮಾಯೆಗೆ 'ಮಲ' ಎಂದು ಈ ದರ್ಶನದಲ್ಲಿ ಕರೆಯಲಾಗಿದೆ. ಪರಮಾತ್ಮನ ಚಿತ್‌ಶಕ್ತಿಯು ಸಹಜವಾಗಿ ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾಶಕ್ತಿಗಳೆಂದು ಮೂರು ಬಗೆಯಾಗಿರುವಂತೆ ಆ ಶಕ್ತಿಯ ಪರಿಣಾಮವೆನಿಸಿದ ಮಾಯಾಶಕ್ತಿಯೂ ಆಣವಮಲ, ಮಾಯಾಮಲ, ಕಾರ್ಮಿಕಮಲವೆಂದು ಮೂರು ಬಗೆಯಾಗಿ ಜೀವನನ್ನು ಆವರಿಸಿತು. ಈ ಆಣವಮಲದಿಂದ ಜೀವನಿಗೆ ಅಣುತ್ವವೂ ಅಲ್ಪತ್ವವೂ ಉಂಟಾಯಿತು. ಮಾಯಾಮಲವು ಜೀವನಲ್ಲಿ ವ್ಯಾಮೋಹ, ಅಭಿಮಾನಗಳನ್ನು ಉಂಟು ಮಾಡಿತು. ಈ ವ್ಯಾಮೋಹ ಅಭಿಮಾನಗಳಲ್ಲೇ ಹೆಚ್ಚುಹೆಚ್ಚಾಗಿ ಪ್ರವರ್ತಿಸುತ್ತಾ ಜೀವನು ತನ್ನ ಅಹಂಕಾರವನ್ನು ಬೆಳೆಸಿಕೊಳ್ಳುವಂತೆ ಕಾರ್ಮಿಕಮಲವು ಮಾಡುತ್ತದೆ. ಹೀಗೆ ಶಿವನಲ್ಲಿ ಶಕ್ತಿವಿಕಾಸವು ಸ್ವಾಭಾವಿಕವಾಗಿರುವಂತೆ ಜೀವನಲ್ಲಿ ಶಕ್ತಿಸಂಕೋಚವು ಸ್ವಾಭಾವಿಕವಾಗಿದೆ. ಜೀವನು ಈ ತ್ರಿಮಲಗಳಿಂದ ಆವೃತನಾಗಿ ತನ್ನ ಮೊದಲಿನ ಸರ್ವಕರ್ತೃತ್ವ, ಸರ್ವಜ್ಞತ್ವ, ಪರಿಪೂರ್ಣತ್ವ, ನಿತ್ಯತೃಪ್ತತ್ವ, ಸರ್ವವ್ಯಾಪಕತ್ವಗಳನ್ನು ಕಳೆದುಕೊಂಡು ಅವುಗಳ ಬದಲಾಗಿ ಕಿಂಚಿತ್‌ಕರ್ತೃತ್ವ, ಕಿಂಚಿಜ್ಞತ್ವ, ಅಪೂರ್ಣತ್ವ, ಅನಿತ್ಯತ್ವ, ಅವ್ಯಾಪಕತ್ವಗಳೆಂಬ ನ್ಯೂನಶಕ್ತಿಗಳಿಂದ ಕೂಡಿಕೊಂಡಿರುವನು.

**ಅಂಗತ್ರಯ:**

ಈ ಮಲತ್ರಯಗಳಿಂದಾಗಿ ಜೀವನಿಗೆ ಕಾರಣತನು, ಸೂಕ್ಷ್ಮತನು, ಸ್ಥೂಲತನುಗಳು ಪ್ರಾಪ್ತವಾಗಿವೆ. ಈ ತನುಗಳನ್ನನುಸರಿಸಿ ಅಂಗನು ಮೂರು ಬಗೆಯಾಗುತ್ತಾನೆ.[೧೦೪]

ತ್ರಿವಿಧ ಅಂಗಸ್ಥಲಗಳು




ಕಾರಣತನುವು ಜೀವನ ಮೊದಲನೆಯ ಆವರಣವಾಗಿ ಹತ್ತಿರದಲ್ಲಿಯೇ ಇದ್ದು ಕೊನೆಗೆ ಲಿಂಗದಲ್ಲಿ ಸಾಮರಸ್ಯ ಹೊಂದುವುದರಿಂದ ಯೋಗಾಂಗವೆನಿಸುವುದು. ಲಿಂಗಭೋಗವನ್ನು ಉಪಭೋಗಿಸುವುದರಿಂದ ಸೂಕ್ಷ್ಮತನುವು ಭೋಗಾಂಗವೆನಿಸುವುದು. ಗುರುವಿನಿಂದ ಲಬ್ಧವಾದ ದೀಕ್ಷೆಯಿಂದ ಮಲತ್ರಯಗಳನ್ನು ತ್ಯಾಗಮಾಡುವದರಿಂದ, ಸ್ಥೂಲತನುವು ತ್ಯಾಗಾಂಗವೆನಿಸುವುದು. ಈ ತನುತ್ರಯಗಳಿಗೆ ಲಿಂಗವು ಕ್ರಮವಾಗಿ ಭಾವ, ಪ್ರಾಣ, ಇಷ್ಟಲಿಂಗಗಳಾಗಿ ಪರಿಣಾಮಹೊಂದಿ ಸೇವೆಮಾಡಿಸಿಕೊಳ್ಳುತ್ತದೆ.[೧೦೫] ಗುರುವು, ಈ ಲಿಂಗತ್ರಯದಲ್ಲಿ ಭಾವಲಿಂಗ, ಪ್ರಾಣಲಿಂಗ, ಇಷ್ಟಲಿಂಗವೆಂಬ ಲಿಂಗತ್ರಯವನ್ನು ವೇಧಾದೀಕ್ಷೆ, ಮಂತ್ರದೀಕ್ಷೆ, ಕ್ರಿಯಾದೀಕ್ಷೆ ಎಂಬ ದೀಕ್ಷಾತ್ರಯಗಳಿಂದ ಸಂಯೋಜಿಸುವನು. ಈ ದೀಕ್ಷಾತ್ರಯದಿಂದಲೇ ಜೀವನ ಮಲತ್ರಯಗಳು ನಾಶವಾಗಿ ಅಂಗನೆನಿಸುವನು. ಅಂಗನೆಂದರೆ

---

೧೦೪. ಶಿವಾನುಭವಸೂತ್ರಂ ಅಧಿಕರಣ ೪, ಶ್ಲೋಕ ೫-೧೧.

೧೦೫. ಶಿವಾನುಭವಸೂತ್ರಂ ಅಧಿಕರಣ ೪, ಶ್ಲೋಕ ೧೨-೧೫.

ಶಿವದೀಕ್ಷೆಯಿಂದ ಶುದ್ಧನಾದ ಜೀವ. ಅನಾದಿಯೂ ಅನಂತವೂ ಜನ್ಮರಹಿತವೂ ಆದ ಪರಾತ್ಪರಲಿಂಗವನ್ನು ಮಹಾಭಕ್ತಿಯಿಂದ ಯಾವುದು ಹೊಂದುವುದೋ ಅದೇ ಅಂಗ ಅಥವಾ ಅಂಗಸ್ಥಲ.[೧೦೬]

**ಭಾವ-ಪ್ರಾಣ-ಇಷ್ಟಲಿಂಗಗಳ ಉಪಾಸನೆ:**

ಶಿವದೀಕ್ಷೆಯಿಂದ ಶುದ್ಧನಾದ ಜೀವನು ಪ್ರಾಜ್ಞ, ತೈಜಸ, ಸೂಕ್ಷ್ಮ - ಎಂಬ ಹೆಸರಿನಿಂದ ನಿದ್ರಾವಸ್ಥೆ ಮೊದಲಾದ ಅವಸ್ಥೆಗಳಲ್ಲಿ ಶರೀರತ್ರಯದಲ್ಲಿದ್ದು ಭಾವ-ಪ್ರಾಣ-ಇಷ್ಟಲಿಂಗಗಳನ್ನು ಉಪಾಸಿಸುತ್ತಾನೆ.[೧೦೭]

ಪ್ರಾಜ್ಞನು ನಿದ್ರಾವಸ್ಥೆಯಲ್ಲಿ ಕಾರಣಶರೀರಗತನಾಗಿ ಭಾವಲಿಂಗೋಪಾಸಕನಾಗುತ್ತಾನೆ. ತೈಜಸನೆಂಬ ಅಂಗನು ಸ್ವಪ್ನಾವಸ್ಥೆಯಲ್ಲಿ ಸೂಕ್ಷ್ಮಶರೀರಗತನಾಗಿ ಪ್ರಾಣಲಿಂಗೋಪಾಸಕನಾಗುತ್ತಾನೆ. ವಿಶ್ವನೆಂಬ ಅಂಗನು ಜಾಗ್ರದಾವಸ್ಥೆಯಲ್ಲಿ ಸ್ಥೂಲಶರೀರಗತನಾಗಿ ಇಷ್ಟಲಿಂಗೋಪಾಸಕನಾಗುತ್ತಾನೆ.[೧೦೮]




ಮೇಲಿನ ಅಂಗಸ್ಥಲವೇ ಮುಂದೆ ಪ್ರತ್ಯೇಕವಾಗಿ ಎರಡೆರಡು ಬಗೆಯಾಗುತ್ತದೆ. ಯೋಗಾಂಗವು ಶರಣ-ಐಕ್ಯವೆಂದು, ಭೋಗಾಂಗವು ಪ್ರಾಣಲಿಂಗಿ-ಪ್ರಸಾದಿ ಎಂದು, ತ್ಯಾಗಾಂಗವು ಮಹೇಶ-ಭಕ್ತನೆಂದು ಪ್ರತಿಯೊಂದು ಎರಡೆರಡು ತೆರನಾಗುತ್ತವೆ. ಇವುಗಳನ್ನೇ ಷಟ್‌ಸ್ಥಲವೆಂದು ಕರೆಯಲಾಗಿದೆ. ಈ ಅಂಗನ ಜೊತೆಯಲ್ಲಿಯೇ ಲಿಂಗವೂ ಸಹ ಪರಿಣಾಮಹೊಂದುತ್ತಾ, ಅಂಗನಿಂದ ಪೂಜಿಸಿಕೊಳ್ಳಲು, ಅಂಗನನ್ನು ಉದ್ಧಾರ ಮಾಡುವುದಕ್ಕೂ ಉದ್ಯುಕ್ತವಾಗುತ್ತದೆ. ಲಿಂಗದಲ್ಲಿರುವ ಪ್ರವೃತ್ತಿಶಕ್ತಿಯೇ ಮುಂದೆ ನಿವೃತ್ತಿಶಕ್ತಿಯಾಗಿ ಭಕ್ತಿ ಎಂದಾಗುತ್ತದೆ. ಈ ನಿವೃತ್ತಿಪರವಾದ ಭಕ್ತಿಯು ಶಿವನ ಅನುಗ್ರಹವೆಂದು ಭಾವಿಸಲಾಗಿದೆ. ಇದರಿಂದ ಅಂಗನು ಅಜ್ಞಾನದಿಂದ ನಿವೃತ್ತಿಹೊಂದಿ ಊರ್ಧ್ವಮುಖನಾಗಿ ಹೋಗಿ ಲಿಂಗದಲ್ಲಿ ಐಕ್ಯವನ್ನು ಹೊಂದಬಹುದಾಗಿದೆ. ಹೀಗೆ ಅಂಗನು ಅಧೋಮುಖನಾಗಿ ಇಳಿದು ಬಂದು ಮತ್ತೆ ಭಕ್ತಿಯ ಸಹಾಯದಿಂದ ಊರ್ಧ್ವಮುಖನಾಗಿ ಏರಿ ಹೋಗುವ ಆರು ಮೆಟ್ಟಿಲುಗಳೇ ಷಟ್‌ಸ್ಥಲಗಳು.

---

೧೦೬. ಅಂ ಭವೇತ್ಪರಮಂ ಬ್ರಹ್ಮ ತದ್ಗತಂ ತತ್ಪರಾಯಣಂ ।
ಅಂಗಸ್ಥಲಮಿತಿ ಪ್ರಾಹುರಂಗತತ್ತ್ವ ವಿಶಾರದಾಃ ॥
ಶ್ಲೋಕ ೩-೪.

೧೦೭. ಅದೇ, ೧೫, ೧೬.

೧೦೮. ಮಾಯಿದೇವ ಪ್ರಸ್ತಾಪಿಸಿರುವ ವಿಶ್ವ, ತೈಜಸ್ ಮತ್ತು ಪ್ರಾಜ್ಞ ಹೆಸರಿನ ಆತ್ಮಗಳ ವಿಚಾರವು, ಶೈವಸಿದ್ಧಾಂತ ಹೇಳುವ ಆತ್ಮಗಳ ವರ್ಗೀಕರಣದಂತೆ ಇರದೆ, ಒಂದೇ ಆತ್ಮದ ಮೂರು ಅವಸ್ಥೆಗಳನ್ನು ಅದು ಸೂಚಿಸುತ್ತದೆ.

೧೦೯. ಐಕ್ಯಂತು ಶರಣಂ ನಾಮ ಪ್ರಾಣಲಿಂಗೀ ಪ್ರಸಾದೀ ಚ ॥
ಮಾಹೇಶ್ವರಂ ಭಕ್ತಮಿತಿಕ್ರಮಾತ್ ಷಟ್‌ಸ್ಥಲಮುಚ್ಯತೇ ॥ ಶಿವಾನುಭವಸೂತ್ರ ಅಧಿಕರಣ ೪, ಶ್ಲೋಕ ೧೬.




ಜಲವು ಮಧುರ ಮೊದಲಾದ ಆರು ರಸಗಳಲ್ಲಿ ಪ್ರವೇಶಿಸಿ, ಅವುಗಳ ಸ್ವರೂಪವಾಗಿ ತೋರುವಂತೆ ಸಾಕ್ಷಾತ್ ಶಿವಾತ್ಮಕವಾದ ಭಕ್ತಿಯು ಐಕ್ಯಾದಿ ಷಡಂಗಗಳಲ್ಲಿ ಪ್ರವೇಶಿಸಿ, ಲಿಂಗೋಪಾಸನೆಗಾಗಿ ಷಡ್ವಿಧ ಆಕಾರತಾಳಿ ಷಡ್ವಿಧ ಲಿಂಗಗಳಲ್ಲಿ ಪ್ರಕಟಗೊಳ್ಳುತ್ತದೆ.[೧೧೦]

**ಷಡ್ವಿಧ ಭಕ್ತಿಯುಕ್ತಗಳಾದ ಷಡಂಗಸ್ಥಲಗಳ ಸ್ವರೂಪ :**

ಸಾಧಕನ ಸಾಧನಾವಸ್ಥೆಗಳಲ್ಲಿ ಆರು ಮಜಲುಗಳನ್ನು ಮಾಡಿ ಅವುಗಳಿಗೆ ಆರುಸ್ಥಲಗಳು ಎಂದು ಬೇರೆ ಬೇರೆಯಾದ ಹೆಸರನ್ನಿತ್ತಿದ್ದಾರೆ. ಲಿಂಗ-ಅಂಗಗಳ ವಿಶಿಷ್ಟಬಗೆಯ ಸಂಬಂಧವೇ ಆಯಾ ಸ್ಥಲಗಳ ಹೆಸರುಗಳಿಗೆ ಕಾರಣವಾಗಿರುವುದರಿಂದ ಈ ಸ್ಥಲಗಳನ್ನು ಅರಿಯುವುದು ಮುಖ್ಯವಾಗಿದೆ.

೧. ಐಕ್ಯಸಲಕ್ಷಣ : ನಾನು, ನೀನು, ದೇಹ, ಮನ, ಪ್ರಾಣ, ಇಂದ್ರಿಯ, ಭೂತಗಳು - ಇವುಗಳ ಭೇದವು ಭ್ರಾಂತಿ. ಈ ಭೇದವು ನನ್ನಲ್ಲಿಲ್ಲ ಎಂಬ ಶಿವಾದ್ವೈತಭಾವದಿಂದ ಸಮರಸಭಕ್ತಿಯ ಸುಖಸ್ವರೂಪವನ್ನು ಪಡೆದಿರುವುದು.

೨. ಶರಣನಲಕ್ಷಣ : ಜ್ಞಾನಪ್ರಕಾಶಬಲದಿಂದ ನಾನು, ನನ್ನ ದೇಹ, ಇಂದ್ರಿಯಗಳು, ಲಿಂಗರೂಪವೆಂದು ಭಾವಿಸಿ, ವಿಷಯಗಳಿಂದ ಕೂಡಿದ್ದರೂ ವಿರುದ್ಧನಾಗಿ, ಆನಂದಭಕ್ತಿಯಿಂದ ವಿಷಯಗಳಿಗೆ ಪ್ರಸಾದಸ್ವರೂಪವನ್ನು ಉಂಟುಮಾಡಿಕೊಂಡಿರುವುದು.

೩. ಪ್ರಾಣಲಿಂಗಿಯ ಲಕ್ಷಣ : ಪ್ರಾಣ - ಇಂದ್ರಿಯಗಳಲ್ಲಿ ನಾನು ನನ್ನದೆಂಬ ಮೋಹವನ್ನು ತ್ಯಜಿಸಿ, ಇದೆಲ್ಲವೂ ಲಿಂಗಮಯವೆಂದು ತಿಳಿದು ಲಿಂಗಮಾನಸನಾಗಿರುವುದು.

೪. ಪ್ರಸಾದಿಯ ಲಕ್ಷಣ : ಪ್ರತಿಯೊಂದು ಇಂದ್ರಿಯಮುಖದಿಂದಲೂ ಅನುಭವಿಸುವ ಪದಾರ್ಥಗಳನ್ನು ಲಿಂಗಾರ್ಪಣ ಮಾಡಿ, ಅವಧಾನಭಕ್ತಿಯಿಂದ ಪ್ರಸಾದರೂಪವಾಗಿ ಪರಿಗ್ರಹಿಸುವುದು.

೫. ಮಹೇಶನ ಲಕ್ಷಣ : ಆಸ್ತಿಕ್ಯಬುದ್ಧಿ, ಲಿಂಗಪೂಜಾದಿಗಳಲ್ಲಿ ನಿಷ್ಠೆ, ಸತ್ಯ, ಶೌಚ, ಧರ್ಮಾಚರಣೆಗಳಿಂದ ಲಿಂಗದಲ್ಲಿ ವೀರವ್ರತಿಯಾಗಿರುವುದು.

೬. ಭಕ್ತನ ಲಕ್ಷಣ : ಶರೀರ ಪ್ರಾಣಾದಿಗಳಲ್ಲಿ ಅಭಿಮಾನ ಬಿಟ್ಟು, ಚಿತ್ತವನ್ನು ಸದ್ಭಕ್ತಿ, ಸತ್ಕಾರ್ಯಾಚರಣೆಯಲ್ಲಿ ಅಳವಡಿಸಿಕೊಂಡಿರುವುದು.[೧೧೧]

---

೧೧೦. ಶಿವಾನುಭವಸೂತ್ರಂ ಅಧಿಕರಣ ೪, ಶ್ಲೋಕ ೧೪-೨೫.

೧೧೧. ಅದೇ, ಶ್ಲೋಕ ೨೬-೩೨.

**ಆತ್ಮಾದಿ ಷಡಂಗಗಳ ಉತ್ಪತ್ತಿ :**

ಆತ್ಮನಿಂದ ಆಕಾಶ, ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿ, ಅಗ್ನಿಯಿಂದ ಜಲ, ಜಲದಿಂದ ನೆಲ ಉದಿಸಿದವು ಎಂಬ ತೈತ್ತರೀಯೋಪನಿಷತ್ತಿನ ಈ ವಿಕಾಸ ಸರಣಿಯು, ಷಡಾಶ್ರಮಿಗಳಿಗೆ ಅಂಗವಾಗಿರುವುದನ್ನು ಮಾಯಿದೇವ ಈ ಕೆಳಗಿನಂತೆ ವಿವರಿಸುತ್ತಾನೆ.[೧೧೨]




ಐಕ್ಯಸ್ಥಲಕ್ಕೆ ಆತ್ಮಾಂಗ, ಶರಣಸ್ಥಲಕ್ಕೆ ಆಕಾಶಾಂಗ, ಪ್ರಾಣಲಿಂಗಿಸ್ಥಲಕ್ಕೆ ವಾಯ್ವಂಗ, ಪ್ರಸಾದಿಸ್ಥಲಕ್ಕೆ ಅಗ್ನ್ಯಂಗ, ಮಹೇಶ್ವರಸ್ಥಲಕ್ಕೆ ಜಲಾಂಗ, ಭಕ್ತಸ್ಥಲಕ್ಕೆ ಭೂಮ್ಯಂಗ - ಹೀಗೆ ಆತ್ಮಾದಿಗಳು ಷಡಾಶ್ರಮಿಗಳಾದ ಐಕ್ಯಾದಿ ಷಟ್‌ಸ್ಥಲಗಳಿಗೆ ಅಂಗವಾಗಿರುತ್ತವೆ.

ಬಿಂದು, ನಾದ, ಕಲೆ ಇವುಗಳ ಭೇದದಿಂದಲೂ ಷಡಂಗಸ್ಥಲಗಳ ವಿಭಾಗವಾಗಿದೆ.[೧೧೩] ಹೇಗೆಂದರೆ, ಬಿಂದುವಿಗೆ ಭಕ್ತ ಮಹೇಶ್ವರಸ್ಥಲಗಳೂ, ನಾದಕ್ಕೆ ಪ್ರಸಾದಿ ಪ್ರಾಣಲಿಂಗಿಸ್ಥಲಗಳೂ, ಕಲೆಗೆ ಶರಣ ಐಕ್ಯಸ್ಥಲಗಳೂ ಸಂಬಂಧಿಸಿವೆ. ಮತ್ತು ದೇಹಕ್ಕೆ ಭಕ್ತಮಹೇಶ್ವರರೂ, ಪ್ರಾಣಕ್ಕೆ ಪ್ರಸಾದಿ ಪ್ರಾಣಲಿಂಗಿಗಳೂ, ಜೀವಾತ್ಮನಿಗೆ ಶರಣ ಐಕ್ಯರೂ ಸಲುವಳಿಯಾಗುತ್ತಾರೆ.




ನಾದ, ಬಿಂದು, ಮತ್ತು ಕಲೆಗಳ ನಿರೂಪಣೆ ಶೈವಸಿದ್ಧಾಂತಕ್ಕಿಂತ ಶಿವಾನುಭವಸೂತ್ರದಲ್ಲಿ ಭಿನ್ನವಾಗಿ ತೋರುತ್ತದೆ. ಶೈವಸಿದ್ಧಾಂತದಲ್ಲಿ 'ನಾದ' ಮತ್ತು 'ಕಲೆ'ಗಳಿಗೆ ಬಿಂದು ಮೂಲವಾಗಿದ್ದು ಅದಕ್ಕೆ ಶಾಶ್ವತ ಅಸ್ತಿತ್ವವಿದೆ. ಹಾಗೆಯೇ ಐದು ಕಲೆಗಳನ್ನು ಐದು ಶಕ್ತಿಗಳೆಂದು ಅಲ್ಲಿ ಗುರುತಿಸಲಾಗುವುದಿಲ್ಲ. ಈ ಶಕ್ತಿಗಳು ಕಲೆಗಳಿಂದ ಸಂಪೂರ್ಣಭಿನ್ನವಾಗಿದ್ದು ಮಹಾಶಕ್ತಿ (ಚಿಚ್ಛಕ್ತಿ)ಯಿಂದಲೇ ಅವು ಉದಿಸುತ್ತವೆ ಎಂದು ಶೈವಸಿದ್ಧಾಂತದಲ್ಲಿ ಹೇಳಲಾಗಿದೆ.[೧೧೪] ಶಿವಾನುಭವಸೂತ್ರದಲ್ಲಿ ನಾದ, ಬಿಂದು, ಕಲೆಗಳು (ಮೂರೂ) ವಿಶ್ವದ ವಿಕಾಸದಲ್ಲಿ ಮಹತ್ವದ ಅಂಗಗಳಾಗಿದ್ದರೆ, ಶೈವಸಿದ್ಧಾಂತದಲ್ಲಿ ಬಿಂದುವೊಂದೇ ಎಲ್ಲಕ್ಕೂ ಮೂಲವಾಗಿದೆ.

---

೧೧೨. ವಚನಕಾರರು ಈ ಬಗೆಗೆ ಬೇರೆ ಬೇರೆ ಅಭಿಪ್ರಾಯಗಳನ್ನು ಹೊಂದಿದ್ದಾರೆ. ನೋಡಿ: Dr. S.C. Nandimath (1942) A Hand Book of Virasaivism, p. 141-144.

೧೧೩. ಶಿವಾನುಭವಸೂತ್ರಂ ಅಧಿಕರಣ ೪, ಶ್ಲೋಕ ೩೪-೪೧.

೧೧೪. Dr. S.C. Nandimath (1942) A Hand Book of Virasaivism, p. 140.

ಜ್ಞಾನ ಕ್ರಿಯಾತ್ಮಕ ಷಡಂಗಸ್ಥಲ:

ವೀರಶೈವದರ್ಶನದಲ್ಲಿ ಜ್ಞಾನ ಮತ್ತು ಕ್ರಿಯೆಗಳಿಗೆ ಸಮಸಮುಚ್ಚಯತ್ವವಿದೆ. ಈ ಹಿನ್ನೆಲೆಯಲ್ಲಿ ಷಡಂಗಸ್ಥಲಗಳನ್ನು ಎರಡು ವಿಧವಾಗಿ ವಿಂಗಡಿಸಲಾಗಿದೆ. ಐಕ್ಯ, ಶರಣ, ಪ್ರಾಣಲಿಂಗಿ - ಇವು ಜ್ಞಾನಾತ್ಮಕ, ಪ್ರಸಾದಿ, ಮಹೇಶ, ಭಕ್ತಸ್ಥಲ - ಇವು ಕ್ರಿಯಾತ್ಮಕ.[೧೧೫]

ಲಿಂಗಾಂಗಸಂಯೋಗವಿಧಿ (ಶಿವಾನುಭವಸೂತ್ರದ ಪ್ರಕಾರ ಬಂಧ ಮೋಕ್ಷ):

ಜೀವನಿಗೆ ಆಗುವ ಬಂಧ-ಮೋಕ್ಷಗಳಿಗೆ ಕಾರಣ, ಶಕ್ತಿಯ ಸಂಕೋಚ-ವಿಕಾಸ ಭಾವಗಳು. ಶಕ್ತಿಯ ಸಂಕೋಚವೇ ಬಂಧ. ಶಕ್ತಿಯ ವಿಕಾಸವೇ ಮೋಕ್ಷ. ಶಂಕರಶಾಸ್ತ್ರಿಗಳು ಇದನ್ನೇ ಹೀಗೆ ಹೇಳುತ್ತಾರೆ.

'ಸಂಕುಚಿತ ಶಕ್ತಿತ್ರಯರೂಪಮಲತ್ರಯನಿವೃತ್ತಿ:
ಶಕ್ತಿವಿಕಾಸರೂಪಶಿವತ್ವ ಪ್ರಾಪ್ತಿರ್ಮೋಕ್ಷ:'[೧೧೬]

ಶಿವದೀಕ್ಷೆಯ ತರುವಾಯ ಜೀವನಲ್ಲಿರುವ ಶಕ್ತಿಯು ಭಕ್ತಿಯಾಗಿ ಪರಿಣಮಿಸಿದಮೇಲೆ ಮಲತ್ರಯವಳಿದು, ಆವನು ಸ್ವಸ್ವರೂಪಾನಂದತುಂದಿಲವಾಗಿ ಶಿವನೇ ಆಗುತ್ತಾನೆ. ಇದೇ ಮೋಕ್ಷ.

ತಸ್ಮಾಲ್ಲಿಂಗಾಂಗಸಂಯೋಗಾತ್ಪರಾ ಮುಕ್ತಿರ್ನವಿದ್ಯತೇ ।
ಮುಕ್ತೇಃ ಪರತರಾಭಕ್ತಿರಿತಿ ಸತ್ಯಪರಾ ಶ್ರುತಿಃ ॥[೧೧೭]

ಜೀವನು ಶಿವನ ಅಂಶವಾದುದರಿಂದ ಶಿವನಲ್ಲಿರುವ ಸರ್ವಜ್ಞತ್ವ ಮುಂತಾದ ಷಡಂಗಗಳು ಜೀವನಲ್ಲಿರಬೇಕು. ೧. ಸರ್ವಜ್ಞತ್ವ, ೨. ನಿತ್ಯತೃಪ್ತಿತ್ವ, ೩. ಅನಾದಿಬೋಧತ್ವ, ೪. ಸ್ವತಂತ್ರತ್ವ, ೫. ಅಲುಪ್ತಶಕ್ತಿತ್ವ, ೬. ಅನಂತಶಕ್ತಿತ್ವ - ಇವು ಜೀವನಿಗೂ ಅಂಗಗಳಾಗುತ್ತವೆ.

ಸೋಯಮಾತ್ಮಾ ಶಿವಾಂಗಂ ಸ್ಯಾಚ್ಛಿವೇನಾಂಗೀಕೃತತ್ವತಃ ।
ಸರ್ವಜ್ಞತ್ವಾದಿ ಭೇದೈಶ್ಚ ಶಿವಾಂಗಮಿದಮಿಷ್ಯತೇ ॥
ಸರ್ವಜ್ಞತ್ವಂಚ ತೃಪ್ತಿತ್ವಂ ತಥಾನಾದಿಪ್ರಬೋಧತಾ ।
ಸ್ವತಂತ್ರತಾಪಿ ಚಾಲುಪ್ತಶಕ್ತಿತಾಽನಂತಶಕ್ತಿತಾ ॥[೧೧೮]

ಎಂದರೆ ಜೀವನು ಸ್ವಭಾವತಃ ಶುದ್ಧ. ಶಿವನೇ ಸ್ವಶಕ್ತಿಯ ಸಂಕೋಚದಿಂದ ಮಲತ್ರಯದಿಂದ ಕೂಡಿ ಜೀವಭಾವ ಹೊಂದುತ್ತಾನೆ. ಶಿವದೀಕ್ಷೆಯ ನಂತರ ಜೀವಗತ ಶಕ್ತಿಯು ಭಕ್ತಿಯಾಗಿ ಪರಿಣಮಿಸಿದ ಮೇಲೆ, ಅವನು ಶುದ್ಧ ಶಿವಸ್ವರೂಪನಾಗುತ್ತಾನೆ. ಶಿವನ ಎಲ್ಲ ಶಕ್ತಿಗಳನ್ನು ಆಗ ಜೀವನು ಅನುಭವಿಸಲು ಸಮರ್ಥನಾಗುತ್ತಾನೆ.

---

೧೧೫. ಶಿವಾನುಭವಸೂತ್ರಂ ಅಧಿಕರಣ (೧೯೭೬) ಎಂ. ಜಿ. ನಂಜುಂಡಾರಾಧ್ಯ (ಸಂ) ಶ್ಲೋಕ ೪೨-೪೩.

೧೧೬. ಈಶಾವಾಶೋಪನಿಷತ್ ಶಾಂಕರೀವ್ಯಾಖ್ಯಾ, ಪು. ೨೪.

೧೧೭. ಶಿವಾನುಭವಸೂತ್ರಂ, ಅಧಿಕರಣ ೫, ಶ್ಲೋಕ ೧೬.

೧೧೮. ಅದೇ, ಅಧಿಕರಣ ೫, ಶ್ಲೋಕ ೪, ೫.

ಚೈತನ್ಯಮಾತ್ಮನೋರೂಪಂ ಸಚ್ಚಿದಾನಂದ ಲಕ್ಷಣಂ ।
ತಸ್ಮಾನಾವೃತ ರೂಪತ್ವಾತ್ ಶಿವತ್ವಂಕೇನವಾರ್ಯತೇ ॥[೧೧೯]

ಎಂಬ ಈ ಪ್ರಮಾಣವು ಜೀವಾತ್ಮನ ಶಿವತ್ವವು ಯಾರಿಂದಲೂ ನಿವಾರಿಸಲಾಗುವುದಿಲ್ಲವೆಂದು ಹೇಳುತ್ತದೆ. ಜೀವನು ಶಿವನ ಅಂಶವೆಂದ ಮೇಲೆ ಶಿವನಲ್ಲಿರುವ ಸರ್ವಜ್ಞತ್ವ ಸರ್ವಕರ್ತೃತ್ವ ಮುಂತಾದ ಷಡಂಗಗಳು ಜೀವನಲ್ಲಿ ಸಹಜವಾಗಿ ಸಮಾವೇಶವಾಗುತ್ತವೆ ಎಂಬುದೇ ಮೇಲಿನದರ ಒಟ್ಟು ತಾತ್ಪರ್ಯ.

**ಷಡಂಗಸ್ವರೂಪ:**

ಇತ್ಯೇತೈರ್ಲಕ್ಷಣೈಷ್ಷಡ್ಭಿಃ ಶಿವಾಂಗಮಿತಿ ಲಕ್ಷ್ಯತೇ ।
ತಸ್ಮಾದಂಗಸ್ಥಲಂ ಸಾಕ್ಷಾದಾತ್ಮೈವ ಹಿ ನ ಸಂಶಯಃ ॥[೧೨೦]

೧. ಸರ್ವಜ್ಞತ್ವ, ೨. ನಿತ್ಯತೃಪ್ತಿ, ೩. ಅನಾದಿಬೋಧತ್ವ, ೪. ಸ್ವತಂತ್ರತ್ವ, ೫. ಅಲುಪ್ತಶಕ್ತಿತ್ವ, ೬.ಅನಂತಶಕ್ತಿತ್ವ - ಈ ಷಡಂಗಗಳು ಶಿವದೀಕ್ಷೆಗೆ ಮೊದಲು ಮಲಾವರಣದಿಂದ ಸಂಕೋಚಹೊಂದಿ ಜೀವನಲ್ಲಿ ಕಿಂಚಿಜ್ಞತ್ವ, ಕಿಂಚಿತ್ಕರ್ತೃತ್ವ ಮುಂತಾಗಿ ಅದಗಿದ್ದವು. ಶಿವದೀಕ್ಷೆಯಿಂದ ಮಲಾವರಣವು ನಷ್ಟವಾದ ಮೇಲೆ ಆ ಷಡಂಗಗಳು ಭಕ್ತ, ಮಹೇಶ, ಪ್ರಸಾದ ಮುಂತಾಗಿ ಷಡಂಗಸ್ಥಲಗಳಾಗಿ ಪರಿವರ್ತಿತವಾದವು. ಆದ್ದರಿಂದ ಅಂಗನಲ್ಲಿ ಸರ್ವಜ್ಞತ್ವಾದಿಗಳು ವಿಕಾಸಹೊಂದಿದ್ದರಿಂದ ಅವನು ಶಿವನೇ ಆಗುತ್ತಾನೆಂದು ಮಾಯಿದೇವ ಹೇಳುತ್ತಾನೆ.

**ಲಿಂಗಾಂಗಾಂಗ ಸ್ಥಲಗಳ ಸ್ವರೂಪ:**

ಶಕ್ತಿಭೆದದಿಂದ ಲಿಂಗವು ಅನೇಕ ವಿಧವಾಗಿರುವಂತೆ ಭಕ್ತಿಭೇದದಿಂದ ಅಂಗನೂ ಅನೇಕ ವಿಧವಾಗಿದ್ದಾನೆ. ಲಿಂಗವು ಉಪಾಸ್ಯವೆನಿಸಿ ಯಾವ ರೂಪತಾಳುತ್ತದೆಯೋ ಅಂಗನೂ ಉಪಾಸಕನಾಗಿ ಅದೇ ರೂಪ ಹೊಂದುತ್ತಾನೆ.

**ಸಂಯೋಗವೇ ಸಾಯುಜ್ಯರೂಪ ಮೋಕ್ಷ:**

ಲಿಂಗಧ್ಯಾನದಿಂದ ಜೀವನಿಗೆ ಭ್ರಮರ-ಕೀಟನ್ಯಾಯದಂತೆ ಆಗುವ ತಾದಾತ್ಮ್ಯವೇ ಸಂಯೋಗ ಸದ್ಭಾವ. ಈ ಸಂಯೋಗವೇ ಸಾಯುಜ್ಯ ರೂಪವಾದ ಮುಕ್ತಿ. ಜೀವನಿಗೆ ಆಗುವ ಬಂಧ-ಮೋಕ್ಷಗಳಿಗೆ ಕಾರಣಶಕ್ತಿಯ ಸಂಕೋಚ ವಿಕಾಸಭಾವಗಳು. ಈ ಸಂಕೋಚ ವಿಕಾಸಗಳ ಪರಿವೆ ಇಲ್ಲದೆ ಸರ್ವತೋಮುಖವಾಗಿ ಬೆಳಗುವ ಶಿವಮಯ ಪ್ರಕಾಶವೇ ಭಕ್ತಿ.

ಸಮ್ಯಗ್ಯೋಗೊ ಹಿ ಸಂಯೋಗೋಭವೇಲ್ಲಿಂಗಾಂಗಯೋಃ ಸದಾ ।
ಸಂಯೋಗ ಏವ ಸಾಯುಜ್ಯರೂಪಮುಕ್ತಿರ್ನಚಾಪರಾ ॥[೧೨೧]

---

೧೧೯. ವೈ. ನಾಗೇಶಶಾಸ್ತ್ರಿಗಳು, ೧೯೬೯, ಶಿವಾನುಭವಸೂತ್ರಂ (ಭಾವಾರ್ಥಬೋಧಿನೀ ಟೀಕಾ) ಪು. ೬೧.

೧೨೦. ಶಿವಾನುಭವಸೂತ್ರಂ, ಅಧಿಕರಣ ೫, ಶ್ಲೋಕ ೬.

೧೨೧. ಅದೇ, ಶ್ಲೋಕ ೧೫.

ವಿವಿಧ ದರ್ಶನಗಳು ಮೋಕ್ಷವನ್ನು ಪರಮಪುರುಷಾರ್ಥವೆಂದೂ ಅದರ ಗಳಿಕೆಯೇ ಮುಖ್ಯ ಗುರಿ ಎಂದೂ ಸಾರಿದರೆ ವೀರಶೈವ ಮೋಕ್ಷವನ್ನು ದೂರ ಇರಿಸಿತು. ಅನ್ಯ ದರ್ಶನಗಳಿಗೆ ಯಾವ ಮೋಕ್ಷ ಸರ್ವೋತ್ಕೃಷ್ಟವೋ ಅದು ವೀರಶೈವಕ್ಕೆ ಗೌಣ. ಮೋಕ್ಷಾಪೇಕ್ಷೆಯೂ ಒಂದು ಬಗೆಯ ಸಕಾಮ ಭಕ್ತಿಯೆಂಬುದೇ ಮಾಯಿದೇವನ ಭಾವನೆ. ಆದ್ದರಿಂದಲೆ ಅವನು ಭಕ್ತಿಗೆ ಪಂಚಮಪುರುಷಾರ್ಥವೆಂದು ಹೆಸರಿಸುತ್ತಾನೆ. ಶಿವಶರಣರು ಭಕ್ತಿಯನ್ನು ಅವಲಂಬಿಸಿದ್ದರೆ ವಿನಾ ಮುಕ್ತಿಯನ್ನಲ್ಲ. ಭಕ್ತಿಯು ಶಿವಪ್ರಸಾದಕ್ಕೆ ತವರು. ಶಿವಪ್ರಸಾದವು ಆ ಭಕ್ತಿಗೆ ಜನ್ಮಭೂಮಿ. ಆದ್ದರಿಂದ ಶಿವಪ್ರಸಾದ ಮತ್ತು ಭಕ್ತಿಗಳಿಗೆ ಬೀಜಾಂಕುರ ನ್ಯಾಯದಂತೆ ಪರಸ್ಪರ ಸಂಬಂಧವಿದೆ. ಭಕ್ತಿ ಅಳವಟ್ಟಿತೆಂದರೆ ಮುಕ್ತಿ ಸಿದ್ಧ ಎಂದು ಮುಂತಾಗಿ ಭಕ್ತಿಶತಕಲ್ಲಿ ಭಕ್ತಿಯನ್ನು ಬಹುವಿಧವಾಗಿ ಕೊಂಡಾಡಿರುವುದನ್ನು ಅಲ್ಲಿ ಗಮನಿಸಬಹುದು.

**ಲಿಂಗಾಂಗ ಸಂಯೋಗವಿಧಿ:**

'ವಿಧಿ' ಎಂದರೆ ಕರ್ತವ್ಯಪರವಾದ ಉಪದೇಶ. ಉಪದೇಶದಿಂದ ತನ್ನ ಅಜ್ಞಾನವನ್ನು ಕಳೆದುಕೊಳ್ಳಲು ಜೀವನು ಗುರುವನ್ನು ಆಶ್ರಯಿಸುತ್ತಾನೆ. ಆ ಗುರು ಭವತಾರಕ ಮತ್ತು ಶಿವವಿದ್ಯಾಬೋಧಕನಾಗಿರಬೇಕು.

ಸೋಽಯಮಾತ್ಮಾ ಸ್ವಯಂ ಸಾಕ್ಷಾಚ್ಛಿವಸ್ಯಾಂಶೋಽಪಿತತ್ತ್ವತಃ ।
ವ್ಯವಹಾರದಶಾಯಾಂ ತು ಸಂಸಾರೀವ ಪ್ರಕಾಶತೇ ॥[೧೨೨]

ವಸ್ತುತಃ ಜೀವನು ಶಿವನ ಅಂಶ. ಆದರೆ ಅಜ್ಞಾನದಿಂದ ಸಂಸಾರಿಯಂತೆ ಸುಖದುಃಖಗಳಿಗೆ ಸ್ಪಂದಿಸುತ್ತಾನೆ. ಆಗ ನಾನು, ನನ್ನದು ಎಂಬ ಭ್ರಾಂತಿಯುಂಟಾಗುತ್ತದೆ. ಇದನ್ನು ಪರಿಹರಿಸಿಕೊಳ್ಳಲು ಗುರುವಿನಲ್ಲಿ 'ನಾನು ಯಾರು ?' (ಕೋಽಹ) ಎಂದು ಪ್ರಶ್ನಿಸುತ್ತಾನೆ. ಶಿಷ್ಯನ ಪ್ರಶ್ನೆಗೆ 'ಅವನೇ ನೀನು' (ತತ್ವಮಸಿ) ಎಂದು ಗುರು ಉತ್ತರಿಸುತ್ತಾನೆ. ಅವಿದ್ಯೆಯಿಂದ ನಿನಗೆ ದೇಹ ಮತ್ತು ಇಂದ್ರಿಯಗಳಲ್ಲಿ ನಾನು, ನನ್ನದೆಂಬ ಭ್ರಾಂತಿಯುಂಟಾಗಿದೆ. ಅದು ಲಿಂಗಾಂಗ ಸಂಯೋಗಜ್ಞಾನ ನಿಷ್ಠೆಯಿಂದ ಹೋಗುವದಾಗಿ ಗುರು ಶಿಷ್ಯನಿಗೆ ಉಪದೇಶಮಾಡುತ್ತಾನೆ. ಇದನ್ನೇ ಲಿಂಗಾಂಗಸಂಯೋಗ ವಿಧಿ ಎಂದು ಕರೆಯಲಾಗಿದೆ.

**ಲಿಂಗಾಂಗ ಸಂಯೋಗ ಸ್ವರೂಪ:**

"ತತ್ವಮಸಿ" ಮತ್ತು "ಸಚ್ಚಿದಾನಂದ" ಎಂಬ ಉಪನಿಷತ್ ವಾಕ್ಯಗಳು ಲಿಂಗಾಂಗಸಂಯೋಗ ಬೋಧಕವಾಗಿವೆ ಎಂಬುದನ್ನು ಉಪದೇಶವಿಧಿಯಲ್ಲಿ ವಿಧಿಸಲಾಗುತ್ತದೆ.

(೧)

"ತತ್ವಮಸಿ" ಎಂಬಲ್ಲಿ ಹೀಗೆ ವಿವರಿಸಲಾಗಿದೆ.

| | | |
|---|---|---|
| ತತ್ | ತ್ವಂ | ಅಸಿ |
| ಲಿಂಗ | ಅಂಗ | ಲಿಂಗಾಂಗಸಂಯೋಗ |

೧೨೨. ಶಿವಾನುಭವಸೂತ್ರಂ, ಅಧಿಕರಣ ೫, ಶ್ಲೋಕ ೬೬.

(೨)

ಸಚ್ಚಿದಾನಂದ ಎಂಬ ವಾಕ್ಯ

| ಲಿಂಗ | ಅಂಗ | ಸಂಯೋಗ |
|---|---|---|
| ಸತ್ | ಚಿತ್ | ಆನಂದ |
| ನಾದ | ಬಿಂದು | ಕಳೆ |
| ಮಂತ್ರ | ಕ್ರಿಯೆ | ಮಂತ್ರಕ್ರಿಯೆಗಳ ಅನುಷ್ಠಾನ |
| ಪುರುಷ | ಪ್ರಕೃತಿ | ಈಶ್ವರ |
| ಅ | ಉ | ಮ |
| ಹ್ರಸ್ವ | ದೀರ್ಘ | ಪ್ಲುತ |
| ಅರ್ಥ | ಶಬ್ದ | ಶಬ್ದಾರ್ಥಜ್ಞಾನ |
| ಶಕ್ತಿಮಾನ್ | ಶಕ್ತಿ | ಶಕ್ತಿಮತ್ ಸಂಬಂಧ |

ಇವುಗಳನ್ನು ಕ್ರಮವಾಗಿ ತತ್ ಎಂದರೆ ಲಿಂಗ; ತ್ವಂ ಎಂದರೆ ಅಂಗ, ಅಸಿ ಎಂದರೆ ಲಿಂಗಾಂಗಸಂಯೋಗವೆಂದು ಭಾವಿಸಬೇಕು. ಅಲ್ಲದೆ ಲಿಂಗದಸ್ವರೂಪ, ಸತ್, ನಾದ, ಮಂತ್ರ ಪುರುಷ, ಅ, ಹ್ರಸ್ವ, ಅರ್ಥ, ಶಕ್ತಿಮಾನ್ ಆಗಿದೆ ಎಂದೂ; ಅಂಗಸ್ವರೂಪ ಚಿತ್, ಬಿಂದು, ಕ್ರಿಯೆ, ಪ್ರಕೃತಿ, ಉ, ದೀರ್ಘ, ಶಬ್ದ, ಶಕ್ತಿಯಾಗಿದೆಯೆಂದೂ, ಆನಂದ, ಕಳೆ, ಮಂತ್ರಕ್ರಿಯೆಗಳ ಅನುಷ್ಠಾನ, ಈಶ್ವರ, ಮ, ಪ್ಲುತ, ಶಬ್ದಾರ್ಥಜ್ಞಾನ, ಶಕ್ತಿಮತ್ ಸಂಬಂಧ ಸಂಯೋಗ ಸ್ವರೂಪವುಳ್ಳದಾಗಿದೆಯೆಂದು ಭಾವಿಸಬೇಕೆಂದು ಹೇಳಲಾಗುತ್ತದೆ.

**ದೀಕ್ಷಾವಿಧಾನ (ಮೋಕ್ಷೋಪಾಯ):**

ದೀಕ್ಷೆ ಎಂಬುದು ವೀರಶೈವ ಧಾರ್ಮಿಕ ಆಚರಣೆಯಲ್ಲಿ ಮಹತ್ವಪೂರ್ಣವಾದ ಒಂದು ತಿರುವು. ಇತರ ಎಲ್ಲ ಆಚರಣೆಗಳೂ ಇದರ ಸುತ್ತ ಕೇಂದ್ರೀಕೃತವಾಗಿವೆ. ಹಿಂದೆ ಹೇಳಿದ ಲಿಂಗಾಂಗ ಸಂಯೋಗಜ್ಞಾನದಿಂದಲೇ ಜೀವಭಾವ ಅಳಿಯದು. ಅದರ ತಿಳುವಳಿಕೆಗೆ ಶಿವದೀಕ್ಷೆ ಒಂದು ಅಗತ್ಯವಾದ ಕ್ರಿಯೆ. ಇದು ಮೋಕ್ಷೋಪಾಯವಾಗಿದೆ.

**ದೀಕ್ಷಾಸ್ವರೂಪ:**

ದೀಯತೇ ಲಿಂಗಸಂಬಂಧಃ ಕ್ಷೀಯತೇ ಚ ಮಲತ್ರಯಂ ।
ದೀಯತೇ ಕ್ಷೀಯತೇ ಯಸ್ಮಾತ್ಸಾ ದೀಕ್ಷೇತಿ ನಿಗದ್ಯತೇ ॥[೧೨೩]

ಎಂದು ದೀಕ್ಷೆಯ ವ್ಯುತ್ಪತ್ತಿಯನ್ನು ಹೇಳಲಾಗಿದೆ. ಅಂದರೆ ಅಂಗಕ್ಕೆ ಲಿಂಗಸಂಬಂಧವನ್ನುಂಟುಮಾಡಿ ಅದರಿಂದ ಮಲತ್ರಯಗಳನ್ನು ನಾಶಗೊಳಿಸುವುದು - ಇದು ದೀಕ್ಷೆ. ಆಣವಮಲ, ಮಾಯಾಮಲ, ಕಾರ್ಮಿಕಮಲಗಳನ್ನು ಕಳೆಯಲು ಗುರು, ಶಿಷ್ಯನಿಗೆ ದೀಕ್ಷೆಯನ್ನು ಮಾಡುತ್ತಾನೆ. ಈ ದೀಕ್ಷೆ ಮೂರು ಬಗೆಯಾಗಿದೆ; ವೇಧಾದೀಕ್ಷೆ, ಮಂತ್ರದೀಕ್ಷೆ, ಕ್ರಿಯಾದೀಕ್ಷೆ ಎಂಬುದಾಗಿ. ಕಾಯ, ಪ್ರಾಣ, ಮನಗಳಿಗೆ ಮಾಡುವ ಸಂಸ್ಕಾರಗಳನ್ನು ಇವು ಅವಲಂಬಿಸಿವೆ. ಗುರು ತನ್ನ ವರದ ಹಸ್ತವನ್ನು ಶಿಷ್ಯನ ಮಸ್ತಕದ ಮೇಲಿಟ್ಟು, ಕೃಪಾದೃಷ್ಟಿಯಿಂದ ನೋಡುವುದೇ ವೇಧಾದೀಕ್ಷೆ. ಶಿವದೀಕ್ಷಾಂಗವಾಗಿ ಗುರು

೧೨೩. ಶಿವಾನುಭವಸೂತ್ರಂ, ಅಧಿಕರಣ ೫, ಶ್ಲೋಕ ೩೮.

ಶಿಷ್ಯನಿಗೆ ಮಾಡುವ ಪಂಚಾಕ್ಷರ ಮಹಾಮಂತ್ರೋಪದೇಶವೇ ಮಂತ್ರದೀಕ್ಷೆ. ಶಿವದೀಕ್ಷೆಯ ಅಂಗವಾಗಿ ಷಡಧ್ವಶುದ್ಧಿಯಿಂದ ಸಂಸ್ಕರಿಸಿದ ಲಿಂಗವನ್ನು ಶಿಷ್ಯನ ಹಸ್ತದಲ್ಲಿ ಸ್ಥಾಪಿಸುವುದು ಕ್ರಿಯಾದೀಕ್ಷೆ.

**ಶಿವಕಳೆ:**

ಶಿವದೀಕ್ಷೆಯಲ್ಲಿ ಗುರುವು ಶಿಷ್ಯನಿಗೆ ಶಿವಜ್ಞಾನಬೋಧಿಸಿ ಅವಿದ್ಯಾಪಾಶವನ್ನು ಕತ್ತರಿಸಿ, ಶಿಷ್ಯನ ಮಸ್ತಕದಲ್ಲಿ ಶಿವಕಳೆಯನ್ನು ಪುನಶ್ಚೇತನಗೊಳಿಸುವ ಕ್ರಮ ಹೀಗಿದೆ:

ಪಾಶಾನಶೇಷಾನ್ ಕರ್ತರ್ಯಾ ಛಿತ್ವಾಲಿಂಗಂ ಸಮಾದಿಶೇತ್ ।
ಕರ್ತರೀ ಶಿವದೀಕ್ಷಾ ಸ್ಯಾದ್ಧ್ಯಯಾ ಪಾಶಾನ್ ಛಿನತ್ತ್ಯಸೌ ॥[೧೨೪]

ಮಾಯಿದೇವನು ಶಿವದೀಕ್ಷೆಗೆ ಕರ್ತರಿಯೆಂದು ಕರೆದಿದ್ದಾನೆ. ಇದು ಜೀವನಿಗಂಟಿದ ಸರ್ವಪಾಶಗಳನ್ನು ಕತ್ತರಿಸುವಲ್ಲಿ ಸಮರ್ಥವಾಗಿದೆ. ದೀಕ್ಷೆಯೆಂಬ ಕರ್ತರಿಯಿಂದ ಗುರು, ಅವಿದ್ಯಾಸಂಬಂಧವಾದ ಪಾಶಗಳನ್ನು ಭೇದಿಸಿ, ಶಿಷ್ಯನ ಮಸ್ತಕದಲ್ಲಿರುವ ಶಿವಕಳೆಯನ್ನು ಚಿಂತಿಸಬೇಕು. ಹೇಗೆ ಶಿವಕಳೆಯೋ ಹಾಗೆ ಭಾವ, ಭಾವದಂತೆ ಮನ, ಮನದಂತೆ ದೃಷ್ಟಿ, ದೃಷ್ಟಿಯಂತೆ ಸ್ಥಲ - ಹೀಗೆ ಒಂದಕ್ಕೊಂದು ಇವು ಆಶ್ರಯಿಸಿರುವುದರಿಂದ ಗುರುವು ತನ್ನ ಶುದ್ಧವಾದ ಭಾವಮನೋದೃಷ್ಟಿಗಳಿಂದ ಶಿವಕಳೆಯನ್ನು ಚೆನ್ನಾಗಿ ಶಿಷ್ಯನಲ್ಲಿ ಜಾಗ್ರತಗೊಳಿಸಬೇಕು.

ಯಥಾಕಲಾ ತಥಾಭಾವೋ ಯಥಾ ಭಾವಸ್ತಥಾ ಮನಃ ।
ಯಥಾ ಮನಸ್ತಥಾ ದೃಷ್ಟಿಃ ಯಥಾದೃಷ್ಟಿಸ್ತಥಾ ಸ್ಥಲಂ ॥[೧೨೫]

ಎಂದರೆ ಕಲಾ, ಭಾವ, ಮನಸ್ಸು, ದೃಷ್ಟಿ, ಸ್ಥಲ - ಇವು ಶಿವಕಲೆಗೆ ಅನುಗುಣವಾಗಿ ಬಲಗೊಂಡು ಸ್ಥಲಸಿದ್ಧಿಯನ್ನುಂಟು ಮಾಡುತ್ತವೆ. ಹಾಗೆ ರೂಪುಗೊಂಡ ಪರಮಸೂಕ್ಷ್ಮವಾದ ಶಿವಕಳೆಯನ್ನು ಆಕರ್ಷಿಸಿ, ಗುರುವು ತನ್ನ ಯೋಗಶಕ್ತಿಯಿಂದ ಇಷ್ಟಲಿಂಗದಲ್ಲಿ ನೆಲೆಗೊಳಿಸಬೇಕು.

ಎಳ್ಳಿನಲ್ಲಿರುವ ಎಣ್ಣೆಯಂತೆ, ಅರಣಿಯಲ್ಲಿರುವ ಅಗ್ನಿಯಂತೆ ಆತ್ಮದಲ್ಲಿಯೇ ಇದ್ದು ಆತ್ಮನ ಒಳಹೊರಗೆಲ್ಲಾ ತುಂಬಿದ ಜ್ಯೋತಿರ್ಮಯವಾದ ಪರಶಿವಲಿಂಗವನ್ನು ಶಿಷ್ಯನಿಗೆ ತೋರಿಸುತ್ತಾನೆ. ನಿಷ್ಕಳ ಮತ್ತು ನಿರುಪಾಧಿಕವಾದ ಲಿಂಗದರ್ಶನದಿಂದ ಶಿಷ್ಯ(ಜೀವಾತ್ಮ)ನ ಸರ್ವಕರ್ಮಗಳು ಕ್ಷೀಣವಾಗುತ್ತವೆ. ಅವಿದ್ಯಾಹೃದಯ ಗ್ರಂಥಿಯು(ಅಜ್ಞಾನದ ತೊಡಕು) ನೂರು ಭಾಗವಾಗಿ ಛಿದ್ರಗೊಳ್ಳುತ್ತದೆ. ನಾನಾವಿಧವಾದ ಸಂಶಯ ಮತ್ತು ಸಂಕಲ್ಪಗಳು ಸಾವಿರಾರು ಪಾಲಾಗಿ ಹೋಗುತ್ತವೆ :

ಅವಿದ್ಯಾಹೃದಯಗ್ರಂಥಿರ್ಭಿದ್ಯತೇ ಶತಧಾಪಿ ಚ ।
ಸಂಶಯಾ ಬಹುಸಂಕಲ್ಪಾಶ್ಛಿದ್ಯಂತೇ ಚ ಸಹಸ್ರಧಾ ॥[೧೨೬]

ಹೀಗೆ ವೇಧಾ-ಮನು-ಕ್ರಿಯಾದೀಕ್ಷೆ ಎಂಬ ಜ್ವಾಲೆಯಲ್ಲಿ ಆಣವ-ಮಾಯಾ-ಕಾರ್ಮಿಕ ಎಂಬ ಮಲಗಳು ಕರ್ಪೂರದಂತೆ ಸುಟ್ಟಮೇಲೆ ಅಂಗನು ಲಿಂಗದಲ್ಲಿ ಬೆರೆಯುತ್ತಾನೆ.

---

೧೨೪. ಶಿವಾನುಭವಸೂತ್ರಂ, ಅಧಿಕರಣ ೫, ಶ್ಲೋಕ ೪೨.

೧೨೫. ಅದೇ, ಶ್ಲೋಕ ೪೪.

೧೨೬. ಅದೇ, ಶ್ಲೋಕ ೫೦.

**ಲಿಂಗಸಂಯೋಜನಕ್ರಮ :**

ಈ ಸಂಯೋಜನಕ್ರಮದಲ್ಲಿ ಮಾಯಿದೇವನ ಕರ್ಪೂರದ ಉದಾಹರಣೆಯು ವಿಶಿಷ್ಟವಾದ ಅರ್ಥ ಹೊಂದಿದೆ. ಅದು ಇಂತಿದೆ :

ಏತಲ್ಲಿಂಗಾಂಗಸಂಯೋಗಃ ಶಿಖಿಕರ್ಪೂರಯೋಗವತ್ ।
ತ್ರಿಷ್ವಂಗೇಷ್ವಸ್ಯ ಶಿಷ್ಯಸ್ಯ ಲಿಂಗತ್ರಯಮಯಂ ಗುರುಃ ॥[೧೨೭]

ಇಲ್ಲಿ ವೇಧಾ ಮನು ಕ್ರಿಯೆಗಳೆಂಬ ತ್ರಿವಿಧದೀಕ್ಷೆಯೇ ಜ್ವಾಲೆ. ಅಂತಹ ಜ್ವಾಲೆಯ ಸ್ವರೂಪವೇ ಲಿಂಗ. ಕಾರ್ಮಿಕ, ಮಾಯೀಯ, ಆಣವ ಎಂಬ ಮಲತ್ರಯದ ವಾಸನೆಯೇ ಕರ್ಪೂರ. ಆ ಕರ್ಪೂರದ ಗಂಧವೇ ಅಂಗ. ಈ ಲಿಂಗಾಂಗಗಳ ಸಂಯೋಗ ಅಗ್ನಿಕರ್ಪೂರದಂತಿದೆ. ಎಂದರೆ ಅಗ್ನಿಸಂಬಂಧದಿಂದ ಕರ್ಪೂರವು ಅಗ್ನಿಯಲ್ಲಿ ಬೆರೆಯುವಂತೆ ಲಿಂಗಸಂಬಂಧದಿಂದ ಅಂಗವು ಲಿಂಗದಲ್ಲಿ ಬೆರೆಯುವುದು ಎಂದು ಇಲ್ಲಿನ ತಾತ್ಪರ್ಯ.

ಇಲ್ಲಿ ಒಂದು ಸಂದೇಹ ಬರಬಹುದು. ಅದೇನೆಂದರೆ, ಉರಿಯಲ್ಲಿ ಕರ್ಪೂರವು ಸುಟ್ಟಮೇಲೆ ಕರ್ಪೂರದ ಸ್ವರೂಪವೇ ನಾಶವಾಗುತ್ತದೆ. ಅದರಂತೆ ಉರಿಯಂತಿರುವ ಲಿಂಗದಲ್ಲಿ ಕರ್ಪೂರದಂತಿರುವ ಆತ್ಮನು ದಗ್ಧವಾದ ಮೇಲೆ ಆತ್ಮನೇ ಇಲ್ಲದಂತಾಗುವುದು. ಅಂಥ ಆತ್ಮನಾಶಕವಾದ ಮುಕ್ತಿಯಿಂದ ಏನು ಪ್ರಯೋಜನ? ಎಂಬುದಾಗಿ. ಇದಕ್ಕೆ ಸಮಾಧಾನವೆಂದರೆ, ವೀರಶೈವವು ಕಾರ್ಯ ಕಾರಣಗಳಿಗೆ ನಾಶವನ್ನು ಒಪ್ಪುವುದಿಲ್ಲ. ಅಲ್ಲಿ ಉರಿ-ಕರ್ಪೂರ ಎರಡೂ ಸತ್ಯ. ಕರ್ಪೂರವು ಸುಟ್ಟು, ಉರಿಯರೂಪವನ್ನೇ ತಾಳುವುದರಿಂದ ಕರ್ಪೂರವು ನಾಶವಾಗಲಿಲ್ಲ. ಅದರಂತೆ ಅಂಗನು ಲಿಂಗದಲ್ಲಿ ಸಮರಸವಾಗಿ ಲಿಂಗರೂಪನೇ ಆಗುವುದರಿಂದ ಆತ್ಮನಾಶ ಎಂಬ ಪ್ರಶ್ನೆಯೇ ಹುಟ್ಟುವುದಿಲ್ಲ.

**ತ್ರಿವಿಧಜೀವರು:**

ಸ್ಥೂಲ, ಸೂಕ್ಷ್ಮ, ಕಾರಣ ಶರೀರಗಳಲ್ಲಿರುವ ಜೀವನು ಕ್ರಮವಾಗಿ, ವಿಶ್ವ, ತೈಜಸ, ಪ್ರಾಜ್ಞನೆಂಬ ಹೆಸರಿನಿಂದ ಕರೆಯಿಸಿಕೊಳ್ಳುವನು. ಆ ವಿಶ್ವತೈಜಸ ಪ್ರಾಜ್ಞರೆಂಬ ಜೀವರೇ ಕ್ರಮವಾಗಿ, ಜೀವಾತ್ಮ, ಅಂತರಾತ್ಮ, ಪರಮಾತ್ಮರೆಂದು ಕರೆಯಿಸಿಕೊಳ್ಳುತ್ತಾರೆ.[೧೨೮] ಜೀವನೇ ವಿಶ್ವ, ತೈಜಸ ಮತ್ತು ಪ್ರಾಜ್ಞನೆಂಬ ಹೆಸರಿನಿಂದ ಕ್ರಮವಾಗಿ ಸ್ಥೂಲ, ಸೂಕ್ಷ್ಮ, ಕಾರಣಶರೀರಗಳಲ್ಲಿ ಪರಿವಿಡಿದು ಇಷ್ಟ, ಪ್ರಾಣ, ಭಾವಲಿಂಗಗಳನ್ನು ಜಾಗ್ರತ್ತು, ಸ್ವಪ್ನ, ಸುಷುಪ್ತಿಯೆಂಬ ಅವಸ್ಥಾತ್ರಯಗಳಲ್ಲಿ ಉಪಾಸಿಸುತ್ತಾನೆ.

**ಉಪಾಸನೆ:**

ವೀರಶೈವದ ಉಪಾಸನೆಯಲ್ಲಿ ಒಂದು ವೈಶಿಷ್ಟ್ಯವಿದೆ. ಅದು ಇತರರಂತೆ ಉಪಾಸ್ಯಮೂರ್ತಿಯನ್ನು ಎದುರಿಗಿಟ್ಟುಕೊಂಡು ಧ್ಯಾನಿಸುವುದಿಲ್ಲ. ಅಂಗನು, ಮೇಲೆ ಹೇಳಿದಂತೆ ತಾನು ಸ್ವಯಂ ಲಿಂಗಸ್ವರೂಪನಾಗಿರುವೆನೆಂದು ನಿರಂತರ ಸ್ವಸ್ವರೂಪಾನುಸಂಧಾನದಲ್ಲಿರುವುದೇ ಉಪಾಸನೆ. ಈ ಬಗೆಯ ಉಪಾಸನೆಯೇ ಲಿಂಗಾಂಗಗಳ ಸಂಯೋಗ. ಆ ಸಂಯೋಗವೇ ದ್ವೈತವಿಲಯ, ಆ ದ್ವೈತವಿಲಯವೇ ನಿವೃತ್ತಿ. ಅಂತಹ ನಿವೃತ್ತಿಯೇ ವಿಶ್ರಾಂತಿ. ಈ ವಿಶ್ರಾಂತಿಯೇ ವೀರಶೈವರ ಮೋಕ್ಷರೂಪವಾದ ಪರಮಪದ.

---

೧೨೭. ಶಿವಾನುಭವಸೂತ್ರಂ, ಅಧಿಕರಣ ೫, ಶ್ಲೋಕ ೫೭.

೧೨೮. ಕರಣಹಸಿಗೆಯಲ್ಲಿ ಇದೇ ವಿವರ ಬಂದಿದ್ದರೂ ಅಲ್ಲಿ 'ಅಷ್ಟಾತ್ಮಂಗಳು' ಎಂದು ಆರುವಿಧವಾದ ಆತ್ಮದ ಪ್ರಸ್ತಾಪವಿದೆ. ನೋಡಿ: ಷಟ್‌ಸ್ಥಲ ಚಕ್ರವರ್ತಿ ಶ್ರೀ ಚನ್ನಬಸವರಾಜದೇವರು ನಿರೂಪಿಸಿದ ಕರಣಹಸಿಗೆ (ಸಂ) ಪಂಡಿತ ನಾಗಭೂಷಣ ಶಾಸ್ತ್ರಿಗಳು, ಮುರುಘಾಮಠ, ಧಾರವಾಡ, ೧೯೭೨.

ಸ್ಫಟಿಕಸ್ವಚ್ಛಯೋರ್ದೀಪಪ್ರಭಯೋಃ ಕರಕಾಂಭಸೋಃ ।
ಕರ್ಪೂರಗಂಧಯೋರ್ವಾಯುನಭಸೋರ್ಭಾಗಯೋಗವತ್ ।
ಏವಂ ಲಿಂಗಾಂಗಸಂಯೋಗವಿಧಿನಾ ಸ್ವಾತ್ಮನಿ ಸ್ಥಿತಾ ॥[೧೩೯]

ಅಂದರೆ, ಮೋಕ್ಷರೂಪವಾದ ಆ ಪರಮಪದವು, ಸ್ಫಟಿಕ ಹಾಗೂ ಶುಭ್ರತ್ವಗಳಲ್ಲಿ, ದೀಪ ಹಾಗೂ ಅದರ ಪ್ರಭೆಯಲ್ಲಿ, ಆಣೆಕಲ್ಲು ಹಾಗೂ ನೀರುಗಳಲ್ಲಿ, ಕರ್ಪೂರ ಹಾಗೂ ಅದರ ಗಂಧದಲ್ಲಿರುವ ಭಾಗಯೋಗದಂತಿದೆ. ಅರ್ಥಾತ್ ಸ್ಫಟಿಕ ಶುಭ್ರತ್ವಾದಿಗಳು ಅಭೇದದಲ್ಲಿ ಮುಗಿಯುವ ಭಾಗವನ್ನೊಳಗೊಂಡಿವೆ. ಅದರಂತೆಯೇ ವಿಭಾಗ ಪರಾಮರ್ಶರೂಪವಾದ ಶಕ್ತಿಯಿಂದ ದ್ವಿವಿಧವಾದ ಲಿಂಗಾಂಗಗಳ ಸಂಯೋಗವೂ ಅಭೇದದಲ್ಲಿ ಮುಗಿಯುವ ಭಾಗವುಳ್ಳದ್ದಾಗಿದೆ.

ಈ ಪ್ರಕಾರವಾದ ಗುರುವಿನ ಕರ್ತವ್ಯರೂಪವಾದ ಉಪದೇಶವೆಂಬ ಲಿಂಗಾಂಗಸಂಯೋಗವಿಧಿಯಿಂದ ಆತ್ಮನಲ್ಲಿರುವ (ಅಂಗನ ಶಕ್ತಿಸ್ವರೂಪ) ಬೀಜರೂಪವಾದ ಪರಾಭಕ್ತಿಯು ಬಾಹ್ಯಾಂತರ ಹಬ್ಬಿ ವಿಶಾಲಗೊಳ್ಳುವುದು.

ಭಕ್ತಿಯೇ ಬೀಜ. ಆತ್ಮನು ಆ ಬೀಜವನ್ನು ಒಳಗೊಂಡ ಕ್ಷೇತ್ರ. ಬೆಳೆದೆಗೆವವನು ಮಹೇಶ್ವರ. ಇಲ್ಲಿ ಕ್ಷೇತ್ರ (ಆತ್ಮ) ಬೀಜ (ಭಕ್ತಿ) ಹಾಗೂ ಬೀಜಿ (ಈಶ್ವರ)ಗಳಿಗೆ ಎಂದಿಗೂ ವಿಯೋಗವಿಲ್ಲ. ಆತ್ಮನಲ್ಲಿ ಬೀಜರೂಪ ಪರಾಭಕ್ತಿಯು ಒಳ ಹೊರಗೆ ಹಬ್ಬಿ ಬೆಳಗುವುದು.

**ಪಂಚಮಪುರುಷಾರ್ಥವೇ ಭಕ್ತಿ:**

ಮೇಲೆ ಹೇಳಿದಂತೆ ಆತ್ಮಕ್ಷೇತ್ರದಲ್ಲಿ ಶಿವಾಕಾರವಾಗಿ ಬೆಳೆಯುವ ವೃಕ್ಷಕ್ಕೆ ಬೀಜವಾದದ್ದು ಪರಾಭಕ್ತಿ. ಆದ್ದರಿಂದಲೇ ಅಂಥ ಭಕ್ತಿಯನ್ನು ಪಂಚಮ ಪುರುಷಾರ್ಥವೆಂದು ಮಾಯಿದೇವ ಕರೆದಿದ್ದಾನೆ.

**ಭಕ್ತಿಯ ಪ್ರಭೇದಗಳು:**

ಭಕ್ತಿ ಆರು ವಿಧವಾಗಿದೆ. ೧. ಶ್ರದ್ಧೆ, ೨. ನಿಷ್ಠೆ, ೩. ಅವಧಾನ, ೪. ಅನುಭವ, ೫. ಆನಂದ, ೬. ಸಮರಸ, ಎಂದು.

೧. ಶ್ರದ್ಧಾಭಕ್ತಿ :[೧೪೦] ಜೀವಾತ್ಮನಲ್ಲಿ ಬೀಜಭೂತವಾದ ಭಕ್ತಿಯು ಸ್ವರೂಪಸದ್ಭಾವವನ್ನು ಹೊಂದಲು(ಆಚಾರಲಿಂಗದಲ್ಲಿ ಶ್ರದ್ಧಾಯುಕ್ತವಾಗಿ ಸ್ಥಿರಗೊಳ್ಳಲು) ಸದ್ಭಕ್ತಿಯೆನಿಸಿಕೊಂಡಿತು. ಇದರಿಂದ ಆಚಾರಲಿಂಗೋಪಾಸಕನಾಗಿ ಅಂಗನು ಸದ್ಭಕ್ತನೆನಿಸುವನು. ಭಕ್ತಸ್ಥಲವೆಂಬ ಒಂದನೆಯ ಅಂಗಸ್ಥಲ ಇದು.

---

೧೩೯. ಶಿವಾನುಭವಸೂತ್ರಂ, ಅಧಿಕರಣ ೫, ಶ್ಲೋಕ ೬೫, ೬೬.

೧೪೦. (i) 'ಶ್ರದ್ಧಾ' ಎಂದರೆ 'ಶ್ರತ್' ಎಂಬ ಅವ್ಯಯದ ಮುಂದಿರುವ "ಧಾ ಧಾರಣೆ" ಎಂಬ ಧಾತುವಿಗೆ "ಟಾಪ್" ಪ್ರತ್ಯಯ ಬಂದು ಶ್ರದ್ಧಾ ಎಂದು ರೂಪವಾಗಿದೆ. (ii) ನಿಷ್ಠಾ ಎಂದರೆ "ಷ್ಠಾ-ಗತಿನಿವೃತ್ತೌ" ಎಂಬ ಧಾತುವಿಗೆ 'ನಿ' ಎಂಬ ಉಪಸರ್ಗ ಬಂದು ಮುಂದೆ 'ಕಪ್' ಪ್ರತ್ಯಯ ಬಂದು ನಿಷ್ಠಾ ಎಂದಾಗಿದೆ. "ನಿತರಾಂತಿಷ್ಠತೀತಿ ನಿಷ್ಠಾ" ಎಂಬ ವಿಗ್ರಹವನ್ನು ಇಲ್ಲಿ ಹೇಳಲಾಗುತ್ತದೆ. (iii) 'ಅವ' ಉಪಸರ್ಗಪೂರ್ವಕ ಧಾತುವಿಗೆ 'ಘಞ' ಪ್ರತ್ಯಯ ಬಂದು ಅದರ ಮೇಲೆ 'ಲ್ಯುಟ್' ಪ್ರತ್ಯಯದಿಂದ 'ಅವಧಾನ' ಎಂದಾಗಿದೆ. (iv) ಅನುಭವವೆಂಬಲ್ಲಿ "ಅನು" ಉಪಸರ್ಗದ ಮುಂದೆ ಬಂದಿರುವ "ಭೂ ಸತ್ತಾಯಾಂ" ಎಂಬ ಧಾತುವಿಗೆ 'ಅಪ್' ಪ್ರತ್ಯಯ ಬಂದು ಅನುಭವ ಎಂಬ ರೂಪವಾಗುತ್ತದೆ. (v) 'ಆ' ಎಂಬ ಉಪಸರ್ಗದ ಮುಂದೆ "ಟು ನದಿ-ಸಮೃದ್ಧೌ" ಎಂಬ ಧಾತುವಿಗೆ 'ಘಞ' ಪ್ರತ್ಯಯ ಬಂದು 'ಆನಂದ' ಎಂದಾಗಿದೆ. ಸಾಮರಸ್ಯವೆಂಬಲ್ಲಿ, "ಸಮಃ ರಸಃ ಯಯೋಸ್ತೌ ಸಮರಸೌ, ತಯೋರ್ಭಾವಃ ಸಾಮರಸ್ಯಂ". ಇವುಗಳಿಗಿರುವ ಸಂಬಂಧ ಕುರಿತು ಸುದೀರ್ಘವಾಗಿ ಹಾಗೂ ಶಾಸ್ತ್ರೀಯವಾಗಿ ಪಂ. ಗುರುಶಾಂತಶಾಸ್ತ್ರಿಗಳು ತಮ್ಮ ಕನ್ನಡ ವೀರಶೈವಾನಂದ ಚಂದ್ರಿಕೆಯಲ್ಲಿ ವಿವರಣೆ ನೀಡಿದ್ದಾರೆ. ನೋಡಿ. ಪು. ೨೧. ಪ್ರಕಾಶಕರು: ಬೇಲಿಮಠ, ಬೆಂಗಳೂರು (೧೯೮೨).

೨. ನೈಷ್ಠಿಕಭಕ್ತಿ : ಭಕ್ತಸ್ಥಲ(ಜೀವಾತ್ಮ)ದಲ್ಲಿ ಬೀಜರೂಪದಿಂದಿರುವ ಸದ್ಭಕ್ತಿಯೇ ಗಟ್ಟಿಗೊಂಡಾಗ ನೈಷ್ಠಿಕಭಕ್ತಿ ಎನಿಸುತ್ತದೆ. ಆಗ ಭಕ್ತನು ಮಾಹೇಶ್ವರನೆನಿಸುತ್ತಾನೆ. ಈ ಭಕ್ತಿಯಿಂದ ಆತ್ಮನಿಗೆ ಗುರುಲಿಂಗಯುಕ್ತವಾದ ಮಾಹೇಶ್ವರಸ್ಥಲವೆಂಬ ಎರಡನೆಯ ಅಂಗಸ್ಥಲವು ಉಂಟಾಯಿತು.

೩. ಅವಧಾನಭಕ್ತಿ : ಮಾಹೇಶ್ವರಸ್ಥಲದ ನೈಷ್ಠಿಕಭಕ್ತಿಯೇ ಅವಧಾನ (ಎಚ್ಚರ) ಹೊಂದಿ ಅವಧಾನಭಕ್ತಿ ಎನಿಸುತ್ತದೆ. ಇದು ಆತ್ಮನ ಮನಃಪ್ರಸನ್ನತೆಗೆ ಕಾರಣವಾಗಿರುವುದರಿಂದ ಪ್ರಸಾದಸ್ಥಲ ಎಂಬ ಮೂರನೆಯ ಅಂಗವಾಗಿ ರೂಪಗೊಳ್ಳುವುದು.

೪. ಅನುಭವಭಕ್ತಿ : ಪ್ರಸಾದಿಸ್ಥಲಗತವಾದ ಅವಧಾನ ಭಕ್ತಿಯೇ ಸ್ವಾನುಭಾವ (ಅನನ್ಯ ಶಿವಾನುಭವ)ದಿಂದ ಅನುಭವ ಭಕ್ತಿ ಎನಿಸಿತು. ಈ ಭಕ್ತಿಯಿಂದ ಆತ್ಮನಿಗೆ ಚರಲಿಂಗಯುಕ್ತವಾದ ಪ್ರಾಣಲಿಂಗಿಸ್ಥಲವೆಂಬ ನಾಲ್ಕನೆಯ ಅಂಗಸ್ಥಲವು ಪ್ರಾಪ್ತವಾಗುವುದು.

೫. ಆನಂದಭಕ್ತಿ : ಪ್ರಾಣಲಿಂಗಿಸ್ಥಲದಲ್ಲಿರುವ ಅನುಭವಭಕ್ತಿಯೇ ಆನಂದಯೋಗದಿಂದ (ಶಿವಾನುಭವದಿಂದುಂಟಾದ ಅಂತರಾನಂದಪ್ರಾಪ್ತಿಯಿಂದ) ಆನಂದಭಕ್ತಿ ಎಂದಾಯಿತು. ಈ ಭಕ್ತಿಯಿಂದ ಆತ್ಮನಿಗೆ ಪ್ರಸಾದಲಿಂಗಯುಕ್ತವಾದ ಶರಣಸ್ಥಲವೆಂಬ ಐದನೆಯ ಅಂಗಸ್ಥಲವು ಪ್ರಾಪ್ತವಾಗುವುದು.

೬. ಸಮರಸಭಕ್ತಿ : ಶರಣಸ್ಥಲದಲ್ಲಿರುವ ಆನಂದ ಭಕ್ತಿಯೇ ಅಂತರಾನಂದ ಮಗ್ನವಾಗಿ ಸಮರಸ ಭಕ್ತಿ ಎನಿಸುತ್ತದೆ. ಆದರಿಂದ ಮಹಾಲಿಂಗಯುಕ್ತನಾದ ಆತ್ಮನಿಗೆ ಐಕ್ಯಸ್ಥಲ ಸಮನಿಸುತ್ತದೆ.

ಹೀಗೆ ಭಕ್ತಿಯು ತಾನು ಸ್ವಕೀಯ ಸ್ಥಾನದಲ್ಲಿಯೇ ಇದ್ದು ಮೇಲೆ ಹೇಳಿದಂತೆ ಷಡಂಗಯೋಗಮಾರ್ಗದಿಂದ ಈಶ್ವರನನ್ನು ಸಾಧಿಸುತ್ತದೆ. ಎಂದರೆ, ಈಶ್ವರಸ್ವರೂಪ ಹೊಂದುತ್ತದೆ. ಸಾಧಕನಾದ ಜೀವನಿಗೆ ಈ ಭಕ್ತಿಯ ವಿಕಾಸದಿಂದ ಏಕಕಾಲದಲ್ಲಿಯೇ ಷಟ್‌ಸ್ಥಲ ಪ್ರಾಪ್ತವಾಗುತ್ತದೆ. ಇಲ್ಲಿ ಆಚಾರಾದಿ ಆರು ಲಿಂಗಗಳು ಸಾಧ್ಯ. ಭಕ್ತಾದಿಯಾದ ಆರು ಅಂಗಸ್ಥಲಗಳು ಸಾಧನ. ಆಚಾರಾದಿಯಲ್ಲಿ ಶಿವನು ಸಾಧ್ಯರೂಪನಾದರೆ, ಭಕ್ತಾದ್ಯಂಗಸ್ಥಲದಲ್ಲಿ ಆತ್ಮನು ಸಾಧಕನಾಗಿರುತ್ತಾನೆ. ಒಟ್ಟಿನಲ್ಲಿ ಆಚಾರಾದಿ ಲಿಂಗಗಳು ನಿವೃತ್ತಿಮಾರ್ಗದಿಂದ ಮಹಾಲಿಂಗದಲ್ಲಿಯೂ, ಭಕ್ತಾದಿ ಆರು ಸ್ಥಲಗಳು ಐಕ್ಯನಲ್ಲಿಯೂ ಬೆರೆತು ಸಮರಸವಾಗುತ್ತವೆ.

**ಕ್ರಿಯಾಜ್ಞಾನ ಸಮುಚ್ಚಯ:**

ಷಟ್‌ಸ್ಥಲವು ಕ್ರಿಯಾಜ್ಞಾನಪ್ರಧಾನವಾದ ದರ್ಶನ. ಕ್ರಿಯಾಪ್ರಧಾನವಾದದ್ದು ಸಾಧನಭಾಗ; ಜ್ಞಾನ ಪ್ರಧಾನವಾದದ್ದು ಸಿದ್ಧಾಂತಭಾಗ. ಜ್ಞಾನಶೂನ್ಯವಾದಕ್ರಿಯೆ; ಕ್ರಿಯಾಶೂನ್ಯವಾದಜ್ಞಾನ ಈ ಎರಡನ್ನೂ ಸಾಮಾನ್ಯವಾಗಿ ಎಲ್ಲ ತತ್ತ್ವವೇತ್ತರು ಒಪ್ಪಿಕೊಂಡಿದ್ದಾರೆ. ಇವೆರಡರಲ್ಲಿ ಪ್ರಾಣ-ಶರೀರಗಳಂತೆ ನಿಕಟವಾದ ಸಂಬಂಧವಿದೆ. ಈ ಬಗ್ಗೆ ಅಲ್ಲಮಪ್ರಭು:

ಕ್ರಿಯಾಮಥನವಿಲ್ಲದೆ ಕಾಣಬಂದುದೇ ಇಕ್ಷುವಿನೊಳಗಣ ಮಧುರ ?
ಕ್ರಿಯಾಮಥನವಿಲ್ಲದೆ ಕಾಣಬಂದುದೇ ತಿಲದೊಳಗಣ ತೈಲ ?
ಕ್ರಿಯಾಮಥನವಿಲ್ಲದೆ ಕಾಣಬಂದುದೇ ಕ್ಷೀರದೊಳಗಣ ಘೃತ ?
ಕ್ರಿಯಾಮಥನವಿಲ್ಲದೆ ಕಾಣಬಂದುದೇ ಕಾಷ್ಠದೊಳಗಣ ಅಗ್ನಿ ?
ಇದು ಕಾರಣ, ನಮ್ಮ ಗೊಹೇಶ್ವರ ಲಿಂಗವ ತನ್ನೊಳಜಿ(ರಿ)ದೆವೆಂಬ
ಮಹಂತಂಗಲ್ಲದೆ, ಸತ್ಕ್ರಿಯಾಚರಣೆಯೇ ಸಾಧನ ಕಾಣಿಭೋ.[೧೩೧]

೧೩೧. ಡಾ. ಎಲ್. ಬಸವರಾಜ(ಸಂ) ೧೯೮೬, ಅಲ್ಲಮನ ವಚನ ಚಂದ್ರಿಕೆ, ವಚನ ೭೬೧, ಪು. ೧೨೧.

ಎಂದು ಕ್ರಿಯಾಜ್ಞಾನದ ಮಹತ್ವವನ್ನು ಮನೋಜ್ಞವಾಗಿ ಹೇಳಿದ್ದಾನೆ.

ಜ್ಞಾನಕರ್ಮಗಳು ಒಂದಾಗದಿದ್ದರೆ ಪರಮಪುರುಷಾರ್ಥವಾದ ಲಿಂಗಾಂಗಸಾಮರಸ್ಯವು ಕೈಗೂಡದು. ನಿರ್ಮಲನಾದ ದೀಕ್ಷಿತನು ಕ್ರಿಯಾಜ್ಞಾನದಿಂದಲೇ ಸರ್ವಾಂಗಲಿಂಗಿ ಎನಿಸಿಕೊಳ್ಳುತ್ತಾನೆ.

ಕೇವಲಾದ್ವೈತದಲ್ಲಿ ಕರ್ಮಜ್ಞಾನಗಳು ವಿಷಮಸಮುಚ್ಚಯವಾಗಿವೆ. ಕರ್ಮಕಾಲದಲ್ಲಿ ಜ್ಞಾನವಿಲ್ಲ; ಜ್ಞಾನದ ಸಂದರ್ಭದಲ್ಲಿ ಕರ್ಮವಿಲ್ಲ, ಎಂಬುದೇ ಅದ್ವೈತದ ಅಭಿಪ್ರಾಯ. ಈ ಅಭಿಪ್ರಾಯವನ್ನು ವೀರಶೈವವು ಒಪ್ಪಿರುವುದಿಲ್ಲ. ಕೇವಲಾದ್ವೈತದ ಪ್ರಕಾರ ಕರ್ಮದಫಲವೇ ಬೇರೆ, ಜ್ಞಾನದಫಲವೇ ಬೇರೆ. ಕೇವಲ ಕರ್ಮದಿಂದ ಮುಕ್ತಿ ಎಂಬುದು ದ್ವೈತಿಗಳಾದ ಮೀಮಾಂಸಕರ ಅಭಿಪ್ರಾಯ. ಕೇವಲ ಜ್ಞಾನದಿಂದಲೇ ಮುಕ್ತಿ ಎಂದು ಅದ್ವೈತವಾದಿಸಿದೆ. ಆದರೆ ಶಿವಾದ್ವೈತವು ಕ್ರಿಯಾ-ಜ್ಞಾನ ಸಮಸಮುಚ್ಚಯವನ್ನೇ ಒತ್ತಿಹೇಳುತ್ತದೆ.

ಷಟ್‌ಸ್ಥಲಾನಿ ವಿಭಾಗೇನ ದ್ವಿವಿಧಾನಿ ಪರಸ್ಪರಂ ।
ಜ್ಞಾನಾತ್ಮಕತಯಾ ತ್ರೀಣಿ ಕ್ರಿಯಾತ್ಮಕತಯಾ ತಥಾ ॥[೧೩೨]

ಈ ಕ್ರಿಯಾಜ್ಞಾನ ಸಮುಚ್ಚಯವನ್ನು ಸಕೀಲಗಳು ಅರ್ಥವತ್ತಾಗಿ ವಿವರಿಸುತ್ತವೆ.

## ಅಷ್ಟವಿಧ ಸಕೀಲಗಳು

| ಅಂಗಸ್ಥಲ | ಲಿಂಗಸ್ಥಲ | ಭಕ್ತಿ | ಶಕ್ತಿ | ಹಸ್ತ | ಮುಖ | ಪದಾರ್ಥ | ಪ್ರಸಾದ | ಅಂಗ. ಪಂಚ ಭೂತಗಳು | ಅವಸ್ಥಾ | ಶರೀರ |
|---|---|---|---|---|---|---|---|---|---|---|
| ಐಕ್ಯಸ್ಥಲ | ಮಹಾ ಲಿಂಗ | ಸಮರಸ ಭಕ್ತಿ | ಚಿಚ್ಛಕ್ತಿ | ಸದ್ಭಾವ ಹಸ್ತ | ಹೃದಯ | ತೃಪ್ತಿ ಪದಾರ್ಥ | ಪರಿಣಾಮ (ತೃಪ್ತಿ) | ಆತ್ಮಾ | ಸುಷುಪ್ತಿ ಅವಸ್ಥೆ | ಕಾರಣ ಶರೀರ |
| ಶರಣಸ್ಥಲ | ಪ್ರಸಾದ ಲಿಂಗ | ಆನಂದ ಭಕ್ತಿ | ಪರಾಶಕ್ತಿ | ಸುಜ್ಞಾನ ಹಸ್ತ | ಶ್ರೋತ್ರ (ಕರ್ಣ) | ಶಬ್ದ ಪದಾರ್ಥ | ಸುಶಬ್ದ | ಆಕಾಶ | | |
| ಪ್ರಾಣಲಿಂಗಿ ಸ್ಥಲ | ಜಂಗಮ ಲಿಂಗ | ಅನುಭಾವ ಭಕ್ತಿ | ಆದಿಶಕ್ತಿ | ಸುಮನ ಹಸ್ತ | ತ್ವಚ | ಸ್ಪರ್ಶ ಪದಾರ್ಥ | ಸುಸ್ಪರ್ಶ | ವಾಯು | ಸ್ವಪ್ನಾವಸ್ಥೆ | ಸೂಕ್ಷ್ಮ ಶರೀರ |
| ಪ್ರಸಾದಿ ಸ್ಥಲ | ಶಿವ ಲಿಂಗ | ಅವಧಾನ ಭಕ್ತಿ | ಇಚ್ಛಾಶಕ್ತಿ | ನಿರಹಂಕಾರ ಹಸ್ತ | ನೇತ್ರ | ರೂಪ ಪದಾರ್ಥ | ಸುರೂಪು | ತೇಜ | | |
| ಮಹೇಶ ಸ್ಥಲ | ಗುರು ಲಿಂಗ | ನಿಷ್ಠಾಭಕ್ತಿ | ಜ್ಞಾನಶಕ್ತಿ | ಸುಬುದ್ಧಿ ಹಸ್ತ | ಜಿಹ್ವಾ | ರಸ ಪದಾರ್ಥ | ಸುರಸ | ಜಲ | ಜಾಗ್ರತಾವಸ್ಥೆ | ಸ್ಥೂಲ ಶರೀರ |
| ಭಕ್ತಸ್ಥಲ | ಆಚಾರ ಲಿಂಗ | ಶ್ರದ್ಧಾಭಕ್ತಿ | ಕ್ರಿಯಾಶಕ್ತಿ | ಸುಚಿತ್ತ ಹಸ್ತ | ನಾಸಿಕಾ | ಗಂಧ ಪದಾರ್ಥ | ಸುಗಂಧ | ಪೃಥ್ವೀ | | |

೧೩೨. ಶಿವಾನುಭವಸೂತ್ರಂ, ಅಧಿಕರಣ ೪, ಶ್ಲೋಕ ೪೧.

ಅಷ್ಟವಿಧ ಸಕೀಲಗಳು: 'ಕೀಲು' ಎರಡು ಬಿಡಿಬಿಡಿ ಭಾಗಗಳನ್ನು ಜೋಡಿಸುತ್ತದೆ ಅರ್ಥಾತ್ ಸಂಬಂಧಪಡಿಸುತ್ತದೆ. 'ಸಕೀಲ' ಎಂದರೆ ಸಂಬಂಧಪಡಿಸುವುದು ಮತ್ತು ಸಮರಸಗೊಳಿಸುವುದು. ಲಿಂಗಸಕೀಲು ಲಿಂಗಅಂಗಗಳನ್ನು ಸಂಬಂಧಪಡಿಸಿ ಸಮರಸಗೊಳಿಸುತ್ತದೆ. ಸಕೀಲಗಳು ಐದು ವಿಧವಾಗಿವೆ. ೧. ಷಡ್ವಿಧಸಕೀಲಗಳು, ೨. ಅಷ್ಟವಿಧ ಸಕೀಲಗಳು, ೩. ೩೬ ವಿಧಸಕೀಲಗಳು, ೪. ೨೧೬ ಸಕೀಲಗಳು, ೫. ೧೦೮ ವಿಧಸಕೀಲಗಳು.[೧೩೩] ಇವುಗಳಲ್ಲಿ ಮಾಯಿದೇವನು ಶಿವಾನುಭವಸೂತ್ರದಲ್ಲಿ ಅಷ್ಟವಿಧ ಸಕೀಲಗಳನ್ನಷ್ಟೇ ಪ್ರತಿಪಾದಿಸಿದ್ದಾನೆ. ಅವು 'ಸರ್ವಾಂಗಲಿಗಸಾಹಿತ್ಯ' ಹಾಗೂ 'ಅರ್ಪಣಸದ್ಭಾವ' ಎಂದು ಆರನೆಯ ಹಾಗೂ ಎಂಟನೆಯ ಅಧಿಕರಣದಲ್ಲಿ ನಾಮಾಂತರಗೊಂಡಿವೆ.

**ಸರ್ವಾಂಗಲಿಂಗಸಾಹಿತ್ಯ:**

ಏಕಮೇವ ಪರಂ ಲಿಂಗಮಂಗೇಽಸ್ಮಿನ್ ಸುಪ್ರತಿಷ್ಠಿತಂ ।
ಸರ್ವತೋ ಮುಖಮಾಭಾತಿ ನಾಮರೂಪ ಕ್ರಿಯಾತ್ಮನಾ ॥[೧೩೪]

ಒಂದೇ ಪರಶಿವಲಿಂಗವು ನಾಮ, ರೂಪು, ಕ್ರಿಯೆಗಳ ಸ್ವರೂಪದಿಂದ ಸರ್ವತೋಮುಖವಾಗಿ ಅಂಗನಲ್ಲಿ ಬೆಳಗುತ್ತದೆ. ಇದೇ ಸರ್ವಾಂಗಲಿಂಗಸಾಹಿತ್ಯ.

ಇಂದ್ರಿಯಗಳಿಂದಾಗುವ ಕ್ರಿಯೆಗಳೆಲ್ಲವೂ ಲಿಂಗಕ್ರಿಯೆಗಳು; ಇಂದ್ರಿಯಗಳ ಮುಖವಾಗಿ ಬರುವ ಭೋಗವೆಲ್ಲವೂ ಲಿಂಗಪ್ರಸಾದ. ಒಂದು ಲಿಂಗವೇ ಮೂರು ಶರೀರಗಳಲ್ಲಿ ಇಷ್ಟ, ಪ್ರಾಣ, ಭಾವಲಿಂಗವೆಂದು ಮೂರು ರೂಪಾದಂತೆ, ಆ ಮೂರು ಲಿಂಗಗಳು ಆರು ಇಂದ್ರಿಯಗಳನ್ನು ಹೊಂದಿ ಆಚಾರಲಿಂಗ, ಗುರು-ಶಿವ-ಜಂಗಮ-ಪ್ರಸಾದ-ಮಹಾಲಿಂಗವೆಂದು ಆರು ಲಿಂಗಗಳಾಗುತ್ತವೆ.[೧೩೫] ಈ ಆರು ಲಿಂಗಗಳು, ಕರ್ಮೇಂದ್ರಿಯ ಹಾಗೂ ಜ್ಞಾನೇಂದ್ರಿಯಗಳಲ್ಲಿ ಕೆಳಗಿನಂತೆ ಪ್ರಕಾಶಗೊಳ್ಳುತ್ತವೆ.

| ಕರ್ಮೇಂದ್ರಿಯಗಳು | ಜ್ಞಾನೇಂದ್ರಿಯಗಳು | ಲಿಂಗಗಳು |
|---|---|---|
| ೧. ಗುದ | ನಾಸಿಕಾ | ಆಚಾರಲಿಂಗ |
| ೨. ಗುಹ್ಯ | ಜಿಹ್ವಾ | ಗುರುಲಿಂಗ |
| ೩. ಪಾದ | ನೇತ್ರ | ಶಿವಲಿಂಗ |
| ೪. ಪಾಣಿ (ಹಸ್ತ) | ತ್ವಚ | ಜಂಗಮಲಿಂಗ |
| ೫. ವಾಕ್ | ಶೋತ್ರ (ಕರ್ಣ) | ಪ್ರಸಾದಲಿಂಗ |
| ೬. ಹೃದಯ | ಹೃದಯ | ಮಹಾಲಿಂಗ |

ಮೂಸಿಸುವದು ಆಚಾರಲಿಂಗದಕ್ರಿಯೆ; ಗಂಧ (ವಾಸನೆ) ಆಚಾರಲಿಂಗದ ಭೋಗ. ರುಚಿಸುವದು ಗುರುಲಿಂಗದ ಕ್ರಿಯೆ; ರುಚಿಯು ಗುರುಲಿಂಗದ ಭೋಗ. ನೋಡುವುದು ಶಿವಲಿಂಗದ ಕ್ರಿಯೆ; ನೋಟವು ಶಿವಲಿಂಗದ

---

೧೩೩. ಶ್ರೀ ಮುರಿಗೆಪ್ಪಾ ವೀರಪ್ಪಾ ಎಲಿ ಹಂಸಭಾವಿ (೧೯೬೩) ಲಿಂಗಸಕೀಲಗಳು, ಪು. ೯.

೧೩೪. ಶಿವಾನುಭವಸೂತ್ರಂ, ಅಧಿಕರಣ ೬, ಶ್ಲೋಕ ೪.

೧೩೫. ಅದೇ, ಶ್ಲೋಕ ೫-೧೧.

ಭೋಗ. ಸ್ಪರ್ಶಿಸುವದು ಜಂಗಮಲಿಂಗದ ಕ್ರಿಯೆ; ಸ್ಪರ್ಶವು ಜಂಗಮಲಿಂಗದ ಭೋಗ (ತೃಪ್ತಿ). ಕೇಳುವದು ಪ್ರಸಾದಲಿಂಗದ ಕ್ರಿಯೆ; ಶಬ್ದವು ಪ್ರಸಾದಲಿಂಗ ಭೋಗ. ಗಂಧ, ರಸ, ರೂಪ, ಸ್ಪರ್ಶ, ಶಬ್ದ ಇವೆಲ್ಲವುಗಳ ತೃಪ್ತಿ ಹೃದಯಮುಖವಾಗಿ ಮಹಾಲಿಂಗಕ್ಕೆ ಸಲ್ಲುತ್ತದೆ.

ಡಾ. ಜ.ಚ.ನಿ.ಯವರು ಕರ್ಮೇಂದ್ರಿಯ, ಜ್ಞಾನೇಂದ್ರಿಯ, ಲಿಂಗ - ಈ ಮೂರರ ಸಂಬಂಧ ಕುರಿತು ಹೀಗೆ ಹೇಳಿದ್ದಾರೆ :

"ಶ್ರೋತ್ರ-ವಾಕ್ ಎರಡೂ ಒಂದೇ ಆಕಾಶಾಂಗಜನ್ಯಗಳು. ಎರಡಕ್ಕೂ ಶಬ್ದವೇ ಗುಣ. ಒಂದು ಕೇಳಿದರೆ ಇನ್ನೊಂದು ಹೇಳುವುದು. ತ್ವಚೆಗೂ ಕೈಗೂ ಭೇದವಿಲ್ಲ. ಎರಡೂ ವಾಯ್ವಂಗಜನ್ಯ. ಎರಡಕ್ಕೂ ಸ್ಪರ್ಶವೆ ವಿಷಯ. ನೇತ್ರಪಾದಗಳು ಅಗ್ನಿಜನ್ಯ. ಕಣ್ಣು ನೋಡಿದ ಬಳಿಕ ಕಾಲು ನಡೆಯುತ್ತದೆ. ಜಿಹ್ವೆ ಗುಹ್ಯಗಳು ಜಲಜನ್ಯ. ರಸಾನಂದ ವಿಷಯ. ಘ್ರಾಣ ಗುದಗಳೆರಡು ಪೃಥ್ವಿಜನ್ಯ. ಎರಡಕ್ಕೂ ಗಂಧ ವಿಷಯ. ಇವುಗಳಿಗೆಲ್ಲ ಹೃದಯವೇ ಮೂಲ".[೧೩೬] ಹೀಗೆ ಇಂದ್ರಿಯಗಳು ಮುಖಗಳಾಗಿ ಪರಿಣಮಿಸುತ್ತವೆ.

**ಅಧಿದೇವತೆಗಳು:**

ಶ್ರೋತ್ರ, ವಾಕ್, ಶಬ್ದ, ಆಕಾಶ ಇವುಗಳಿಗೆ ಈಶ್ವರನ ಈಶಾನಮೂರ್ತಿಯೂ, ತ್ವಕ್, ಪಾಣಿ, ಸ್ಪರ್ಶ, ವಾಯು ಇವುಗಳಿಗೆ ತತ್ಪುರುಷಮೂರ್ತಿಯೂ, ನೇತ್ರ, ಪಾದ, ರೂಪ, ಅಗ್ನಿ ಇವುಗಳಿಗೆ ಅಘೋರಮೂರ್ತಿಯೂ, ಜಿಹ್ವೆ, ಗುಹ್ಯ, ರಸ, ಜಲ ಇವುಗಳಿಗೆ ವಾಮದೇವಮೂರ್ತಿಯೂ, ನಾಸಿಕ, ಗುದ, ಗಂಧ, ಭೂಮಿ ಇವುಗಳಿಗೆ ಸದ್ಯೋಜಾತಮೂರ್ತಿಯೂ ಅಧಿದೈವಗಳಾಗಿರುವವು.

**ಲಿಂಗಮುಖ:**

ಮಹಾಲಿಂಗಕ್ಕೆ ಹೃದಯವೇ ಮುಖ. ಪ್ರಸಾದಲಿಂಗಕ್ಕೆ ಶ್ರೋತ್ರವಾಕ್ಕುಗಳು ಮುಖ. ಚರಲಿಂಗಕ್ಕೆ ತ್ವಕ್ಕು ಪಾಣಿಗಳು ಮುಖ. ಶಿವಲಿಂಗಕ್ಕೆ ನೇತ್ರ ಪಾದಗಳು ಮುಖ. ಗುರುಲಿಂಗಕ್ಕೆ ಜಿಹ್ವೆ-ಗುಹ್ಯಗಳು ಮುಖ. ಆಚಾರಲಿಂಗಕ್ಕೆ ನಾಸಿಕ ಪಾಯುಗಳು ಮುಖ. (ಈ ಬಗೆಗಿನ ವಿವರವನ್ನು 'ಅಷ್ಟವಿಧ ಸಕೀಲ'ಗಳಲ್ಲಿ ನಿರೂಪಿಸಲಾಗಿದೆ).

**ಭಕ್ತಾದಿ ಷಟ್‌ಸ್ಥಲಗಳ-ಷಡ್ವಿಧ ಹಸ್ತಗಳು**

ಭಾವಷಟ್ಕ: ಭಾವ, ಜ್ಞಾನ, ಮನಸ್ಸು, ಅಹಂಕಾರ, ಬುದ್ಧಿ, ಚಿತ್ತಗಳಿಗೆ ಭಾವಷಟ್ಕ ಎಂದು ಹೆಸರು. ಭಾವದಿಂದ ಜ್ಞಾನ; ಜ್ಞಾನದಿಂದ ಮನಸ್ಸು; ಮನಸ್ಸಿನಿಂದ ಅಹಂಕಾರ; ಅಹಂಕಾರದಿಂದ ಬುದ್ಧಿ; ಬುದ್ಧಿಯಿಂದ ಚಿತ್ತಗಳು ಸಂಭವಿಸುತ್ತವೆ. ಪ್ರತಿಯೊಂದು ವಸ್ತುವಿನ ಅಸ್ತಿತ್ವವೇ ಮನುಷ್ಯನಲ್ಲಿ ಉಂಟಾಗುವ ಮೊದಲ ಸ್ಫುರಣ. ವಸ್ತುಸತ್ತೆಯೇ ಭಾವ. ವಸ್ತುವನ್ನು ತಿಳಿವುದು ಜ್ಞಾನ. ತಿಳಿದದ್ದನ್ನು ಮನನ ಮಾಡುವುದು ಮನಸ್ಸು. ಮನನ ವಿಷಯವನ್ನು ನನ್ನದೆಂದು ಅಭಿಮಾನಿಸುವುದು ಅಹಂಕಾರ. ಅಹಂಕಾರವನ್ನು ನಿರ್ಧರಿಸುವುದು ಬುದ್ಧಿ. ನಿಶ್ಚಿತವಾದದ್ದನ್ನು ಸ್ಥೈರ್ಯದಿಂದ ಇಟ್ಟುಕೊಳ್ಳುವುದು ಚಿತ್ತ. ಇವೇ ಭಾವಾದಿಷಟ್ಕ ಮತ್ತು ಹಸ್ತವೆನಿಸಿವೆ.

---

೧೩೬. ಶತಕತ್ರಯ ಪ್ರವಚನ, ಪು. ೯೯.

೧. ಭಕ್ತನಿಗೆ ಚಿತ್ತವೇ ಹಸ್ತ
೨. ಮಹೇಶನಿಗೆ ಬುದ್ಧಿಯೇ ಹಸ್ತ
೩. ಪ್ರಸಾದಿಗೆ ಅಹಂಕಾರವೇ ಹಸ್ತ
೪. ಪ್ರಾಣಲಿಂಗಿಗೆ ಮನಸ್ಸೇ ಹಸ್ತ
೫. ಶರಣನಿಗೆ ಜ್ಞಾನವೇ ಹಸ್ತ
೬. ಐಕ್ಯನಿಗೆ ಭಾವವೇ ಹಸ್ತ

ಭಕ್ತಾದಿಸ್ಥಲಗಳ ಅಂಗಲಿಂಗಹಸ್ತಗಳು:

೧. ಆತ್ಮಾಂಗದಲ್ಲಿ ಭಾವಹಸ್ತದಿಂದ ಮಹಾಲಿಂಗಾರ್ಚನ ತತ್ಪರವಾದದ್ದು ಐಕ್ಯಸ್ಥಲ.
೨. ವ್ಯೋಮಾಂಗದಲ್ಲಿ ಜ್ಞಾನಹಸ್ತದಿಂದ ಪ್ರಸಾದಲಿಂಗಾರ್ಚನ ತತ್ಪರವಾದದ್ದು ಶರಣಸ್ಥಲ.
೩. ಅನಿಲಾಂಗದಲ್ಲಿ ಮನೋಹಸ್ತದಿಂದ ಚರಲಿಂಗಾರ್ಚನ ತತ್ಪರವಾದದ್ದು ಪ್ರಾಣಲಿಂಗಿಸ್ಥಲ.
೪. ಅನಲಾಂಗದಲ್ಲಿ ಅಹಂಕಾರಹಸ್ತದಿಂದ ಶಿವಲಿಂಗಾರ್ಚನ ತತ್ಪರವಾದದ್ದು ಪ್ರಸಾದಿಸ್ಥಲ.
೫. ಜಲಾಂಗದಲ್ಲಿ ಬುದ್ಧಿಹಸ್ತದಿಂದ ಗುರುಲಿಂಗಾರ್ಚನ ತತ್ಪರವಾದದ್ದು ಮಾಹೇಶ್ವರಸ್ಥಲ.
೬. ಭೂಮ್ಯಂಗದಲ್ಲಿ ಚಿತ್ತಹಸ್ತದಿಂದ ಆಚಾರಲಿಂಗಾರ್ಚನ ತತ್ಪರವಾದದ್ದು ಭಕ್ತಸ್ಥಲ.

ಹೀಗೆ ಭಕ್ತಾದಿ ಐಕ್ಯಾಂತವಾದ ಷಡಂಗಸ್ಥಲಗಳಲ್ಲಿ ಆಚಾರಾದಿ ಷಡ್ವಿಧಲಿಂಗಗಳ ಅರ್ಚನೆಗೆ ಹಸ್ತಗಳೆಂದು ಕರೆಯಲಾಗಿದೆ. ಹೀಗೆ ಹೇಳಲಾದ ಚಿತ್ತಾದಿಗಳು ಅಂಗಪದವಾಚ್ಯನಾದ ಶುದ್ಧಜೀವನಿಗೆ ಸುಚಿತ್ತ, ಸುಬುದ್ಧಿ, ನಿರಂಹಕಾರ, ಸುಮನಸ್ಸು, ಸುಜ್ಞಾನ, ಸದ್ಭಾವ ಎಂಬ ರೂಪದಿಂದ ಪರಿಣಮಿಸಿದ ಇವು, ಷಟ್ಕರ್ಮಗಳೆನಿಸಿಕೊಂಡಿವೆ.

ಷಟ್‌ಚಕ್ರಗಳಲ್ಲಿ ನಕಾರಾದಿ ಪ್ರಣವಗಳು:

ಹಿಂದೆ ದೀಕ್ಷಿತನಾದ ವೀರಶೈವನ ಶರೀರವು ಮಂತ್ರಸ್ವರೂಪವಾಗಿರುವುದಾಗಿ ನಿರೂಪಿಸಲಾಗಿತ್ತು. ಈಗ ಷಟ್‌ಚಕ್ರಗಳಲ್ಲಿರುವ ಅವುಗಳ ಸ್ವರೂಪ ಕುರಿತು ನೋಡಬಹುದು.[೧೩೬]

| ಚಕ್ರಗಳು | ಪ್ರಣವಗಳು | ಲಿಂಗಗಳು | ಶರೀರ |
|---|---|---|---|
| ೧. ಆಧಾರ | ನಕಾರ | ಆಚಾರಲಿಂಗ | ರುಧಿರ |
| ೨. ಸ್ವಾದಿಷ್ಠಾನ | ಮಕಾರ | ಗುರುಲಿಂಗ | ಮಾಂಸ |
| ೩. ಮಣಿಪೂರಕ | ಶಿಕಾರ | ಶಿವಲಿಂಗ | ಮೇಧಸ್ಸು |
| ೪. ಅನಾಹತ | ವಾಕಾರ | ಚರಲಿಂಗ | ಅಸ್ಥಿ |
| ೫. ವಿಶುದ್ಧಿ | ಯಕಾರ | ಪ್ರಸಾದಲಿಂಗ | ಮಜ್ಜೆ |
| ೬. ಆಜ್ಞೇಯ | ಓಂಕಾರ | ಮಹಾಲಿಂಗ | ತ್ವಕ್ |

೧೩೬. ಫ.ಗು. ಹಳಕಟ್ಟಿ (೧೯೫೨) ಪ್ರಾಣಲಿಂಗ ಜ್ಞಾನದರ್ಪಣ ಚಾರಿತ್ರ. ಈ ಕೃತಿಯಲ್ಲಿ ಷಟ್‌ಚರಣಗಳನ್ನು ಸಾದ್ಯಂತವಾಗಿ ವಿವರಿಸಲಾಗಿದೆ.

ಮಾಯಿದೇವನು ಪಂಚಾಕ್ಷರಿಮಹಾಮಂತ್ರವು ಲಿಂಗಾಂಗ ಸಾಮರಸ್ಯ ಬೋಧಿಸುವುದಾಗಿ ಹೀಗೆ ಹೇಳಿದ್ದಾನೆ.

ನಮಃ ಪದಂ ತತ್ವಲು ಜೀವವಾಚಿ, ಶಿವಃ ಪದಂ ತತ್ಪರಮಾತ್ಮವಾಚಿ ।
ಆಯೇತಿ ತಾದಾತ್ಮ್ಯಪದಂ ತದೇತನ್ನಮಃ ಶಿವಾಯೇತಿ ಜಗಾದ ಮಂತ್ರಃ ॥[೧೩೮]

ಎಂದರೆ, 'ನಮಃ ಶಿವಾಯ' ಎಂಬ ಪದಗಳಲ್ಲಿರುವ 'ನಮಃ' ಪದವೇ ಅಂಗ. 'ಶಿವಃ' ಪದವೇ ಲಿಂಗ. 'ಅಯ' ಪದವೇ ಲಿಂಗಾಂಗಸಂಬಂಧ. ಇವು ಕ್ರಮವಾಗಿ ಜೀವವಾಚಕ, ಪರಮಾತ್ಮವಾಚಕ ಹಾಗೂ ಜೀವಪರಮಾತ್ಮರ ತಾದಾತ್ಮ್ಯಬೋಧಕವಾಗಿವೆ.

ದೇಹದ ಗುದ, ಗುಹ್ಯ, ನಾಭಿ, ಹೃದಯ, ಕಂಠ, ಭ್ರೂಮಧ್ಯದಲ್ಲಿರುವ ಆರು ಸ್ಥಾನಗಳಲ್ಲಿ ಆರು ಚಕ್ರಗಳು, ಆರು ಪ್ರಣವಗಳು, ಆಚಾರಾದಿ ಲಿಂಗರೂಪದಿಂದಿರುವುದಾಗಿ ಹೇಳಲಾಗುತ್ತದೆ. ಅದರ ವಿವರಣೆ ಕೆಳಗಿನಂತಿದೆ.

| | | | | | |
|---|---|---|---|---|---|
| | | | **ದೇಹದ ಭಾಗಗಳು** | | |
| ಗುದ | ಗುಹ್ಯ | ನಾಭಿ | ಹೃದಯ | ಕಂಠ | ಭ್ರೂಮಧ್ಯ |
| | | | **ಷಟ್‌ಚಕ್ರಗಳು** | | |
| ಆಧಾರ | ಸ್ವಾದಿಷ್ಠಾನ | ಮಣಿಪೂರಕ | ಅನಾಹತ | ವಿಶುದ್ಧ | ಆಜ್ಞೇಯ |
| | | | **ಪ್ರಣವಗಳು** | | |
| ನ | ಮಃ | ಶಿ | ವಾ | ಯ | ಓಂ |
| | | | **ದಳ** | | |
| ೪ ದಳ | ೬ ದಳ | ೧೦ ದಳ | ೧೨ ದಳ | ೧೬ ದಳ | ೨ ದಳ |
| ವ.ಶ.<br>ಷ.ಸ. | ಬ.ಭ.ಮ.<br>ಯ.ರ.ಲ. | ಡ.ಢ.ಣ.ತ.ಥ<br>ದ.ಧ.ನ.ಪ.ಫ | ಕ.ಖ.ಗ.ಘ.ಙ.ಚ<br>ಛ.ಜ.ಝ.ಞ.ಟ.ಠ | ಅ.ಆ.ಇ.ಈ.<br>ಉ.ಊ.ಋ.ೠ.<br>ಌ.ೡ.ಎ.ಐ.ಓ.ಔ.ಅಂ.ಅಃ | ಹಂ.ಕ್ಷಂ |

ಹೀಗೆ ಶಿವದೀಕ್ಷಿತನ ದೇಹವು ಷಡಕ್ಷರಮಂತ್ರಮಯ. ಆದ್ದರಿಂದ ಅವನು ಷಟ್‌ಸ್ಥಲಾಚರಣದಿಂದ ಶಿವಾನಂದವನ್ನು ಅನುಭವಿಸುತ್ತಾನೆ.

**ಷಟ್‌ಸ್ಥಲಾನುಸಂಧಾನ (ಮೋಕ್ಷ):**

ಷಟ್‌ಸ್ಥಲವು ಮಾನಸಿಕವಾಗಿ ಪರಮಾತ್ಮನನ್ನು ಅನುಸಂಧಾನಮಾಡುವ ಮಹಾಮಾರ್ಗ. ಇಲ್ಲಿ ಒಂದನ್ನು ಬಿಟ್ಟು ಇನ್ನೊಂದನ್ನು ಪಡೆಯುವ ಮೋಕ್ಷವೆಂಬುದೇ ಇಲ್ಲ. ಮೋಕ್ಷವೆಂದರೆ 'ಬಿಡು' (ಮುಚ) ಎಂದಾಗುತ್ತದೆ. ಆತ್ಮನು

---
೧೩೮. ಶಿವಾನುಭವಸೂತ್ರಂ, ಅಧಿಕರಣ ೬, ಶ್ಲೋಕ ೪೬.

ದೇಹವನ್ನು ಬಿಟ್ಟು ಹೋಗುವುದೇ ಮೋಕ್ಷವೆಂದು ಕೆಲವರ ಮತ. ಆದರೆ, ಷಟ್‌ಸ್ಥಲದಲ್ಲಿ ಹಿಂದೆ ಹೇಳಿದಂತೆ ಜೀವಾತ್ಮನು ದೇಹಸಹಿತವಾಗಿಯೇ ಪ್ರಸಾದಕಾಯವಾಗುತ್ತಾನೆ. ಹೀಗೆ ಕಾಯವನ್ನು ಪ್ರಸಾದಮಯವನ್ನಾಗಿ ಮಾಡುವಲ್ಲಿ ಇಂದ್ರಿಯಗಳು ವಿಷಯವ್ಯಾಮೋಹ ಬಿಟ್ಟು ಲಿಂಗಪಥ ಅನುಸರಿಸುತ್ತವೆ. ಆಂತರಿಕಾವಾದ ಈ ಮಾರ್ಪಾಟು ಷಟ್‌ಸ್ಥಲದ ಉದ್ದೇಶ. ಲೀಲೆಗೆಂದು ಎರಡಾದ ಲಿಂಗವು ಅಂಗನಿಗಾಗಿಯೇ ಮತ್ತೆ ಲಿಂಗವಾಗಿ ಬಂದಿತು. ಅಂಗನ ಸ್ಥೂಲ, ಸೂಕ್ಷ್ಮ, ಕಾರಣ ತನುವಿಡಿದು ಇಷ್ಟ, ಪ್ರಾಣ, ಭಾವವೆಂದು ಮೂರಾಯಿತು. ಷಡಿಂದ್ರಿಯಗಳು ಅನುವಿಡಿದು ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗ ಎಂದು ಆರು ಬಗೆಯಾಗಿ ನಾಸಿಕ, ಜಿಹ್ವೆ, ನೇತ್ರ, ತ್ವಕ್ಕು, ಶ್ರೋತ್ರ, ಆತ್ಮ - ಈ ಷಡಿಂದ್ರಿಯಗಳಲ್ಲಿ ನೆಲೆಗೊಂಡಿತು. 'ಅಂಗದಕ್ರಿಯೆಗಳು ಲಿಂಗದ ಕ್ರಿಯೆಗಳಾಗಬೇಕು: ಪದಾರ್ಥ ಪ್ರಸಾದವಾಗಬೇಕು' ಎಂಬುದೇ ಷಟ್‌ಸ್ಥಲದ ಉದ್ದೇಶ. ಇಲ್ಲಿರುವುದು ಪರಿಪೂರ್ಣಯೋಗ (Integral Philosophy). ಆ ಪರಿಪೂರ್ಣಯೋಗಾನುಸಂಧಾನದಲ್ಲಿ ಷಡಿಂದ್ರಿಯಗಳು ತಮ್ಮಲ್ಲಿ ನೆಲೆನಿಂದ ಲಿಂಗವನ್ನೇ ಆರಾಧಿಸಿ ಲಿಂಗವೇ ಆಗಬೇಕು; ಆ ಆ ಇಂದ್ರಿಯದ ವಿಷಯಗಳು ಪ್ರಸಾದವಾಗಿ ಲಿಂಗಭೋಗೋಪಭೋಗವಾಗಬೇಕು. ಇದು ಸದಾಚಾರ. ಸತ್ಕ್ರಿಯೆಗಳಿಂದ ಸಾಧ್ಯವಾಗುತ್ತದೆ. ಅದೇ ಷಟ್‌ಸ್ಥಲಾನುಸಂಧಾನ.

**ಭಕ್ತಸ್ಥಲ:**

ಭಕ್ತಸ್ಥಲಯುಕ್ತನಾದ ಸಾಧಕ (ಅಂಗ)ನು ಪೃಥ್ವಂಗದಲ್ಲಿ ನಿಂತು ಕ್ರಿಯಾಶಕ್ತಿಯುಕ್ತವಾದ ಆಚಾರಲಿಂಗವನ್ನು ಶ್ರದ್ಧಾಭಕ್ತಿಯಿಂದ ಅರ್ಚಿಸುವನು. ಅಂದರೆ, ಶ್ರದ್ಧೆಯಿಂದ ಆಚರಿಸಿದ ಕ್ರಿಯೆಯೇ ಲಿಂಗವಾಗುತ್ತದೆ; ಅವನ ಚಿತ್ತ ಸುಚಿತ್ತವಾಗುತ್ತದೆ. ಆ ಸುಚಿತ್ತವೇ ಹಸ್ತವಾಗಿ ಪೃಥ್ವಿಗುಣವಾದ ಗಂಧಪದಾರ್ಥವನ್ನು ಗ್ರಹಿಸಿ ಘ್ರಾಣೇಂದ್ರಿಯ ಮುಖದಲ್ಲಿ ಆಚಾರಲಿಂಗಕ್ಕೆ ಅರ್ಪಿಸುವುದು.

**ಮಹೇಶ್ವರಸ್ಥಲ:**

ಆಚಾರಲಿಂಗದ ಗಂಧಪ್ರಸಾದವನ್ನು ಭೋಗಿಸಿದ ಲಿಂಗಭೋಗೋಪಭೋಗಿಯಾದ ಭಕ್ತನ ಶ್ರದ್ಧೆ ಬಲಿತು ನಿಷ್ಠೆಯಾಗುತ್ತದೆ. ಭಕ್ತನು ಮಹೇಶ್ವರನಾಗುತ್ತಾನೆ. ಶ್ರದ್ಧಾಭಕ್ತಿಯನ್ನು ಆಚರಿಸಿದ ಸದ್ಭಕ್ತನಿಗೆ ತನ್ನ ಪ್ರಸಾದದ ಫಲವಾಗಿ ಶ್ರದ್ಧಾಭಕ್ತಿಯಲ್ಲಿ ಕೃತನಿಶ್ಚಯ ನೆಲೆಗೊಂಡು ನಿಷ್ಠೆಯಾಗುತ್ತದೆ. ವಿಷಯದ ಪರವಾಗಿದ್ದ ಪ್ರೇಮ, ವಿಶ್ವಾಸಗಳು ಭಕ್ತಸ್ಥಲದಲ್ಲಿ ಲಿಂಗದ ಪರವಾಗಿ ಶ್ರದ್ಧೆಯಾಗಿ, ಪರಮಾತ್ಮನ ವಿಷಯವಾಗಿದ್ದ ಆ ಪ್ರೇಮ ವಿಶ್ವಾಸಗಳೇ ನಿಷ್ಠೆಯಲ್ಲಿ ಪರಿಣಮಿಸುತ್ತವೆ. ಜಲಾಂಗದಲ್ಲಿದ್ದ ಮಹೇಶ್ವರನು ನಿಷ್ಠಾಭಕ್ತಿಯುಕ್ತನಾಗಿ ಜ್ಞಾನಶಕ್ತಿಯೊಡಗೂಡಿದ ಗುರುಲಿಂಗವನ್ನು ಪೂಜಿಸುವನು. ಇದರಿಂದ ಅವನ ಬುದ್ಧಿ ಸುಬುದ್ಧಿಯಾಗುತ್ತದೆ. ಸುಬುದ್ಧಿಯೆಂಬ ಹಸ್ತದಿಂದ ಮಹೇಶ್ವರನು ರಸಪದಾರ್ಥವನ್ನು ಗ್ರಹಿಸಿ ಜಿಹ್ವಾಮುಖದಲ್ಲಿ ಗುರುಲಿಂಗಕ್ಕೆ ಅರ್ಪಿಸುವನು. ಇಲ್ಲಿ ರಸಪದಾರ್ಥ ಪ್ರಸಾದವಾಗುತ್ತದೆ.

**ಪ್ರಸಾದಿಸ್ಥಲ:**

ನಿಷ್ಠಾಭಕ್ತಿಯ ಬಲದಿಂದ ಮಹೇಶ್ವರನು ಶಿವಪ್ರಸನ್ನತೆಯನ್ನು ಪಡೆಯುವನು; ಶಿವಪ್ರಸನ್ನತೆಯಿಂದ ಶಿವಪ್ರಸಾದತ್ವ ಪ್ರಾಪ್ತವಾಗುತ್ತದೆ; ಪ್ರಸಾದಿಸ್ಥಲ ಪ್ರಾರಂಭವಾಗುತ್ತದೆ. ನಿಷ್ಠೆ ಈಗ ಅವಧಾನ ಸ್ವರೂಪವನ್ನು ತಳೆಯುತ್ತದೆ. ಅಂದರೆ,ಪರಮಾತ್ಮನ ಅರಿವಿನತ್ತ ಜಾಗ್ರತಿಯುಂಟಾಗುತ್ತದೆ. ನೇತ್ರೇಂದ್ರಿಯದಲ್ಲಿ ನೆಲೆಗೊಂಡ ಇಚ್ಛಾಶಕ್ತಿ ಸಮೇತವಾದ ಶಿವಲಿಂಗದ ಆರಾಧನೆ ನಡೆಯುತ್ತದೆ. ಅಹಂಕಾರ ನಿರಹಂಕಾರವಾಗುತ್ತದೆ. ನೇತ್ರೇಂದ್ರಿಯ ವಿಷಯವಾದ ರೂಪು ಪ್ರಸಾದವಾಗುತ್ತದೆ. ನಿರಹಂಕಾರಹಸ್ತ, ರೂಪಪ್ರಸಾದವನ್ನು ಗ್ರಹಿಸಿ ಶಿವಲಿಂಗಕ್ಕರ್ಪಿಸುತ್ತದೆ.

**ಪ್ರಾಣಲಿಂಗಿಸ್ಥಲ:**

ಅವಧಾನಭಕ್ತಿ ಬಲಿತು ಶಿವಲಿಂಗದೊಳಗಿನ ಇಚ್ಛಾಶಕ್ತಿಯೊಡನೆ ಬೆರೆತು ಅನುಭವವಾಗಿ, ಸಾಧಕನು ಪ್ರಾಣಲಿಂಗಿಸ್ಥಲವನ್ನೆದುವನು. ಪ್ರಾಣ ಪೂರ್ವಾಶ್ರಯವಳಿದು ಲಿಂಗದ ನೆನಹು ಸಂಬಂಧಿಸುವುದು. ಲಿಂಗವೇ ಪ್ರಾಣವಾಗಿ, ಪ್ರಾಣವೇ ಲಿಂಗವಾಗಿ ಭಕ್ತನು ಪ್ರಾಣಲಿಂಗಿಯೆನಿಸುವನು. ಈ ಸ್ಥಲದಲ್ಲಿ ಆತನು ತ್ವಗಿಂದ್ರಿಯದಲ್ಲಿ ನೆಲೆಗೊಂಡಿದ್ದ ಆದಿಶಕ್ತಿ ಸಮೇತವಾದ ಜಂಗಮಲಿಂಗವನ್ನು ಅನುಭಾವಭಕ್ತಿಯಿಂದ ಆರಾಧಿಸುವನು. ಇದರ ಪರಿಣಾಮವಾಗಿ ಆತನ ಮನಸ್ಸು ಸುಮನಸ್ಸಾಗುವುದು. ಸುಮನೋಹಸ್ತದಿಂದ ಸ್ಪರ್ಶಪದಾರ್ಥವನ್ನು ಕೈಕೊಂಡು, ತ್ವಗಿಂದ್ರಿಯ ಮುಖದಲ್ಲಿಟ್ಟು ಜಂಗಮಲಿಂಗಕ್ಕರ್ಪಿಸುವನು.

**ಶರಣಸ್ಥಲ:**

ಅನುಭವಭಕ್ತಿಯು ಈಗ ಆನಂದಭಕ್ತಿಯಾಗಿ ಪರಿಣಮಿಸಿ, ಪ್ರಾಣಲಿಂಗಿಯು ಶರಣಸ್ಥಲವನ್ನು ಪಡೆಯುವನು. ಪರಾಶಕ್ತಿಯುಕ್ತವಾದ ಶ್ರೋತ್ರೇಂದ್ರಿಯದಲ್ಲಿ ನೆಲೆಗೊಂಡಿದ್ದ ಪ್ರಸಾದಲಿಂಗದ ಆರಾಧನೆಯನ್ನು ಆನಂದಭಕ್ತಿಯಿಂದ ಮಾಡುವನು. ಶ್ರೋತ್ರೇಂದ್ರಿಯ ಇಲ್ಲಿ ಲಿಂಗವಾಗುತ್ತದೆ. ಪರಾಶಕ್ತಿ ಮತ್ತು ಆನಂದಭಕ್ತಿಗಳು ಒಂದುಗೂಡಿ ಲಿಂಗವಾಗುತ್ತದೆ. ಶ್ರೋತ್ರೇಂದ್ರಿಯ ವಿಷಯ ಶಬ್ದಪ್ರಸಾದವಾಗುತ್ತದೆ. ಜ್ಞಾನ ಸುಜ್ಞಾನವಾಗುತ್ತದೆ. ಸುಜ್ಞಾನಹಸ್ತದಿಂದ ಶಬ್ದಪದಾರ್ಥವನ್ನು ಗ್ರಹಿಸಿ, ಶ್ರೋತ್ರೇಂದ್ರಿಯಮುಖದಲ್ಲಿ ಪ್ರಸಾದಲಿಂಗಕ್ಕರ್ಪಿಸುವನು. ಶಬ್ದಪದಾರ್ಥ ಪ್ರಸಾದವಾಗುವುದು. ಆಕಾಶಾಂಗವೇ ಶರಣನ ಕಾಯವಾಗುವುದು.

**ಐಕ್ಯಸ್ಥಲ:**

ಆನಂದಭಕ್ತಿಯು ಸಮರಸಭಕ್ತಿಯಾಗುತ್ತದೆ. ಆತ್ಮಾಂಗದಲ್ಲಿದ್ದ ಚಿಚ್ಛಕ್ತಿಯುಕ್ತವಾದ ಮಹಾಲಿಂಗವನ್ನು ಸಮರಸಭಕ್ತಿಯಿಂದ ಆರಾಧಿಸುವನು. ಆತನ ಭಾವ ಸದ್ಭಾವವಾಗುವುದು. ಸದ್ಭಾವಹಸ್ತದಿಂದ ತೃಪ್ತಿಪದಾರ್ಥವನ್ನು ಪರಿಗ್ರಹಿಸಿ ಮನೋಮುಖದಲ್ಲಿ ಮಹಾಲಿಂಗಕ್ಕರ್ಪಿಸುವನು. ತೃಪ್ತಿ ಪ್ರಸಾದವಾಗುತ್ತದೆ.

ಹೀಗೆ ಮಾಯಿದೇವನು ಪ್ರತಿಪಾದಿಸಿದ ಲಿಂಗಾಂಗ ಸಾಮಗ್ರಿ ಎಲ್ಲವೂ ಶಿವಶಕ್ತಿ ವಿಲಾಸದಿಂದ ಉಂಟಾದ ಊರ್ಧ್ವಸೃಷ್ಟಿಗೆ ಸಂಬಂಧಿಸಿದುದಾಗಿದೆ.

**ಅರ್ಪಣ ಸದ್ಭಾವ:**

ಸರ್ವಾಂಗಲಿಂಗಸಾಹಿತ್ಯದ ನಿರೂಪಣಾನಂತರ ಆತ್ಮನಿಗೆ ಉಂಟಾಗುವ ನಿರ್ಲೇಪತ್ವದ ಸಿದ್ಧಿ ಕುರಿತು ಹೀಗೆ ಹೇಳಲಾಗಿದೆ.

> ದ್ವೇಧಾ ಲಿಂಗಾರ್ಪಣವಿಧಿಃ ಪ್ರೋಚ್ಯತೇ ದೇಶಿಕೋತ್ತಮೈಃ ।
> ಕ್ರಿಯಾಮತಾರ್ಪಣಂ ಕಿಂಚಿತ್ಕಿಂಚಿತ್ ಜ್ಞಾನಮತಾರ್ಪಣಂ ॥[೧೩೯]

೧೩೯. ಶಿವಾನುಭವಸೂತ್ರಂ, ಅಧಿಕರಣ ೭, ಶ್ಲೋಕ ೨.

**ಅರ್ಪಣವಿಧಿ:**

ಅರ್ಪಣ ಎರಡು ವಿಧವಾಗಿದೆ. ೧. ಕ್ರಿಯಾರ್ಪಣ ಮತ್ತು ೨. ಜ್ಞಾನಾರ್ಪಣ ಎಂದು. ಕಾಯಕದಿಂದ ಲಭಿಸಿದ ದ್ರವ್ಯವನ್ನು ಇಷ್ಟ, ಪ್ರಾಣ, ಭಾವಲಿಂಗಗಳಿಗೆ ಅರ್ಪಿಸುವುದು ಕ್ರಿಯಾರ್ಪಣ. ಆಯಾಲಿಂಗಗಳಲ್ಲಿ ಆಯಾ ಪದಾರ್ಥಗಳನ್ನು ಅನಿಚ್ಛಾಪೂರ್ವಕವಾಗಿ ಅರ್ಪಿಸುವುದು ಜ್ಞಾನಾರ್ಪಣ.

ತತ್ಕ್ರಿಯಾರ್ಪಣಮಿತ್ಯಾಹುರರ್ಪಣೈಕವಿಶಾರದಾಃ ।
ಷಟ್ಸು ಲಿಂಗೇಷು ಸರ್ವತ್ರ ಸಾರ್ವಕಾಲಿಕರೂಪತಃ ।
ಸ್ವಯಮಾಗತ ವಸ್ತೂನಿ ಜ್ಞಾತ್ವಾ ತತ್ತನ್ಮುಖೇಷು ಚ ।
ಅನಿಚ್ಛಾ ವಿಧಿನಾ ಕಾರ್ಯಮೇತಚ್ ಜ್ಞಾನಾರ್ಪಣಂ ವಿದುಃ ॥[೧೪೦]

ಶಿವಕ್ರಿಯಾ ಸಂಪನ್ನನಾದವನು ನೀತಿಬಾಹಿರವಾದ ಪದಾರ್ಥವನ್ನು ಲಿಂಗಾರ್ಪಣ ಮಾಡನು. ಲಿಂಗಾರ್ಪಣ ಮಾಡುವವನ ಮಾತು, ಮನಸ್ಸು, ಮೈಗಳು ಶುದ್ಧವಾಗಿರಬೇಕು. ಕಾಯಕದಿಂದ ಲಭ್ಯವಾದ ದ್ರವ್ಯವನ್ನು ಸಂಸ್ಕರಿಸಿ, ಇಷ್ಟ, ಪ್ರಾಣ, ಭಾವ ಅಥವಾ ಗುರುಲಿಂಗ ಜಂಗಮಕ್ಕೆ ಸಮರ್ಪಿಸಿ ತತ್ಪ್ರಸಾದ ಸೇವಿಸುವುದು ಕ್ರಿಯಾರ್ಪಣವೆನಿಸುತ್ತದೆ.

ವಿಶಿಷ್ಟವಾಗಿ ಪ್ರಾಪ್ತವಾಗುವ ಶಬ್ದಾದಿವಿಷಯಗಳನ್ನು ಭೋಗಿಸುವ ಸಂದರ್ಭದಲ್ಲಿ ಇಂದ್ರಿಯಗಳನ್ನು ಲಿಂಗಸ್ಥಾನಗಳೆಂದೂ, ಅವೇ ಲಿಂಗಮುಖವೆಂದೂ ತಿಳಿದು ಆಚರಿಸುವ ಈ ಅರ್ಪಣ ಕ್ರಿಯೆಗೆ ಜ್ಞಾನಾರ್ಪಣ ಎಂದು ಹೆಸರು. ಈಶ್ವರಾರ್ಪಣಬುದ್ಧಿಯಿಂದ ಅರ್ಪಣ ಮಾಡಿದ ಪದಾರ್ಥಗಳು ಬಂಧ-ಮೋಕ್ಷಗಳನ್ನುಂಟು ಮಾಡದೆ, ಕೇವಲ ಪ್ರಸಾದ (ಅನುಗ್ರಹ)ವನ್ನುಂಟು ಮಾಡುತ್ತವೆ.

**ತ್ರಿವಿಧ ದ್ರವ್ಯಗಳು:**

ಆತ್ಮನ ಉಪಭೋಗಕ್ಕಾಗಿ ಇರುವ ದ್ರವ್ಯಗಳನ್ನು ಮೂರು ವಿಧವಾಗಿ ವಿಂಗಡಿಸಲಾಗಿದೆ. ೧. ಸ್ಥೂಲ, ೨. ಸೂಕ್ಷ್ಮ, ೩. ಆನಂದ - ಇವುಗಳನ್ನೇ ರೂಪು-ರುಚಿ-ತೃಪ್ತಿ ಎಂದೂ ಕರೆಯಲಾಗಿದೆ.

ಸ್ಥೂಲಾಖ್ಯಂ ಪ್ರವಿವಿಕ್ತಾಖ್ಯಮಾನಂದಾಖ್ಯಮಿತಿ ತ್ರಿಧಾ ।
ಸ್ಥೂಲದ್ರವ್ಯಂ ಭವೇದ್ರೂಪಂ ಪ್ರವಿವಿಕ್ತಂ ರುಚಿರ್ಭವೇತ್ ॥
ಆನಂದಸ್ತು ಭವೇತ್ತೃಪ್ತಿರೇವಮೇವ ಪೃಥಕ್ ಕ್ರಮಾತ್ ।
ಬಹಿರಂಗಾರ್ಪಣೇ ರೂಪಮಂತರಂಗಾರ್ಪಣೇ ರುಚಿಃ ॥[೧೪೧]

ಇವುಗಳಲ್ಲಿ ಇಷ್ಟಲಿಂಗಕ್ಕೆ ರೂಪ, ಪ್ರಾಣಲಿಂಗಕ್ಕೆ ರುಚಿ, ಭಾವಲಿಂಗಕ್ಕೆ ತೃಪ್ತಿ - ಹೀಗೆ ಅರ್ಪಿತವಾಗುತ್ತವೆ. ಅರ್ಪಿತವಾಗಿ ಪ್ರಸಾದವಾದ ಪದಾರ್ಥಗಳಲ್ಲಿ ಬಂಧಕರವಾದ ಯಾವ ದೋಷವೂ ಇರದು. ಏಕೆಂದರೆ ಪ್ರಸಾದೋಪಭೋಗಿಯಾದ ಅಂಗ ಪ್ರಸಾದಕಾಯನಾಗುತ್ತಾನೆ. ಪೂಜೆ ಪ್ರಾರಂಭವಾದಾಗಿನಿಂದ ಪೂಜೆ ಮುಗಿಯುವವರೆಗೆ

---

೧೪೦. ಶಿವಾನುಭವಸೂತ್ರಂ, ಅಧಿಕರಣ ೭, ಶ್ಲೋಕ ೪, ೫.

೧೪೧. ಅದೇ, ಶ್ಲೋಕ ೧೦, ೧೧.

ಜೀವ ಪದಾರ್ಥಕಾಯನಾಗಿರುತ್ತಾನೆ. ನಂತರ, ಪೂಜೆ ಮುಗಿದು ಪುನಃ ಪೂಜೆ ಆರಂಭವಾಗುವವರೆಗೆ ಆವನು ಪ್ರಸಾದಕಾಯವಾಗಿರುತ್ತಾನೆ.

**ತ್ರಿವಿಧ ಪ್ರಸಾದ:**

ಇಷ್ಟಲಿಂಗಾರ್ಪಿತಂ ಶುದ್ಧಂ ಪ್ರಾಣಲಿಂಗಮುಖಾರ್ಪಿತಂ ।
ಸಿದ್ಧಂ ತತಃ ಪ್ರಸಿದ್ಧಂ ಹಿ ಭಾವಲಿಂಗಾರ್ಪಿತಂ ॥
ತತ್ತದರ್ಪಣತೋ ಲಬ್ಧಂ ಪ್ರಸಾದಂ ತತ್ತದಾದರಾತ್ ।
ಭುಂಕ್ತೇ ಯಸ್ಮಾತ್ಸ್ವಯಂ ವಿಶ್ವತೈಜಸಪ್ರಾಜ್ಞರೂಪತಃ ॥[೧೪೨]

ಇಷ್ಟ, ಪ್ರಾಣ, ಭಾವಲಿಂಗಗಳಿಗೆ ಅರ್ಪಿಸಿದ ರೂಪು-ರುಚಿ-ತೃಪ್ತಿಗಳು ಕ್ರಮವಾಗಿ ಶುದ್ಧ, ಸಿದ್ಧ, ಪ್ರಸಿದ್ಧ ಎಂಬ ಪ್ರಸಾದರೂಪ ಪಡೆಯುತ್ತವೆ. ತ್ರಿವಿಧ ಪದಾರ್ಥಗಳಲ್ಲಿನ ರೂಪವೆಂದರೆ 'ಶಿವಃ ಸರ್ವಮಿದಂ' ಎಂಬಂತೆ ಎಲ್ಲವನ್ನೂ ಶಿವರೂಪವೆಂದು ತಿಳಿವುದು. ರುಚಿ ಎಂದರೆ 'ರಸೋ ವೈಸಃ' ಎಂಬಂತೆ ಪದಾರ್ಥಗಳಲ್ಲಿರುವ ಜ್ಞಾನವರ್ಧಕವಾದ ಅಭಿರುಚಿ ಎಂದು ಅರ್ಥ. ತೃಪ್ತಿಯೆಂದರೆ ಶಿವಸುಖಕ್ಕಲ್ಲದೆ ಬೇರೆ ಸುಖಕ್ಕೆ ಎಳಸೆನೆಂಬ ದೃಢನಿರ್ಧಾರ.

ಕಾಮಕ್ರೋಧಾದಿ ಅರಿಷಡ್ವರ್ಗಗಳ ಸೋಂಕಿಲ್ಲದಿರುವುದು ಶುದ್ಧಪ್ರಸಾದ. ಶಿವಜ್ಞಾನೋದಯಸ್ವರೂಪ ರೂಪವಾದದ್ದು ಸಿದ್ಧಪ್ರಸಾದ. ಶಿವೋಽಹಂ ಭಾವದಿಂದ ದೃಢವಾದದ್ದು ಪ್ರಸಿದ್ಧಪ್ರಸಾದ.

ಕರ್ಮಕಾಂಡಿಗಳಾದ ಮೀಮಾಂಸಕರು ಹವಿಃಶೇಷವನ್ನು ಭುಂಜಿಸುವಂತೆ ಜ್ಞಾನಕ್ರಿಯಾಯುಕ್ತರಾದ ವೀರಶೈವರು ಗುರುಲಿಂಗ ಜಂಗಮಾರ್ಪಿತವಾದ ಪ್ರಸಾದವನ್ನು ಕ್ರಿಯಾಜ್ಞಾನಮಾರ್ಗದಿಂದ ತ್ರಿವಿಧ ಪ್ರಸಾದವನ್ನು ಸೇವಿಸುತ್ತಾರೆ.

**ಮಹಾಮಂತ್ರಗಳಲ್ಲಿ ಪ್ರಸಾದ ಸದ್ಭಾವ:**

ಓಂ ನಮಃ ಶಿವಾಯ ಎಂಬ ಈ ಮಹಾಮಂತ್ರವು ಶಿವಾರ್ಪಣಪರವಾಗಿದೆ. ಹೇಗೆಂದರೆ :

ನ ಮಮೇದಂ ಜಗತ್ಸರ್ವಂ ಶಿವಾಯೇತಿ ಶಿವಾರ್ಪಣಂ ।
ಅಭದತ್ತೇ ದ್ವಿಮಾತ್ರಾತ್ಮಾ ಮಂತ್ರೋ ಲುಪ್ತಮಕಾರಕಃ ॥[೧೪೩]

ಎಂದರೆ, ಉಪಭೋಗ್ಯವಾದ ಜಗತ್ತೆಲ್ಲವೂ ನನಗಲ್ಲ! ಶಿವನ ಉಪಭೋಗಕ್ಕಾಗಿ ಇರುವುದೆಂದು ತಿಳಿದು, ಸಮಸ್ತವನ್ನು ಶಿವನಿಗೆ ಸಮರ್ಪಿಸಬೇಕೆಂದು ಈ ಮಂತ್ರ ಬೋಧಿಸುತ್ತದೆ.

ಓಂ = ಈ ಜಗತ್ತೆಲ್ಲವೂ; ನಮಮ = ನನ್ನದಲ್ಲ; ಶಿವಾಯ = ಶಿವನಿಗಾಗಿ ಎಂದು, ಇದರ ಅರ್ಥ. ನಮಃ ಎಂಬುದು ದ್ವಿಮಾತ್ರಾತ್ಮಕವಾದ ಪದ. ಅಲ್ಲಿ ಒಂದು ಮಕಾರವು ಲುಪ್ತವಾಗಿರುವುದಾಗಿ ಮಾಯಿದೇವ ಹೇಳುತ್ತಾನೆ.

---

೧೪೨. ಶಿವಾನುಭವಸೂತ್ರಂ, ಅಧಿಕರಣ ೭, ಶ್ಲೋಕ ೨೨, ೨೩.

೧೪೩. ಅದೇ, ಶ್ಲೋಕ ೩೦.

**ಗಾಯತ್ರೀ ಮಂತ್ರವು ಲಿಂಗಾಂಗ ಸಂಯೋಗಪರ:**

'ಸವಿತುಃಭರ್ಗಃಧೀಮಹಿ' ಎಂಬ ಗಾಯಿತ್ರೀ ಮಂತ್ರವು ಶಿವ-ಜೀವರ ಐಕ್ಯವನ್ನು ಬೋಧಿಸುತ್ತದೆ. 'ಸವಿತುಃ' ಎಂಬ ಪದವು ಅಂಗ; ಎಂದರೆ, ಜೀವವಾಚಕವಾಗಿಯೂ, 'ಭರ್ಗಃ' ಎಂಬ ಪದವು ಲಿಂಗವಾಚಕವಾಗಿಯೂ, 'ಧೀಮಹಿ' ಎಂಬ ಪದವು ಸಂಬಂಧವಾಚಕವಾಗಿಯೂ ಇರುವುದರಿಂದ ಗಾಯತ್ರಿಯು ಲಿಂಗಾಂಗ ಸಂಬಂಧವನ್ನೇ ಬೋಧಿಸುತ್ತದೆ. ಇದರಂತೆ ಸವಿತುಃ, ಭರ್ಗಃ, ಧೀಮಹಿ ಎಂಬ ಪದಗಳು ಕ್ರಮವಾಗಿ ಜೀವ, ಶಿವ - ಇವರ ಐಕ್ಯವನ್ನೂ ಬೋಧಿಸುತ್ತಿರುವವು.

**ಅರ್ಪಣದಲ್ಲಿ ಜೀವಶಿವರ ತಾದಾತ್ಮ್ಯ:**

ಅಂಗಲಿಂಗಸಂಬಂಧವೆಂದರೆ ಅವುಗಳ ತಾದಾತ್ಮ್ಯ. ಇದು ಪದಾರ್ಥ, ಪ್ರಸಾದ ಮತ್ತು ಅರ್ಪಣಗಳಲ್ಲಿದೆ. ಎಂದರೆ, ಪದಾರ್ಥವೇ ಜೀವ, ಪ್ರಸಾದವೇ ಶಿವ. ಅರ್ಪಣವೇ ಶಿವ-ಜೀವರ ತಾದಾತ್ಮ್ಯ. ಮಾಯಿದೇವನು ಇದನ್ನು ಆಗಮ ಸಿದ್ಧಾಂತವೆಂದು ಕರೆಯುತ್ತಾನೆ.

ಪದಾರ್ಥರೂಪದಿಂದ ಇರುವ ಆತ್ಮನು ಶಿವಾರ್ಪಿತವಾಗಿ ಪ್ರಸಾದರೂಪವೆನಿಸಿ, ಪರಮಾತ್ಮನೇ ಆಗುವನು. ಆತ್ಮ-ಪರಮಾತ್ಮರ ಅಭೇದವೇ ಅರ್ಪಣಸದ್ಭಾವದ ರಹಸ್ಯ.

ಒಂದೇ ಮಹಾಲಿಂಗವು ಇಷ್ಟಾದಿ ರೂಪದಿಂದ ಮೂರಾಗಿ, ಆಚಾರಾದಿರೂಪದಿಂದ ಆರಾಗಿ, ನವಲಿಂಗವೆನಿಸಿ ಆತ್ಮನ ಸರ್ವಾಂಗವನ್ನು ವ್ಯಾಪಿಸುತ್ತದೆ. ನವವಿಧಚಕ್ರಗಳಲ್ಲಿ ನವವಿಧವಾದವ ಈ ಲಿಂಗಗಳನ್ನು ವಚನಗಳು ವಿವಿಧವಾಗಿ ವರ್ಣಿಸುತ್ತವೆ. ಈ ಲಿಂಗಗಳ ಅನುಸಂಧಾನ ರಹಸ್ಯಬಲ್ಲವನನ್ನು ಕರ್ಮವು ಲೇಪಿಸಲಾರದು. ಹೇಗೆ ಕೈಗೆ ಹತ್ತುವ ತುಪ್ಪದ ಜಿಡ್ಡು ನಾಲಿಗೆಗೆ ಅಂಟುವದಿಲ್ಲವೋ ಮುಟ್ಟಿದರೆ ಕೈಗೆ ಅಂಟುವ ಕಣ್ಣು ಕಪ್ಪು ಕಣ್ಣಿನ ಒಳಗುಡ್ಡೆಗೆ ಅಂಟಿಕೊಳ್ಳದಂತೆ ಷಟ್‌ಸ್ಥಲಗೆ ಕರ್ಮ ಲೇಪಿಸದು.

**ದಾಸೋಽಹಂಭಾವ:**

ವೀರಶೈವನು 'ಶಿವೋಹಂ' ಭಾವವುಳ್ಳವನು. ಆದರೂ ಅವನು ಶರೀರಾದಿ ಪದಾರ್ಥಗಳನ್ನು ಶಿವನಿಗೆ ಅರ್ಪಿಸುವಲ್ಲಿ ದಾಸೋಹಂಭಾವಿಯಾಗುತ್ತಾನೆ. ಇಂದ್ರಿಯಮುಖದಿಂದ ಲಭಿಸುವ ಎಲ್ಲ ಪದಾರ್ಥವನ್ನು ಅವನು ತನ್ನ ಸ್ವಾಮಿಯಾದ ಶಿವನಿಗೆ ಸಮರ್ಪಿಸಿ, ಆ ಪ್ರಸಾದವನ್ನು ಸೇವಿಸುವುದೇ ದಾಸೋಽಹಂಭಾವ. ಹೀಗೆ ಸರ್ವವೂ ಶಿವಾರ್ಪಿತವಾದ ಮೇಲೆ ತಾನೂ ಶಿವಾರ್ಪಿತವಾಗುವುದರಿಂದ ಇನ್ನು ಉಳಿವುದಾದರು ಏನು ? ಮಹದೈಪುರೀಶ್ವರ ಶತಕದಲ್ಲಿ ಈ ವಿಚಾರವನ್ನೇ ಹಿಗೆ ಪ್ರಸ್ತಾಪಿಸಲಾಗಿದೆ.

"ಕೊಡುವವನಾರು ಕೊಂಬುವನದಾರು ವೃಥಾಭ್ರಮೆಯೇಕೆ ಬೇಡಮಾಣ್
ಕೊಡುವವನುಂ ಬಲಾತ್ಕರಿಸಿ ಕೊಂಬುವನುಂ ಶಿವನೆಂದು ವೇದಮು
ಗ್ಗಡಿಸುತೆದಾತೃಭೋಕ್ತೃ ಸಕಲಂ ನೆರೆ ನೀನೆನುತಿರ್ಪ ವಾಕ್ಯಮಂ
ಪಿಡಿವುದೆ ಭಕ್ತಿಯಯ್ಯಾ ಪರಮಪ್ರಭುವೇ ಮಹದೈಪುರೀಶ್ವರಾ ||"[೧೪೪]

೧೪೪. ಮಹದೈಪುರೀಶ್ವರ ಶತಕ, ೧೦೯.

ಹೀಗೆ ಮಾಯಿದೇವನು ವೈರಾಗ್ಯಶತಕದಲ್ಲಿ "ನಾऽಹಂ ಕರ್ತಾ ನಾಹಂ ಬೋಕ್ತಾನಾऽಹಂ ಕಾರಯಿತಾ" ಎಂಬ ತೈತ್ತರೀಯೋಪನಿಷತ್ತಿನ ಮಂತ್ರಾರ್ಥವನ್ನು ಶಿವಾರ್ಪಣಕ್ಕೆ ಹೋಲಿಸಿ ಹೇಳುತ್ತಾನೆ. ಎಲ್ಲವು ಶಿವಸ್ವರೂಪವೆಂದ ಮೇಲೆ ಕೊಡುಕೊಂಬುವವರಲ್ಲಿ ಭೇದವನ್ನು ಎಣಿಸುವುದೊಂದು ಬರೀ ಭ್ರಮೆ ಎಂದು ಹಲವಾರು ಶಕತಗಳಲ್ಲಿ ಮೇಲಿನದನ್ನೇ ವಿವರಿಸಿದ್ದಾನೆ.

ಅರ್ಪಣಸದ್ಭಾವವು ಗುರುವಿನ ಉಪದೇಶದಿಂದ ಮಾತ್ರ ಲಭ್ಯವೇ ಹೊರತು ಕೇವಲ ಗ್ರಂಥಾಭ್ಯಾಸದಿಂದ ಲಭಿಸಲಾರದೆಂದು ಮಾಯಿದೇವನು ಕರ್ಮದ ನಿರ್ಲೇಪತ್ವಸಿದ್ಧಿಗಾಗಿ ಅರ್ಪಣ ಸದ್ಭಾವವು ಬಹಳ ಮಹತ್ವದ್ದೆಂದು ಹೀಗೆ ಹೇಳಿದ್ದಾನೆ.

ಏತದರ್ಪಣಸದ್ಭಾವಜ್ಞಾನಂ ವೇದಾಂತವಾಕ್ಯಜಂ
ಗುರೂಪದೇಶತಃ ಸಾಧ್ಯಂ ನಾನ್ಯಥಾ ಶಾಸ್ತ್ರಕೋಟಿಭಿಃ ||[೧೪೫]

ಮೇಲೆ ವಿವರಿಸಿದ ವೇದಾಂತ ವಾಕ್ಯಜನ್ಯವಾದ ಈ ಅರ್ಪಣ ಸದ್ಭಾವಜ್ಞಾನವು ಗುರೂಪದೇಶದಿಂದ ಸಾಧ್ಯವಾಗುವುದೇ ವಿನಾ ಉಪದೇಶರಹಿತ, ಶಾಸ್ತ್ರಕೋಟಿಯಿಂದಲೂ ಸಾಧ್ಯವಾಗದು.

**ಕ್ರಿಯಾವಿಶ್ರಾಂತಿ:**

ಕ್ರಿಯಾವಿಶ್ರಾಂತಿಯಲ್ಲಿ ಷಟ್‌ಸ್ಥಲ ಸಂಪನ್ನನಾದ ವೀರಶೈವನ ಅಂತಿಮಲಕ್ಷಣಗಳನ್ನು ವಿವರಿಸಲಾಗಿದೆ. ಷಟ್‌ಸ್ಥಲಾಚಾರ ಅನುಸಂಧಾನದಿಂದ ಮೋಕ್ಷಸ್ವರೂಪವೇ ತಾನಾದ ವೀರಶೈವನ ಎಲ್ಲ ಕ್ರಿಯೆಗಳು ಲಿಂಗಾರ್ಪಿತವಾಗಿರುವದರಿಂದ ಅವನಿಗೆ ಶುಭಾಶುಭಕರ್ಮದ ಗೋಜಿಲ್ಲ. ಆಗ ಅವನು ಸುಖವೆಂಬ ವಿಶ್ರಾಂತಿಯನ್ನು ಹೊಂದಿರುತ್ತಾನೆ. ಇದುವೇ ಕ್ರಿಯಾವಿಶ್ರಾಂತಿ. ಸಮ್ಯಕ್‌ಜ್ಞಾನಕ್ಕೆ ಕ್ರಿಯಾವಿಶ್ರಾಂತಿ ಎಂದು ಹೆಸರು. ನಾನು ಸಾಕ್ಷಾತ್ ಶಿವನೆಂದು ಭಾವಿಸಿದಾಗ ಆತ್ಮನು ಆಪ್ತಕಾಮನಾಗಿ ನಿತ್ಯ ಸುಖಿಯಾಗುವನು. ಇಂಥವನ ವ್ಯವಹಾರಗಳು ಕೇವಲ ಲೀಲೆಗಾಗಿ; ಅವನಿಗೆ ಎಲ್ಲವೂ ಶಿವರೂಪವಾಗಿಯೇ ತೋರುವುದು. ಅಂಥವನು ತಾನು ಬಯಸಿದಂತೆ ಇರಬಲ್ಲ. ಏಕೆಂದರೆ ಅವನು ತನಗೆ ತಾನೇ ಸಚ್ಚಿದಾನಂದರೂಪವಾಗಿ ಬೆಳಗುತ್ತಾನೆ. ಆ ಬೆಳಕಿನಲ್ಲಿ ಅವನಿಗೆ ತನಗೆ ಅನ್ಯವಾದ ವಸ್ತುವೇ ಗೋಚರಿಸುವುದಿಲ್ಲ. ಆಗ ಅವನಿಗೆ ಬಂಧವೂ ಇಲ್ಲ. ಮೋಕ್ಷವೂ ಇಲ್ಲ. ನಿರಂಕುಶವಾದ ಭಕ್ತಿಯೊಂದೇ ಅವನಲ್ಲಿ ಬೆಳಗುತ್ತದೆ.

**ಭಕ್ತಿವೈಶಿಷ್ಟ್ಯ:**

ಶುದ್ಧವಾದ ಭಕ್ತಿಯು ಸಿದ್ಧರಸವಿದ್ದಂತೆ. ಬೆಳ್ಳಿ, ತಾಮ್ರ, ಕಬ್ಬಿಣಗಳನ್ನು ಮುಟ್ಟಿದ ಸಿದ್ಧರಸವು ಅದೆಲ್ಲವನ್ನು ಶುದ್ಧ ಚಿನ್ನವನ್ನಾಗಿ ಮಾಡುವಂತೆ ಶುದ್ಧವಾದ ಶಿವಭಕ್ತಿಯು ಬೆಳ್ಳಿ, ತಾಮ್ರ, ಕಬ್ಬಿಣಗಳಂತಿರುವ ಸತ್ವ-ರಜಸ್ಸು-ತಮಸ್ಸುಗಳನ್ನು ಶುದ್ಧಗೊಳಿಸಿ ಶಿವಮಯವನ್ನಾಗಿ ಮಾಡುತ್ತದೆ. ಸತ್ವರಜಸ್ಸು ಮತ್ತು ತಮಸ್ಸುಗಳು ಕ್ರಮವಾಗಿ ಹಿಮ-ಕುಂಕುಮ ಮತ್ತು ಕಸ್ತೂರಿಯಂತೆ ಬಿಳುಪು-ಕೆಂಪು-ಕಪ್ಪುವರ್ಣವುಳ್ಳವುಗಳು. ಈ ಗುಣಗಳಲ್ಲಿ ಶಿವಾತ್ಮಕವಾದ ಭಕ್ತಿಯು ಸಮಾವೇಶವಾಗಿ ಆ ಗುಣಗಳ ಬಣ್ಣವು ಅಡಗಿ, ಅದೆಲ್ಲವೂ ತನ್ನ ರೂಪದಿಂದಲೇ ಬೆಳಗುತ್ತದೆ. ಆದ್ದರಿಂದ ಶಿವಮಾರ್ಗವು ಮಾಯೆರಹಿತವಾದದ್ದು. ಇಲ್ಲಿ ಯೋಗ ಆರಾಧನೆ ಮತ್ತು ಅರ್ಚನಗಳು ಯಾವವೂ ತೋರುವುದಿಲ್ಲ. ಇಲ್ಲಿ ಬೆಳಗುತ್ತಿರುವುದು ಭಕ್ತಿಯೊಂದೇ.

---

೧೪೫. ಶಿವಾನುಭವಸೂತ್ರಂ, ಅಧಿಕರಣ ೭, ಶ್ಲೋಕ ೬೮.

**ಕಾಂಡತ್ರಯ:**

ನಾನು ಮಾಡುವ ಧರ್ಮಾಧರ್ಮಗಳ ಫಲವನ್ನು ಅನುಭವಿಸುವುದಕ್ಕೆ ನಾನೇ ಕರ್ತನೆಂಬ ಅಭಿಮಾನವುಳ್ಳದ್ದು ಕರ್ಮಕಾಂಡ.

ನಾನು ಧರ್ಮಾಧರ್ಮಗಳಿಗೆ ಕರ್ತನೂ ಅಲ್ಲ, ಸಾಕ್ಷಿಯೂ ಅಲ್ಲ. ಎಲ್ಲಕ್ಕೂ ಶಿವನೇ ಕರ್ತೃ ಮತ್ತು ಸಾಕ್ಷಿ. ಈ ಬಗೆಯ ಕರ್ತೃತ್ವ ಮತ್ತು ಸಾಕ್ಷಿತ್ವ ಅಭಿಮಾನವಿಲ್ಲದ್ದು ಭಕ್ತಿಕಾಂಡ. ಕರ್ಮ-ಜ್ಞಾನ-ಭಕ್ತಿಗಳು ಕ್ರಮವಾಗಿ ಮುತ್ತಿನ ಚಿಪ್ಪು, ತಾವರೆ ಎಲೆ, ಕಾಯ್ದ ಕಬ್ಬಿಣಗಳಿದ್ದಂತೆ. ಇವುಗಳಲ್ಲಿ ಸಂಸಾರವೆಂಬ ನೀರಿನ ಹನಿಯು ಬಿದ್ದರೆ, ಅದು ಮುತ್ತಿನ ಚಿಪ್ಪಿನಲ್ಲಿ 'ಸಫಲ' ಎಂದರೆ, ಮುತ್ತಾಗುತ್ತದೆ. ತಾವರೆ ಎಲೆಯಲ್ಲಿ ಬಿದ್ದ ಹನಿಯು 'ವಿಫಲ' ಎಂದರೆ, ಎಲೆಯ ಆಕಾರ ತಾಳುತ್ತದೆ. ಎಂದರೆ, ವಿಫಲವೆಂದರ್ಥ. ಕಾಯ್ದ ಕಬ್ಬಿಣದಲ್ಲಿ ಬಿದ್ದ ಹನಿಯು ಪ್ರಾಯಃ ನಾಶವೇ ಆಗುತ್ತದೆ. ಎಂದರೆ, ಕರ್ಮಮಾರ್ಗವು ಸ್ವರ್ಗಾದಿ ಫಲಜನಕವಾಗಿದೆ. 'ಕ್ಷೀಣೇಪುಣ್ಯೇ ಮರ್ತ್ಯಲೋಕಂ ವಿಶಂತಿ' ಎಂಬಂತೆ ಪುಣ್ಯಕರ್ಮದಿಂದ ಸ್ವರ್ಗಲೋಕಪ್ರಾಪ್ತಿ, ಪಾಪಕರ್ಮಗಳಿಂದ ನರಕಪ್ರಾಪ್ತಿಯಾಗುತ್ತದೆಂದು ಮೀಮಾಂಸಕರ ಮತ. ಮಾಯಿದೇವ ಈ ಅಭಿಪ್ರಾಯಕ್ಕೆ ಹೊಸ ತಿರುವೊಂದನ್ನು ನೀಡುತ್ತಾನೆ.

ಮಾಡಿದ ಪಾಪಮಿಲ್ಲದೊಡೆ ಮಾಡುವ ಪಾಪಮದಿಲ್ಲ ಮುಂದೆ ತಾಂ
ನೋಡಲು ಪಾಪಮೆಂಬುದದು ಮುನ್ನವೆಯಿಲ್ಲ ಬಿಡಾದೊಡಂತದಂ
ಮಾಡಲು ಕರ್ತನಲ್ಲ ಪರತಂತ್ರನದಂತಿರಲಿನ್ನು ನಿನ್ನನಾಂ
ಬೇಡುವ ಪಾಪಮುಂಟೆ ಪರಮಪ್ರಭುವೇ ಮಹದೈಪುರೀಶ್ವರಾ ॥[೧೪೬]

ಹಿಂದೆ ಮಾಡಿದ ಪಾಪವಿಲ್ಲದಿರುವಾಗ ಮುಂದೆ ಮಾಡುವ ಪಾಪವೆಲ್ಲಿಯದು? ಅಂದರೆ ಪಾಪಮಾಡುವ ಮನಸ್ಸು ಉಂಟಾಗದು. ಕೂಲಂಕುಷವಾಗಿ ವಿಚಾರಿಸಿದರೆ ಪಾಪವೆಂಬುದೇ ಇಲ್ಲ.ಏಕೆಂದರೆ ಪಾಪವನ್ನು ಮಾಡಲು ತಾನು ಕರ್ತನಲ್ಲ; ಸ್ವತಂತ್ರನೂ ಅಲ್ಲ. ಬಯಕೆಯು ಇಲ್ಲದವನು ಬೇಡುವದಿನ್ನೇನನ್ನು ? ಬೇಡುವುದೊಂದು ಪಾಪ. ಆಪ್ತಕಾಮನಾದ ಅಂಗ ಬೇಡುತ್ತಾನಾದರೂ ಏಕೆ? ಎಂದು ಮಾಯಿದೇವ ಪ್ರಶ್ನಿಸುತ್ತಾನೆ. ಆದ್ದರಿಂದ ಪುಣ್ಯ-ಪಾಪ, ಸ್ವರ್ಗ-ನರಕ, ಇಹ-ಪರಗಳು ಇವು ಫಲಜನಕ ಕರ್ಮ. ಇದನ್ನು ಇನ್ನಿಷ್ಟು ಲೇಖಾತ್ರಯದಲ್ಲಿ ಸ್ಪಷ್ಟಗೊಳಿಸಲಾಗಿದೆ.

**ಲೇಖಾತ್ರಯ:**

ಕರ್ಮ-ಜ್ಞಾನ-ಭಕ್ತಿಗಳಿಗೆ ಕ್ರಮವಾಗಿ ಶಿಲಾಲೇಖ-ಸ್ಥಲಲೇಖ ಮತ್ತು ಜಲಲೇಖಗಳನ್ನು ಹೋಲಿಸಲಾಗಿದೆ. ಶಿಲಾಲೇಖವು ಬರೆದು ಅಳಿಸಲಿಕ್ಕೆ ಬರದು. ಅದರಂತೆ ಕರ್ಮವು ಫಲವನ್ನು ನೀಡಿಯೇ ತೀರುತ್ತದೆ. ಸ್ಥಲಲೇಖೆಯನ್ನು ಬರೆಯಲೂಬಹುದು, ಅಳಿಸಲೂಬಹುದು. ಎಂದರೆ ಜ್ಞಾನದ ಫಲವು ಇದ್ದೂ ಇಲ್ಲದಂತಿರುತ್ತದೆ. ಆದರೆ ಭಕ್ತಿಯು ಜಲಲೇಖದಂತೆ ಬರೆಯಲಿಕ್ಕಾಗಲಿ, ಬರೆದು ಅಳಿಸಲಿಕ್ಕಾಗಲಿ ಬರುವಂತಿಲ್ಲ. ಅಂದರೆ ಭಕ್ತಿಮಾರ್ಗ ಜಲಲೇಖೆಯಂತೆ ಎಂದು ಇಲ್ಲಿನ ಒಟ್ಟು ತಾತ್ಪರ್ಯ.

---

೧೪೬. ಮಹದೈಪುರೀಶ್ವರ ಶತಕ, ೮೮.

**ಕರ್ಮಚತುಷ್ಟಯ:**

ಹಿಂದೆ ಹೇಳಿದಂತೆ, ಕರ್ಮವು ನಾಲ್ಕು ಪ್ರಕಾರವಾಗಿದೆ. ೧. ಶುಭಕರ್ಮ, ೨. ಅಶುಭಕರ್ಮ, ೩. ಜ್ಞಾನಕರ್ಮ, ೪. ಪ್ರಸಾದಕರ್ಮ. ಅಶುಭಕರ್ಮದಿಂದ ನರಕ, ಶುಭ ಕರ್ಮದಿಂದ ಸ್ವರ್ಗ, ಶುಭಾಶುಭ ಕರ್ಮದಿಂದ ವಿರಹಿತನಾದ ಜ್ಞಾನಿಯಾದರೆ ಮೋಕ್ಷ. ಈ ಮೂರನ್ನು ಬಿಟ್ಟು ಶಿವಪ್ರಸಾದವನ್ನು ಸಂಪಾದಿಸಿದರೆ ಅದರಿಂದ ಭಕ್ತಿಯು ಸಿದ್ಧಿಸುತ್ತದೆ. ಆದುದರಿಂದ ವೀರಶೈವನ ಕರ್ಮ ಪ್ರಸಾದಕರ್ಮ.

**ಪ್ರಸಾದೋ ಭಕ್ತಿಸಂಭವ:**

ಶಿವಪ್ರಸಾದದಿಂದ ಶಿವಭಕ್ತಿಯೂ, ಶಿವಭಕ್ತಿಯಿಂದ ಶಿವಪ್ರಸಾದವೂ ಲಭಿಸುವ ಕಾರಣ ಇವೆರಡಕ್ಕೂ ಬೀಜಾಂಕುರಗಳಂತೆ ಪರಸ್ಪರ ಜನ್ಯಜನಕಭಾವವಿದೆ.

ಪ್ರಸಾದಾದೇವ ಸಾ ಭಕ್ತಿ: ಪ್ರಸಾದೋ ಭಕ್ತಿಸಂಭವಃ ।
ಯಥೈವಾಂಕುರತೋ ಬೀಜಂ ಬೀಜತೋ ವಾ ಯಥಾಂಕುರಃ ॥[೧೪೭]

ಅಂದರೆ ಶಿವಾನುಗ್ರಹದಿಂದಲ್ಲದೆ ಶಿವಭಕ್ತಿಯು ಲಭಿಸದು; ಆ ಶಿವಭಕ್ತಿಯಿಂದಲೇ ಶಿವಾನುಗ್ರಹ ಸಾಧ್ಯ ಎಂದು ತಾತ್ಪರ್ಯ. ಇದು ಮಾಯಿದೇವನ ನಿರ್ಣಯವಾದರೂ ಈ ಕಲ್ಪನೆ ಆಗಮದ್ದೆಂದು ಕೆಲವರು ಹೇಳುತ್ತಾರೆ. ಆದರೆ ಭಾಗವತದಲ್ಲಿಯೂ ಇಂಥದ್ದೇ ಕಲ್ಪನೆಯಿದೆ. ಆಗಮಕ್ಕೂ ಇದು ಆಕರವೆಂದು ಹೇಳಲಾಗುತ್ತದೆ.[೧೪೮] ಆದುದರಿಂದ ಈ ಕಲ್ಪನೆ, ಆಗಮದ್ದಾಗಲಿ ಮಾಯಿದೇವನದಾಗಲೀ ಅಲ್ಲ ಎಂದು ಸ್ಪಷ್ಟವಾಗುತ್ತದೆ.

**ಜ್ಞಾನಭಕ್ತಿಗಳು:**

ಜ್ಞಾನಭಕ್ತಿಗಳಲ್ಲಿ, ಜ್ಞಾನವು ಮೊದಲು ಶಿವಜೀವರ ಭೇದಾಭೇದವನ್ನು ಬೋಧಿಸುವುದು; ಅನಂತರದಲ್ಲಿ ಭಕ್ತಿಯು ಶಿವಜೀವರ ಭೇದಾಭೇದವನ್ನು ಕಾರ್ಯತಃ ತೋರ್ಪಡಿಸುವುದು. ಆದುದರಿಂದ ಜ್ಞಾನಕ್ಕಿಂತ ಭಕ್ತಿಯೇ ಉತ್ತಮ ಎಂದು ಮಾಯಿದೇವ ನಿರ್ಣಯಿಸಿದ್ದಾನೆ.

**ಭಕ್ತಿಯ ಹಿರಿಮೆ:**

ಭಕ್ತಿಯು ಉಪಾಸನಾಮಾರ್ಗದಲ್ಲಿ ಮೊದಲು ಆತ್ಮನನ್ನು ಶಿವನಿಂದ ಬೇರೆಮಾಡಿ, ಕಡೆಗೆ ಶಿವನಲ್ಲಿ ಒಂದುಗೂಡಿಸುವುದು. ಎಂದರೆ, ಶಿವನಲ್ಲಿ ಆತ್ಮನು ಹಾಲಿನಲ್ಲಿ ತುಪ್ಪದಂತೆಯೂ, ಕಟ್ಟಿಗೆಯಲ್ಲಿ ಬೆಂಕಿಯಂತೆಯೂ, ಪ್ರವಾಹದಲ್ಲಿ ನೀರಿನಂತೆಯೂ ಅಡಕವಾಗಿ ಅಭೇದರೂಪದಿಂದಿದ್ದರೂ, ಮಥನಾದಿಕ್ರಿಯೆಯಿಂದ ಹಾಲಿನಿಂದ ತುಪ್ಪವನ್ನೂ, ಕಟ್ಟಿಗೆಯಿಂದ ಬೆಂಕಿಯನ್ನೂ, ಪ್ರವಾಹದಿಂದ ನೀರನ್ನೂ ಬೇರ್ಪಡಿಸುವಂತೆ, ಭಕ್ತಿಯು ಶಿವನಿಂದ ಆತ್ಮನನ್ನು ಬೇರ್ಪಡಿಸಿ, ಶಿವನನ್ನು ಉಪಾಸ್ಯನನ್ನಾಗಿಯೂ, ಜೀವನನ್ನು ಉಪಾಸಕನನ್ನಾಗಿಯೂ ಮಾಡಿ, ಕೊನೆಗೆ ಶಿವ-ಜೀವ ಐಕ್ಯವನ್ನುಂಟು ಮಾಡುತ್ತದೆ.

---

೧೪೭. ಶಿವಾನುಭವಸೂತ್ರಂ, ಅಧಿಕರಣ ೮, ಶ್ಲೋಕ ೩೧.

೧೪೮. "ವಾಯುವೀಯ ಸಂಹಿತೆಯು (ಶಿವಪುರಾಣ) ಶಿವ-ಜ್ಞಾನವನ್ನು ಎತ್ತಿಹಿಡಿಯಿತಷ್ಟೇ. ಅದು - 'ಶಿವೇ ಭಕ್ತಿರ್ನಸಂದೇಹಸ್ತಯಾ ಯುಕ್ತೋ ವಿಮುಚ್ಯತೇ' ಎಂದು ಹೇಳಿ 'ಪ್ರಸಾದೋ ಭಕ್ತಿಸಂಭವಃ' ಎನ್ನುವ ಭಾಗವತ ತತ್ತ್ವವನ್ನು ನಿರೂಪಿಸಿತು", ಎಸ್.ಕೆ. ರಾಮಚಂದ್ರರಾವ್ (೧೯೮೧) 'ಶೈವಧರ್ಮದ ಹಿನ್ನೆಲೆ' ಸಿದ್ಧಗಂಗಾಶ್ರೀ, ೧೯೮೧, ಪು. ೫೨೯.

**ಶಿವಾದ್ವೈತಭಕ್ತಿ :**

ಶಕ್ತಿವಿಶಿಷ್ಟನಾದ ಶಿವನು ಮೊದಲು, ಲಿಂಗಾಂಗ ರೂಪದಿಂದ ದ್ವಿವಿಧನಾಗಿ ಕಡೆಗೆ ಏಕರೂಪನಾಗುವನು. ಈ ಭೇದಾಭೇದ ಕಾರ್ಯವು ಶಿವಗತವಾದ ಶಕ್ತಿಯಿಂದಾಗಿರುತ್ತದೆ. ಎಂದರೆ, ಶಿವಜೀವರನ್ನೂ ಮೊದಲು ಬೇರ್ಪಡಿಸಿ, ಕೊನೆಗೆ ಸಮರಸಗೊಳಿಸುವುದೇ ಶಿವಶಕ್ತಿರೂಪವಾದ ಭಕ್ತಿಯ ಕಾರ್ಯ. ಇದನ್ನೇ ಶಿವಾದ್ವೈತಭಕ್ತಿ ಎಂದು ಕರೆಯಲಾಗಿದೆ. ಉದಾಹರಣೆಗೆ, ಒಬ್ಬನು ತನ್ನ ಕಣ್ಣನ್ನು ಸಂಕೋಚಗೊಳಿಸಿ ನೋಡಿದರೆ ಅಖಂಡವಾದ ಒಂದೇ ವಸ್ತು ಅವನಿಗೆ ಎರಡಾಗಿ ಕಾಣುತ್ತದೆ. ಅದರಂತೆ ಶಿವಾದ್ವೈತಭಕ್ತಿಯಲ್ಲಿ ಮೊದಲು ಉಪಾಸ್ಯ ಉಪಾಸಕ ಎಂದು ಎರಡಾಗಿ ಕಂಡದ್ದು, ಕಡೆಗೆ ಎರಡೂ ಏಕಾತ್ಮವಾಗಿ ಕಾಣುತ್ತದೆ.

**ಶಿವಪ್ರಸಾದದ ಕುರುಹು:**

ಶಿವಾದ್ವೈತಭಕ್ತಿಯಿಂದ ಶಿವಪ್ರಸಾದವು ಸಿದ್ಧಿಸುತ್ತದೆ. ಆ ಶಿವಪ್ರಸಾದದ ಹಿರಿಮೆ ಅತ್ಯದ್ಭುತ. ಶಿವಪ್ರಸಾದದಿಂದ ಆತ್ಮನಿಗೆ ಪ್ರತಿಯೊಂದು ಕಾರ್ಯ, ಕರ್ತೃ, ಕಾರ್ಯ ಮಾಡಿಸತಕ್ಕವನು ಮತ್ತು ಕಾರ್ಯ ಸಾಧನಗಳೆಲ್ಲವೂ ಸ್ವಸ್ವರೂಪವಾಗಿಯೇ ತೋರುತ್ತವೆ. ಅದರಂತೆ ಭೋಗ, ಭೋಗಿಸುವವನು, ಭೋಗದಾತ್ರ ಮತ್ತು ಭೋಗಸಾಧನಗಳೆಲ್ಲವೂ ಆತ್ಮರೂಪವಾಗಿಯೇ ಕಾಣುತ್ತವೆ. ಶಿವಪ್ರಸಾದದಿಂದ ಜೀವ-ಶಿವರು, ಅವರ ಅಭೇದ, ಭೇದ ಮಾಡತಕ್ಕವನೂ ಕೂಡ ತಾನೇ ಎಂದು ತೋರುತ್ತದೆ. ದೇಹ, ಇಂದ್ರಿಯಗಳು, ಪ್ರಾಣ, ಮನಸ್ಸು, ಬುದ್ಧಿ, ಅಹಂಕಾರಗಳು, ವಿಧಿ-ನಿಷೇಧ ಕಾರಣಗಳು, ಕಾಮ ಕ್ರೋಧಾದಿಗಳು, ಶಾಂತ್ಯಾದಿಗಳೆಲ್ಲವೂ ಶಿವಾಕಾರವಾಗಿಯೇ ಕಾಣುವುದು. ಈ ಬಗೆಯ ಶಿವಾನುಗ್ರಹ ಕುರುಹನ್ನೂ ಕರಬಲ್ಲದಂತೆ ತಂದು ಕೊಡುವ ಸರ್ವಸಿದ್ಧಿಪ್ರಸಾದವಾದದ್ದು ಶಿವಾದ್ವೈತಭಕ್ತಿ.

**ದ್ವೈತಭಕ್ತಿ-ಅದ್ವೈತಭಕ್ತಿ:**

ದ್ವೈತಭಕ್ತಿಯಲ್ಲಿ ಪೂಜ್ಯ-ಪೂಜಕರಿಗೆ ಐಕ್ಯವೆಂಬುದೇ ಇಲ್ಲ. ಆದ್ದರಿಂದ ಅದು ಸಂಸಾರ ಬಂಧ-ಮೋಚಕವಲ್ಲ. ಅದ್ವೈತಭಕ್ತಿಯಿಂದ ಸಂಸಾರ ಬಂಧವು ಕಳಚುತ್ತದೆ. ಆದುದರಿಂದ ಅದ್ವೈತಭಕ್ತಿಯೇ ಶ್ರೇಷ್ಠ.

**ಶಿವಾದ್ವೈತಭಕ್ತಿಯುಕ್ತನಾದ ಶಿವಯೋಗಿಯ ನಿಲುವು:**

ಶಿವಾದ್ವೈತಭಕ್ತಿಯುಕ್ತನಾದವನು ಶಿವಯೋಗಿ. ಆತನ ಎಲ್ಲ ಕ್ರಿಯೆಗಳು ಸುಟ್ಟಬಟ್ಟೆಯಂತೆ (ದಗ್ಧಪಟ) ಕೇವಲ ತೋರಿಕೆಗೆ ಮಾತ್ರ. ಸುಟ್ಟಬಟ್ಟೆ, ಬಟ್ಟೆಯಂತೆ ಕಾಣುತ್ತದೆಯೇ ಹೊರತು ಅದನ್ನು ಉಡಲು ಬರುವುದಿಲ್ಲ. ಅದರಂತೆ ಶಿವಯೋಗಿಯ ಕ್ರಿಯೆಗಳು ಲೀಲಾಮಾತ್ರವಾಗಿರುತ್ತವೆ. ಫಲಾಭಿಲಾಷೆಯಿಂದಮಾಡುವ ಕ್ರಿಯೆಗಳು ಬಂಧಕವಾಗಿ ಪರಿಣಮಿಸುತ್ತವೆ. ಫಲಾಭಿಲಾಷೆಯಿಲ್ಲದೆ ಶಿವಪ್ರೀತ್ಯರ್ಥವಾಗಿ ಮಾಡುವ ಶುದ್ಧಕ್ರಿಯೆಗಳು ಬಾಧಕವಾಗಲಾರವು. ಚಿತ್ರಪಟದಲ್ಲಿರುವ ಸ್ತ್ರೀಯರ ಹಾವ-ಭಾವ, ಮೈಮಾಟಗಳು ಭೋಗಾದಿ ಫಲವನ್ನು ಉಂಟುಮಾಡುವುದಿಲ್ಲ. ಅದರಂತೆ ಅದ್ವೈತಭಕ್ತಿಕ್ರಿಯೆಗೆ ಜನನ-ಮರಣಾದಿಗಳ ಫಲವಿರುವುದಿಲ್ಲ. ಚಿತ್ರಪಟದಲ್ಲಿರುವ ಸ್ತ್ರೀಯರ ನಾಭಿ-ಕುಚಗಳು, ತಗ್ಗು-ಉಬ್ಬಾಗಿ ಕಂಡರೂ ಅವು ಕೇವಲ ನೋಟಕ್ಕೆ ಮಾತ್ರ. ಕೈಯಾಡಿಸಿದರೆ ಎಲ್ಲ ಸಮನಾಗಿ ತೋರುವಂತೆ ಶಿವಯೋಗಿಗೆ ಅದ್ವೈತ ಕ್ರಿಯೆಯ ಫಲಾಫಲಗಳು ಸಮನಾಗಿರುತ್ತವೆ.

ಯಥಾ ನಾನಾವಿಧಾ ನದ್ಯೋ ನಾನಾವಿಧಜಲಾ ಅಪಿ।
ಸ್ಯಂದಾಮಾನಾ ಇಮಾಃ ಸರ್ವಾ ಅಕೂಪಾರಂ ಸಮಾಶ್ರಿತಾಃ ॥
ತದ್ರೂಪೇಣೈವ ದೃಶ್ಯಂತೇ ನಾಮರೂಪೇ ವಿಹಾಯ ಚ ।
ತಥಾಽದ್ವೈತಂ ಸಮಾಶ್ರಿತ್ಯ ಕ್ರಿಯಾ ನಾನಾವಿಧಾ ಅಪಿ ॥
ಅದ್ವೈತಭಕ್ತಿರೂಪೇಣ ದೃಶ್ಯಂತೇ ಭಕ್ತಿಯೋಗತಃ ।
ಕ್ರಿಯಾಕಾರಸ್ವರೂಪೇಣ ಪ್ರತಿತ್ಯಾಪ್ಯೇವ ಸರ್ವಥಾ ॥
ನ ಕೇವಲಕ್ರಿಯಾ ಹ್ಯಸ್ಯ ಲೀಲಾಮಾತ್ರಾ ಸ್ವಭಾವತಃ ।
ಅರ್ಚನಾರ್ಪಣರೂಪೇಣ ತತ್ಸರ್ವಂ ತು ಪ್ರತೀಯತೇ ॥[೧೪೯]

ನಾನಾವಿಧವಾದ ನದಿಗಳೂ, ಜಲಾಶಯಗಳೂ ಸ್ವಸ್ಥಾನದಲ್ಲಿ ಭಿನ್ನಭಿನ್ನವಾಗಿ ಕಾಣುತ್ತಿದ್ದರೂ ಅವೆಲ್ಲವೂ ಸಮುದ್ರವನ್ನು ಸೇರಿ, ಏಕಾಕಾರವನ್ನು ಹೊಂದುವಂತೆ ಶಿವಯೋಗಿಯ ನಾನಾವಿಧವಾದ ಕ್ರಿಯೆಗಳು ಮೊದಲು ಭಿನ್ನಭಿನ್ನವಾಗಿ ತೋರಿದರೂ, ಅದ್ವೈತಭಕ್ತಿಯ ಪರಿಣಾಮದಿಂದಾಗಿ ಅದ್ವೈತಭಕ್ತಿರೂಪದಿಂದಲೇ ಅವು ತೋರುವವು. ಶಿವಯೋಗಿಯ ಕ್ರಿಯೆಯು, ಜನರ ಕಣ್ಣಿಗೆ ಕ್ರಿಯಾಕಾರದಿಂದ ತೋರುತ್ತಿದ್ದರೂ ಅದು ಕ್ರಿಯೆಯಲ್ಲ, ಅವನ ಲೀಲೆ ಮಾತ್ರ. ಆ ಲೀಲೆಯು, ಶಿವಯೋಗಿಗೆ ಮೇಲೆ ಹೇಳಿದಂತೆ, ಅದ್ವೈತಭಕ್ತಿ ರೂಪದಿಂದ ಅಥವಾ ಶಿವಾರ್ಚನ ಶಿವಾರ್ಪಣರೂಪದಿಂದ ಬೆಳಗುತ್ತಿರುವುದಲ್ಲದೆ ಕ್ರಿಯಾಕಾರದಿಂದಲ್ಲ.

**ಶಿವಾದ್ವೈತಭಕ್ತಿಲೀಲೆ:**

ಶಿವಾದ್ವೈತಭಕ್ತಿಯಲ್ಲಿ ಅನುರಾಗಪರ ಮತ್ತು ವಿರಾಗಪರ ಎಂಬ ಭೇದಗಳಿದ್ದರೂ ಭಕ್ತಿಯು ಈ ಭೇದಗಳಿಂದ ನಿರ್ಲಿಪ್ತವಾಗಿರುತ್ತದೆ. ಶಿವಾದ್ವೈತಭಕ್ತಿದೇವತೆ ಲೀಲೆಯಿಂದ ಎಲ್ಲ ಆಕಾರಗಳನ್ನು ಧರಿಸಿ, ಕ್ರೀಡಿಸಿ ತನ್ನನ್ನು ಶಿವನಿಗೆ ಅರ್ಪಿಸಿಕೊಂಡು ಶಿವಾರ್ಪಿತವನ್ನೇ ತಾನೂ ಅನುಭವಿಸುತ್ತಾಳೆ.

**ಕರ್ಮ-ಭಕ್ತಿಗಳಿಗಿರುವ ಅಂತರ:**

ಕತ್ತಲೆ-ಬೆಳಕಿನ ವ್ಯವಹಾರವು ರಾತ್ರಿಯಲ್ಲಿ ಮಾತ್ರ; ಹಗಲಿನಲ್ಲಿ ಅಲ್ಲ. ಅದರಂತೆ ಪುಣ್ಯ-ಪಾಪಗಳ ಸಂದರ್ಭ ಕರ್ಮಮತಗಳಲ್ಲಿ ಮಾತ್ರ; ಶಿವಭಕ್ತಿ, ಮತದಲ್ಲಲ್ಲ. ಹಗಲಿನಲ್ಲಿ ಸೂರ್ಯಪ್ರಕಾಶವವೊಂದೇ ಬೆಳಗುವಂತೆ ಶಿವತೇಜಸ್ಸೊಂದೇ ಬೆಳಗುತ್ತದೆ.

**ಪಂಚಮಪುರುಷಾರ್ಥ:**

ಶಿವಪ್ರಸಾದದಿಂದ ಶಿವಜ್ಞಾನ. ಅದರಿಂದ ಮೋಕ್ಷ. ಮೋಕ್ಷದ ತರುವಾಯವೂ ಸ್ವತಂತ್ರವಾದ ಭಕ್ತಿಯು ಶ್ರೇಷ್ಠತರವಾಗಿ ನಿಜಲೀಲೆಯಿಂದ ಬೆಳಗುತ್ತದೆ.

ಯಥಾಚಿತ್ರಪಟಸ್ತ್ರೀಣಾಂ ವಿಲಾಸೋ ನೈವ ಭಾಧತೇ ।
ತಥಾಽದ್ವೈತಕ್ರಿಯಾಣಾಂ ಚ ವಿಲಾಸೋ ನೈವ ಬಾಧತೇ॥

೧೪೯. ಶಿವಾನುಭವಸೂತ್ರಂ, ಅಧಿಕರಣ ಟ, ಶ್ಲೋಕ ೬೧-೬೪.

ಭಕ್ತಿರ್ಗುರುತರಾ ಭಾತಿ ಸ್ವತಂತ್ರಾ ನಿಜಲೀಲಯಾ ।
ಧರ್ಮಾದಿಪುರುಷಾರ್ಥಾಣಾಂ ಚತುರ್ಣಾಂ ಪರತಃ ಪರಾ ॥[೧೫೦]

ಎಂದರೆ, ಧರ್ಮ, ಅರ್ಥ, ಕಾಮ, ಮೋಕ್ಷವೆಂಬ ಪುರುಷಾರ್ಥಗಳಿಗಿಂತ ಭಕ್ತಿ ಮಿಗಿಲಾದದ್ದು.

ಪಂಚಮಃ ಪುರುಷಾರ್ಥೋ ಹಿ ಭಕ್ತಿಃ ಶೈವೀ ಸನಾತನೀ ।
ಲೋಕಯೋರುಭಯೋರೈಹಿಕಾಮುಷ್ಮಿಕ ಪದಾರ್ಥಯೋಃ ॥[೧೫೧]

ಈ ಸನಾತನವಾದ ಶಿವಭಕ್ತಿಯು ಪಂಚಮಪುರುಷಾರ್ಥವೆನಿಸಿಕೊಂಡಿದೆ ಎಂದು ಮಾಯಿದೇವ ನಿರ್ಧರಿಸಿದ್ದಾನೆ. ಐದನೆಯ ಈ ಪುರುಷಾರ್ಥದಲ್ಲಿ ಇಹಪರ ಲೋಕಗಳ ತೊಡಕಿಲ್ಲ. ಇದು ಸ್ವತಂತ್ರ. ಈ ಭಕ್ತಿಯು ತನ್ನನ್ನು ಆಶ್ರಯಿಸಿದ ಫಲಾಕಾಂಕ್ಷಿಗಳ ಭಾವನೆಯಂತೆ ಫಲವನ್ನು ನೀಡುತ್ತದೆ. ಆದ್ದರಿಂದ ಇದು ನಿರುತ್ತರ ಹಾಗೂ ಪರಿಪೂರ್ಣವಾದದ್ದು.

**ಭಾವನೆಯಂತೆ ಫಲಗಳು :**

ಈ ಬಗೆಯಾದ ಭಕ್ತಿಗೆ ಕೆಲವು ಫಲಗಳನ್ನು ಹೇಳಲಾಗಿದೆ. ಮಾಯಿದೇವನು ಈ ಸಂದರ್ಭದಲ್ಲಿ ಪುರಾಣಗಳನ್ನು ಹೆಚ್ಚು ಅವಲಂಬಿಸಿದಂತಿದೆ. ಅದನ್ನಿಲ್ಲಿ ಅವಲೋಕಿಸಬಹುದು.

ಕೇಚಿತ್ಪ್ರಾಣೈಸ್ಸಹ ಶಿವಪದಂ ಕೇಚಿದಾತ್ಮೀಯಕಾಯೈಃ ।
ಕೇಚಿದ್ದಾರೈರ್ನಿಜತನುಭವೈರ್ಮಂದಿರೈರ್ಬಂಧುವರ್ಗೈಃ ॥
ಗ್ರಾಮೈರ್ದೇಶೈಸ್ಸಹ ಪರಿಜನೈಃ ಕೇಚಿದನ್ಯೇ ಕ್ರಮೇಣ ।
ತ್ಯಕ್ತ್ವಾ ಚೈ ತತ್ಸಕಲಮಪಿ ಯಾಂತಿ ಸ್ವಯಂ ಚೈವ ಭಕ್ತಾಃ ॥[೧೫೨]

ಎಂದರೆ, ಇಂತಹ ಭಕ್ತಿಯಿಂದ ಕೆಲವರು ಪ್ರಾಣ ಸಹಿತರಾಗಿ ಕೆಲವರು ಸ್ಥೂಲಶರೀರದಿಂದ, ಕೆಲವರು ಹೆಂಡಿರುಮಕ್ಕಳು ಬಂಧುಬಳಗಗಳೊಡನೆ ಕೈಲಾಸ ಪಡೆಯುತ್ತಾರೆ. ಕೆಲವರು ತಮ್ಮ ಗ್ರಾಮ, ದೇಶ, ಕೋಶ ಪರಿವಾರಗಳೊಡನೆ ಶಿವಸಾನಿಧ್ಯ ಹೊಂದಿದ್ದಾರೆ. ಕೆಲವರು ಎಲ್ಲವನ್ನೂ ಬಿಟ್ಟು ತಾವು ಮಾತ್ರ ಹೋಗಿದ್ದಾರೆ. ಈ ವಿಚಾರವನ್ನು ಹೀಗೂ ಅರ್ಥೈಸಬಹುದು. ಪ್ರಾಣಾದಿವಸ್ತು ವಿಷಯಗಳಲ್ಲಿ ಅನುರಾಗವುಳ್ಳ ಭಕ್ತರು ಅವುಗಳೊಡನೆಯೇ ಶಿವೈಕ್ಯರಾಗಿರುವರು. ಅವುಗಳ ಮೇಲಣ ಅನುರಾಗವನ್ನು ಬಿಟ್ಟವರು ತಾವು ಮಾತ್ರವೇ ಶಿವನನ್ನು ಹೊಂದಿದರು ಎಂದು ಚನ್ನಬಸವಣ್ಣನವರ ವಚನವೊಂದು ಮೇಲಿನದನ್ನೇ ಹೀಗೆ ಸಮರ್ಥಿಸುತ್ತದೆ:

ಕಾಯಾನುಭಾವಿಗಳು ಕಾಯದಲೆ ಮುಕ್ತರು; ಜೀವಾನುಭಾವಿಗಳು ಜೀವದಲೆ ಮುಕ್ತರು;
ಪ್ರಾಣಾನುಭಾವಿಗಳು ಪ್ರಾಣದಲೆ ಮುಕ್ತರು; ಪವನಾಮಭಾವಿಗಳು ಪವನದಲೆ ಮುಕ್ತರು;
ಯೋಗಾನುಭಾವಿಗಳು ಯೋಗದಲೆ ಮುಕ್ತರು; ಲಿಂಗಾನುಭಾವಿಗಳಿಗೆ ಇವರನೆಂತು ಸರಿಯೆಂಬೆ?
ನಿರವಯವ ಸ್ವಯಂ ಪ್ರಕಾಶವಾಗಿಪ್ಪ ಲಿಂಗದಲ್ಲಿ ಕೂಡಲಚನ್ನಸಂಗಯ್ಯಾ, ನಿಮ್ಮ ಶರಣ.

---

೧೫೦. ಶಿವಾನುಭವಸೂತ್ರಂ, ಅಧಿಕರಣ ೮, ಶ್ಲೋಕ ೭೭.

೧೫೧. ಅದೇ, ಶ್ಲೋಕ ೭೮.

೧೫೨. ಅದೇ, ಶ್ಲೋಕ ೮೧.

ಈ ವಚನದಲ್ಲಿ ಸಾಮರಸ್ಯ ಹೊಂದಿದ ಲಿಂಗೈಕ್ಯನ ಮಹತ್ವ ಎದ್ದು ಕಾಣುತ್ತದೆ. ಇದೆಲ್ಲಕ್ಕೂ ಮುಖ್ಯ ಭಕ್ತಿಯೆಂಬುದು ಗಮನಾರ್ಹ. ಈ ಭಕ್ತಿಯೇ ಪಂಚಮಪುರುಷಾರ್ಥವೆನಿಸಿಕೊಂಡು ಪರಮಾರ್ಥದಾಯಿನಿಯೂ, ಪರತತ್ತ್ವವೇದಿನಿಯೂ, ಭವದೋಷಹಾರಿಣಿಯೂ, ಶಿವಭಾವಕಾರಿಣಿಯೂ ಆಗಿದೆ. ಇಲ್ಲಿ ಸಣ್ಣದೊಂದು ದೋಷ ಕಂಡುಬರುತ್ತದೆ. ಬ್ರಹ್ಮಸೂತ್ರಗಳಿಗೆ ಭಾಷ್ಯ ಬರೆದ ಭಾಷ್ಯಕಾರರು ಶೂದ್ರ ಮತ್ತು ಸ್ತ್ರೀಯರಿಗೆ ವೇದಾಧಿಕಾರವಿಲ್ಲವೆಂದು ಸಾಧಿಸುತ್ತಾರೆ. ಅದನ್ನೇ ಬೇರೊಂದು ರೀತಿಯಲ್ಲಿ ಶ್ರೀಪತಿ ಮತ್ತು ನೀಲಕಂಠರು ಉಳಿಸಿಕೊಂಡುದುದು ಕಂಡುಬರುತ್ತದೆ. ಈ ಸಂದರ್ಭದಲ್ಲಿ ಮಾಯಿದೇವ ಕೈಲಾಸ ಅಥವಾ ಶಿವಸ್ಥಾನ ಕುರಿತು ಪುರುಷರಿಗೆ ಮಾತ್ರ ಹೇಳಿದಂತೆ ಕಾಣುತ್ತದೆ. 'ಕೇಚಿದ್ವಾರೈರ್ನಿಜತನು.......' ಎಂಬಲ್ಲಿ ಅದು ಒಡೆದು ತೋರುತ್ತದೆ. 'ಒಳಗೆ ಸುಳಿವಾತ್ಮ ಹೆಣ್ಣೂ ಅಲ್ಲ ಗಂಡೂ ಅಲ್ಲ' ಎಂಬ ಶರಣರ ಅಭಿಪ್ರಾಯಕ್ಕೆ ಇದು ವಿರುದ್ಧವೆನಿಸುತ್ತದೆ. ಶರಣರಲ್ಲಿ ಸ್ತ್ರೀ ಪುರುಷರೆಂಬ ಭೇದವಿಲ್ಲವೆಂಬುದು ಸ್ಪಷ್ಟ. ಎಲ್ಲರೂ ಅಧ್ಯಾತ್ಮದೃಷ್ಟಿಯಿಂದ ಸಮಾನರು. ಮಾಯಿದೇವನು ಇಲ್ಲಿ ಮಡದಿ, ಮಕ್ಕಳು ಮೊದಲಾದವರನ್ನು ವಿಷಯ ವ್ಯಾಮೋಹವೆಂಬ ಅರ್ಥದಲ್ಲಿ ಪರಿಗಣಿಸಿದಂತಿದೆ.

**ಷಟ್‌ಸ್ಥಲಜ್ಞನೇ ವೀರಶೈವ:**

ಭಕ್ತಿಯ ಮಹಿಮೆಯನ್ನು ತಿಳಿದು ಷಟ್‌ಸ್ಥಲಜ್ಞವೀರಶೈವನು ಶಿವಾದ್ವೈತಪರಾಯಣನಾಗಿ, ಭಕ್ತಿವಿಲಾಸ ವೈಭವದಲ್ಲಿದ್ದೂ ಶಿವಪ್ರಸಾದವನ್ನು ಹೊಂದಿ, 'ಸರ್ವಸಾಕ್ಷಿಯಾದ ಶಿವನೇ ತಾನು, ಆತ್ಮಪ್ರಭುವಾದ ಶಿವನ ದಾಸನು ನಾನು' ಎಂದು ಕೊಂಡಾಡುತ್ತ ಲೀಲೆಯಿಂದ ತಾನೇ ತಾನಾಗಿ ಸಂಚರಿಸುತ್ತಾನೆ.

ಯಾವನು ಮೇಲೆ ಹೇಳಿದಂತೆ ಭಕ್ತಿಯ ರಹಸ್ಯವನ್ನರಿತು ಅದರಂತೆ ಆಚರಿಸುವನೋ ಅವನೇ 'ಏಕೇನ ಜನ್ಮನಾ ಮುಕ್ತಿರ್ವೀರಾಣಾಂತು ಮಹೇಶ್ವರಿ' ಎಂಬಂತೆ ಒಂದೇ ಜನ್ಮದಲ್ಲಿ ಮುಕ್ತನಾಗುತ್ತಾನೆ[೧೫೩] ಎಂದು ಹೇಳಲಾಗಿದೆ.

ಪರಮರಹಸ್ಯವು ವೇದವೇದಾಂತ ಸಾರವೂ, ಭವಬಾಧೆಗೆ ದೂರವೂ ಆದ ಬ್ರಹ್ಮವಿದ್ಯೆಯನ್ನು ಸಮರ್ಥರಿಗೆ ಬೋಧಿಸಬೇಕು. ಏಕೆಂದರೆ :

ಗುರುಶಿವಪದಭಕ್ತ್ಯಾ ಪ್ರಾಪ್ತವಿದ್ಯಾಯ ದೇಯಂ
ವಿರಹಿತಘನಭಕ್ತಿ ಶ್ರೇಯಸೇ ನೈವದೇಯಂ ।
ನಾಶಿಷ್ಯೇಭ್ಯಶ್ಚ ತೇಭ್ಯೋ ವಾ ನಾಭಕ್ತೇಭ್ಯಃ ಕದಾಚನ
ಗ್ರಾಹಯೇದೀದೃಶಾನರ್ಥಾನಿತಿವೇದಾನುಶಾಸನಂ ॥[೧೫೪]

ಇಂತಹ ತತ್ತ್ವಾರ್ಥಗಳನ್ನು ಶಿಷ್ಯರಾಗದ ಅಥವಾ ಭಕ್ತರಾಗದ ಮಾನವರಿಗೆ ಬೋಧಿಸಕೂಡದು ಹೀಗೆಂದು ವೇದಾನುಶಾಸನವಿದೆ ಎಂದು ಹೇಳಿ, ಮಾಯಿದೇವನು ಶಿವಾನುಭವಸೂತ್ರವನ್ನು ಎಂಟನೆಯ ಅಧಿಕರಣಕ್ಕೆ ಮುಕ್ತಾಯಗೊಳಿಸುತ್ತಾನೆ.*

---

೧೫೩. ಡಾ. ಎಂ.ಜಿ. ನಂಜುಂಡಾರಧ್ಯ, (ಸಂ) ೧೯೮೬, ಶಿವಾಗಮಸೌರಭ, ಪು. ೫೮.

೧೫೪. ಶಿವಾನುಭವಸೂತ್ರಂ, ಅಧಿಕರಣ ೮, ಶ್ಲೋಕ ೮೮.

* ಲಕ್ಕಣ್ಣದಂಡೇಶನು ತನ್ನ ಶಿವತತ್ವಚಿಂತಾಮಣಿ (ಸಂಧಿ ೪೮ರಿಂದ ೫೪)ಯಲ್ಲಿ ಶಿವಾನುಭವಸೂತ್ರದ ಸಾರವನ್ನೇ ಷಟ್ಪದಿಯಲ್ಲಿ ಹೇಳಿದ್ದಾನೆ.

ಶಿವಾನುಭವಸೂತ್ರದ ಪ್ರಕಾರ ಜೀವ-ಜಗತ್ತು-ಈಶ್ವರ-ಬಂಧ-ಮೋಕ್ಷ-ಮೋಕ್ಷೋಪಾಯ ಮುಂತಾಗಿ ಇಲ್ಲಿಯವರೆಗೆ ಗಮನಿಸಿದ್ದಾಯ್ತು. ಇವುಗಳಲ್ಲಿ ಮೋಕ್ಷ ಸ್ವರೂಪ ಕುರಿತು ವೀರಶೈವರು ಏಕಾಭಿಪ್ರಾಯ ಹೊಂದಿಲ್ಲ. ಒಬ್ಬೊಬ್ಬರದೂ ಒಂದೊಂದು ಅಭಿಪ್ರಾಯ, ಬೇರೆಯಾಗಿರುವುದು ಕಂಡುಬರುತ್ತದೆ.

**ಮೋಕ್ಷ ವಿಷಯದಲ್ಲಿ ಶ್ರೀಪತಿ ಪಂಡಿತನ ಮತ:**

ಶ್ರೀಪತಿ ಪಂಡಿತನು 'ಅಧಿಕಂತು ಭೇದ ನಿರ್ದೇಶಾತ್'[೧೫೫] ಎಂಬ ಸೂತ್ರದ ಭಾಷ್ಯದಲ್ಲಿ ಮೋಕ್ಷದ ವಿಷಯದಲ್ಲಿ - ಶ್ರೀಕಂಠಾಚಾರ್ಯನ (ಈ ಶ್ರೀಕಂಠಾಚಾರ್ಯ ವೀರಶೈವ ಆಚಾರ್ಯ ಎಂಬುದರ ಬಗೆಗೆ ವಿವಾದವಿದೆ. ಮರಿತೋಂಟದಾರ್ಯನು ತನ್ನ 'ವೀರಶೈವಾನಂದ ಚಂದ್ರಿಕೆ'ಯಲ್ಲಿ ಈತನ ಅಭಿಪ್ರಾಯಗಳನ್ನು ಖಂಡಿಸಿದ್ದಾನೆ. ಕೆಲವರು ಈತನನ್ನೇ ನೀಲಕಂಠ ಎಂದೂ ಕರೆದಿದ್ದಾರೆ.) ಮತವನ್ನು ನಿರಾಕರಿಸಿ, ತನ್ನ ಮತವನ್ನು ಹೀಗೆ ಸಮರ್ಥಿಸುತ್ತಾನೆ - 'ಮುಕ್ತಾತ್ಮರಿಗೆ ದಿವ್ಯಮಂಗಳ ವಿಗ್ರಹ ಸರ್ವಜ್ಞತ್ವ-ಸರ್ವೈಶ್ವರ್ಯ ಮೊದಲಾದ ಪರಶಿವನ ಸಾದೃಶ್ಯ ಪ್ರಾಪ್ತಿಯೇ ಮೋಕ್ಷವು. 'ಕೈವಲ್ಯಂ' ಎಂದರೆ ಶಿವನಲ್ಲಿ ಅಭೇದವನ್ನು ಹೊಂದುವುದು ಎಂಬ ಮೋಕ್ಷವು ಸಂಭವಿಸುವುದಿಲ್ಲ' ಎಂದು ಶ್ರೀಕಂಠಾಚಾರ್ಯನ ಅಭಿಪ್ರಾಯ ಯುಕ್ತವಲ್ಲ ಎನ್ನುತ್ತಾನೆ. (ಆಶ್ಚರ್ಯವೆಂದರೆ ಶ್ರೀಕಂಠಭಾಷ್ಯದಲ್ಲಿ ಲಿಂಗಧಾರಣ ವಿಚಾರವು ಎಲ್ಲಿಯೂ ಕಂಡುಬರುವುದಿಲ್ಲ. ಆದರೆ ಶ್ರೀಪತಿಯು ಅಥ ಎಂಬುದಕ್ಕೆ ಇಷ್ಟಲಿಂಗವೆಂದು ಅರ್ಥೈಸಿರುವುದನ್ನು ಶ್ರೀಕರಭಾಷ್ಯದಲ್ಲಿ ಕಾಣಬಹುದು). ಇವರಿಬ್ಬರಿಗಿಂತ ಮಾಯಿದೇವನ ಸಾಮರಸ್ಯ ಮೋಕ್ಷ ವಿಚಾರವು ವಿಶಿಷ್ಟವೆನಿಸುತ್ತದೆ. ವಚನಶಾಸ್ತ್ರ ಇದೇ ತರಹದ ಮೋಕ್ಷವನ್ನು ನಿರೂಪಿಸುತ್ತದೆ. ಪ್ರಭುದೇವನ ವಚನವೊಂದನ್ನಿಲ್ಲಿ ಉದಾಹರಿಸಬಹುದು.

> ಎಲೆ ಮನವೇ, ಎಲ್ಲಿ ಹವಣಿಸಬಾರದ ಅಖಂಡ ಬೆಳಗು
> ತೋರುತ್ತಿಹುದು, ಅದೀಗ ನಿನ್ನ ನಿಜ. ಎಲೆ ಮನವೇ,
> ಅವಲ್ಲಿ ನೀನೆಂಬ ಸೆರೆ ಹಿಂಗಿ ತಾನೇ ತೋರುತ್ತಿಹುದು,
> ಅದೀಗ ನಿನ್ನ ನಿಜ. ಎಲೆ ಮನವೇ, ನಿನ್ನ ನಿಜವರನರಿಯಬಲ್ಲಡೆ,
> ಅದೇ ಬ್ರಹ್ಮಜ್ಞಾನ, ಅದೇ ಕೇವಲ ಮುಕ್ತಿ, ಅದೇ ನಮ್ಮ ಗುಹೇಶ್ವರ
> ನರಿವ ಸಹಜ ಭಕ್ತಿಯ ಕುಳ ಕಾಣಾ.
> ಎಲೆ ಮನವೆ, ನೀನಿದ ನಿಶ್ಚಯಿಸಿಕೊ ಮರೆಯದೆ.[೧೫೬]

ಈ ಸಂದರ್ಭದಲ್ಲಿ ಮೋಕ್ಷಸ್ವರೂಪ ಕುರಿತು ಡಾ. ಎಸ್.ಸಿ. ನಂದಿಮಠ ಅವರ ಮಾತುಗಳು ಗಮನಾರ್ಹವಾಗಿವೆ. "Nilakantha understands the Aikyasthala as resulting, not in complete union, but in Samarasya, interpreted as "Union in blissful experience". The term Samarasya is used by Mayideva and other Virasaiva teachers in the sense of blissful union where individuality and consciousness cease to exist, as for example in the case of a man when he is in the arms of his beloved. It seems that samarasya does not indicate the final stage, but that preceding the final one".[೧೫೭] ಡಾ. ನಂದೀಮಠರ ಈ ಸ್ಪಷ್ಟೀಕರಣವು

---

೧೫೫. ಡಾ. ಮರುಳಸಿದ್ಧಯ್ಯ (ಸಂ) (೧೯೭೭) ಶ್ರೀಕರಭಾಷ್ಯ, ಪು. ೪೦೦.

೧೫೬. ರಂಗನಾಥ ದಿವಾಕರ, ೧೯೩೬, ವಚನಶಾಸ್ತ್ರ ರಹಸ್ಯ, ಪು. ೫೫.

೧೫೭. A Handbook of Virasaivism, ೧೯೪೨, ಪು. ೧೭೫.

ಡಾ. ಆರ್.ಜಿ. ಭಂಡಾರಕರ ಅವರ ವೀರಶೈವ ಮೋಕ್ಷ ಕುರಿತಾದ ಅಭಿಪ್ರಾಯಕ್ಕೆ ಸಂಬಂಧಿಸಿದುದಾಗಿದೆ. ಅಲ್ಲದೆ ಇಲ್ಲಿ ಉಲ್ಲೇಖಗೊಂಡ ನೀಲಕಂಠಶಿವಾಚಾರ್ಯನ ಅಭಿಪ್ರಾಯ ಶ್ರೀಪತಿಪಂಡಿತ ನಿರಾಕರಿಸಿದ ನೀಲಕಂಠನದಲ್ಲ. ಈತ 'ಕ್ರಿಯಾಸಾರ' ಕೃತಿ ಕರ್ತೃ ನೀಲಕಂಠ. ಇಲ್ಲಿಯೂ ಗಮನಿಸುವಂಥದ್ದೆಂದರೆ, ಈ ನೀಲಕಂಠನೂ ಮೋಕ್ಷ ವಿಷಯದಲ್ಲಿ ಭಿನ್ನಾಭಿಪ್ರಾಯ ಹೊಂದಿದ್ದಾನೆಂದು ತಿಳಿದುಬರುತ್ತದೆ. ಒಟ್ಟಿನಲ್ಲಿ ಮಾಯಿದೇವ ಹಾಗೂ ವಚನಕಾರರು, ಶ್ರೀಪತಿಪಂಡಿತ ಮೊದಲಾದವರ ಅಭಿಪ್ರಾಯಗಳಲ್ಲಿ ಪ್ರತ್ಯೇಕಗೊಳ್ಳುತ್ತಾರೆ.

ಡಾ. ನಂದೀಮಠರು 'ಸಾಮರಸ್ಯ'ದ ಕೊನೆಯ ಹಂತವನ್ನು ಸೂಚಿಸುವ ಸಂದರ್ಭದಲ್ಲಿ, ಸಾಮರಸ್ಯವೆಂಬುದು ಕೊನೆಯ ಹಂತಕ್ಕಿಂತ ಮೊದಲಿನ ಹಂತವನ್ನು ಸೂಚಿಸುವಂತೆ ತೋರುತ್ತದೆಯೆಂದು ಹೇಳಿರುವುದು ಕುತೂಹಲಕರವಾಗಿದೆ. 'ಲಿಂಗ' ಹಾಗೂ 'ಅಂಗ' ಪದಗಳು ಸಾಮರಸ್ಯ ಮೋಕ್ಷವನ್ನು ಪ್ರತಿಪಾದಿಸುವಲ್ಲಿ ಹೆಚ್ಚಿನ ಮಹತ್ವ ಪಡೆದಿವೆ. ನಂದೀಮಠರ ಅಭಿಪ್ರಾಯವು ಇದನ್ನೇ ಧ್ವನಿಸುತ್ತದೆ.

**ಬ್ರಹ್ಮ ಹಾಗೂ ಶಿವಪದಗಳು:**

'ಬ್ರಹ್ಮ'ವೆಂಬ ಪದದಲ್ಲಿ ಮೋಕ್ಷದಾಯಕವಾದುದೆಂಬ ಭಾವನೆಯು ಬರುವುದಿಲ್ಲ. 'ಬ್ರಹ್ಮ' ಎಂಬ ಪದವು ಬ್ರಹ್ಮನನ್ನೊ ಪರಬ್ರಹ್ಮನನ್ನೋ ನಿರ್ದೇಶಿಸುತ್ತದೆ. ಹಾಗೆಯೇ ಶಿವನೆಂಬ ಪದವು ನಿಷ್ಕಲ ಪರತತ್ತ್ವವನ್ನೇ ನಿರ್ದೇಶಿಸುವುದು. ಆ ಪದಗಳನ್ನು ಸಂದರ್ಭಾನುಸಾರವಾಗಿ ಅರ್ಥ ಮಾಡಿಕೊಳ್ಳಬೇಕಾಗುತ್ತದೆ.

**'ಲಿಂಗ', 'ಅಂಗ' ಪದಗಳ ಯೋಜನೆ:**

'ಲಿಂಗ' ಪದವು ಪರಬ್ರಹ್ಮನನ್ನು ಸೂಚಿಸುವುದೆಂದು ಹಿಂದೆಯೇ ಹೇಳಲಾಯಿತು. ಜೀವಾತ್ಮನೆಂಬರ್ಥದಲ್ಲಿ 'ಅಂಗ'ವೆಂಬ ಪದವನ್ನು ವಚನಕಾರರು ಮೊದಲು ಉಪಯೋಗಿಸಿದರು. 'ಶಿವ', 'ಜೀವ' ಎಂಬ ಪದಗಳು ರೂಢಿಯಲ್ಲಿದ್ದು ಎಲ್ಲರಿಗೂ ಪರಿಚಿತವಾಗಿದ್ದರೂ, ಅದೇ ಅರ್ಥದಲ್ಲಿ 'ಲಿಂಗ, 'ಅಂಗ' ಎಂಬ ಪದಗಳನ್ನು ವಚನಕಾರರು ಹಾಗೂ ಮಾಯಿದೇವ ಉಪಯೋಗಿಸಿ, ತೊಡಕನ್ನೇಕೆ ಮಾಡಿರುವರೆಂದು ವೀರಶೈವರೂ ಸಹ ಕೇಳುವುದುಂಟು. ಉದ್ದೇಶಪೂರ್ವಕವಾಗಿಯೇ ಈ ಪದಗಳನ್ನು ಅವರು ರೂಪಿಸಿಕೊಂಡಿದ್ದಾರೆನಿಸುತ್ತದೆ.

ಶಿವಾನುಭವಸೂತ್ರದಲ್ಲಿ ಹೇಳಿದಂತೆ :

> ಲಿಂಗಸ್ಥಲಂ ಶಿವಃ ಸಾಕ್ಷಾಜ್ಜೀವಾತ್ಮಾಂಗಸ್ಥಲಂ ಭವೇತ್ ।
> ಲಿಂಗಾಂಗಸ್ಥಲಯೋರೈಕ್ಯಂ ಶಿವಜೀವೈಕ್ಯಮೇವ ಹಿ ॥[೧೫೮]

ಮೊದಲು ಲಿಂಗಾಂಗಸ್ಥಲದ ಐಕ್ಯವನ್ನು ಸೂಚಿಸಿ, ನಂತರ ಅದನ್ನು ಶಿವಜೀವೈಕ್ಯವೆಂದು ಅರ್ಥೈಸಲಾಗಿದೆ. ಶಿವಜೀವೈಕ್ಯವನ್ನು ವಚನಕಾರರು 'ಲಿಂಗಾಂಗ ಸಾಮರಸ್ಯ'ವೆನ್ನುವರು. ಶಿವಜೀವೈಕ್ಯವನ್ನು ಪ್ರತಿಪಾದಿಸುವಾಗ ಶಿವ, ಜೀವ ಎಂಬ ಪದಗಳು ಐಕ್ಯವನ್ನು ಸೂಚಿಸುವುದಿಲ್ಲ. ಲಿಂಗ ಹಾಗೂ ಅಂಗ ಎಂಬ ಪದಗಳು ಇದನ್ನು ಸೂಚಿಸಲು ಸಮರ್ಥವಾಗಿವೆ.

---

೧೫೮. ಶಿವಾನುಭವಸೂತ್ರಂ, ಅಧಿಕರಣ ೨, ಶ್ಲೋಕ ೩೩.

ಪದಗಳ ಯೋಜನೆಯಲ್ಲಿ ನಿರ್ದಿಷ್ಟ ದೃಷ್ಟಿ:

ಶಿವಾನುಭವಸೂತ್ರದಲ್ಲಿ ಹೇಳಿದಂತೆ :

ಲೀಯತೇ ಗಮ್ಯತೇ ಯತ್ರ ಯೇನ ಸರ್ವಂ ಚರಾಚರಂ ।
ತದೇತಲ್ಲಿಂಗಮಿತ್ಯುಕ್ತಂ ಲಿಂಗತತ್ತ್ವಪರಾಯಣೈಃ ।।
ಅಮಿತಿ ಬ್ರಹ್ಮ ಸನ್ಮಾತ್ರಂ ಗಚ್ಛತೀತಿ ಗಮುಚ್ಯತೇ ।
ರೂಪ್ಯತೇऽಂಗಮಿತಿ ಪ್ರಾಜ್ಞೈರಂಗತತ್ತ್ವವಿಚಿಂತಕೈಃ ।।[೧೮೯]

ಹಿಂದೆ ಹೇಳಿದಂತೆ ಜೀವಾತ್ಮವೇ ಮೊದಲಾದ ಚರಾಚರಗಳನ್ನೆಲ್ಲಾ ತನ್ನೊಳಗೆ ಲೀನಮಾಡಿಕೊಳ್ಳುವುದು ಲಿಂಗ; 'ಅ' ಎಂದರೆ ಪರಬ್ರಹ್ಮ. ಅಂಗ, ಲಿಂಗದತ್ತಗಮಿಸಿ ಅದರಲ್ಲಿ, ಲೀನಗೊಳ್ಳುವುದರಿಂದ ಜೀವಾತ್ಮನನ್ನು ನಿರ್ದೇಶಿಸಲು 'ಅಂಗ'ವೆಂಬ ಪದವನ್ನು ರೂಪಿಸಿಕೊಂಡಿದ್ದಾರೆ. "ರೂಪ್ಯತೇ" ಎಂಬ ಪದವು, ಬುದ್ಧಿಪೂರ್ವಕವಾಗಿ ಈ ಪದಗಳು ರೂಪಿಸಲ್ಪಟ್ಟಿವೆಯೆಂಬುದನ್ನು ಸೂಚಿಸುತ್ತದೆ. ಲಿಂಗಾಂಗ ಸಾಮರಸ್ಯ ಎಂದರೆ ಶಿವ ಜೀವೈಕ್ಯದ ಸಿದ್ಧಾಂತವನ್ನು ವಿವರಿಸುವಾಗ 'ಜೀವ' 'ಶಿವ' ಎಂಬ ಪದಗಳಿಗಿಂತ 'ಲಿಂಗ', 'ಅಂಗ' ಎಂಬ ಪದಗಳು ಹೇಗೆ ಸೂಕ್ತವಾದುವು ಎಂಬುದು ಈಗ ಸ್ಪಷ್ಟವಾದಂತಾಯಿತು. ಒಟ್ಟಿನಲ್ಲಿ ಹೇಳುವುದಾದರೆ, ವಿಭು, ಪ್ರಾಣ, ಆಕಾಶ, ಶೂನ್ಯ, ಗಗನ, ಬಯಲು, ಲಿಂಗ, ಸ್ಥಲ ಮೊದಲಾದ ಪದಗಳು ಪರಾತ್ಪರ ತತ್ತ್ವವನ್ನು ನಿರ್ದೇಶಿಸಲು ಉಪಯುಕ್ತವಾಗಿರುವ ಪಾರಿಭಾಷಿಕ ಪದಗಳು; ಈ ಪದಗಳು ಮೇಲೆ ಹೇಳಿದಂತೆ ನಿರ್ದಿಷ್ಟವಾದ ದೃಷ್ಟಿಯಿಂದ ಕಲ್ಪಿಸಿಕೊಂಡವುಗಳಾಗಿವೆ.

ಲಿಂಗಾಂಗ-ಸಾಮರಸ್ಯ ಪದದ ಯೋಜನೆ:

'ಲಿಂಗ' ಮತ್ತು 'ಅಂಗ' ಎಂಬ ಪದಗಳು ಹೇಗೆ ರೂಪಿತಗೊಂಡಿವೆಯೆಂದು ವಿವರಿಸಿದ ಮೇಲೆ, ಲಿಂಗಾಂಗಸಾಮರಸ್ಯ - ಎಂಬಲ್ಲಿ ಸಾಮರಸ್ಯ ಪದವು ರೂಪಗೊಂಡಿರುವುದರಲ್ಲಿನ ಉದ್ದೇಶವನ್ನು ಹೇಳುವುದುಚಿತ. ಅದ್ವೈತಸಿದ್ಧಾಂತದ ಮೋಕ್ಷ ಸ್ವರೂಪವು ಪ್ರಸಿದ್ಧವಾಗಿದೆ. ಶಿವಜೀವ ಸಾಮರಸ್ಯವೆಂಬುದು ಶಾಂಕರಸಿದ್ಧಾಂತದ ಮೋಕ್ಷ ಕಲ್ಪನೆಗೆ ಹೊಂದದು. ಒಂದೇ ವಸ್ತುವಿನ ಎರಡಂಶಗಳು ಒಂದಾಗುವುದು ಸಾಮರಸ್ಯ. ಜಲಧಿಯಲ್ಲಿ ಜಲವು ಸೇರಿದರೆ ಸಾಮರಸ್ಯವುಂಟಾಗುವುದು. ಶಾಂಕರ ಸಿದ್ಧಾಂತದಂತೆ ಜೀವನು ಶಿವಾಂಶನಲ್ಲ "ಜೀವೋ ಬ್ರಹ್ಮೈವನಾಪರಃ" ಎಂದರೆ ಜೀವವು ಬ್ರಹ್ಮವೇ ಹೊರತು ಬೇರೆಯಲ್ಲವೆಂಬುದು ಶಾಂಕರಸಿದ್ಧಾಂತ. ಜೀವನು ಬ್ರಹ್ಮವೇ ಆದರೂ ಅಜ್ಞಾನದಿಂದ ತಾನು ಬೇರೆಯೆಂದು ತಿಳಿದಿರುವನು. ಜ್ಞಾನವಾದರೆ ತಾನು ಬ್ರಹ್ಮನೆಂದು ತಿಳಿಯುವನು. ಹೀಗೆ ಅಜ್ಞಾನದಿಂದ ಬಿಡುಗಡೆ ಹೊಂದುವುದೇ ಶಾಂಕರಸಿದ್ಧಾಂತ. ಒಂದೇ ವಸ್ತು ಇರುವುದರಲ್ಲಿ ಸಮರಸವಾಗದು. ಒಂದೇ ರಸದ ಭಾಗಗಳು ಎಂದರೆ ಸಾಮ್ಯವಿರುವ ಎರಡು ಒಂದಾದರೆ ಸಮರಸವಾಗುವುದು; ಇರುವುದೊಂದು ಎರಡಾಗಲಿಲ್ಲ, ಆದರೆ ಎರಡಾದಂತೆ ತೋರುವುದೆನ್ನುವ ಶಾಂಕರಸಿದ್ಧಾಂತದಲ್ಲಿ ಸಾಮರಸ್ಯದ ಕಲ್ಪನೆಯಾಗದು. ಆದರೆ ವೀರಶೈವಸಿದ್ಧಾಂತದಲ್ಲಿ ಒಂದು ಎರಡಾಗುವುದು; ಒಂದು ಅಂಶಿ, ಒಂದು ಅಂಶ; ಜೀವನು ಶಿವಾಂಶನು, ಅಂಶವು ಅಂಶಿಯಲ್ಲಿ ಲೀನವಾಗಲು ನೀರಿನಲ್ಲಿ ನೀರು ಬೆರೆತಂತೆ ವಿಭಾಗವು ಕಾಣದಂತಾಗಿ ಸಮರಸವಾಗುವುದು. ಸಿದ್ಧಾಂತಶಿಖಾಮಣಿಯಲ್ಲಿ ಹೇಳಿದಂತೆ -

ಜಲೇಜಲಮಿವನ್ಯಸ್ತಂ ವಹ್ನೌವಹ್ನಿರಿವಾರ್ಪಿತಃ ।
ಪರಬ್ರಹ್ಮಣಿ ಲೀನಾತ್ಮಾ ವಿಭಾಗೇನ ನ ದೃಶ್ಯತೇ ।।[೧೬೦]

---

೧೫೯. ಶಿವಾನುಭವಸೂತ್ರಂ, ಅಧಿಕರಣ ೩, ಶ್ಲೋಕ ೩; ಅಧಿಕರಣ ೪, ಶ್ಲೋಕ ೪.

೧೬೦. ಪ್ರೊ. ಭೂಸನೂರಮಠ, (ಸಂ) ೧೯೫೨, ವೀರಶೈವಸಿದ್ಧಾಂತಶಿಖಾಮಣಿ ೪೦೧-೨೦-೬೦.

ಜೀವನು ಶಿವಾಂಶವೆಂಬ ದೃಷ್ಟಿಯಿಂದ ಮೋಕ್ಷದಲ್ಲಿ ಸಮರಸವು ಸಾಧ್ಯವಾಗುವುದು. ಲಿಂಗ ಮತ್ತು ಅಂಗ ಎಂಬುವು ಮಹಾಕಾಶ ಘಟಾಕಾಶ ಇದ್ದಂತೆ. ಘಟವೊಡೆದು ಅದರಲ್ಲಿನ ಆಕಾಶವು ಮಹಾಕಾಶದಲ್ಲಿ ಬೆರೆಯಲು ಲಿಂಗಾಂಗ ಸಾಮರಸ್ಯವಾದಂತಾಗುವುದು -

ಲಿಂಗಾಂಗೋಪಾಧಿಭೇದೇನ ದ್ವಿಧಾ ಭಿನ್ನಂ ಪರಸ್ಪರಂ ।
ಮಹಾನ್ ಘಟಪ್ರಭೇದೇನ ಯಥಾऽಕಾಶಃ ಪ್ರತೀಯತೇ ॥[೧೬೧]

ಬಯಲು ಬಯಲು ಬೆರೆದಲ್ಲಿ ಮೇರೆಯುಂಟೇ, ಅಯ್ಯ ?
ಕ್ಷೀರ ಕ್ಷೀರ ಕೂಡಿದಲ್ಲಿ, ಮರಳಿ ರೂಹಿಸಿ ಹಿಡಿಯಲುಂಟೆ ಅಯ್ಯ ?
ನಿಮ್ಮೊಳಡೆವರೆದ ನಿಜೈಕ್ಯನ ಕುರುಹು ಮರಳಿ ತೋರಲುಂಟೆ ?
ಆಯ್ಯಾ ಅಖಂಡೇಶ್ವರಾ ?

ಶಾಂಕರಾದ್ವೈತದಲ್ಲಿ ಪರಿಚಿತವಾದ ಮೋಕ್ಷವೆಂಬ ಭ್ರಾಂತಿಯು ಬರದಿರಬೇಕೆಂದೂ, ಹಾಗೆಯೇ ಶಿವಾದ್ವೈತದ ಮೋಕ್ಷದ ಸ್ವರೂಪವು ಎದ್ದು ಕಾಣುವಂತಾಗಬೇಕೆಂದೂ ಸಾಮರಸ್ಯವೆಂಬ ಪದವನ್ನು ರೂಪಿಸಲಾಗಿದೆ. ಆದರೆ ಜೀವನು ಶಿವನ ಅಂಶವೆಂದರೆ ಶಿವನಲ್ಲಿ ಕೊರೆದು ತೆಗೆದು ಬೇರ್ಪಡಿಸಿದ ತುಂಡೆಂಬ ಭಾವನೆಯು ಬರಬಾರದು. ಮಹಾಕಾಶದಲ್ಲಿ ಘಟಾಕಾಶವಿರುವಂತೆ ಜೀವನು, ಶಿವನಿಂದ ಬೇರ್ಪಡದೆ ತದಂಶವಾಗಿಹನು. ಮಹಾಕಾಶವೂ ಬಯಲೇ, ಘಟಾಕಾಶವೂ ಬಯಲೇ; ಲಿಂಗವು ಮಹಾಕಾಶದಂತೆ. ಲಿಂಗವೆಂಬ ಬಯಲಿನಲ್ಲಿ ಅಂಗವೆಂಬ ಬಯಲನ್ನು ಬಿತ್ತಿ ಬೆಳೆದರೂ ಬಯಲು ಬಯಲಾಗಿಯೇ ಉಳಿದಿದೆ.

ಹಿಂದೆ ಹೇಳಿದಂತೆ 'ಲಿಂಗ', 'ಅಂಗ', 'ಸಾಮರಸ್ಯ', ಎಂಬ ಪದಗಳು ಕ್ರಮವಾಗಿ 'ತತ್', 'ತ್ವಂ', 'ಅಸಿ' ಎಂಬ ಪದಗಳಿಗೆ ಬದಲಾಗಿ ಉಪಯೋಗಿಸಿದವುಗಳಾಗಿವೆ.

ಲಿಂಗಂ ತತ್‌ಪದಮಾಖ್ಯಾತಮಂಗಂ ತ್ವಂ ಪದಮೀರಿತಂ ।
ಸಂಯೋಗೋऽಸಿದಪ್ರೋಕ್ತಮನಯೋರಂಗಲಿಂಗಯೋಃ ॥[೧೬೨]

ಎಂದು ಶಿವಾನುಭವಸೂತ್ರದ ಪಂಚಮಾಧಿಕರಣದಲ್ಲಿ ಹೇಳಿದೆ. ಅಲ್ಲಿ 'ಸಂಯೋಗ' ಪದವನ್ನು 'ಸಾಮರಸ್ಯ' ಎಂಬ ಪದಕ್ಕೆ ಬದಲಾಗಿ ಉಪಯೋಗಿಸಲಾಗಿದೆ. ಸಂಯೋಗದಲ್ಲಿಯೂ ಎರಡು ಒಂದಾಗುವ ಭಾವವಿದೆ. ಹೆಚ್ಚು ಬಳಕೆಯಲ್ಲಿರುವ ಸಾಮರಸ್ಯ ಪದದಲ್ಲಿ ಐಕ್ಯದ ಸ್ವರೂಪವು ಪರಮಾವಧಿ ಮನವರಿಕೆಯಾಗುವುದು.

---

೧೬೧. ಶಿವಾನುಭವಸೂತ್ರಂ, ಅಧಿಕರಣ ೨, ಶ್ಲೋಕ ೧೧.

೧೬೨. ಶಿವಾನುಭವಸೂತ್ರಂ, ಅಧಿಕರಣ ೫, ಶ್ಲೋಕ ೨೭.

# ಇನ್ನುಳಿದ ಕೃತಿಗಳ ಅವಲೋಕನ

ಮೊಗ್ಗೆಯ ಮಾಯಿದೇವನ ಸಾಹಿತ್ಯ ಸೃಷ್ಟಿ ವಿಪುಲವೂ ವೈವಿಧ್ಯಮಯವೂ ಆಗಿದೆ. ಅದು ಶ್ಲೋಕ, ಶತಕ, ಷಟ್ಪದಿ, ವಚನ, ಗದ್ಯ ಮೊದಲಾದ ರೂಪಗಳಲ್ಲಿ ಒಡಮೂಡಿದೆ. ಈಗ ಆತ ರಚಿಸಿದ ಎಂಟು ಕೃತಿಗಳು ಉಪಲಬ್ಧವಾಗಿವೆ.

| | | |
|---|---|---|
| ೧) | ಶಿವಾನುಭವಸೂತ್ರಂ | (ಸಂಸ್ಕೃತ) |
| ೨) | ವಿಶೇಷಾರ್ಥಪ್ರಕಾಶಿಕಾ | (ಸಂಸ್ಕೃತ) |
| ೩) | ಸಂಸ್ಕೃತಶತಕತ್ರಯ | (ಸಂಸ್ಕೃತ) |
| ೪) | ಪ್ರಭುಗೀತೆ | (ವಚನಗಳ ಸಂಸ್ಕೃತಾನುವಾದ) |
| ೫) | ಶತಕತ್ರಯ | (ಕನ್ನಡ) |
| ೬) | ಪದ್ಮೆಕೋತ್ತರ ಶತಸ್ಥಲ | (ಕನ್ನಡ) |
| ೭) | ಷಟ್‌ಸ್ಥಲಗದ್ಯ | (ಕನ್ನಡ) |
| ೮) | ಸ್ವರವಚನಗಳು | (ಕನ್ನಡ) |

ಇವುಗಳಲ್ಲಿ ಪ್ರಭುಗೀತೆ ಹಾಗೂ ಸ್ವರವಚನಗಳನ್ನು ಹೊರತುಪಡಿಸಿ ಉಳಿದುವೆಲ್ಲ ಪ್ರಕಟವಾಗಿವೆ.

**ವಿಶೇಷಾರ್ಥಪ್ರಕಾಶಿಕಾ:**

ಮಾಯಿದೇವನ ಸಂಸ್ಕೃತ ಕೃತಿಗಳಲ್ಲಿ 'ವಿಶೇಷಾರ್ಥ ಪ್ರಕಾಶಿಕಾ, ಎರಡನೆಯದು. ಒಂದು ದೃಷ್ಟಿಯಿಂದ ವಿಶೇಷಾರ್ಥಪ್ರಕಾಶಿಕಾ, ಶಿವಾನುಭವಸೂತ್ರಕ್ಕೆ ಒಂದು ಅನುಬಂಧದಂತಿದೆ. ಶಿವಾನುಭವಸೂತ್ರದಲ್ಲಿ ಷಟ್‌ಸ್ಥಲವನ್ನು ಶಿವನು ಶಿವೆಗೆ ಹೇಳಿದರೆ, ವಿಶೇಷಾರ್ಥಪ್ರಕಾಶಿಕೆಯಲ್ಲಿ ಅದನ್ನು ಶಿವ, ಷಣ್ಮುಖನಿಗೆ ನಿರೂಪಿಸಿದ್ದಾನೆ. ವಿಶೇಷಾರ್ಥಪ್ರಕಾಶಿಕೆಯ ವಿವರಣೆಯು ಗುರು-ಶಿಷ್ಯರ ಸಂವಾದರೂಪದಲ್ಲಿದೆ. ಸೂತ್ರದಲ್ಲಿ ಸ್ಥೂಲವಾಗಿ ಸೂಚಿಸಿರುವ ಬ್ರಹ್ಮೋಪದೇಶವಿಧಿಯ ವಿಚಾರಗಳನ್ನು ಇಲ್ಲಿ ಮೊದಲ ಪ್ರಕರಣದಲ್ಲಿ ಆರಂಭಿಸಲಾಗಿದೆ. ಶಿವಾನುಭವಸೂತ್ರದ ಐದನೆಯ ಅಧಿಕರಣದಲ್ಲಿರುವ ಷಟ್‌ಸ್ಥಲ ಬ್ರಹ್ಮಪೂಜೆಯ ವಿಚಾರವನ್ನು ವಿಶೇಷಾರ್ಥಪ್ರಕಾಶಿಕೆಯ ಎರಡನೆಯ ಅಧಿಕರಣದಲ್ಲಿ ವಿಸ್ತರಿಸಲಾಗಿದೆ. ಇನ್ನುಳಿದ ಪ್ರಸಾದಸದ್ಭಾವ, ಷಟ್‌ಸ್ಥಲಬ್ರಹ್ಮಪುರಶ್ಚರಣ ಹಾಗೂ ದೇಹಾವಸಾನಗಳು ಶಿವಾನುಭವಸೂತ್ರೋಕ್ತವಾದ ವಿಚಾರಗಳಿಗೆ ವಿಶೇಷ ಅರ್ಥವನ್ನು ಪ್ರಕಾಶಪಡಿಸಿವೆ. ಆದ್ದರಿಂದ ಮಾಯಿದೇವ ಈ ಗ್ರಂಥಕ್ಕೆ ಇಟ್ಟಿರುವ ಹೆಸರೇ ಈ ಅರ್ಥವನ್ನು ಸಮರ್ಥಿಸುತ್ತದೆ.

ಶಿವಾನುಭವಸೂತ್ರದಲ್ಲಿ ದೀಕ್ಷಾವಿಧಾನವಿದ್ದರೂ ಕ್ರಮವಿವರಣೆಯಿಲ್ಲದ್ದರಿಂದ ಇಲ್ಲಿ ಮತ್ತೆ ಅದನ್ನೇ ವಿವರಿಸಲಾಗಿದೆ. ಮೊದಲು ಪಂಚಮಹಾಮುದ್ರೆಯ ಶಿವಮಂತ್ರವನ್ನು ರಚಿಸಬೇಕು. ಆಚಾರಲಿಂಗ-ಭಕ್ತಾಂಗಪೂರ್ವಕ ಷಟ್‌ಸ್ಥಲಾತ್ಮಕವಾದ ಆರು ಕಲಶಗಳನ್ನು ಸ್ಥಾಪಿಸಬೇಕು. ನಂತರ ಗುರುವು ಶಿಷ್ಯನಿಗೆ ಬ್ರಹ್ಮೋಪದೇಶವನ್ನು ಸಕಾಲದಲ್ಲಿ ಮಾಡಬೇಕು. ಉಪದೇಶವಿಧಿಯಲ್ಲಿ ಷಡಧ್ವಶುದ್ಧಿ ಮುಖ್ಯ. ಅಧ್ವಗಳು ಆರು. ವರ್ಣ, ಮಂತ್ರ, ಪದ ಎಂಬ ಮೂರು ಅಧ್ವಗಳು ಶಬ್ದಾಧ್ವಗಳು. ಕಲಾ, ತತ್ತ್ವ, ಭುವನಾಧ್ವಗಳು ಅರ್ಥಾಧ್ವಗಳು, ಈ ವಿಷಯವನ್ನು ಹಿಂದೆ ವಿವರಿಸಲಾಗಿದೆ.

ಉಪದೇಶಮಂತ್ರ:

ಶ್ರೀ ಮತ್ಪಂಚಾಕ್ಷರೀಮಂತ್ರಂ ಸತಾರಂತು ಷಡಕ್ಷರಂ।
ಷಡಂಗಲಿಂಗಸಂಯುಕ್ತಂ ಷಟ್‌ಸ್ಥಲಬ್ರಹ್ಮವರ್ಚಸಂ॥[೧೬೩]

ಹೀಗೆ ಷಡಕ್ಷರ ಮಂತ್ರದ ಉಪದೇಶಾನಂತರ ಲಿಂಗಧಾರಣೆ ಮಾಡಿ ಗುರುವು ಶಿಷ್ಯನಿಗೆ ಪೂಜಾವಿಧಾನವನ್ನು ನಿರೂಪಿಸಬೇಕು. ಪೂಜೆ ಹಾಗೂ ಉಪಚಾರ ಎಂದು ಪೂಜೆಯು ಎರಡು ಬಗೆಯಾಗಿದೆ. ಇವುಗಳಲ್ಲಿ ಪೂಜೆ ೧೨ ವಿಧ ಉಪಚಾರಗಳು ೨೪ ವಿಧ. ಹೀಗೆ ಒಟ್ಟು ಪೂಜೋಪಚಾರಗಳು ಷಟ್‌ಸ್ಥಲಕ್ಕನುಗುಣವಾಗಿ ಮೂವತ್ತಾರು. ಅಭ್ಯುಕ್ಷಣ, ಸ್ನಾನ, ಅರ್ಘ್ಯ ಇತ್ಯಾದಿ ಇವು ಪೂಜೆಗಳು. ಆಸನ, ಆಹ್ವಾನ, ಅರ್ಘ್ಯ ಇತ್ಯಾದಿ ಇವು ಪೂಜೋಪಚಾರಗಳು.

ಪೂಜೆಯಲ್ಲಿ ಷಟ್‌ಸ್ಥಲಕ್ರಮ:

೧. ಭಕ್ತಸ್ಥಲ: ಮಡಿಯಿಂದ ಸುಖಾಸನದಲ್ಲಿ ಕುಳಿತು ಶ್ರದ್ಧಾಭಕ್ತಿಯಿಂದ ಭಸ್ಮರುದ್ರಾಕ್ಷಧಾರಣ ಮಾಡುವುದು.

೨. ಮಹೇಶ್ವರಸ್ಥಲ: ನಿಷ್ಠಾಭಕ್ತಿಯಿಂದ ಷಡಕ್ಷರಮಂತ್ರವನ್ನು ಜಪಿಸುವುದು.

೩. ಪ್ರಸಾದಿಸ್ಥಲ: ಅವಧಾನಭಕ್ತಿಯಿಂದ ಲಿಂಗವನ್ನು ಹಸ್ತಪೀಠಕ್ಕೆ ಬರಮಾಡಿಕೊಳ್ಳುವುದು.

೪. ಪ್ರಾಣಲಿಂಗಸ್ಥಲ: ಅನುಭವಭಕ್ತಿಯಿಂದ ವಿಧ್ಯುಕ್ತವಾಗಿ ಲಿಂಗಪೂಜೆ ಮಾಡಿಕೊಳ್ಳುವುದು.

೫. ಶರಣಸ್ಥಲ: ಆನಂದಭಕ್ತಿಯಿಂದ ಪದಾರ್ಥ ಸಮರ್ಪಿಸುವುದು.

೬. ಐಕ್ಯಸ್ಥಲ: ಸಮರಸಭಕ್ತಿಯಿಂದ ಲಿಂಗಾರ್ಪಿತವಾದ ಪ್ರಸಾದವನ್ನು ಸೇವಿಸಿ ತೃಪ್ತನಾಗುವುದು.

ಇದು ಅರ್ಚನಷಟ್‌ಸ್ಥಲವಾಗಿದೆ. ಬಹಿರಂಗದಪೂಜೆಗಿಂತ ಅಂತರಂಗಪೂಜೆ ಕ್ಲಿಷ್ಟವಾದರೂ ಮಹತ್ವದ್ದೆನಿಸಿದೆ. ಅದುವೇ ನಿಜವಾದ ಪೂಜೆ. ಮಾಯಿದೇವ ತನ್ನ ಅನುಭವ ಕುರಿತು ಹೀಗೆ ಹೇಳಿಕೊಂಡಿದ್ದಾನೆ.

ಆತ್ಮಾತ್ವಂ ಗಿರಿಜಾ ಮತಿಃ ಪರಿಜನಾಃ ಪ್ರಾಣಾಃ ಶರೀರಂ ಗೃಹಂ
ಪೂಜಾ ತೇ ವಿಷಯೋಪಭೋಗರಚಾನಾ ನಿದ್ರಾ ಸಮಾಧಿಸ್ಥಿತಿಃ
ಸಂಚಾರಃ ಪದಯೋಃ ಪ್ರದಕ್ಷಿಣವಿಧಿಃ ಸ್ತೋತ್ರಾಣಿ ಸರ್ವಾ ಗಿರೋ
ಯದ್ಯತ್ಕರ್ಮ ಕರೋಮಿ ತತ್ತದಖಿಲಂ ಶಂಭೋ ತವಾರಾಧನಂ ॥[೧೬೪]

ಪೂಜಾವಿಧಾನಗಳನ್ನು ತಿಳಿಸಿ, ಶಾಂತಿಯೇ ಜಲ; ಮನಸ್ಸಿನ ಸುಖವೇ ಗಂಧ; ಶಮವೇ ಅಕ್ಷತೆ; ಜ್ಞಾನವೆಂಬ ಕೇಸರದಿಂದ ಕೂಡಿದ ಆತ್ಮ ಕುಸುಮವೇ ಹೂಗಳು; ಸದ್ವಾಸನೆಯೇ ಧೂಪ; ಆತ್ಮತೇಜಸ್ಸು ದೀಪ; ಅರ್ಚನ ಪ್ರೀತಿಯೇ

---

೧೬೩. ವಿಶೇಷಾರ್ಥಪ್ರಕಾಶಿಕಾ, ಪ್ರಥಮಾಧಿಕರಣ, ಶ್ಲೋಕ ೨೬.

೧೬೪. ಅದೇ, ದ್ವಿತೀಯಾಧಿಕರಣ, ಶ್ಲೋಕ ೫೦. ಈ ಶ್ಲೋಕವು ಶಂಕರಾಚಾರ್ಯರ 'ಆತ್ಮಾತ್ವಂ ಗಿರಿಜಾಮತೀ' ಎಂಬ ಶ್ಲೋಕಕ್ಕೆ ಸಮಾನವಾಗಿದೆ. ಮಾಯಿದೇವ ಅದನ್ನು ಯಥಾವತ್ತಾಗಿ ಸ್ವೀಕರಿಸಿದಂತಿದೆ.

ನೈವೇದ್ಯ ; ನಿಜಭಕ್ತಿರಾಗರಸವೇ ತಾಂಬೂಲ - ಈ ಎಂಟೂ ಗುಣಗಳು ಶಿಷ್ಯನಲ್ಲಿ ಮೈಗೂಡುವುದೇ ಅರ್ಚನೆಗೆ ಪ್ರಯೋಜನವೆಂದು ಹೇಳಲಾಗಿದೆ.

ಈ ಲಿಂಗಾರ್ಚನೆಯು ಷಟ್‌ಸ್ಥಲಕ್ಕನುಗುಣವಾಗಿ ನಡೆಯುವುದು. ಬಾಹ್ಯಲಿಂಗಾರ್ಚನೆಗಿಂತ ಅಂತರಂಗದ ಲಿಂಗಾರ್ಚನೆಯೇ ಶ್ರೇಷ್ಠವಾಗಿರುವುದೆಂಬುದನ್ನು ಒತ್ತಿಹೇಳಲಾಗಿದೆ. ಶಿವಾನುಭವಸೂತ್ರದಲ್ಲಿ (ಅಧಿ ೬-೧೬) ಪ್ರಸಾದದ ವಿಷಯ ಕುರಿತು ಪ್ರಸ್ತಾಪಿಸಿರುವುದನ್ನೇ ಇಲ್ಲಿ ವಿಸ್ತೃತವಾಗಿ ವಿವರಿಸಲಾಗಿದೆ. ಪ್ರ=ಪ್ರಸಾದ, ಸಾ=ಭಕ್ತಿ, ದ=ಮುಕ್ತಿದಾಯಕ ಎಂದರೆ ಪ್ರಸಾದಪೂರ್ವಕವಾದ ಭಕ್ತಿಯು ಮುಕ್ತಿದಾಯಕ. ಈ ವಿಷಯವನ್ನೇ ಮಾಯಿದೇವನು ಮೂರನೆಯ ಅಧಿಕರಣದಲ್ಲಿ ೧೯೦ ಶ್ಲೋಕಗಳಲ್ಲಿ ವಿಸ್ತಾರವಾಗಿ ನಿರೂಪಿಸಿದ್ದಾನೆ. ಇದನ್ನು ತಾನು ಸ್ವಾನುಭವದಿಂದ ನಿರೂಪಿಸಿರುವುದಾಗಿ ಹೇಳಿಕೊಂಡಕಾರಣ ಅವನ ಪಾಂಡಿತ್ಯದ ಜೊತೆಗೆ ಅವನಿಗಿರುವ ಅನುಭವದ ಪರಿಚಯವು ನಮಗಾಗುತ್ತದೆ.

ನಾಲ್ಕನೆಯ ಅಧಿಕರಣದಲ್ಲಿ ಷಟ್‌ಸ್ಥಲಬ್ರಹ್ಮಪುರಶ್ಚರಣವನ್ನು ಹೇಳಲಾಗಿದೆ. ಪುರಶ್ಚರಣವೆಂದರೆ, ಮಂತ್ರಜಪಕ್ಕೆ ಮೊದಲು ಜಪ, ತರ್ಪಣ ಹೋಮ ಭೋಜನ, ಪೂಜನಗಳೆಂಬ ಪಂಚಾಂಗಗಳಿಂದ ಕೂಡಿದ ಆಚರಣೆಯು ಪುರಶ್ಚರಣವೆನಿಸುತ್ತದೆ. ಪ್ರಣವ ಸಹಿತವಾದ ಪಂಚಾಕ್ಷರಮಂತ್ರದಲ್ಲಿ ಆರು ಅಕ್ಷರಗಳಿವೆ. ಜಪದಲ್ಲಿ ಅಕ್ಷರಕ್ಕೆ ಲಕ್ಷಜಪ ಸಂಖ್ಯೆಯುಂಟು. ಎಂದರೆ ಆರುಲಕ್ಷಜಪವನ್ನು ಶಿಷ್ಯನು ಶುಚಿರ್ಭೂತನಾಗಿ ಸುಖಾಸನದಲ್ಲಿ ಕುಳಿತು, ಗುರುವನ್ನು ನೆನೆದು, ಭಸ್ಮರುದ್ರಾಕ್ಷಗಳನ್ನು ಧರಿಸಿ, ಮಂತ್ರಜಪವನ್ನು ಮಾಡಬೇಕು. ಅರವತ್ತು (೬೦,೦೦೦) ಸಾವಿರ ತರ್ಪಣ, ಶಿವಾಗ್ನಿಯಲ್ಲಿ ಆರು ಸಾವಿರಹೋಮ, ಷಟ್‌ಸ್ಥಲಜ್ಞರಾದ ಆರುನೂರು ಜನ ಶಿವಭಕ್ತರಿಗೆ ಭೋಜನ, ಶಕ್ತ್ಯಾನುಸಾರ ೬೦೬, ಅಥವಾ ಒಬ್ಬನಾದರೂ ಶಿವಭಕ್ತನಿಗೆ ತೃಪ್ತಿಪಡಿಸಬೇಕು. ಆಗ ಪುರಶ್ಚರಣವು ಸಿದ್ಧಿಸುವುದಾಗಿ ಹೇಳಲಾಗಿದೆ. ಈ ವಿಷಯಕ್ಕೆ ಸಂಬಂಧಿಸಿದಂತೆ ಹಲವಾರು ಜನರ ಆಕ್ಷೇಪಗಳೂ ಇವೆ.[೧೬೫] ಮಾಯಿದೇವನು ಈ ಸಿದ್ಧಿಯನ್ನು ಸಂಪಾದಿಸುವಕುರಿತು ಸುದೀರ್ಘವಾಗಿ ವಿವರಿಸಿದ್ದಾನೆ. ಈ ಸಿದ್ಧಿಯ ಪ್ರಸ್ತಾಪ ಸಾಮೂಹಿಕವಾಗಿರದೆ ಐಚ್ಛಿಕವೆಂದೂ ಅಲ್ಲಿ ನಿರೂಪಿಸಲಾಗಿದೆ. ಆದರೂ ಈ ವಿವರಣೆ ಷಟ್‌ಸ್ಥಲಕ್ಕನುಸರಿಸಿರುವುದು ಗಮನಾರ್ಹ.

ಕೊನೆಯದಾದ ಪಂಚಮಾಧಿಕರಣದಲ್ಲಿ ದೇಹಾವಸಾನ ಕ್ರಮವನ್ನು ವಿವರಿಸಲಾಗಿದೆ. ಲಿಂಗೈಕ್ಯನಾದವನಿಗೆ ಪ್ರಾಕೃತರಿಗೆ ಮಾಡುವಂತೆ ಶ್ರಾದ್ಧಾದಿ ಕರ್ಮಗಳನ್ನು ಮಾಡಬಾರದು. ಅವನ ಮಡದಿ ಮಕ್ಕಳಿಗೆ ಸೂತಕವಿಲ್ಲ. ಕ್ಷಣಕಾಲ ಅಶುದ್ಧಿಯಿದ್ದು, ಸ್ನಾನಾದಿಗಳಿಂದ ಅದು ತೊಲಗುತ್ತದೆ. ಲಿಂಗಾಂಗಿಯ ದೇಹವನ್ನು ಭೂಮಿಯಲ್ಲಿ ನಿಕ್ಷೇಪಮಾಡುವಾಗ ಅವನ ಇಷ್ಟಲಿಂಗವನ್ನು ದೇಹದಿಂದ ಅಗಲಿಸಬಾರದು. ಏಕೆಂದರೆ, ಅವನು ಶರೀರಗತವಾದ ಪ್ರಾಣಲಿಂಗವನ್ನು ಇಷ್ಟಲಿಂಗದಲ್ಲಿ ಸ್ಥಾಪಿಸಿರುತ್ತಾನೆ. ಲಿಂಗಾಂಗಿಯ ದೇಹವನ್ನು ದಹಿಸಬಾರದು. ಏಕೆಂದರೆ ಶಿವಜ್ಞಾನವೆಂಬ ಅಗ್ನಿಯಿಂದ ದಗ್ಧವಾದ ವಸ್ತುವನ್ನು ಮತ್ತೆ ದಹಿಸುವುದು ಉಚಿತವಾದುದುಲ್ಲ-ಹೀಗೆ ಅಂತ್ಯೇಷ್ಟಿ ವಿಧಾನ ಕುರಿತು ಈ ಅಧಿಕರಣದಲ್ಲಿ ಮಹತ್ವಪೂರ್ಣವಾದ ವಿಚಾರಗಳನ್ನು ವಿವರಿಸಲಾಗಿದೆ.

ಹೀಗೆ ವೀರಶೈವರಿಗೆ ಸಂಬಂಧಿಸಿದ ತಾತ್ವಿಕ ವಿಷಯವನ್ನು ಸಾದ್ಯಂತವಾಗಿ ತನ್ನ ಈ ಎರಡು ಸಂಸ್ಕೃತ ಕೃತಿಗಳಲ್ಲಿ ಮಾಯಿದೇವನು ವಿವರಿಸಿದ್ದಾನೆ. ಅಲ್ಲದೆ ತನ್ನ ಅನುಭವದಿಂದಲೇ ಕೆಲವು ವಿಷಯಗಳನ್ನು ಪ್ರಸ್ತಾಪಿಸಿದ್ದಾನೆ. ಆದುದರಿಂದ ಇವು ಅನುಭವಾತ್ಮಕವಾದ ಪ್ರಮಾಣಗ್ರಂಥಗಳಾಗಿವೆ.

---

೧೬೫. ಪಂ. ವೈ. ನಾಗೇಶಶಾಸ್ತ್ರಿಗಳು (೧೯೬೧) 'ವಿಶೇಷಾರ್ಥ ಪ್ರಕಾಶಿಕಾ' (ಭಾವಾರ್ಥ ಬೋಧಿನೀ) ಪು. ೧೧೦.

ವಿಶೇಷಾರ್ಥ ಪ್ರಕಾಶಿಕೆಯನ್ನು ಮೊದಲು ಮೈಸೂರು ವೀರಸಂಗಪ್ಪನವರೂ, ಸೊಲ್ಲಾಪುರದ ರಾವಸಾಹೇಬ ವಾರದಮಲ್ಲಪ್ಪವನರೂ, ಮುದ್ರಿಸಿ, ಪ್ರಕಟಪಡಿಸಿರುವರು. ನಂತರ ಧಾರವಾಡ ಶ್ರೀ ಮುರುಘಾಮಠದವತಿಯಿಂದ ಪ್ರಕಾಶಗೊಂಡ ಈ ಕೃತಿಗೆ ಪಂ. ವೈ ನಾಗೇಶಶಾಸ್ತ್ರಿಗಳು ಟೀಕೆ ಬರೆದಿದ್ದಾರೆ. ವಿಶೇಷಾರ್ಥ ಪ್ರಕಾಶಕೆಯಲ್ಲಿ ಐದು ಅಧಿಕರಣಗಳಿದ್ದು ಒಟ್ಟು ೪೬೭ ಶ್ಲೋಕಗಳಿವೆ.

**ಸಂಸ್ಕೃತಶತಕತ್ರಯ:**

ಮಗ್ಗೆಮಾಯಿದೇವ ವಿಭು ಸಂಸ್ಕೃತ ಹಾಗೂ ಕನ್ನಡಗಳಲ್ಲಿ ಶತಕಗಳನ್ನು ಬರೆದಿದ್ದಾನೆ. ಈತ ಸಂಸ್ಕೃತದಲ್ಲಿ ರಚಿಸಿದ ಭಕ್ತಿ, ಜ್ಞಾನ ಮತ್ತು ವೈರಾಗ್ಯ ಶತಕಗಳೇ ಕನ್ನಡದ ಶಿವಾಧವಾ ಶಿವಾವಲ್ಲಭಾ ಮತ್ತು ಮಹದೈಪುರೀಶ್ವರ ಶತಕಗಳುಳು.

| ಸಂಸ್ಕೃತ | ಕನ್ನಡ |
|---|---|
| ೧. ಭಕ್ತಿಶತಕ ೨೨೮ ಶ್ಲೋಕಗಳು | ಶಿವಾಧವಾಶತಕ ೧೧೧ ಪದ್ಯಗಳು |
| ೨. ಜ್ಞಾನಶತಕ ೨೨೭+೧೦ ಶ್ಲೋಕಗಳು | ಶಿವಾವಲ್ಲಭಶತಕ ೧೧೨ ಪದ್ಯಗಳು |
| ೩. ವೈರಾಗ್ಯಶತಕ ೧೧೦+೪ ಶ್ಲೋಕಗಳು | ಮಹದೈಪುರೀಶ್ವರ ಶತಕ ೧೧೩ ಪದ್ಯಗಳು. |

ಮಾಯಿದೇವನು ಸಂಸ್ಕೃತ ಶತಕಗಳನ್ನು ಮೊದಲು ಬರೆದಿರಬಹುದಾದರೂ ಅವು ಕನ್ನಡ ಶತಕತ್ರಯದಷ್ಟು ಪ್ರಸಿದ್ಧಿಗೆ ಬರಲಿಲ್ಲವೆಂದು ತೋರುತ್ತದೆ. ಆದ್ದರಿಂದ ಇವುಗಳ ಪ್ರಚಾರ ಅಷ್ಟಿಲ್ಲ ಲಿಂ. ಚನ್ನಮಲ್ಲಿಕಾರ್ಜುನರು ಸಂಸ್ಕೃತ ಶತಕತ್ರಯದ ಒಂದು ಓಲೆಯನ್ನು ಸಂಗ್ರಹಿಸಿ, ಸಂಪಾದಿಸಿ, ಸದ್ಧರ್ಮ ದೀಪಿಕಾ ಎಂಬ, ತಮ್ಮ ಮಾಸಿಕದಲ್ಲಿ ಮೊದಲು ಪ್ರಕಟಿಸಿದರು. ಅದನ್ನೇ ಮುಂದೆ, ಮಗ್ಗೆ ಮಾಯಿದೇವ ಪ್ರಭುವಾಣಿಯಲ್ಲಿ ಸಂಗ್ರಹಿಸಿ ಪ್ರಕಾಶ ಪಡಿಸಿದ್ದಾರೆ.[೧೬೬] ಸಂಸ್ಕೃತ ಶ್ಲೋಕಗಳಿಗಿಂತ ಕನ್ನಡ ಶತಕತ್ರಯದ ಪದ್ಯಗಳೇ ಹೆಚ್ಚು ಜನಪ್ರಿಯವಾಗಿ ಜನತೆಯ ನಾಲಿಗೆಯ ಮೇಲೆ ನಲಿದಾಡುತ್ತವೆ.ಇಲ್ಲಿ ಮೂರು ಉದಾಹರಣೆಗಳನ್ನು ಕೊಡಲಾಗಿದೆ.

**ಭಕ್ತಿಶತಕ:**

ಪರದ್ರವ್ಯಂ ಪರಸ್ತ್ರ್ಯಾದಿವರ್ಜಿತೋ ಭಾವಶುದ್ಧಿಮಾನ್ ।
ಲಿಂಗನಿಷ್ಠಾ ನಿಯುಕ್ತಾತ್ಮಾ ಮಾಹೇಶ್ವರ ಇತಿ ಸ್ಮೃತಃ।
ಪರವಧುವಂ ಪರದ್ರವಿಣಮಂ ಪರಹಿಂಸೆಯನ್ನೆದೆ ದೂರದಿಂ
ಪರಿಹರಿಸಿ ಸ್ವದೇಶಿಕ ನಿರೂಪಿತಮಪ್ಪ ಷಡರ್ಥಸಂಗ್ರಹಾ
ಚರಣೆಯೊಳೇಕಲಿಂಗ ನಿಜನಿಷ್ಠೆ ಸಮಾಹಿತಮಾದೊಡಂತದೆ
ಪರಮಮಾಹೇಶ್ವರಸ್ಥಲದ ಲಕ್ಷಣ ವೃತ್ತಿಪದಂ ಶಿವಾಧವಾ||[೧೬೭]

---

೧೬೬. ಮಗ್ಗೆ ಮಾಯಿದೇವ ಪ್ರಭುವಾಣಿ - (i) ಭಕ್ತಿಶತಕ, ಪು. ೧-೨೮, (ii) ಜ್ಞಾನಶತಕ, ಪು. ೨೯-೫೦, (iii) ವೈರಾಗ್ಯಶತಕ, ಪು. ೫೧-೭೯.

೧೬೭. ಭಕ್ತಿಶತಕ (ಸಂಸ್ಕೃತ) ೩೯, ಶಿವಾಧವ, ೧೪.

**ಜ್ಞಾನ ಶತಕ:**

ತತ್ ಪ್ರಾಣಲಿಂಗಿನಾಂ ಪಾದಯುಗ್ಮಂ ಮಹೇಶ್ವರಾ ಜನಃ ।
ಇತರೋ ಜಾನತೇ ದೈವಂ ತೀರ್ಥಕ್ಷೇತ್ರಂ ಚ ಮೂಢಧೀಃ॥
ಶಿವಭಕ್ತಂ ಶಿವಲಿಂಗಮಂ ನಿಜಶಿಖರಾಗ್ರ ಸ್ಥಾನದೊಳ್ ತಾಳೊಂಡಾ ।
ಶಿವಲಿಂಗೇಕ್ಷಣ ಕಾಂಕ್ಷಿಯಿಂದ ಕಟಿಬಂಧಾ ಭಕ್ತನಂ ಮೆಟ್ಟಿನೋ।
ಡುವ ಮೋಕ್ಷಾರ್ಥಿಗಳುಂಟೆ ಲಿಂಗಮನಿದಾವ ಶ್ರದ್ಧೆ ಸದ್ಭಕ್ತನೆ ॥
ಶಿವನೆಂದೀಕ್ಷಿಸಿ ಭಕ್ತಿಯಿಂ ನಮಿಸರೀಮೂಢರ್ ಶಿವಾವಲ್ಲಭಾ[೧೬೮]

**ವೈರಾಗ್ಯಶತಕ:**

ನಾಹಂ ಕರ್ತಾ ನಾಹಂ ಭೋಕ್ತಾ ನಾಹಂ ಕಾರಯಿತಾ 'ಸ್ವಯಮ್'?
ಶಿವೋ ದಾತಾ ಶಿವೋಭೋಕ್ತಾ ಶಿವಃ ಸರ್ವಮಿದಂ ಜಗತ್
ಶಿವೋ ಯಜತಿ ತತ್ ಸರ್ವಂ ತಚ್ಛಿವಸ್ಸೋಹಮೇವ ಚ

ಕೊಡುವನದಾರು ಕೊಂಬುವನದಾರು ವೃಥಾಭ್ರಮೆ ಏಕೆ ಬೇಡ ಮಾಣ್
ಕುಡುವವನುಂ ಬಲಾತ್ಕರಿಸಿ ಕೊಂಬುನುಂ ಶಿವನೆಂದು ಮುಗ್ಗಡಿ
ಸುತೆ ದಾತೃಭೋಕ್ತೃ ಸಕಲಂ ನೆರೆ ನೀನೆನಿತಿರ್ಪ ವಾಕ್ಯಮಂ
ಪಿಡಿವುದ ಭಕ್ತಿಯಯ್ಯ ಪರಮಪ್ರಭುವೇ ಮಹದೈಪುರೀಶ್ವರಾ [೧೬೯]

ಈ ಸಂಸ್ಕೃತ ಪದ್ಯಕ್ಕಿಂತ ಕನ್ನಡ ಪದ್ಯದ ಭಾವವೇ ಹೃದಯಂಗಮವಾಗಿದೆ. ಈ ದಿಸೆಯಲ್ಲಿ ಸಂಸ್ಕೃತ ಶತಕತ್ರಯದಲ್ಲಿ ಉಕ್ತವಾಗಿರುವ ಅನೇಕ ವಿಷಯಗಳು ಕನ್ನಡದಲ್ಲಿ ಮತ್ತಷ್ಟು ಪರಿಪುಷ್ಟವಾಗಿ ಕಂಡುಬರುತ್ತವೆ.

**ಪ್ರಭುಗೀತೆ:**

ಇದು ಮಾಯಿದೇವನ ಅಪ್ರಕಟಿತ ಕೃತಿ. ಪ್ರಭುದೇವರ ವಚನಗಳನ್ನು ಸಂಸ್ಕೃತಕ್ಕೆ ಅನುವಾದಿಸಿದುದರಿಂದ ಮಾಯಿದೇವ ಇದನ್ನು ಪ್ರಭುಗೀತೆಯೆಂದು ಕರೆದಂತಿದೆ. ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರ ರತ್ನಾಕರದಲ್ಲಿ ಈ ಕೃತಿಯ ಬಗೆಗೆ ಉಲ್ಲೇಖವಿದ್ದುದರಿಂದ ಇದು ಮಾಯಿದೇವನದೆಂದೇ ನಿರ್ಧರಿಸಲಾಗಿದೆ. ಡಾ. ಎಂ. ಎಂ. ಕಲಬುರ್ಗಿ ಅವರು 'ಪ್ರಭುಗೀತೆಯ ಹಸ್ತಪ್ರತಿ'[೧೭೦] ಎಂಬ ಲೇಖನದಲ್ಲಿ ಬೆಂಗಳೂರಿನ ಸಿ. ಮಹಾದೇವಪ್ಪ ಹಾಗೂ ಮೈಸೂರಿನ ಶ್ರೀ ಪಿ. ಎಂ. ಗಿರಿರಾಜು ಅವರ ಒಡೆತನದಲ್ಲಿ ಈ ಕೃತಿಯ ಹಸ್ತಪ್ರತಿಗಳಿರುವುದಾಗಿ ಸೂಚಿಸಿದ್ದಾರೆ. ಪ್ರಭುಗೀತೆಯ ಬೇರೊಂದು ಹಸ್ತಪ್ರತಿ ಮದ್ರಾಸಿನ 'ಗವರ್ನಮೆಂಟ್ ಓರಿಯಂಟಲ್ ಮ್ಯಾನುಸ್ಕ್ರಿಪ್ಟ' ಗ್ರಂಥಾಲಯದಲ್ಲಿ ಈ ಕೃತಿಯ ಅಪೂರ್ಣಪ್ರತಿಯಿದ್ದಂತೆ ತೋರುತ್ತದೆಯೆಂದೂ ಡಾ.ಕಲಬುರ್ಗಿ ಅವರು ಆ ಹಸ್ತಪ್ರತಿಯ ಸ್ವರೂಪವನ್ನು ತಿಳಿಸಿದ್ದಾರೆ. ಡಾ. ಡಿ.ವ್ಹಿ. ಪುರಾಣಿಕ ತಮ್ಮ

---

೧೬೮. ಜ್ಞಾನಶತಕ (ಸಂಸ್ಕೃತ) ೧೯, ಶಿವಾವಲ್ಲಭ, ೧೭.

೧೬೯. ಜ್ಞಾನಶತಕ ೧೭೯, ಮಹದೈಪುರೀಶ್ವರ ೧೦೯.

೧೭೦. ಡಾ. ಎಂ.ಎಂ. ಕಲಬುರ್ಗಿ (೧೯೮೮), ಮಾರ್ಗಸಂಪುಟ ೧, ಪು. ೩೭೩-೭೪.

'ಮಗ್ಗೆ ಮಾಯಿದೇವ : ಒಂದು ಅಧ್ಯಯನ' ಎಂಬ ಪ್ರಬಂಧದಲ್ಲಿ ಮಾಯಿದೇವನ ಮೂರೂ ವಚನಗಳನ್ನು ಸಂಗ್ರಹಿಸಿದ್ದಾರೆ. ಮೊದಲು ಪ್ರಭುದೇವರ ವಚನಗಳಿದ್ದು, ಕೆಳಗೆ ಮಾಯಿದೇವನ ಸಂಸ್ಕೃತ ಅನುವಾದಪೂರಿತ ವಚನಗಳಿವೆ. ಹೀಗೆ ಶರಣರ ವಚನಗಳನ್ನು ಪ್ರಥಮಬಾರಿಯಾಗಿ ಸಂಸ್ಕೃತಕ್ಕೆ ಅನುವಾದಿಸಿದ ಕೀರ್ತಿ ಮಾಯಿದೇವನದಾಗಿದೆ. ಆದ್ದರಿಂದ 'ಪ್ರಭುಗೀತೆ' ಮಾಯಿದೇವನ ವೈಶಿಷ್ಟ್ಯಪೂರ್ಣ ಕೃತಿಯಾಗಿದೆ.

**ಕಾರಣಾಗಮದ ವಾರ್ಧಕನಾಂದ್ಯ:**

ಮಾಯಿದೇವನ ಕೃತಿಗಳಲ್ಲಿ ಕಾರಣಗಮದ ವಾರ್ಧಕನಾಂದ್ಯವೂ ಒಂದು ಎಂದು ಹೇಳಲಾಗುತ್ತಿದೆ.[೧೭೧] ಆದರೆ ಇಲ್ಲಿ 'ಕಲ್ಯಾಣದ ಸ್ವಾಮಿ' ಎಂದಿರುವುದರಿಂದ ಈ ಕೃತಿ ಮಾಯಿದೇವನಿಂದ ರಚಿತವಾದುದಾಗಿರಲಿಕ್ಕಿಲ್ಲವೆಂದು ಕೆಲವರು ತರ್ಕಿಸಿದ್ದಾರೆ[೧೭೨] ಏಕೆಂದರೆ ವಾರ್ಧಕನಾಂದ್ಯದಲ್ಲಿ ಬರುವ 'ಸ್ವಾಮಿ' ಎಂಬ ಪದ ಮಾಯಿದೇವನಿಗಿರದೆ ಇದ್ದುದರಿಂದ ಈ ಕೃತಿ ಮಾಯಿದೇವನದಲ್ಲ ಎಂದು ಹೇಳಲಾಗುತ್ತದೆ. ಏಕೆಂದರೆ ಮಾಯಿದೇವನ ಮೂಲ ಹೆಸರು 'ಕಲ್ಯಾಣದ' ಎಂದಿದೆಯೇ ಹೊರತು 'ಕಲ್ಯಾಣದ ಸ್ವಾಮಿ' ಎಂದಲ್ಲ, ಶಿವಾನುಭವಸೂತ್ರದಲ್ಲಿಯೂ 'ಕಲ್ಯಾಣದ' ಎಂದೇ ಮಾಯಿದೇವ ಹೇಳಿಕೊಂಡ ಕಾರಣ ಮಾಯಿದೇವನದೇ ಈ ಕೃತಿ ಎಂದು ಹೇಳಲು ಈ ನಿಟ್ಟಿನಲ್ಲಿ ಇನ್ನೂ ಸಂಶೋಧನೆ ಅಗತ್ಯವೆನಿಸುತ್ತದೆ.

**ಶತಕತ್ರಯ:**

ಶತಕತ್ರಯವೆಂಬುದು ಹೆಸರೆ ಸೂಚಿಸುವಂತೆ ಮೂರು ಶತಕಗಳಿಂದ ಕೂಡಿದ ಗ್ರಂಥ. ಈ ಶತಕಗಳಲ್ಲಿ ಆಮೂಲಾಗ್ರವಾಗಿ ಒಂದೇ ವಿಷಯದ ನಿರೂಪಣೆಯಿಲ್ಲ. ಷಟ್‌ಸ್ಥಲತತ್ತ್ವ ಪ್ರತಿಪಾದನೆಯೂ ಇದ್ದು, ಅದಕ್ಕೆ ಹೊಂದಿಕೊಂಡಂತೆ ಅನೇಕ ವಿಷಯಗಳು ಇಲ್ಲಿ ಹಾಸುಹೊಕ್ಕಾಗಿ ಮೂಡಿಬಂದಿವೆ. ಆದ್ದರಿಂದ ಈ ಶತಕತ್ರಯವು, ವೀರಶೈವ ಸಿದ್ಧಾಂತದ ಒಂದು ಮಹತ್ವಪೂರ್ಣವಾದ ಗ್ರಂಥವೆಂದು ಹೇಳಬಹುದಾಗಿದೆ. ಇದರಲ್ಲಿ ಶಿವಾಧವ, ಶಿವಾವಲ್ಲಭ ಹಾಗೂ ಮಹದೈಪುರೀಶ್ವರ ಎಂಬ ಮೂರುಶತಕಗಳಲ್ಲಿ ಒಟ್ಟು ೩೧೭ ಪದ್ಯಗಳಿವೆ. ಮೊದಲನೆಯ ಶತಕದಲ್ಲಿ ೧೦೧, ಎರಡನೆಯದರಲ್ಲಿ ೧೦೩, ಕಡೆಯದರಲ್ಲಿ ೧೧೩ ಪದ್ಯಗಳು ಇರುವವು. ಮಾಯಿದೇವನು ಉತ್ಪಲಮಾಲಾವೃತ್ತ ಚಂಪಕಮಾಲಾವೃತ್ತ ಈ ಛಂದೋನಿಯಮದಲ್ಲಿ ೧ ಮತ್ತು ೩ನೆಯ ಶತಕದಲ್ಲಿನ ಪದ್ಯಗಳನ್ನು ಶಾರ್ದೂಲವಿಕ್ರೀಡಿತ, ಮತ್ತೇಭವಿಕ್ರೀಡಿತ ವೃತ್ತಗಳಲ್ಲಿ ೨ನೆಯ ಶತಕವನ್ನು ರಚಿಸಿದ್ದಾನೆ.

**೧. ಶಿವಾಧವಶತಕ:**

ಈ ಶತಕದಲ್ಲಿ ಗುರುಸ್ತೋತ್ರದಿಂದ ಗ್ರಂಥವನ್ನು ಆರಂಭಿಸಿ ವೀರಶೈವ ಸಂಪ್ರದಾಯ ಪ್ರವರ್ತಕರಾದ ಬಸವೇಶ್ವರ, ಚನ್ನಬಸವೇಶ್ವರ, ಪ್ರಭುದೇವರೆಂಬ ಶಿವಶರಣರನ್ನು ಸ್ತುತಿಸಿ ವಿಷಯನಿರೂಪಣೆಗೆ ತೊಡಗಿದ್ದಾನೆ ಮಾಯಿದೇವ.

ಮೊದಲಿಗೆ ಭಕ್ತಿಯ ಹಿರಿಮೆಯನ್ನು ಹೇಳಿ ಅದು ಯೋಗಕ್ಕಿಂತ ಹೆಚ್ಚಿನದು 'ನಿಷ್ಕಳ ಪದಕ್ಕೆಣೆ ಯಾವ ಪದಂ ಶಿವಾಧವಾ'[೧೭೩] ಎಂದು ಭಕ್ತಿಗೆ ಸಾಯುಜ್ಯ, ಮುಕ್ತಿಗಳು ಸಮಾನವಲ್ಲವೆನ್ನುತ್ತಾನೆ. ತಪಸ್ಸು, ಇಂದ್ರಿಯನಿಗ್ರಹ, ವಿರಾಗ,

---

೧೭೧. ಡಾ. ಶಿವಾನಂದ ವಿರಕ್ತಮಠ (೧೯೭೮) 'ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ', ಪು. ೨೦೭.

೧೭೨. ಡಾ. ಡಿ.ವಿ. ಪುರಾಣಿಕ (೧೯೯೨) ಮಗ್ಗೆಯ ಮಾಯಿದೇವ : ಒಂದು ಅಧ್ಯಯನ, ಬೆರಳಚ್ಚುಪ್ರತಿ, ಪು. ೮೮.

೧೭೩. ಶತಕತ್ರಯವು ಪ. ೮ (೧೯೨೫) ಸಿದ್ಧಲಿಂಗೇಶ್ವರ ನವೀನ ಟಿಪ್ಪಣಿ.

ಯೋಗ, ಮೌನ ಮೊದಲಾದವುಗಳು ಲಿಂಗವೃತಿಗೆ ಅಗತ್ಯವಿಲ್ಲ. ಸಮಾಧಿ, ಸಂಧ್ಯಾವಂದನ, ಹೋಮನೇಮಾದಿಗಳೂ ಬೇಡ. ಲಿಂಗಾಚಾರಿಯು ಈ ಮಾಯಾಜಾಡ್ಯಕ್ಕೆ ವಶನಾಗನು. ಅಲ್ಲಿ ಶ್ರಮ ಹೆಚ್ಚು, ಫಲ ಕಡಿಮೆ. ಬೆಟ್ಟವನ್ನು ಅಗೆದು ಇಲಿ ತೆಗೆದಂತೆ ಆದರೆ ಭಕ್ತಿಪಥದಲ್ಲಿ ಶ್ರಮ ಅಲ್ಪ, ಫಲವು ಅಧಿಕ.

ಲಿಂಗಾರ್ಪಣ ಯೋಗ್ಯವಾದ ಪದಾರ್ಥಗಳನ್ನು ನೀತಿವಿಡಿದು ಆಚರಿಸಿ ಪ್ರಸಾದಭೋಗಿಯಾಗಿ ಭೋಗ ಮೋಕ್ಷಗಳೆರಡನ್ನೂ ಅನುಭವಿಸುವ ಸೌಲಭ್ಯವು ಭಕ್ತಿಪಥದಲ್ಲಿದೆ. ಪ್ರಾಣವನ್ನು ಗುರುವಿಗೂ, ಶರೀರವನ್ನು ಲಿಂಗಕ್ಕೂ, ದ್ರವ್ಯವನ್ನು ಜಂಗಮಕ್ಕೂ ಅರ್ಪಿಸಬೇಕು. ಇದರಿಂದ ಭಕ್ತಿಯು ಬೆಳೆಯುತ್ತ ಹೋಗಿ ಭಕ್ತಾದಿ ಐಕ್ಯಸ್ಥಲವನ್ನು ಮುಟ್ಟುವನು. ಶರಣನು ಷಡ್‌ಲಿಂಗಧಾರಿಯಾಗಿರುವುದರಿಂದ ಅವನು ಮುಕ್ತಿಯನ್ನು ಪ್ರಯತ್ನಪೂರ್ವಕವಾಗಿ ಪಡೆಯಬೇಕಾಗಿಲ್ಲ; ಅದು ಅವನಿಗೆ ಸಹಜ ಸ್ಥಿತಿ ಎನ್ನುತ್ತಾನೆ.

ಇತರತ್ರ ಬಹುಜನ್ಮಗಳಲ್ಲಿ ಪ್ರಯಾಸದಿಂದ ದೊರೆಯುವ ಮುಕ್ತಿಯು ಇಲ್ಲಿ ಒಂದೇ ಜನ್ಮದಲ್ಲಿ ಅನಾಯಾಸವಾಗಿ ಲಭಿಸುತ್ತದೆ. ಇಂಥ ಶ್ರೇಷ್ಠವಾದ ಸೌಲಭ್ಯವಿರುವಾಗ ಅದನ್ನು ಬಿಟ್ಟು ದೂರ ಸರಿಯುವುದು ಬಡಿಸಿದ ಮೃಷ್ಟಾನ್ನವನ್ನು ಬಿಟ್ಟು ಭಿಕ್ಷಕ್ಕೆ ಹೋಗುವಂತೆ ಹಾಸ್ಯಾಸ್ಪದವೆಂದು, ಅಂಥವರನ್ನು ಕುರಿತು ವಿಡಂಬಿಸಿದ್ದಾನೆ. ತತ್ತ್ವಮಸ್ಯಾದಿ ಮಹಾವಾಕ್ಯಗಳು ಲಿಂಗಾಂಗಸಂಬಂಧವನ್ನೇ ಪ್ರತಿಪಾದಿಸುವವೆಂದು ಹೇಳಿ, ಕರ್ಮಮಾರ್ಗವನ್ನು ತ್ಯಾಗಮಾಡಿ ಯೋಗತ್ರಯ ಸಾಧನೆ ಮಾಡಲು ಸೂಚಿಸುತ್ತಾನೆ. ಸುಮಾರು ೩೦ ಪದ್ಯಗಳಲ್ಲಿ ಶರಣನ ದಿನಚರಿ ಕುರಿತು ಹೇಳಿದ್ದಾನೆ. ಲಿಂಗಭಕ್ತನಾದ ಶರಣನು ಅನಾದಿಮಾಯಾವಿರಹಿತ, ಮರಣವಿಮುಕ್ತ, ದೃಕ್‌ಕ್ರಿಯಾಸಮರ್ಥ. ಶರಣರು ಅಂತಸ್ಸತ್ವಶಾಲಿಗಳು, ಅವರಿಗೆ ಬಾಹ್ಯಗೌರವದಲ್ಲಿ ಆಸಕ್ತಿ ಇರುವುದಿಲ್ಲ. ಹಸಿವು ನೀರಡಿಕೆಗಳು ಶರೀರಧರ್ಮ. ಅದಕ್ಕೆ ಊಟೋಪಚಾರಗಳು ಅಗತ್ಯ. ಚಿತ್ಶುಚಿಯುಳ್ಳವರು ಹೇಗಿದ್ದರೂ ಅವರು ಲೋಕಪೂಜ್ಯರು, ಎಂದು ಶರಣರ ಲೀಲಾವೈಭವವನ್ನು ವರ್ಣಿಸುತ್ತಾನೆ. ಕೊನೆಗೆ ಭಕ್ತಿಮಾರ್ಗದ ಆಧಿಕ್ಯವನ್ನು ಹೇಳಿ ಈ ಶತಕವನ್ನು ಮುಗಿಸಿದ್ದಾನೆ.

ಬಸವ ಪುರಾತನರರ್ಚಿಸಿ ತೋರಿದ ಷಟ್‌ಸ್ಥಲ ಮಾರ್ಗದೊಳ್ ಪ್ರವ
ರ್ತಿಸುತಂ ಅನೂನಭಕ್ತಿರತಿಯಂ ತನುವಿತ್ತಮನಂಗಳಂ ಸಮ
ರ್ಪಿಸಿ ಗುರುಲಿಂಗಜಂಗಮಕೆ ವಂಚನೆಯಿಲ್ಲದೆ ಮಾಡಿಕೂಡಿ ರಾ
ರಾಜಿಸುವ ಮಹಾತ್ಮರಂ ನೆನೆವುದೇ ಘನಮುಕ್ತಿಪದಂ ಶಿವಾಧವಾ ||[೧೭೪]

ಇದು ಮಾಯಿದೇವನು ಕೊಟ್ಟ ಭಕ್ತಸ್ಥಲದ ವ್ಯಾಖ್ಯೆ.

**೨. ಶಿವಾವಲ್ಲಭಶತಕ:**

ಶಿವಾವಲ್ಲಭ ಶತಕದಲ್ಲಿ ಜ್ಞಾನಕ್ಕೆ ಸಂಬಂಧಿಸಿದ ವಿಷಯಪ್ರತಿಪಾದನೆಗೆ ಹೆಚ್ಚಿನ ಮಹತ್ವ ದೊರೆತಿದೆ. ಲಿಂಗಾಂಗಸಾಮರಸ್ಯ, ತತ್ವಮಸಿ, ಪ್ರಪಂಚಭ್ರಮನಿರಸನ, ದೇಹಮೋಹ, ನಾಹಂ ಕೋಹಂ ಭಾವರಾಹಿತ್ಯ, ದ್ವೈತ, ಅದ್ವೈತರಹಿತಶರಣಮಾರ್ಗ, ಷಟ್ಕರ್ಮ, ಅರಿಷಡ್ವರ್ಗ, ರಾಗದ್ವೇಷ ನಿರ್ಲೇಪ, ಗುರುಲಿಂಗಜಂಗಮಸೇವೆ, ಪುಣ್ಯಕ್ಷೇತ್ರ, ಪುಣ್ಯತೀರ್ಥ ಭ್ರಾಂತಿಖಂಡನೆ, ಶಿವಭಕ್ತಿಪ್ರೇರಿತ ಜ್ಞಾನ, ಪ್ರಸಾದಮಹತ್ವ, ಜ್ಞಾನದಿಂದ ಯೋಗದ ಪ್ರಯೋಜನ, ಕರ್ಮ-ಜ್ಞಾನ ಕಾಂಡಗಳಿಗಿಂತ ಭಕ್ತಿಕಾಂಡದ ಉತ್ತಮತೆ - ಈ ಮೊದಲಾದ ವಿಷಯಗಳು ಜ್ಞಾನಕ್ಕೆ ಪೋಷಕವಾಗಿ ಬಂದಿವೆ.

---

೧೭೪. ಶಿವಾಧವಶತಕ, ವೃತ್ತ ೬.

"ಪಾಪಂಗೆಯ್ಯದೆ ಸುಮ್ಮನಿರ್ಪುದದು ಪುಣ್ಯ; ಮಗುಳ್ದು ಪುಣ್ಯಕ್ರಿಯೆ ಗೈಯದಿರ್ಪುದದು ಪಾಪ",[೧೭೫] "ತನ್ನಿಂದನ್ಯಮನೇನುವಂ ಬಗೆಯನಾಗಿ ಶರಣಂ ದ್ವೈತಹೀನಂ",[೧೭೬] "ಶರಣಂ ಶಾಂಭವಯೋಗಿಯಿರ್ದ ನೆಲನೇ ಕ್ಷೇತ್ರಂಪವಿತ್ರಂಪರಂ",[೧೭೭] "ದಾಸೋಹಂಭಾವ ವಿಶಿಷ್ಟನೇ ಪರಮಯೋಗೀಂದ್ರ",[೧೭೮] ಇಂಥ ಮಾತುಗಳಲ್ಲಿ ಮಾಯಿದೇವನ ದರ್ಶನಾನುಭವ ಕೆನೆಗಟ್ಟಿದೆ.

**೩. ಮಹದೈಪುರೀಶ್ವರಶತಕ:**

ಮಹದೈಪುರೀಶ್ವರಶತಕ ಮಾಯಿದೇವನ ಪರಿಪಕ್ವಾನುಭವದ ರಸಪಾಕವಾಗಿದೆ. ಭಕ್ತಿಜ್ಞಾನಗಳನ್ನು ಅಳವಡಿಸಿಕೊಂಡ ಸಾಧಕ, ಮುಕ್ತಿಮಂದಿರವನ್ನು ತಲುಪಲು ವೈರಾಗ್ಯಪರನಾಗಿ ಮುನ್ನಡೆಯಬೇಕಾಗುತ್ತದೆ. ಇಂಥ ವೈರಾಗ್ಯ ಬೋಧೆಯನ್ನು ಮಾಯಿದೇವ ಇಲ್ಲಿ ಸರಳ ಹಾಗೂ ಸುಂದರವಾಗಿ ಮಾಡಿದ್ದಾನೆ. ಶರೀರದ ನಿತ್ಯಾನಿತ್ಯ ಸ್ವರೂಪದೊಡನೆ ಆರಂಭವಾಗಿ, ಗುರುಕಾರುಣ್ಯದಿಂದ ಶುದ್ಧಾಂಗವಾಗಿ ಭಕ್ತಿಸಾಧನೆಯಿಂದ ಲಿಂಗದಲ್ಲಿ ನಿಜೈಕ್ಯವನ್ನು ಪಡೆಯುವವರೆಗಿನ ರೀತಿಯಲ್ಲಿ ಇಲ್ಲಿ ವರ್ಣಿಸಲಾಗಿದೆ. ಅಂಗ ಮನ ಭಾವಗಳನ್ನು ಅನಿತ್ಯಸುಖಕ್ಕಾಗಿ ಬಳಸದೆ ಲಿಂಗಸಂಗದಲ್ಲಿ ಸವಿಸಿ ಕೃತಾರ್ಥರಾಗಬೇಕು ಎಂಬುದು ಈ ಶತಕದ ಪ್ರಮುಖ ಆಶಯ. ಲಿಂಗನಿಜೈಕ್ಯನ ಸ್ಥಿತಿಯನ್ನು ವರ್ಣಿಸಿದ ರೀತಿ ಇಲ್ಲಿ ಗಮನಿಸಬಹುದು.

"ಅಂಗಮನಂಗದಿಂ ಕಳೆಯನಾಕಳೆಯಿಂ ಸುಖಮಂ ಸುಖೋಕ್ತಿಯಿಂ
ಸಂಗಮನಾ ಪ್ರಸಂಗಂ ರತಿಯಿಂ ಲಯಮಂ ಲಯದಿಂ ನಿರಂತರಂ
ಸಂಗಿಸಿ ತತ್ವಪಂಚ ವಿಷಯೈಕ ಬಹಿಷ್ಕೃತನಾಗಿ ರಾಜಿಪಂ
ಲಿಂಗ ನಿಜೈಕ್ಯನಯ್ಯ ಪರಮಪ್ರಭುವೇ ಮಹದೈಪುರೀಶ್ವರಾ"[೧೭೯]

ಹೀಗೆ ಮೂರೂ ಶತಕಗಳಲ್ಲಿ ವೀರಶೈವ ತತ್ವವಿಚಾರಗಳನ್ನು ಸರಳವಾಗಿ, ಸಮಗ್ರವಾಗಿ ವಿವರಿಸಿದ ಮಾಯಿದೇವನ ತತ್ವಪರಿಣತಿ ಅಪೂರ್ವವಾದುದಾಗಿದೆ.

**ಏಕೋತ್ತರ ಶತಸ್ಥಲ:**

ಮಾಯಿದೇವನ ಏಕೋತ್ತರ ಶತಸ್ಥಲವು, ವಾರ್ಧಕಷಟ್ಪದಿಯಲ್ಲಿ ರಚನೆಗೊಂಡಿದ್ದು ೧೧೫ ಪದ್ಯಗಳನ್ನು ಒಳಗೊಂಡಿದೆ. ಆರಂಭದ ಸೂಚನಾಪದ್ಯದಲ್ಲಿ ಶಿವನು ಗಿರಿಜಗೆ, ಭೂಮಿಯಲ್ಲಿ ಬಸವೇಶನು ಸದ್ಭಕ್ತ ಜನತೆಗೆ ಏಕೋತ್ತರ ಶತಸ್ಥಲವನ್ನು ಹೇಳಿದಂತೆ ತಿಳಿಸಲಾಗಿದೆ. ಗುರುಸ್ತುತಿಯೊಂದಿಗೆ ಪಿಂಡಾದಿ ಜ್ಞಾನಶೂನ್ಯಾಂತವಾದ ೧೦೧ ಸ್ಥಲಗಳ ಲಕ್ಷಣ ಹಾಗೂ ವಿವರಣೆಯನ್ನು ಒಂದೊಂದು ಪದ್ಯದಲ್ಲಿ ವಿವರಿಸಿರುವುದು ಈ ಕೃತಿಯ ವೈಶಿಷ್ಟ್ಯವಾಗಿದೆ. ಒಂದರ್ಥದಲ್ಲಿ ಇದನ್ನು ಶಿವಾನುಭವಸೂತ್ರದಲ್ಲಿ ಸೂಚಿಸಲಾದ ಅವಾಂತರಭೇದಗಳನ್ನು ನಿರೂಪಿಸಿರುವ ವಿವರಣಾತ್ಮಕ ಗ್ರಂಥವೆಂದು ಹೇಳಬಹುದು.

---

೧೭೫. ಶಿವಾವಲ್ಲಭಶತಕ, ವೃತ್ತ ೭೯.

೧೭೬. ಅದೇ, ವೃತ್ತ ೫೦.

೧೭೭. ಅದೇ, ವೃತ್ತ ೧೮.

೧೭೮. ಅದೇ, ವೃತ್ತ ೪೦.

೧೭೯. ಮಹದೈಪುರೀಶತಕ, ವೃತ್ತ ೫೪.

ಮೊದಲಿನ ೮ ಪದ್ಯಗಳು ನಾಂದಿಪದ್ಯಗಳಾಗಿವೆ. ೧೦೧ ಸ್ಥಲಗಳ ವಿಭಜನೆಯಲ್ಲಿ ಸ್ಥಲನಾಮ ನಿರ್ದೇಶನದಲ್ಲಿ ಮಹಾಲಿಂಗ ದೇವನ ಸ್ಥಲಗಳನ್ನು ಹೋಲುತ್ತಿದ್ದರೂ ಅಲ್ಪಮಟ್ಟಿನ ವ್ಯತ್ಯಾಸವನ್ನು ಇಲ್ಲಿ ಕಾಣುತ್ತೇವೆ. ಇದು, ಲಿಂಗಸ್ಥಲದಲ್ಲಿಯ ಜಂಗಮಲಿಂಗದ ೧೨ ಸ್ಥಲಗಳು ಇಲ್ಲಿರದೆ ಮಹಾಲಿಂಗಸ್ಥಲವು ೧೨ ಅವಾಂತರ ಕುಲಸ್ಥಲಗಳನ್ನು ಒಳಗೊಂಡುದು ಇಲ್ಲಿನ ವಿಶೇಷ. ಚನ್ನಬಸವಣ್ಣನವರ ಧೋರಣೆಯಂತೆ ಲಿಂಗಸ್ಥಲಗಳ ಅವಾಂತರ ಸ್ಥಲಗಳ ವಿವರ ಇಲ್ಲಿದೆ.

ಏಕೋತ್ತರ ಶತಸ್ಥಲದ 'ಸಹಜಮಾಟಸ್ಥಲ' ಕುರಿತು ಅವನ ವಿವರಣೆಯು ಹೀಗಿದೆ.

ಕೊಡುವನಾರೈ ಶಿವನು ಕೊಂಬನಾರೈ ಶಿವನು
ಎಡೆಯೊಳಿನ್ನುಳಿದವರಿಗೊಡೆತನವದಲ್ಲಿಯದೊ
ಮೃಡನೆ ದಾತೃಭೋಕ್ತೃವೆಂದು ನಿಗಮಾದಿಗಳು ಗಡಬಡಿಸಿ ನುಡಿವುತಿರಲು
ಕಡೆಗೆ ದಿಟವೆಂದೆಂಬ ತತ್ವವಾಕ್ಯವ ತಿಳಿದು
ಒಡೆಯರೊಡವೆಯ ಕೊಂಡರೆಂದರಿಯದಿರುತಿರ್ಪ
ನಡೆಯುಳ್ಳಡದು ಸಹಜಮಾಟ ತಾತ್ಪರ್ಯಾರ್ಥಬಿಡದೆ ಪರಮಸ್ವಾರ್ಥವು.[೧೮೦]

ಈ ಪದ್ಯದಲ್ಲಿ 'ಸಹಜಮಾಟಸ್ಥಲ'ದ ವಿವರಣೆಯನ್ನು ಸಂಕ್ಷೇಪವಾಗಿ ನೀಡಿದುದು, ಮಾಯಿದೇವನ ಶಾಸ್ತ್ರ ಪಾಂಡಿತ್ಯ, ನಿರೂಪಣೆಯ ಸರಳತೆ, ಸೂತ್ರಬದ್ಧತೆಯನ್ನು ಇಲ್ಲಿ ಕಾಣುತ್ತೇವೆ. ಹೀಗೆ ಒಂದೊಂದು ಸ್ಥಲದ ನಿಲುವನ್ನು ೧೦೧ ಪದ್ಯಗಳಲ್ಲಿ ವ್ಯಕ್ತಪಡಿಸುವ ಅವನ ಶಾಸ್ತ್ರ ಪರಿಣತಿಗೆ ಈ ಕೃತಿ ನಿದರ್ಶನವೆನ್ನುವಂತಿದೆ.

ಮಾಯಿದೇವನ ಈ ಪದ್ಯೈಕೋತ್ತರಶತಸ್ಥಲವಲ್ಲದೆ ಇನ್ನೊಂದು ಬಸವೇಶನ ಪದ್ಯೈಕೋತ್ತರ ಶತಸ್ಥಲವಿರುವುದಾಗಿ ಡಾ. ಎಸ್.ವ್ಹಿ. ಅಯ್ಯನಗೌಡರ ಅವರು ಹೇಳಿದ್ದಾರೆ.[೧೮೧] ಆದರೆ ಅಲ್ಲಿ ಅವರು ಉದಾಹರಿಸಿದ ಪದ್ಯವನ್ನು ಪರಿಶೀಲಿಸಿದರೆ, ಅದು ಮಾಯಿದೇವನ ಪದ್ಯೈಕೋತ್ತರ ಶತಸ್ಥಲದ ೧೪ನೇ ಪದ್ಯವಾಗಿದೆ. ಈ ಕುರಿತು ಡಾ. ಜೆ.ವಿ. ಶಿವಲಿಂಗಯ್ಯ ಹೇಳುವುದು ಹೀಗೆ : "........ ಬಸವೇಶನೆಂಬುವನು ಪದ್ಯೈಕೋತ್ತರ ಶತಸ್ಥಲವೆಂಬುದೊಂದು ಕೃತಿಯನ್ನು ಬರೆದನೆಂದು ಶ್ರೀಯುತ ಅಯ್ಯನಗೌಡರು ಹೇಳಿರುವುದಕ್ಕೆ ಡಾ. ಆರ್. ನರಸಿಂಹಾಚಾರ್ಯರ ಕರ್ಣಾಟಕ ಕವಿಚರಿತೆಯ ದ್ವಿತೀಯ ಸಂಪುಟವೇ ಆಧಾರ. ಇವೆರಡನ್ನೂ ತೌಲನಿಕವಾಗಿ ಅಭ್ಯಾಸಮಾಡಿದಾಗ, ಇವೆರಡೂ ಒಂದೇ ಎಂಬುದು ಸ್ಪಷ್ಟವಾಗುತ್ತದೆ. ಈ ಕೃತಿಯು ಮಗ್ಗೆ ಮಾಯಿದೇವರದೇ ಹೊರತು 'ಬಸವೇಶ'ನೆಂಬುವನು ಇದನ್ನು ರಚಿಸಿಯೇ ಇಲ್ಲ. ಸಾವಿರಾರು ಕೃತಿಗಳನ್ನು ಪರಿಶೀಲಿಸಿ ಕವಿಚರಿತೆಯನ್ನು ಬರೆಯುವಾಗ, ಅವರಿಗೆ ಅರಿವಿಲ್ಲದೇ ಇಂತಹವುಗಳನ್ನು ಕವಿಚರಿತೆಯಲ್ಲಿ ಬರೆದಿರಬಹುದು".[೧೮೨] ಇದರಿಂದ ಇಲ್ಲಿ ಮಾಯಿದೇವನೊಬ್ಬನೆ ಪದ್ಯೈಕೋತ್ತರವನ್ನು ರಚಿಸಿರುವನೆಂದು ಸ್ಪಷ್ಟವಾಗುತ್ತದೆ. ಅಲ್ಲದೆ ಬಸವೇಶನದೆಂದು ಹೇಳುವ ಆ ಪದ್ಯ ಮಾಯಿದೇವನದೇ ಎಂಬಲ್ಲಿ ಸಂಶಯವಿಲ್ಲ. ಮಾಯಿದೇವನ ಪದ್ಯೈಕೋತ್ತರ ಶತಸ್ಥಲದಲ್ಲಿ 'ನಿರುಪಾಧಿಮಾಟಸ್ಥಲ'ದ ಲಕ್ಷಣಗಳನ್ನು ಹೇಳುವ ಆ ಪದ್ಯ ಹೀಗಿದೆ.

---

೧೮೦. ಶ್ರೀಚನ್ನಮಲ್ಲಿಕಾರ್ಜುನರು (೧೯೭೨) ಮಗ್ಗೆ ಮಾಯಿದೇವಪ್ರಭುವಾಣಿ, ಪ. ೧೫, ಪು. ೧೭೩.

೧೮೧. ಡಾ. ಎಸ್.ವಿ. ಅಯ್ಯನಗೌಡರ (೧೯೯೦) 'ಕನ್ನಡದಲ್ಲಿ ಏಕೋತ್ತರ ಶತಸ್ಥಲಗಳು : ಒಂದು ಕಿರು ಪರಿಚಯ', ಶಿವದೀಪ್ತಿ, ಪು. ೩೩೨ (ಸಂ) ಡಾ. ಆರ್.ಸಿ. ಹಿರೇಮಠ.

೧೮೨. ಡಾ. ಜೆ.ವಿ. ಶಿವಲಿಂಗಯ್ಯ (ಸಂ) (೧೯೮೯) ಇಮ್ಮಡಿ ಮುರುಘಾಗುರುಸಿದ್ಧಸ್ವಾಮಿಗಳು ನಿರೂಪಿಸಿದ ಕೈವಲ್ಯಸೋಪಾನ ನಾಮೈಕೋತ್ತರ ಶತಸ್ಥಲಸ್ವರವಚನಗಳು, ಪು. vii-viii.

ಶಮೆದಮೆಗಳನವರತ ದೇಹದೊಳಗಾವರಿಸಿ
ಭ್ರಮೆಯಡಗಿ ಹಮ್ಮುಡುಗಿ ಮೃಡನ ಶರಣಾಳಿಯೊಳು
ನಮಿತ ಭಯರಸ ರೂಪು ವಿದ್ರೂಪು ಎಂಬುಭಯ ಸಂದು ಸಂದಳಿದು ನಿಂದು ।
ಅಮರ ಪದ ಮೊದಲಾದ ಧರ್ಮ ಕಾಮ್ಯಾರ್ಥಗಳ
ಕ್ರಮವ ಬಯಸದೆ ಹರಣ ಶರಣ ಜನಕನವರತ
ಸುಮನತರದಿಂ ಸೇವೆಗೆಯ್ಯಲದು ನಿರುಪಾಧಿಯಾದ ಮಾಟವದೆನಿಸಿತು ॥[೧೮೩]

'ಪದ್ಮೆಕೋತ್ತರ ಶತಸ್ಥಲ'ವು ನೂರೊಂದು ಸ್ಥಲಗಳ ಸ್ವರೂಪವನ್ನು ಕಾವ್ಯರೂಪದಲ್ಲಿ ಹೇಳುವ ಪ್ರಥಮಕೃತಿಯಾಗಿದೆ.

**ಷಟ್‌ಸ್ಥಲ ಗದ್ಯ:**

ಮಾಯಿದೇವನ ಈ ಷಟ್‌ಸ್ಥಲಗದ್ಯ ರಗಳೆಯ ಸ್ವರೂಪದ್ದಾಗಿದೆ. ಪ್ರತಿಯೊಂದು ಸ್ಥಲದ ರಗಳೆಯು ಭಿನ್ನವಾಗಿದೆ. ಉಳಿದೆಲ್ಲವು ೧೮ ಸಾಲುಗಳನ್ನು ಹೊಂದಿದ್ದರೆ, ಪ್ರಸಾದಿಸ್ಥಲವೊಂದೇ ೨೦ ಸಾಲುಗಳನ್ನು ಒಳಗೊಂಡಿದೆ. ಇಲ್ಲಿ ಸೇರ್ಪಡೆಯಾದ ಎರಡು ಪಾದಗಳು ಪ್ರಕ್ಷಿಪ್ತವಾಗಿವೆಯೆಂದೂ ಹೇಳಲಾಗಿದೆ. ನಾಲ್ಕು ಸಾಲಿನ ಸ್ತುತಿಕಂದ ಹಾಗೂ ಸಮಾಪ್ತಿಯ ನಾಲ್ಕು ಸಾಲಿನ ಕಂದ ಬಿಟ್ಟು, ಒಟ್ಟು ೧೦೮ ಸಾಲುಗಳು ಈ ಷಟ್‌ಸ್ಥಲ ಗದ್ಯದಲ್ಲಿವೆ. ಷಟ್‌ಸ್ಥಲ ಗದ್ಯದ ಕೊನೆಯಲ್ಲಿ 'ಅಷ್ಟೋತ್ತರ ಶತವಿಧದಿಂ'[೧೮೪] ಎಂದು ಹೇಳಿರುವುದರಿಂದ ಮಾಯಿದೇವ ೧೦೮ ವಿಧವಾಗಿ ಷಟ್‌ಸ್ಥಲವನ್ನು ಸ್ತುತಿಸಿದುದಾಗಿ ತಿಳಿದು ಬರುತ್ತದೆ. ಇದರಲ್ಲಿರುವ ಒಂದೊಂದು ಪಾದಗಳೂ ಮಹತ್ವದ್ದಾಗಿವೆ. ಶ್ರೀ ಚನ್ನಮಲ್ಲಿಕಾರ್ಜುನರು ಈ ಕೃತಿಯನ್ನು ಸಂಕ್ಷಿಪ್ತವಾಗಿ ವಿವರಿಸಿದ್ದುಂಟು. ಉದಾಹರಣೆಗಾಗಿ ಗದ್ಯದ ಎರಡು ಪಾದಗಳನ್ನು ಅವಲೋಕಿಸಬಹುದು.

ಶ್ರೀಮದನಾದಿ ವಿಮುಕ್ತಂ ಭಕ್ತಂ ಪ್ರೇಮಕಳಾ ಸಂಯುಕ್ತಂ ಭಕ್ತಂ।
ಉತ್ಕೃಹಗುಣ ಸಂಸಕ್ತಂ ಭಕ್ತಂ। ಕುತ್ಸಿತ ಕರ್ಮ ನಿರಸ್ತಂ ಭಕ್ತಂ।[೧೮೫]

**ಸ್ವರವಚನ:**

ಮಾಯಿದೇವ 'ಐಪುರಸೋಮೇಶ್ವರ' ಅಂಕಿತದಲ್ಲಿ ಸ್ವರವಚನ ರಚಿಸಿದ್ದಾನೆ. ಈತನ ಹೆಸರಿನಲ್ಲಿ ನಾಲ್ಕು ಸ್ವರವಚನಗಳು ಲಭಿಸಿವೆ. 'ಕಂಬಾಳ ಶಾಂತಮಲ್ಲೇಶನ ಗಣವಚನ ರತ್ನಾವಳಿ'ಯಲ್ಲಿ ಮೂರು ಸ್ವರವಚನಗಳಿವೆ. ಡಾ. ವೀರಣ್ಣ ರಾಜೂರ ಅವರು ಒಂದು ಸ್ವರವಚನವನ್ನು (ಪರಂಜ್ಯೋತಿ ೨೦-೧೧, ಪು. ೫೮೭-೫೯೦) ಪ್ರಕಟಿಸಿದ್ದಾರೆ. ಉಪಲಬ್ಧ ಈ ನಾಲ್ಕೂ ಸ್ವರವಚನಗಳಲ್ಲಿ ಮಾಯಿದೇವ, ತನ್ನ ಅಂತರಂಗದ ಅನುಭವವನ್ನು ಹೃದಯಂಗಮವಾಗಿ ಅಭಿವ್ಯಕ್ತಗೊಳಿಸಿದ್ದಾನೆ. ಶಿವಾನುಭವವೇ ಮಾಯಿದೇವನ ಆಧ್ಯಾತ್ಮಿಕತೆಯ ಪರಮಸಾಧನೆ ಎಂಬುದಕ್ಕೆ ಈ ಸ್ವರವಚನಗಳೆ

೧೮೩. (i)ಶ್ರೀಚನ್ನಮಲ್ಲಿಕಾರ್ಜುನರು (೧೯೬೨) ಮೊಗ್ಗೆಯ ಮಾಯಿದೇವಪ್ರಭುವಾಣಿ, ಪ. ೧೪, ಪು. ೧೭೩.
(ii) ಮಗ್ಗೆಯ ಮಾಯಿದೇವರು ನಿರೂಪಿಸಿದ ಪದ್ಮೆಕೋತ್ತರ ಶತಸ್ಥಲ (೧೯೮೧) (ಸಂ) ಪಿ.ಎಂ. ಗಿರಿರಾಜು, ಗೌ॥ಸ॥ 'ಶರಣ ಶರಣಸಂತಾನ ಗ್ರಂಥಮಾಲೆ-೬. ಪ.೧೪. ಪು ೧೧.

೧೮೪. ಶ್ರೀಚನ್ನಮಲ್ಲಿಕಾರ್ಜುನರು (೧೯೬೨) ಮೊಗ್ಗೆ ಮಾಯಿದೇವ ಪ್ರಭುವಾಣಿ, ಪು. ೧೭೮.

೧೮೫. ಅದೇ, ಪು. ೧೭೫.

ನಿದರ್ಶನವೆನಿಸಿವೆ. ಇವುಗಳಲ್ಲಿ ಶತಕತ್ರಯಗಳಿಗಿಂತ ಹೆಚ್ಚು ಗೇಯಗುಣವಿರುವುದು ಗಮನಾರ್ಹ. ಮಾಯಿದೇವನ ಸ್ವರವಚನಗಳ ಸಂಖ್ಯೆ ಇನ್ನೂ ಅಧಿಕವಾಗಿರುವ ಸಾಧ್ಯತೆಯುಂಟು. ಇದರಿಂದ ಮಾಯಿದೇವನ ಸಾಹಿತ್ಯದ ವೈವಿಧ್ಯ ಹಾಗೂ ವಿಪುಲತೆಯ ದರ್ಶನ ವ್ಯಕ್ತವಾಗುತ್ತದೆ. ತನ್ನ ಆರಾಧ್ಯದೈವವಾದ ಸೋಮೇಶ್ವರನನ್ನು ಸ್ತುತಿಸಿದ ಒಂದು ಸ್ವರವಚನದ ಅಂತಿಮ ಪದ್ಯ ಹೀಗಿದೆ.

ಧ್ಯಾನಿಸಲಿಲ್ಲದ ಮರೆಯಲಿಲ್ಲದ ಸು
ಜ್ಞಾನದ ದೆಸೆಯಲರಿಯಲಿಲ್ಲದ
ಮಾನಸತರ್ಕ ಸಂಶಯವಿಲ್ಲದ ನಿಜ
ದಾನಿ ನೀವು ಐಪುರಸೋಮೇಶ ||[೧೮೬]

ಹೀಗೆ ಮಾಯಿದೇವ ಸಂಸ್ಕೃತ-ಕನ್ನಡ ಎರಡೂ ಭಾಷೆಗಳಲ್ಲಿ ಕೃತಿಗಳನ್ನು ರಚಿಸಿ, ವೀರಶೈವಧರ್ಮ ತತ್ವಗಳ ಪರಿಚಯವನ್ನು ಉಭಯ ಭಾಷಿಕರಿಗೂ ಮಾಡಿಕೊಟ್ಟಿದ್ದಾನೆ. ಇವನ ಧರ್ಮತತ್ವಪರಿಣತಿ, ಅನುಭಾವದ ಅಪೂರ್ವತೆಗಳನ್ನು ಮುಂದೆ ಬಂದ ಕವಿಗಳು, ಮುಕ್ತಕಂಠದಿಂದ ಹೊಗಳಿದ್ದಾರೆ. ಆಧ್ಯಾತ್ಮ ಪ್ರಪಂಚಕ್ಕೆ ಇವನು ಕೊಟ್ಟ ಕಾಣಿಕೆ ಚಿರಂತನವಾಗಿದೆ.

**ಮಾಯಿದೇವನ ಶಿವಾನುಭವ ಸೂತ್ರದ ವೈಶಿಷ್ಟ್ಯ:**

ಮಾಯಿದೇವನು ಶಿವಾನುಭವ ಸೂತ್ರ ಹಾಗೂ ವಿಶೇಷಾರ್ಥ ಪ್ರಕಾಶಿಕೆಗಳನ್ನು ಮೊದಲು ರಚಿಸಿ ನಂತರ ಕನ್ನಡ ಕೃತಿಗಳನ್ನು ರಚಿಸಿದಂತಿದೆ. ಈತನ ಸಾಹಿತ್ಯವನ್ನು ಪರಿಶೀಲಿಸಿದಾಗ, ಅವನಲ್ಲಾದ ಎರಡು ಬದಲಾವಣೆಗಳನ್ನು ಗುರುತಿಸಬಹುದು. ಅವೆಂದರೆ, ಮೊದಲು ಸಂಸ್ಕೃತಕ್ಕೆ ಸಂಪೂರ್ಣವಾಗಿ ಅಂಟಿಕೊಂಡದ್ದು, ನಂತರ ಕನ್ನಡಕ್ಕೆ ಒಲವುತೋರಿದ್ದು ಈ ಎರಡರಿಂದಾಗಿ - ಮಾಯಿದೇವ 'ಉಭಯಭಾಷಾವಿಶಾರದ' ಎನಿಸಿಕೊಂಡಂತಿದೆ. ಈತನ ಸಂಸ್ಕೃತ ಕೃತಿಗಳು ಶಾಸ್ತ್ರಮರ್ಯಾದೆಯನ್ನು ಹೆಚ್ಚಿಸಿದರೆ, ಕನ್ನಡಕೃತಿಗಳು ಕನ್ನಡದ - ವಿಗಡಸೊಗಡನ್ನು ಹೆಚ್ಚಿಸಿವೆ. ಸಂಸ್ಕೃತ ಕೃತಿಗಳಲ್ಲಿ ಪ್ರಾಚೀನ ಕೃತಿಗಳಸಾರ ಹೆಚ್ಚಿದ್ದರೆ, ಕನ್ನಡಕೃತಿಗಳಲ್ಲಿ ವಚನಸಾಹಿತ್ಯದಸಾರ, ಸೊಬಗು ಅಡಕವಾಗಿರುವುದನ್ನು ನೋಡುತ್ತೇವೆ.

ಬಸವ, ಅಲ್ಲಮ, ಚನ್ನಬಸವ ಮೊದಲಾದ ಶರಣರನ್ನು ಕನ್ನಡದಲ್ಲಿ ರಚನೆಗೊಂಡ ಶತಕತ್ರಯ ಹಾಗೂ ಪದ್ಮೆಕೋತ್ತರ ಶತಸ್ಥಲಗಳಲ್ಲಿ ಹೃದಯತುಂಬ ಬಣ್ಣಿಸಿದ ಮಾಯಿದೇವ, ಅದೇಕೊ ಸಂಸ್ಕತ ಕೃತಿಗಳಾದ ಶಿವಾನುಭವ ಸೂತ್ರ ಹಾಗೂ ವಿಶೇಷಾರ್ಥ - ಪ್ರಕಾಶಿಕೆಗಳಲ್ಲಿ ಅವರನ್ನು ಸ್ಮರಿಸಿಲ್ಲ, ಶಿವಾನುಭವ ಸೂತ್ರದಲ್ಲಿ ಪ್ರಾಚೀನ ಎಲ್ಲ ಗ್ರಂಥಗಳನ್ನು ಹೆಸರಿಸಿರುವ ಮಾಯಿದೇವ, ಪ್ರಕರಣಗ್ರಂಥಗಳೆಂದು ಹೇಳಲಾಗುವ ಸಿದ್ಧಾಂತ ಶಿಖಾಮಣಿ ಕ್ರಿಯಾಸಾರ, ಈ ಮೊದಲಾದ ಕೃತಿಗಳನ್ನು ಅಲ್ಲಿ ಉಲ್ಲೇಖಿಸಿಲ್ಲ. ವಿದ್ವಾಂಸರು ಗುರುತಿಸಿದಂತೆ, ಶಿವಾನುಭವ ಸೂತ್ರದ ಇನ್ನೊಂದು ವೈಶಿಷ್ಟ್ಯವೆಂದರೆ, ಈ ಕೃತಿ 'ತಂತ್ರೋತ್ತರ ಪ್ರದೀಪಿಕೆ'ಯನ್ನು ಸಂಪೂರ್ಣವಾಗಿ ಅವಲಂಬಿಸಿದ್ದರೂ ವಾತುಲಾಗಮದ ಉತ್ತರಭಾಗವಾದ ಈ ಪ್ರದೀಪಿಕೆ, ಸಿದ್ಧಂತ ಶಿಖಾಮಣಿಯ ಕರ್ತೃ ಶಿವಯೋಗಿ ಶಿವಾಚಾರ್ಯನಿಗೂ ದೊರೆತಂತಿಲ್ಲ. ಈ ಬಗೆಗೆ ಡಾ. ಎಂ.ಜಿ. ನಂಜುಂಡಾರಾಧ್ಯರು ಹೇಳಿದುದು ಹೀಗೆ: "ಅದನ್ನು (ಷಟ್‌ಸ್ಥಲ ನಿರ್ಣಯವನ್ನು) ಮಗ್ಗೆ ಮಾಯಿದೇವರು ಅನುಭವ ಸೂತ್ರದಲ್ಲಿ ಅಪ್ರತಿಮವಾಗಿ ನಿರೂಪಿಸಿದ್ದಾರೆ. ಇದು ಏಕೋತ್ತರಶತಸ್ಥಲ ನಿರ್ಣಯವನ್ನು ರೇಣುಕತಂತ್ರದಿಂದ ಸಂಗ್ರಹಿಸಿ,

೧೮೬. ಡಾ. ಡಿ.ವ್ಹಿ. ಪುರಾಣಿಕ (೧೯೯೨) ಮಗ್ಗೆಯ ಮಾಯಿದೇವ : ಒಂದು ಅಧ್ಯಯನ, ಪು. ೧೨೧. ಬೆರಳಚ್ಚುಪ್ರತಿ.

ಸಿದ್ಧಾಂತ ಶಿಖಾಮಣಿಯನ್ನು ರಚಿಸಿದ ಶಿವಯೋಗಿ ಶಿವಾಚಾರ್ಯರ ಗಮನಕ್ಕೂ ಬಾರದ ಅಪೂರ್ವವಿಷಯ".[೧೮೭] ಇದರಿಂದ ಮಾಯಿದೇವನಿಗೆ ದೊರೆತ ಈ ತಂತ್ರೋತ್ತರ ಪ್ರದೀಪಿಕೆ ಶಿವಯೋಗಿ ಶಿವಾಚಾರ್ಯನಿಗೆ ದೊರೆತಿಲ್ಲವೆಂಬುದು ಸ್ಪಷ್ಟ. "ಇನ್ನು ತಂತ್ರೋತ್ತರಪ್ರದೀಪವು ನಿರ್ಣಯಿಸಿರುವ ಷಟ್‌ಸ್ಥಲವಿಭಾಗವು ಇತರ ಆಗಮಗಳಲ್ಲೆಲ್ಲಿಯೂ ಉಕ್ತವಾಗಿಲ್ಲ"[೧೮೮] ಎಂದು ಡಾ. ಎಂ.ಜಿ. ನಂಜುಡಾರಾಧ್ಯರು, ಅಲ್ಲಿಯೇ ಬೇರೊಂದು ಸಂದರ್ಭದಲ್ಲಿ ಹೇಳಿದುದು ಗಮನಾರ್ಹ. ಈ ಕಾರಣ, ಇಂದು ಲಭ್ಯವಿರುವ ಆಗಮಗಳಲ್ಲಿ 'ಷಟ್‌ಸ್ಥಲ ನಿರ್ಣಯ' ಹುಡುಕುವುದು ಕಷ್ಟವೆಂದೇ ಹೇಳಬೇಕು. ಮಾಯಿದೇವ ಈ ತಂತ್ರೋತ್ತರ ಪ್ರದೀಪಿಕೆಯನ್ನು ಉಲ್ಲೇಖಿಸುವುದರ ಜೊತೆಗೆ ಶೃತಿ ಸ್ಮೃತಿ, ಪುರಾಣ ಪುನಃ "ಶಿವಾಗಮ", ಎಂದು ಹೇಳಿ, ಅವುಗಳಲ್ಲಿಯೂ ಷಟ್‌ಸ್ಥಲ ನಿರ್ಣಯಗೊಂಡುದುದನ್ನು ಸೂಚಿಸುತ್ತಾನೆ. ಇದರಿಂದ ಮಾಯಿದೇವ ವೇದೋಪನಿಷತ್ತುಗಳ ಆಧಾರ ಅಥವಾ ಪ್ರಮಾಣ್ಯ ಷಟ್‌ಸ್ಥಲಕ್ಕೆ ಇರುವುದಾಗಿ ಹೇಳುತ್ತಾನೋ ಅಥವಾ ಷಟ್‌ಸ್ಥಲದ ಹಿರಿಮೆಯನ್ನು ಎತ್ತಿಹಿಡಿಯಲು ಅವುಗಳನ್ನು ಕಲ್ಪಿಸಿಕೊಂಡಿದ್ದಾನೋ - ಎಂಬುದು ಸ್ಪಷ್ಟವಾಗಿ ಕಂಡುಬರುವುದಿಲ್ಲ. 'ತಂತ್ರೋತ್ತರ ಪ್ರದೀಪಿಕೆ'ಯೊಂದೇ 'ಷಟ್‌ಸ್ಥಲ ನಿರ್ಣಯಕ್ಕೆ ಸಾಕಾಗಿರುವಾಗ ಅಥವಾ ಅದೊಂದರಲ್ಲಿಯೆ, ಷಟ್‌ಸ್ಥಲ ನಿರ್ಣೀತವಾಗಿರುವಾಗ ಮಾಯಿದೇವ, ಉಳಿದ ಶ್ರುತಿ, ಸ್ಮೃತಿ ಪುರಾಣಗಳಲ್ಲಿಯೂ ಷಟ್‌ಸ್ಥಲ ನಿರ್ಣಯಗೊಂಡಿದೆ ಎಂದು ಹೇಳುವ ಅಗತ್ಯವಾದರು ಏನಿತ್ತು? ಇದರಿಂದಾಗಿ ಶಿವಾನುಭವಸೂತ್ರದಲ್ಲಿ ಖಚಿತತೆಯ ಅಭಾವ ಕಂಡುಬರುತ್ತದೆ. ಪದ್ಮೈಕೋತ್ತರ ಸಂದರ್ಭದಲ್ಲಿ ಏಕೋತ್ತರ ಶತಸ್ಥಲವನ್ನು ಮೊದಲು ಕೈಲಾಸದಲ್ಲಿ ಶಿವನು ಪಾರ್ವತಿಗೆ, ಭೂಮಿಯಲ್ಲಿ ಬಸವೇಶ್ವರನು ಚನ್ನಬಸವನಿಗೆ ಉಪದೇಶಿಸಿರುವುದಾಗಿ ಮಾಯಿದೇವ ಹೇಳುತ್ತಾನೆ. ಅಲ್ಲಿ 'ಕೈಲಾಸವನ್ನು' ಕಲ್ಪಿಸಿಕೊಂಡಂತೆ ಶಿವಾನುಭವಸೂತ್ರದಲ್ಲಿ 'ತಂತ್ರೋತ್ತರಪ್ರದೀಪಿಕೆ'ಯೊಂದನ್ನು ಕಲ್ಪಿಸಿಕೊಂಡಿರಬಾರದೇಕೆ? ಅದು ಸಂಪೂರ್ಣವಾಗಿ ದೊರೆಯುವವರೆಗೆ ಈ ಊಹೆ ಮುಂದುವರಿಯುತ್ತಲೇ ಇರುತ್ತದೆ. ಅಥವಾ ಹೀಗೂ ಊಹಿಸಲು ಸಾಧ್ಯವಿದೆ, ಮಾಯಿದೇವನು ಷಟ್‌ಸ್ಥಲವನ್ನು ವಿವರಿಸುವ ಸಂದರ್ಭದಲ್ಲಿ ಪ್ರಾಚೀನ ಕೃತಿಗಳ ಸಾರವನ್ನು ಅಥವಾ ಈ ದರ್ಶನಕ್ಕೆ ಅನ್ವಯವಾಗುವ ಅಂಶಗಳನ್ನು, ಪ್ರಾಸಂಗಿಕವಾಗಿ ಶಿವಾನುಭವಸೂತ್ರದಲ್ಲಿ ಅಳವಡಿಸಿಕೊಂಡಿರಬೇಕೇ ವಿನಃ ಸಂಪೂರ್ಣವಾಗಿ ಆ ಪ್ರಾಚೀನ ಕೃತಿಗಳನ್ನು ಈತ ಅವಲಂಬಿಸಿಲ್ಲ ಎಂದು. ಹನ್ನೆರಡನೆಯ ಶತಮಾನದಲ್ಲಿ ಬಸವಣ್ಣನವರ ನೇತೃತ್ವದಲ್ಲಿ ಷಟ್‌ಸ್ಥಲವನ್ನು ಚನ್ನಬಸವಣ್ಣನವರು ನಿರ್ಣಯಿಸಿದ್ದು ಪ್ರಸಿದ್ಧ. ಏಕೋತ್ತರ ಶತಸ್ಥಲವೂ ಆಗಲೇ ನಿರ್ಣೀತವಾದುದು ಖಚಿತ. ನಂತರದ ವಿದ್ವಾಂಸರು ಆ ಚೌಕಟ್ಟಿನ ವಿಷಯಗಳನ್ನೇ ಹಿನ್ನೆಲೆಯಾಗಿಟ್ಟುಕೊಂಡು ವೇದೋಪನಿಷತ್ತುಗಳಲ್ಲಿ ಸ್ಥಲಗಳನ್ನು ಹೋಲಿಸಿ, ಅಲ್ಲಿನ ಮಂತ್ರಕಾರಿಕೆಗಳನ್ನು ಸಂಗ್ರಹಿಸಿದುದು ಕಂಡುಬರುತ್ತದೆ. ಈ ಬಗೆಗೆ ಸ್ಥಲವಿಭಾಗಗಳನ್ನು ಪ್ರತಿಪಾದಿಸುವ ಗಣಭಾಷಿತ ರತ್ನಮಾಲೆ, ಕೈವಲ್ಯಸಾರ ಈ ಮೊದಲಾದ ಕೃತಿಗಳು ಅವಲೋಕನೀಯ. ಮಾಯಿದೇವನ ಶಿವಾನುಭವಸೂತ್ರವೂ ಮೇಲಿನ ಕ್ರಮವನ್ನೇ ಅನುಸರಿಸುವುದರಲ್ಲಿ ಸಂದೇಹವಿಲ್ಲ.

ಈ ಎಲ್ಲ ಕಾರಣಗಳಿಂದ ಮಾಯಿದೇವನ ಶಿವಾನುಭವಸೂತ್ರ ಕೃತಿಗೆ ವಚನಗಳಲ್ಲಿ ನಿರ್ಣಯಗೊಂಡ ಷಟ್‌ಸ್ಥಲಸಾಹಿತ್ಯವೇ ಮುಖ್ಯ ಆಕರವೆಂದು ಸ್ಪಷ್ಟವಾಗುತ್ತದೆ.

❑

---

೧೮೭. ಎಂ. ಜಿ. ನಂಜುಡಾರಾಧ್ಯ, (ಸಂ)(೧೯೮೭) ಶಿವಾಗಮ ಸೌರಭ, ಪು. ೨೩೫

೧೮೮. ಅದೇ, ಪು. ೨೩೪.

## ಅಧ್ಯಾಯ : ಆರು

# ಸಾಧನ ಮಾರ್ಗಗಳ ತೌಲನಿಕ ಅಧ್ಯಯನ

ಶಿವಾನುಭಾವಿಗಳಾದ ಶರಣರು ಭಾರತೀಯ ದರ್ಶನಗಳನ್ನು ತಮ್ಮವೇ ಆದ ದೃಷ್ಟಿಕೋನಗಳಿಂದ ಪರ್ಯಾಲೋಚಿಸಿದರು. ಅವುಗಳಲ್ಲಿ ಮಾನವ ಸಾಧನೆಗೆ ಕಠಿಣವಾದ ಅಂಶಗಳು ಕಂಡುಬಂದುದರಿಂದ ಷಟ್‌ಸ್ಥಲ ದರ್ಶನವನ್ನು ರೂಪಿಸುವ ಅಗತ್ಯ ಅವರಿಗುಂಟಾಯಿತು. ಇಹದಲ್ಲಿಯೇ ಸಹಜವಾಗಿ ಸದ್ಗತಿಯನ್ನು ಹೊಂದುವ ಮಹಾಮಾರ್ಗವೊಂದನ್ನು ನಿರ್ಮಿಸಿದ ಶಿವಶರಣರು, ಸ್ವತಃ ಅದನ್ನು ಸಾಧಿಸಿದವರಾಗಿದ್ದರು. ಇಂಥ ಷಟ್‌ಸ್ಥಲಾನುಭವವನ್ನು ಮಾಯಿದೇವನು "ಶಿವಾನುಭವಸೂತ್ರ"ವೆಂದು ಹೆಸರಿಸಿ, ಅದನ್ನು ಏಳು ಅಧಿಕರಣಗಳಲ್ಲಿ ಹಂತೋಪಹಂತವಾಗಿ ಸೂತ್ರೀಕರಿಸಿದುದನ್ನು ಈ ವರೆಗಿನ ವಿವರಣೆಯಿಂದ ಅರಿತುಕೊಂಡಂತಾಯಿತು. ಆದರೆ ಹಿಂದಿನ ಎಲ್ಲ ಆಸ್ತಿಕ, ನಾಸ್ತಿಕ, ದ್ವೈತಾದ್ವೈತ, ಶಿವಾದ್ವೈತವೆಂಬ ತಾತ್ವಿಕ ಚೌಕಟ್ಟುಗಳನ್ನು ದಾಟಿ, ಮಾನವನ ಅಂತಿಮ ಗುರಿಯಾದರೂ ಏನು? ಅದನ್ನು ತಲುಪುವ ಮಾರ್ಗಗಳು ಎಷ್ಟು? ಇಂದಿನವರೆಗೆ ನಂಬಿಕೊಂಡು ಬಂದ ಧರ್ಮ ಅಥವಾ ದರ್ಶನಕ್ಕೆ ವಿಜ್ಞಾನದ ಹಿನ್ನೆಲೆಯಿದೆಯೆ? ಎಂಬುದರ ಬಗೆಗೆ ಆಲೋಚಿಸುವುದು ಈ ಸಂದರ್ಭದಲ್ಲಿ ಸಮುಚಿತವೆನಿಸುತ್ತದೆ. ಪ್ರಸ್ತುತ ಪ್ರಬಂಧದಲ್ಲಿ ಮೊದಲು ಧರ್ಮ-ವಿಜ್ಞಾನ ಕುರಿತು ವಿವೇಚಿಸಿ, ಕೊನೆಗೆ "ಶಿವಾನುಭವಸೂತ್ರ" ಪ್ರತಿಪಾದಿಸುವ ಸಾಧನೆಯ ಕುರಿತಾಗಿ ಆಲೋಚಿಸಲಾಗುವುದು.

### ಮಾನವನ ಎರಡು ಮಹತ್ಸಾಧನೆಗಳು:

ಮಾನವನ ಮಹತ್ಸಾಧನೆಗಳು ಎರಡು : ಒಂದು ವಿಜ್ಞಾನ ಮತ್ತೊಂದು ದರ್ಶನ ಅಥವಾ ಧರ್ಮ. ಅವೆರಡರ ಗುರಿ ಒಂದೇ. ಅದು ಸತ್ಯಾನ್ವೇಷಣೆ. ವಿಜ್ಞಾನ ಗೋಚರ ಸೃಷ್ಟಿಯ ಹಿಂದಿರುವ ಸತ್ಯದ ಶೋಧನೆಯನ್ನು ಕೈಕೊಂಡರೆ, ದರ್ಶನವು ಈ ಗೋಚರ ಸೃಷ್ಟಿಯನ್ನು ನೋಡುವ ಕರ್ತೃವಿನ ಹಿಂದಿರುವ ಸತ್ಯದ ಶೋಧನೆ ಕೈಕೊಂಡಿದೆ.[೧] ವಿಜ್ಞಾನದ ದಿಶೆ ಬಹಿರ್ಮುಖವಾದರೆ, ದರ್ಶನದ ದಿಶೆ ಅಂತರ್ಮುಖ. ಬಾಹ್ಯ ಜಗತ್ತು ವಿಜ್ಞಾನದ ಕಾರ್ಯಕ್ಷೇತ್ರವಾದರೆ, ಆಂತರಿಕ ಜಗತ್ತು ದರ್ಶನದ ಕಾರ್ಯಕ್ಷೇತ್ರವಾಗಿದೆ. ವಿಜ್ಞಾನ ಮತ್ತು ದರ್ಶನ ತಮಗನುಕೂಲವಾದ, ತಮ್ಮ ಗುರಿಮುಟ್ಟಲು ಯೋಗ್ಯವಾದ ತಂತ್ರ ಅಥವಾ ಪದ್ಧತಿಗಳನ್ನು ಹೊಂದಿವೆ. ವಿಜ್ಞಾನ ಉಪಯೋಗಿಸುವ ವಿಧಾನವನ್ನು "ವೈಜ್ಞಾನಿಕ ಪದ್ಧತಿ" ಎಂದೂ ಮತ್ತು ದರ್ಶನ ಉಪಯೋಗಿಸುವ ವಿಧಾನವನ್ನು "ಯೋಗ"ವೆಂದೂ ಕರೆಯಲಾಗಿದೆ.[೨] ಎಷ್ಟೋ ಶತಮಾನಗಳ ಪರಿಶ್ರಮ, ಆಳವಾದ ಅಭ್ಯಾಸ, ದೀರ್ಘಚಿಂತನೆ ಹಾಗೂ ಪ್ರಯೋಗಗಳ ಫಲಶ್ರುತಿಯೇ ಈ ಸಾಧನೆಯ ಪದ್ಧತಿಗಳು. ಕಾಲವನ್ನೇ ಒಂದು ಅಳತೆಗೋಲಾಗಿ ಒಪ್ಪಿದರೆ, ಯೋಗ ವೈಜ್ಞಾನಿಕ ಪದ್ಧತಿಗಿಂತಲೂ ಎಷ್ಟೋ ಪ್ರಾಚೀನವಾದದ್ದು. ಜಗತ್ತಿನ ಸರ್ವದ್ರಷ್ಟಾರರು, ಅನುಭಾವಿಗಳು, ಸಂತರು ಮತ್ತು ಮಹಾಂತರು ಈ ಯೋಗವನ್ನೇ ತಮ್ಮ ಸಾಧನವನ್ನಾಗಿ ಉಪಯೋಗಿಸಿ ಸತ್ಯದ ಸಾಕ್ಷಾತ್ಕಾರ ಹೊಂದಿದರು. ಹಿಂದಿನ ಕಾಲದಲ್ಲಿ ಉದ್ದಾಲಕ, ಬುದ್ಧ, ಮಹಾವೀರ, ಸಾಕ್ರೆಟೀಸ್, ಯೇಸು, ಪೈಗಂಬರ, ಝೂರೋಟುಸ್ಟ

---

೧. V.K. Gokak (1986) India and World culture, p. 19.

೨. Shri Kumara Swamiji (1960) Religion of Humanity, p.46-51.

ಮತ್ತು ಮಧ್ಯಕಾಲದಲ್ಲಿ ಕಬೀರ, ನಾನಕ ಅಲ್ಲದೆ ಜ್ಞಾನೇಶ್ವರ ಮೊದಲಾದ ಮಹಾರಾಷ್ಟ್ರದ ಸಂತಶ್ರೇಷ್ಠರು ಮತ್ತು ಕರ್ನಾಟಕದ ಪ್ರಭುದೇವ, ಮಾಯಿದೇವ ಮೊದಲಾದ ಶಿವಶರಣರು, ನಮ್ಮ ಕಾಲದಲ್ಲಿ ಬಾಳಿದ ರಾಮಕೃಷ್ಣ, ವಿವೇಕಾನಂದರು, ರಾಮತೀರ್ಥ ಹಾಗೂ ರಮಣರು ಈ ಯೋಗಪದ್ಧತಿಯ ನಿರ್ದೇಶನವನ್ನೇ ಮಾಡಿದರು. ಅವರು ಬಳಸಿದ ಭಾಷೆ ಭಿನ್ನವಾದರೂ ಆ ಭಾಷೆಯ ಹಿಂದಿರುವ ಭಾವಮಾತ್ರ ಭಿನ್ನವಲ್ಲ. ತನ್ನಲ್ಲಿರುವ ಸತ್ಯವನ್ನು ವ್ಯಕ್ತಗೊಳಿಸಿ, ಅದರೊಡನೆ ಒಂದಾಗುವುದೇ ಈ ಎಲ್ಲ ಮಹಾನುಭಾವಿಗಳ ಬೋಧನೆಯಲ್ಲಿರುವ ತತ್ವ. ಅದುವೇ ದರ್ಶನ ಅಥವಾ ಧರ್ಮ. ಸಾಮಾನ್ಯವಾಗಿ ಧರ್ಮವೆಂದರೆ - ತಾವು ಕಾಣರಿಯದ ಯಾವುದೋ ಠಾವಿನಲ್ಲಿರುವ ದೇವನಲ್ಲಿ ಅಥವಾ ಒಂದು ಸಿದ್ಧಾಂತದಲ್ಲಿ ಇಲ್ಲವೇ ಒಂದು ಧರ್ಮಸಂಸ್ಥೆಯಲ್ಲಿ ನಂಬುಗೆ ಎಂದು ತಿಳಿಯಲಾಗಿದೆ. ಈ ತಿಳುವಳಿಕೆಯನ್ನು ನಾವು ಮತವೆಂದು ಹೆಸರಿಸಬಹುದು. ವಾಸ್ತವಿಕವಾಗಿ ಧರ್ಮ ಬೇರೆ, ಮತ ಬೇರೆ. ಧರ್ಮದ ನಿಜಸ್ವರೂಪ ಅರಿಯಬೇಕಾದರೆ; ಮತ ಹಾಗೂ ಧರ್ಮ ಇವುಗಳಲ್ಲಿಯ ಭೇದ ತಿಳಿದು ಕೊಳ್ಳುವುದು ಅವಶ್ಯ. ಮತ ನಿಂತ ನೀರಿನಂತೆ. ಧರ್ಮ ಹರಿಯುವ ಪ್ರವಾಹದಂತೆ. ಪ್ರವಾಹಕ್ಕೆ ತಡೆಹಾಕಿದಾಗ -ಒಡ್ಡು ನಿರ್ಮಿಸಿದಾಗ, ನೀರು ನಿಲ್ಲುತ್ತದೆ. ಹಾಗೆಯೇ ಧರ್ಮಕ್ಕೆ ಒಂದು ಚೌಕಟ್ಟು ಹಾಕಿದಾಗ ಮತವಾಗುತ್ತದೆ. ಅಂದರೆ ಸತ್ಯದ ನಿಷ್ಠೆ ಬಾಡಿ, ಒಂದು ವ್ಯಕ್ತಿಯಲ್ಲಿ ನಿಷ್ಠೆ ಬಲಿತು, ಆ ವ್ಯಕ್ತಿಯ ಪೂಜೆ ಪ್ರಾರಂಭವಾಗುತ್ತದೆ. ಅವನು ಆಡಿದ ಮಾತುಗಳು ಗ್ರಂಥಗಳಾಗುತ್ತವೆ. ಅವನು ಹಾಕಿಕೊಟ್ಟ ನಿಯಮಗಳು ಆಚಾರವಾಗುತ್ತವೆ. ಹೀಗೆ ವ್ಯಕ್ತಿನಿಷ್ಠೆ, ಗ್ರಂಥ ಪ್ರಿಯತೆ ಮತ್ತು ಆಚಾರ ಪಾಲನೆ ಬೇರು ಬಿಟ್ಟಾಗ, ಧರ್ಮ ತನ್ನ ಮೂಲಸ್ವರೂಪ ಕಳೆದುಕೊಂಡು ಮತವಾಗುತ್ತದೆ. ಈ ರೀತಿ ಅಸ್ತಿತ್ವದಲ್ಲಿ ಬಂದ ಮತ, ತನ್ನದೇ ಆದ ಭಾಷೆ, ಬೋಧನೆಯತಂತ್ರ ಮತ್ತು ಆಚಾರಸಂಹಿತೆ ಕಟ್ಟುತ್ತದೆ. ಮತದ ಭಾಷೆ ಆದೇಶಾತ್ಮಕ, ಬೋಧನೆಯ ತಂತ್ರ ಪ್ರಚಾರಾತ್ಮಕ ಹಾಗೂ ಆಚಾರ ಪಾಲನೆ ಕಟ್ಟುನಿಟ್ಟಿನದು. ಮತ, ಮಾನವ-ಮಾನವನಲ್ಲಿ, ಮಾನವ-ದೇವನಲ್ಲಿ ಮತ್ತು ದೇವ-ದೇವರಲ್ಲಿ ಭೇದ ಬೋಧಿಸಿ, ಇಹ-ಪರ, ಸ್ವರ್ಗ-ನರಕ ಮುಂತಾದವುಗಳ ಕಲ್ಪನೆ ಕಟ್ಟಿ, ಜೀವನದ ಬಗೆಗೆ ಜುಗುಪ್ಸೆ ಮೂಡಿಸಿ, ಮಾನವನಲ್ಲಿ ಭಯ ಮತ್ತು ನಿರಾಶಾವಾದ ಹುಟ್ಟಿಸುತ್ತದೆ.

ಆದರೆ, ಧರ್ಮದ ಗುರಿ ವ್ಯಕ್ತಿನಿಷ್ಠೆ, ಗ್ರಂಥಪ್ರಿಯತೆ ಮತ್ತು ಆಚಾರಪಾಲನೆಯಾಗಿರದೆ, ಸತ್ಯಾನ್ವೇಷಣೆಯಾಗಿದೆ. ಅದರ ಭಾಷೆ ಜ್ಞಾಪಕಾತ್ಮಕ, ಬೋಧನೆ ವಿಚಾರಪ್ರಧಾನ ಮತ್ತು ಅದರ ಅಧಿಷ್ಠಾನ ಸ್ವಾನುಭಾವ. ಮಾನವನಲ್ಲಿಯ ದೇವತ್ವವನ್ನು ಜ್ಞಾಪಿಸಿ, ಅದನ್ನು ಹೊಂದುವ ಮಾರ್ಗವನ್ನು ತೋರುತ್ತದೆ ಧರ್ಮ. ಮಾನವನ ಮನಸ್ಸನ್ನು ಅಂತರ್ಮುಖಿಗೊಳಿಸಿ, ಅಂತರ್ಯದಲ್ಲಿ ಹುದುಗಿರುವ ಸತ್ಯದ ಸಾಕ್ಷಾತ್ಕಾರ ಮಾಡಿಸಿಕೊಡುವುದೇ ಧರ್ಮ ಅಥವಾ ದರ್ಶನಗಳ ಗುರಿ. ತದ್ವಿರುದ್ಧವಾಗಿ, ಅಂತರ್ಮುಖಿವಾಗಬೇಕಾದ ಮನಸ್ಸನ್ನು ಬಹಿರ್ಮುಖಿಗೊಳಿಸಿ; ಮೂರ್ತಿ ಪೂಜೆ, ಗ್ರಂಥ ಪಾರಾಯಣ, ಪವಿತ್ರಕ್ಷೇತ್ರದರ್ಶನ, ಮಂದಿರರಚನೆ ಮೊದಲಾದ ಚಟುವಟಿಕೆಗಳನ್ನು ಪ್ರೋತ್ಸಾಹಿಸಿ; ಈ ಚಟುವಟಿಕೆಗಳಿಂದ ಕೂಡಿದ ಜೀವನವೇ ಧರ್ಮ ಎಂಬ ಕಲ್ಪನೆ ಮಾಡಿಕೊಡುತ್ತದೆ ಮತ. ಆದರೆ ಧರ್ಮ ಅಥವಾ ಧಾರ್ಮಿಕ ಜೀವನ ಸಮ್ಯಕ್ ದೃಷ್ಟಿಯಿಂದ ಪ್ರಾರಂಭವಾಗಿ, ಸತ್ಯದ ಸಾಕ್ಷಾತ್ಕಾರದಲ್ಲಿ ಪರ್ಯವಸಾನ ಹೊಂದುತ್ತದೆ. ಸಮ್ಯಕ್‌ದೃಷ್ಟಿ ಕುರಿತು "ಕಲಮಸುತ್ತ"ದಲ್ಲಿ ಬುದ್ಧನು ಈ ರೀತಿ ಹೇಳುತ್ತಾನೆ. "ಗೆಳೆಯರೇ, ಒಬ್ಬನು ಹೇಳುತ್ತಾನೆಂದು ಕೇಳಬೇಡಿ, ಬಹಳಷ್ಟು ಜನ ನಂಬುತ್ತಾರೆಂದು ನಂಬಬೇಡಿ, ಒಂದು ಸಂಪ್ರದಾಯ ಹೇಳುತ್ತದೆ ಎಂದು ಕೇಳಬೇಡಿ. ರೂಢಿಯಿಂದ ಬಂದುದೆಂದು ಒಪ್ಪಬೇಡಿ. ವಿಚಾರ ಮಾಡಿ, ನಿಮ್ಮ ಬುದ್ಧಿಯ ಒರೆಗಲ್ಲಿಗೆ ಹಚ್ಚಿ, ಸತ್ಯವೆಂದು ಮನದಟ್ಟಾದಾಗ, ಅದನ್ನು ನಿಮ್ಮ ಜೀವನದಲ್ಲಿ ಅಳವಡಿಸಿಕೊಳ್ಳಲು ಪ್ರಯತ್ನಿಸಿರಿ".[೩] ಧರ್ಮದ ಸ್ವರೂಪ ಕುರಿತು ತಮ್ಮದೊಂದು ಲೇಖನದಲ್ಲಿ ಶ್ರೀ ಸ್ವಾಮಿರಂಗನಾಥಾನಂದರು ಹೀಗೆ ಬರೆದಿದ್ದಾರೆ - "ಮಾನವನು ಅಧ್ಯಾತ್ಮಿಕ ಸತ್ಯಗಳನ್ನು ತನ್ನ ಸ್ವಪ್ರಯತ್ನದಿಂದ

೩. Swami Abhedananda (1970) Path of Realization, p.6.

ಕಂಡುಕೊಳ್ಳುತ್ತಾನೆಂಬುದು ಒಂದು ಮೂಲಭೂತತತ್ತ್ವ. ಆ ಮೂಲಭೂತ ತತ್ತ್ವದ ಮೇಲೆಯೇ ಹಿಂದು ಧರ್ಮವೂ ನಿಂತಿದೆ. ಅದು 'ದೇವನಿದ್ದಾನೆ' ಎಂದು ಹೇಳುವ ಒಬ್ಬ ಪೂರ್ವಜ ಪುರುಷನೇ ಇರಲಿ, ಇಲ್ಲವೇ ಸ್ತ್ರೀಯೇ ಇರಲಿ, ಅಷ್ಟೇ ಏಕೆ ಒಬ್ಬ ಅವತಾರಿಯೇ ಇರಲಿ - ಆತನ ಮಾತನ್ನು ನಂಬೆಂದು ಹೇಳುವುದಿಲ್ಲ. ಸ್ವಾನುಭಾವವೇ ಹಿಂದು ಧರ್ಮದ ಅಧಿಷ್ಠಾನ ನಂಬುಗೆಯಲ್ಲ".[೪]

ಮೇಲಿನ ಎರಡು ಉಕ್ತಿಗಳಿಂದ ಕಂಡು ಬರುವುದೇನೆಂದರೆ - ಧರ್ಮ ಅಥವಾ ದರ್ಶನ ನಂಬುಗೆಯ ಮೇಲೆ ನಿಂತಿರದೆ, ಸಮ್ಯಕ್‌ದೃಷ್ಟಿ ಮತ್ತು ಸ್ವಾನುಭಾವದ ಮೇಲೆ ನಿಂತಿದೆ. ಧರ್ಮವೆಂದರೆ - ಮೂರ್ತಿಪೂಜೆ, ಗ್ರಂಥಪಠಣ ಮತ್ತು ತೀರ್ಥಕ್ಷೇತ್ರಾದಿಗಳ ದರ್ಶನವಲ್ಲವೆಂದು ಆಯಾ ಕಾಲದಲ್ಲಿ ಆಗಿ ಹೋದ ಮಹಾನುಭಾವಿಗಳು ಹೇಳುತ್ತಲೇ ಬಂದಿದ್ದಾರೆ. ಈ ಬಗೆಗೆ ಬಸವಣ್ಣನವರು ಹಾಗೂ ಅಕ್ಕಮಹಾದೇವಿ ಹೇಳಿದುದು ಹೀಗೆ :

ಕಲ್ಲುದೇವರು ದೇವರಲ್ಲ, ಮಣ್ಣುದೇವರು ದೇವರಲ್ಲ;
ಮರ ದೇವರಲ್ಲ, ಪಂಚಲೋಹದಲ್ಲಿ ಮಾಡುವ ದೇವರು ದೇವರಲ್ಲ;
ಸೇತುಬಂಧ, ರಾಮೇಶ್ವರ, ಗೋಕರ್ಣ, ಕಾಶಿ, ಕೇದಾರ ಮುಂತಾದ
ಅಷ್ಟಾಷಷ್ಟಿ ಪುಣ್ಯತೀರ್ಥಂಗಳಲ್ಲಿಹ ದೇವರು ದೇವರಲ್ಲ
ತನ್ನತಾನರಿದು ತಾನಾರೆಂದು ತಿಳಿದೆಡೆ,
ತಾನೇ ದೇವ ನೋಡಾ, ಅಪ್ರಮಾಣ ಕೂಡಲಸಂಗಮದೇವಾ.[೫]

ವೇದಶಾಸ್ತ್ರ ಪುರಾಣಾಗಮಂಗಳೆಲ್ಲವು
ಕೊಟ್ಟಣವ ಕುಟ್ಟುತ್ತ ನುಚ್ಚು ತೌಡು ಕಾಣಿಭೋ!
ಇವ ಕುಟ್ಟಲೇಕೆ? ಕುಸುಕಲೇಕೆ?
ಅತ್ತಲಿತ್ತ ಹರಿವ ಮನದ ಶಿರವನರಿದಡೆ
ಬಟ್ಟಬರಿಯ ಬಯಲು ಚೆನ್ನಮಲ್ಲಿಕಾರ್ಜುನಾ.[೬]

ಈ ಮೇಲಿನ ಎರಡು ವಚನಗಳಲ್ಲಿ ತೀರ್ಥಕ್ಷೇತ್ರ, ಮೂರ್ತಿಪೂಜೆ ಹಾಗೂ ಶಾಸ್ತ್ರಗ್ರಂಥಗಳ ಪಠಣದಿಂದ ಸತ್ಯದ ಸಾಕ್ಷಾತ್ಕಾರವಾಗದು. ಅದಾಗಬೇಕಾದರೆ, ತಾನು ಯಾರು, ಎಂದು ಪ್ರಶ್ನಿಸಿ, ತನ್ನ ನಿಜಸ್ವರೂಪ ಕಾಣಲು ಅತ್ತಿತ್ತ ಹರಿದಾಡುವ ಮನದ ಅಧಿಷ್ಠಾನ ಯಾವುದರಲ್ಲಿ ತೋರಿ, ಯಾವುದರಲ್ಲಿ ಅಡಗುವದೋ ಆ ಸ್ಥಲ-ಸ್ಥಾನ-ಮನದ ಶಿರ-ಅರಿಯಬೇಕು ಆಗ ಎಲ್ಲವೂ ತಾನೇ ಆದದ್ದನ್ನು ಕಾಣುತ್ತೇವೆ. ಈ ಬಗೆಗೆ ಮಾಯಿದೇವ ಹೀಗೆ ಹೇಳಿದ್ದಾನೆ.

"ತಾನೇ ನಿರ್ಮಲತೀರ್ಥಮಂತ್ರಮುತ್ತಮಮಹಾಕ್ಷೇತ್ರಂ ಪರಂ ದೈವತಂ
ಜ್ಞಾನ ಧ್ಯಾನ ಸಮಾಧಿ ಮಂತ್ರ ಜಪ ಪೂಜಾ ಹೋಮ ನೇಮಾದ್ಯನು

---

೪. Swami Ranganathanda (1962) Hinduism-1, p.102.

೫. ರಂಗನಾಥ ರಾಮಚಂದ್ರ ದಿವಾಕರ (1962) ವಚನಶಾಸ್ತ್ರ ರಹಸ್ಯ, ವಚನ ೨೩೮, ಪು.೫೩.

೬. ಅಕ್ಕಮಹಾದೇವಿಯ ವಚನಗಳು (1993) ಸಂ: ಡಾ. ವೀರಣ್ಣ ರಾಜೂರ (ಸಂಪುಟ ೫.) ವ.೩೦೫.

ಷ್ಠಾನಂ ಸಿದ್ಧಿಯುಮ್ಮೈಹಿಕಂ ಸುಖದ ಮಪ್ಪಾಮುಷ್ಮಿಕಂ ಸರ್ವಮುಂ
ನೀನಾನೆಂಬೆರಡಿಲ್ಲದಿರ್ಪ ಶಿವಯೋಗೀಂದ್ರಂ ಶಿವಾವಲ್ಲಭಾ."[೭]

ಇದೇ ರೀತಿ ಮುಂದಿನ ಶತಕವೂ ಇದನ್ನೇ ಇನ್ನಷ್ಟು ಸ್ಫುಟಗೊಳಿಸುತ್ತದೆ.

ಎಲ್ಲಂ ತನ್ನೊಳು ತಾನದೆಲ್ಲದರೊಳೇಕಾಕಾರಮಾಗಿರ್ದುಮ
ತ್ತಿಲ್ಲೆಂಬಂತೆ ತದನ್ಯನಾಗಿ ಚರಿಸುತ್ತಿರ್ಪಂದಮಂ ನೆಟ್ಟನಾರ್
ಬಲ್ಲರ್ ಷಟ್‌ಸ್ಥಳ ನಿಷ್ಕಳಾಮಳ ಪರಬ್ರಹ್ಮಾಂಗ ಲಿಂಗೈಕ್ಯ ಸೌ
ಖ್ಯೋಲ್ಲಾಸಾಸ್ಪದನಪ್ಪ ಭಕ್ತನನುವಂ ಪೇಳಾ ಶಿವಾವಲ್ಲಭಾ [೮]

ಈ ಎರಡೂ ವೃತ್ತಗಳ ಸಾರವೆಂಬಂತೆ ಶಿವಾನುಭವ ಸೂತ್ರದಲ್ಲಿ ಮಾಯಿದೇವ ಹೀಗೆ ನಿರೂಪಿಸಿದ್ದಾನೆ.

"ಕರ್ತಾ ಕಾರಯಿತಾ ಕರ್ಮ ಕರಣಂ ಕಾರ್ಯಮೇವ ಚ।
ಸ್ವಯಮಾತ್ಮತಯಾ ಭಾತಿ ಪ್ರಸಾದಾತ್ ಪಾರಮೇಶ್ವರಾತ್ ॥
ಭೋಕ್ತಾ ಭೋಜಯಿತಾ ಭೋಗೋ ಭೋಗೋಪಕರಣಾದಿ ಚ।
ಸರ್ವಮಾತ್ಮತಯಾ ಭಾತಿ ಪ್ರಸಾದಾತ್ ಪಾರಮೇಶ್ವರಾತ್ " ॥[೯]

ಅರಿವು ಆಚಾರವೊಂದಾದಾಗ ತಾನೇ ಶಿವನಾಗಿ ವರ್ತಿಸುವುದನ್ನು ಮೇಲಿನ ಶ್ಲೋಕ ವೃತ್ತಗಳು ಅರ್ಥವತ್ತಾಗಿ ಪ್ರತಿಪಾದಿಸುತ್ತವೆ. ಈ ಅರಿವು ಅಥವಾ ಸತ್ಯದ ಸಾಕ್ಷಾತ್ಕಾರ ಹೊಂದಬಯಸುವವನು, ಮಾಡಬೇಕಾದುದನ್ನು,

"ಎಲೆ ಮನವೇ, ನೀ ನಿನ್ನ ನಿಜವ ತಿಳಿವಡೆ,
ಆ ನಿನ್ನ ನಿಜವ ಹೇಳುವೆ ಕೇಳು,
ಅದು ಕೇವಲ ಜ್ಯೋತಿ, ಅದು ವರ್ಣಾತೀತ,
ನೀನದನರಸುವಾಗ ನಿನಗಾವಲ್ಲಿ ನಿಶ್ಚಯ ತೋರಿತ್ತು,
ಅದೀಗ ನಿನ್ನ ಪರಿಪೂರ್ಣತ್ವದ ನೆಲೆ,
ಆ ನಿನ್ನ ನಿಜವ ನಿಶ್ಚೈಸಿ ನಿರ್ಗಮನಿಯಾದಲ್ಲಿ
ಅದೇ ಸಮ್ಯಕ್ ಜ್ಞಾನದ ತೋರಿಕೆ,
ಆ ತೋರಿಕೆಯ ಅಖಂಡ ಬೆಳಗಿನ ಹೊಳಹಿನೊಳಗೆ
ನೀ ನಮ್ಮ ಗುಹೇಶ್ವರಲಿಂಗದ
ಚರಣವನರಿಸಿಕೊಂಡು ನಿಶ್ಚಿಂತನಾಗೆಲೆ ಮನವೆ."[೧೦]

ಎಂಬುದಾಗಿ ಪ್ರಭುದೇವ ಹೇಳಿದ್ದಾನೆ.

---

೭. ಶಿವಾವಲ್ಲಭಶತಕ. ೨೨.

೮. ಅದೇ. ೨೩.

೯. ಶಿವಾನುಭವಸೂತ್ರಂ. ಅಧಿಕರಣ ೮. ಶೋಕ. ೩೭, ೩೮

೧೦. ಅಲ್ಲಮನಚಂದ್ರಿಕೆ; ೭೪೮ (1986) ಸಂ: ಡಾ. ಆಲ್. ಬಸವರಾಜು.

ಒಬ್ಬ ಸಾಧಕನು ಸಮ್ಯಕ್ ದೃಷ್ಟಿ ಹೊಂದಿ, ಅಂತರ್ಮುಖಿಯಾಗಿ, ತನ್ನ ನಿಜಸ್ವರೂಪದ ಶೋಧದಲ್ಲಿದ್ದಾಗ, ಅವನ ಶೋಧನೆ ಒಂದು ಹಂತವನ್ನು ತಲುಪುತ್ತದೆ. ಅಲ್ಲಿಂದ ಅದು ಮುಂದುವರೆಯದು. ಆಗ ಮನ ನಿರ್ಗಮಿಸುತ್ತದೆ. ಈ ರೀತಿ ಮನಸ್ಸು ನಿರ್ಗಮಿಸಿದಾಗ - ಅವನಿಗೆ ತನ್ನ ನಿಜಸ್ವರೂಪದ ಅರಿವಾಗುತ್ತದೆ. ಸತ್ಯದ ಸಾಕ್ಷಾತ್ಕಾರವಾಗುತ್ತದೆ. "ಅಹಂ ಬ್ರಹ್ಮಾಸ್ಮಿ" "I am the Truth " "ನಾನೇದೇವ" "ನಾನೇಶಿವ" "ಲಿಂಗಾನುಭಾವದಿಂದ ನಿಮ್ಮ ಕಂಡೆನ್ನಮನ ಮರೆದೆ ಕೂಡಲ ಸಂಗಮದೇವಾ "ಎಂಬ ನುಡಿ ಹೊರ ಹೊಮ್ಮುತ್ತದೆ.

'ಬ್ರಹ್ಮ, 'ದೇವ' 'ಶಿವ' 'ಬೋಧಿ' 'ಅನಂತತೆ ' ಮತ್ತು 'ಲಿಂಗ'- ಇವೆಲ್ಲ ಶಬ್ದಗಳು ಇಲ್ಲಿ ಒಂದೇ ವಸ್ತುವನ್ನು ನಿರ್ದೇಶಿಸುತ್ತವೆ. ಮಹಾನುಭಾವಿಗಳು ಆಗ ಪ್ರಚಲಿತವಿದ್ದ, ತಮ್ಮ ಅನುಭವಕ್ಕೆ ತಕ್ಕ ಶಬ್ದಗಳನ್ನು ಬಳಸಿದ್ದಾರೆ. ಶಬ್ದಗಳನ್ನು ಶಬ್ದಗಳು ಅನೇಕ, ಆದರೆ ಅವು ನಿರ್ದೇಶಿಸುವ ವಸ್ತು ಮಾತ್ರ ಒಂದೇ, ಅದುವೇ ಸತ್ಯ. ಸತ್ಯದ ಸಾಕ್ಷಾತ್ಕಾರವಾಗಬೇಕಾದಲ್ಲಿ, ಮನಸ್ಸನ್ನು ಮರೆಯಬೇಕಾಗುವುದು. ಮನಮರೆಯುವದೆಂದರೇನು? ಅದು ಮತ್ತೇನೂ ಆಗಿರದೆ, "ಜೀವಭಾವವಳಿದು ದೇವಭಾವ" ತಾಳುವುದೇ ಆಗಿದೆ. ಹಿಂದೆ ಹೇಳಿದಂತೆ ಜೀವಭಾವ ಅಳಿಯಲು, ಮಹಾವೀರನು ತೋರಿಸಿದ ಮಾರ್ಗವನ್ನು ಉಮಾಸ್ವಾಮಿ ಈ ರೀತಿ ವರ್ಣಿಸಿದ್ದಾನೆ. "ಸಮ್ಯಕ್ ದರ್ಶನ-ಸಮ್ಯಕ್ ಜ್ಞಾನ-ಸಮ್ಯಕ್ ಚರಿತಾನಿ ಮೋಕ್ಷಮಾರ್ಗಃ" [೧೧] ಸಮ್ಯಕ್ ದರ್ಶನ, ಸಮ್ಯಕ್ ಜ್ಞಾನ ಮತ್ತು ಸಮ್ಯಕ್ ಚಾರಿತ್ರ್ಯ-ಈ ರತ್ನತ್ರಯಗಳು ಮಹಾವೀರನು ತೋರಿಸಿದ ಮಾರ್ಗದಲ್ಲಿಯ ಮೂರು ಮೆಟ್ಟಿಲುಗಳು ಇವುಗಳ ಸಹಾಯದಿಂದ ಜೀವಭಾವವಳಿದು ಜಿನಭಾವ ಹೊಂದಲು, ಅಂದರೆ ಅನಂತಜ್ಞಾನ, ಅನಂತವೀರ್ಯ ಮತ್ತು ಅನಂತಾನಂದ ಹೊಂದಿ-ಅನಂತತೆಯಲ್ಲಿ ಲೀನವಾಗಲು ಸಾಧ್ಯ. ಮಹಾವೀರನು ತೋರಿಸಿದ ಈ ಮಾರ್ಗ ಮೂರು ಮೆಟ್ಟಿಲುಗಳಿಂದ ಕೂಡಿದರೆ,[೧೨] ಬುದ್ಧನು ತೋರಿದ ಮಾರ್ಗ ಎಂಟು ಮೆಟ್ಟಿಲುಗಳಿಂದ ಕೂಡಿದೆ. ಅವು ಸಮ್ಯಕ್ ದೃಷ್ಟಿ; ಸಮ್ಯಕ್ ಜೀವನ; ಸಮ್ಯಕ್ ವ್ಯಾಯಾಮ; ಸಮ್ಯಕ್ ಸ್ಮೃತಿ; ಮತ್ತು ಸಮ್ಯಕ್ ಸಮಾಧಿ. ನಾಲ್ಕನೆಯ ಅಧ್ಯಾಯದಲ್ಲಿ ವಿವೇಚಿಸಿದಂತೆ ಇದನ್ನು ಅಷ್ಟಾಂಗಿಕ ಮಾರ್ಗವೆಂದು ಕರೆಯಲಾಗಿದೆ. ದುಃಖ ನಿವೃತ್ತಿ ಹೊಂದಿ-ಆನಂದ ಪ್ರಾಪ್ತಿ ಹೊಂದಬೇಕಾದವನು ಈ ಅಷ್ಟಾಂಗಿಕ ಮಾರ್ಗವನ್ನು ಕ್ರಮಿಸಬೇಕಾಗುವುದು. ಅದೇ ರೀತಿ ಆದಿಭೌತಿಕ, ಆಧ್ಯಾತ್ಮಿಕ ಮತ್ತು ಆದಿದೈವಿಕ ತ್ರಿಪಾಪಗಳಿಂದ, ಅಂದರೆ ಮನಃಕ್ಲೇಶಗಳಿಂದ ಬಿಡುಗಡೆಹೊಂದಿ, ಸ್ವರೂಪ ಸಾಕ್ಷಾತ್ಕಾರಹೊಂದಲು, ಪತಂಜಲರುಃ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ ಮತ್ತು ಸಮಾಧಿ - ಈ ಎಂಟು ಅಂಗಗಳಿಂದ ಕೂಡಿದ ರಾಜಯೋಗ ಪದ್ಧತಿಯನ್ನು ಹೇಳಿಕೊಟ್ಟಿದ್ದಾರೆ.[೧೪] ಹಾಗೆಯೇ ಯೇಸುಕ್ರಿಸ್ತನು ಬೋಧಿಸಿದ ಮಾರ್ಗವು ಮೂರು ಮೆಟ್ಟಿಲುಗಳಿಂದ ಕೂಡಿದೆ. ಮೊದಲನೆಯದು ದೇವನ ಶೋಧನೆ ಮತ್ತು ಆ ಶೋಧನೆ ಸಾಗುವದಿಶೆ ನಿರ್ದೇಶಿಸಿದರೆ; ಎರಡನೆಯದು ಅವನಿರುವ ಠಾವನ್ನು ಹೇಳಿಕೊಡುತ್ತದೆ. ಮತ್ತು ಮೂರನೆಯ ಮೆಟ್ಟಿಲು ಆ

---

೧೧. Datta & Chatterjee (1960) An Introduction to Indian Philosophy: p.105.

೧೨. ಡಾ. ಎಸ್.ಸಿ. ನಂದೀಮಠರು, ಜೈನಧರ್ಮದ ಗುಣಸ್ಥಾನಗಳನ್ನು ಷಟ್‌ಸ್ಥಲಗಳೊಂದಿಗೆ ಹೋಲಿಸಿದ್ದಾರೆ.(A HAND BOOK OF VIRASAIVISM. P. 161, 1942)ಆದರೆ ಡಾ. ಟಿ.ಜಿ.ಕಲಘಟಗಿ ಈ ಬಗೆಗೆ ಸಮ್ಮತಿಸದೆ "ಜೈನರ ಮತ್ತು ವೀರಶೈವರ ಮನೋಭಾವದಲ್ಲಿ ಅನುಭವಾತೀತ ಆತ್ಮನ ಸಮಸ್ಯೆಗಳ ಬಗ್ಗೆ ವ್ಯತ್ಯಾಸ ಕಂಡುಬರುತ್ತದೆ" ಎನ್ನುತ್ತಾರೆ. (ನೋಡಿ: ಪ್ರೊ. ಜಿ.ಎಚ್. ಹನ್ನೆರಡುಮಠ. (ಸಂ) ವಿಶ್ವಪ್ರಭೆ-೩ (೧೯೯೧) "ಜೈನಧರ್ಮ ಮತ್ತು ವೀರಶೈವ ಧರ್ಮ ಒಂದು ಸಾಂದರ್ಭಿಕ ಅಧ್ಯಯನ" ಪು. ೫೭೯)

೧೩. ಬುದ್ಧನ ಅಷ್ಟಾಂಗಿಕ ಮಾರ್ಗವು, ಷಟ್‌ಸ್ಥಲದ ಪ್ರಥಮ ಹಂತವಾದ ಭಕ್ತಸ್ಥಲದ ಲಕ್ಷಣಕ್ಕೆ ಸ್ಥೂಲವಾಗಿ ಹೋಲಿಕೆಯಾಗುವುದುಂಟು.

೧೪. ವೀರಶೈವವು ಶಿವಯೋಗದಲ್ಲಿಯೇ ಇವುಗಳನ್ನು ಅಂತರ್ಭಾವ ಮಾಡಿಕೊಂಡಿದೆ. ನೋಡಿ. ಶೂನ್ಯ ಸಂಪಾದನೆ: 'ಪರಾಮರ್ಶೆ'ಯ ವಿಮರ್ಶೆ (೧೯೭೩) ಪ್ರೊ. ಎಸ್.ಎಂ. ವೃಷಭೇಂದ್ರಸ್ವಾಮಿ. ಪ್ರೊ. ಚಂದ್ರಶೇಖರ ಕಂಬಾರ (ಸಂ) ಲೇಖಕರು. ಡಾ. ಶಂಕರ ಮೋಖಾಸಿ (ಪುಣೇಕರ) 'ಒಳಗೆ ಯೋಗ, ಹೊರಗೆ ಯೋಗ' ಪು. ೨೦೪.

ಠಾವನ್ನು ಮುಟ್ಟುವ ಗುಟ್ಟನ್ನು ತಿಳಿಸುತ್ತದೆ.[೧೫] ಅಂಗಗುಣಗಳಳಿದು ಲಿಂಗವಾಗಲು, ಬಸವಾದಿ ಶಿವಶರಣರು ಪ್ರತಿಪಾದಿಸಿದುದನ್ನೇ ಮಾಯಿದೇವ ತನ್ನ ಶಿವಾನುಭವಸೂತ್ರದಲ್ಲಿ ವಿವರಿಸಿದ ಆರುಮಾರ್ಗಗಳೇ ಷಟ್‌ಸ್ಥಲ.[೧೬]

ಯೇಸು, ಮಹಾವೀರ, ಬುದ್ಧ, ಪತಂಜಲಿ ಹಾಗೂ ಮಾಯಿದೇವ ಉಪಯೋಗಿಸಿದ ಭಾಷೆಬೇರೆ. ಹೇಳಿಕೊಟ್ಟ ಮೆಟ್ಟಿಲುಗಳೂ ಬೇರೆ ಬೇರೆ. ಆದರೂ ಅವರೆಲ್ಲರು ತೋರಿಸಿದ್ದು ಶಾಶ್ವತ ಸುಖಹೊಂದುವ ಮಾರ್ಗ. ಅಂದರೆ ಯಾವುದು ಒಂದು 'ಜೀವ'ವನ್ನು 'ಜಿನ'ನನ್ನಾಗಿ ಮಾಡುವುದೋ ಒಬ್ಬ 'ಬದ್ಧ'ನನ್ನು ಬುದ್ಧನನ್ನಾಗಿ ಮಾಡುವದೋ - ಒಬ್ಬ 'ಮಾನವ'ನನ್ನು 'ಮಹಾದೇವ'ನನ್ನಾಗಿ ಮಾಡುವುದೋ - ಒಂದು 'ಅಂಗ'ವನ್ನು 'ಲಿಂಗ'ವನ್ನಾಗಿ ಮಾಡುವುದೋ ಅದುವೇ ದರ್ಶನ ಅಥವಾ ಧರ್ಮ. ಇಲ್ಲಿ ಸ್ವಾಮಿ ವಿವೇಕಾನಂದರು, ರಾಮಕೃಷ್ಣ ಪರಮಹಂಸರನ್ನು ಕುರಿತಾಗಿ ಹೇಳಿದ ಮಾತನ್ನು ಸ್ಮರಿಸಬಹುದು. "ಅವರು ಹಿಂದು ಧರ್ಮದಲ್ಲಿ ಬರುವ ಬೇರೆಬೇರೆ ಸಾಧನ ಪಥಗಳನ್ನು ಕ್ರಮಿಸಿ, ಪ್ರತಿಯೊಂದು ಪಥದಿಂದಲೂ ಸಿದ್ಧಿಯನ್ನು ಪಡೆದರು. ಅಷ್ಟಕ್ಕೇ ಬಿಡದೆ, ಒಬ್ಬ ಕ್ರಿಶ್ಚಿಯನ್ ಸಾಧುವಿನಂತೆ ಮತ್ತು ಒಬ್ಬ ಮುಸಲ್ಮಾನ ಭಕ್ತನಂತೆ, ಅದೂ ಸಾಧನ ಪಥಗಳನ್ನು ಕ್ರಮಿಸಿ, ಅದೇ ಅನುಭಾವ ಪಡೆದರು. ಈ ಎಲ್ಲ ಪ್ರಯೋಗಗಳ ಪರಿಣಾಮವಾಗಿ, ಅವರು ಕಂಡುಕೊಂಡದ್ದೇನೆಂದರೆ-ವಸ್ತುತಃ ಎಲ್ಲ ಧರ್ಮಗಳೂ ಒಂದೇ. ಅವೆಲ್ಲವೂ ಒಂದೇ ಸತ್ಯವನ್ನು ಬೋಧಿಸಿ, ಒಂದೇ ಗುರಿಗೆ ಮುಟ್ಟಿಸುತ್ತವೆ."[೧೭]

ಇದೇ ಶತಮಾನದಲ್ಲಿ ಆಗಿಹೋದ ರಾಲ್ಫ ವಾಲ್ಡೋ ಟ್ರಾಯಿನ್ ಎಂಬ ಅಮೇರಿಕಾ ದೇಶದ ಮಹಾನುಭಾವಿಯು ತನ್ನ "ಇನ್ ಟ್ಯೂನವುಯಿಥ್ ದಿ ಇನ್ಫಿನಿಟ್" ಎಂಬ ಗ್ರಂಥದ ಮುನ್ನುಡಿಯನ್ನು "ಜಗತ್ತಿನ ಪ್ರತಿಯೊಂದು ಧರ್ಮದಲ್ಲಿಯೂ ಒಂದು ಸುವರ್ಣದ ಎಳೆ ಇದ್ದದ್ದನ್ನು ಕಾಣುತ್ತೇನೆ. ಜಗತ್ತಿನ ಇತಿಹಾಸದಲ್ಲಿ ಆಗಿಹೋದ ಎಲ್ಲ ಪ್ರವಾದಿಗಳ, ದ್ರಷ್ಟಾರರ, ಸಂತರ ಮತ್ತು ಮಹಾತ್ಮರ ಬೋಧನೆಗಳಲ್ಲಿಯೂ ಮತ್ತು ಜಗತ್ತಿನ ಮಹಾನ್ ಸ್ತ್ರೀ-ಪುರುಷರಜೀವನದಲ್ಲಿಯೂ ಒಂದು ಸುವರ್ಣದ ಎಳೆ ಇದೆ. ಅವರೆಲ್ಲರೂ ತಾವು ಸಾಧಿಸಿದುದನ್ನು ಒಂದು ಕ್ರಮಬದ್ಧವಾದ ನಿಯಮಕ್ಕನುಸಾರವಾಗಿಯೇ ಸಾಧಿಸಿದ್ದಾರೆ. ಅವರು ಸಾಧಿಸಿದುದನ್ನು ಉಳಿದವರೂ ಸಾಧಿಸಲು ಸಾಧ್ಯವಿದೆ."[೧೮] ಎಂದು ಪ್ರಾರಂಭಿಸುತ್ತಾನೆ. ಆ ಮಹಾನುಭಾವಿಯು ತನ್ನ ಇಡೀ ಗ್ರಂಥದಲ್ಲಿ ಆ ನಿಯಮ ಕುರಿತೇ ಬರೆದಿದ್ದಾನೆ. ಆ ನಿಯಮ ಮತ್ತೇನೂ ಆಗಿರದೆ ತನ್ನಲ್ಲಿರುವ ಸತ್ಯವನ್ನು ಅಭಿವ್ಯಕ್ತಗೊಳಿಸಿ, ಅದರೊಡನೆ ಒಂದಾಗುವುದೇ ಆಗಿದೆ. ಅದೇ ಧ್ವನಿಯಲ್ಲಿ ಆಂಗ್ಲ ಅನುಭಾವಿ ಪಾಲಬ್ರುಂಟನ್‌ನು ತನ್ನ "ದ ಕ್ವೆಸ್ಟ್ ಆಫ್ ದಿ ಓವ್ಹರ ಸೆಲ್ಫ್" ಎಂಬ ಗ್ರಂಥದಲ್ಲಿ ಹೀಗೆ ಬರೆದಿದ್ದಾನೆ. "(ಭಾರತದಲ್ಲಿ)ಯಾವುದನ್ನು ಏಕಾಂತದಲ್ಲಿ ಬೋಧಿಸುತ್ತಿದ್ದರೋ, ಅದನ್ನೇ ಗ್ರೀಕ ತತ್ವಜ್ಞಾನಿಗಳು ಸಾರ್ವಜನಿಕ ಸ್ಥಳಗಳಲ್ಲಿ ಬೋಧಿಸುತ್ತಿದ್ದರು. ಏಕೆಂದರೆ, ಪೂರ್ವದಿಂದ-ಪಶ್ಚಿಮದವರೆಗೂ - ಇಡೀ ಮನುಕುಲದ ಮನಸ್ಸಿನಲ್ಲಿ ಒಂದೇ ಪ್ರವಾಹ ಹರಿಯುತ್ತಿರುತ್ತದೆ. ಮತ್ತು 'ಮಾನವಾ, ನೀನು ಯಾರು ಎಂಬುದನ್ನು ತಿಳಿ' ಎಂಬ ಪುರಾತನ ಪಥವನ್ನೇ ಬೋಧಿಸುತ್ತದೆ."[೧೯]

---

೧೫. ಕ್ರಿಸ್ತ ಮತ್ತು ವೀರಶೈವ ಧರ್ಮಗಳೆರಡರಲ್ಲಿ, ಮಾನವನನ್ನು ಒಬ್ಬ ಪ್ರಯಾಣಿಕನಿಗೆ ಹೋಲಿಸಲಾಗಿದೆ. ನೋಡಿ. ಫಾದರ ಗ್ರೆಗರಿ ಡಿಸೋಜ 'ಕ್ರಿಸ್ತ ಹಾಗೂ ವೀರಶೈವ ಸಿದ್ಧಾಂತ.'- ವಿಶ್ವಪ್ರಭೆ ಭಾಗ-೩. (೧೯೯೧)( ಸಂ) ಜಿ.ಎಚ್. ಹನ್ನೆರಡುಮಠ. ಪು. ೬೨೪-೬೨೯.

೧೬. ಈ ಮಾರ್ಗ ಷಟ್‌ಸ್ಥಲದ ಪ್ರವೃತ್ತಿ ಮಾರ್ಗಕ್ಕೆ ಸಂಬಂಧಿಸಿದುದಾಗಿದೆ.

೧೭. Swami Ranganathananda (1971) "Eternal values for Changing Socity" Pg. 219.

೧೮. Ralph Waldo Trine. (1906) "In Tune the Infinite".

೧೯. Dr. Paul Brunton. (1969) "The Quest of the Overself" Pg. 41.

ಈ ಎಲ್ಲ ಮಹಾನುಭಾವಿಗಳ ಅನುಭಾವದ ನುಡಿಗಳ ಸಾರ "ತನ್ನ ತಾನರಿಯಬೇಕು" ಎಂಬುದೇ ಆಗಿದೆ. ಹಾಗಾದರೆ, ತನ್ನ ತಾನರಿಯುವುದೆಂದರೇನು? ತನ್ನ ದುರ್ಗುಣ, ದುರಾಚಾರ, ಅಸತ್ಯ ನಡೆ-ನುಡಿ ಕಂಡು ಅವುಗಳಿಗೆ ಕಾರಣವಾದ ವಾಸನೆಗಳನ್ನು ಅರಿತು, ಅವುಗಳ ಆಚೆಗಿರುವ ಹಾಗೂ ಅವುಗಳನ್ನು ಬೆಳಗುವ ಜ್ಯೋತಿಯೇ ತಾನೆಂದು ತಿಳಿದು - ಅದೇ ಆಗುವುದು. ಅಂದರೆ, ಪ್ರಸ್ತುತ ಪ್ರಜ್ಞೆಯನ್ನು(consciousness) ಆವರಿಸಿಕೊಂಡಿರುವ ಭಯ, ಕಾತರತೆ, ದ್ವೇಷ, ಅಸೂಯೆ, ಕ್ರೌರ್ಯ, ವೈರತ್ಯ ಮತ್ತು ಸ್ವಾರ್ಥ ಮೊದಲಾದ ಅಸತ್ ಪ್ರವೃತ್ತಿಗಳನ್ನು ಹೊರಹಾಕಿ; ಪ್ರೀತಿ, ದಯೆ, ನಿರ್ಭಯ ಹಾಗೂ ಸ್ಥೈರ್ಯ ಮೊದಲಾದ ಸತ್‌ಪ್ರವೃತ್ತಿಗಳನ್ನು ಚಿಗುರಿಸಿ; ಅವುಗಳನ್ನೂ ಪ್ರಜ್ಞೆಯಿಂದ ದೂರ ಸರಿಸಿ, ಶಾಶ್ವತ ಶಾಂತಿ-ಆನಂದ ನೆಲೆಗೊಳ್ಳುವಂತೆ ಮಾಡುವುದು.[೨೦] ಇದೇ ಆಂತರಿಕ ವಿಕಾಸ - ಈ ಆಂತರಿಕ ವಿಕಾಸವು ಹಿಂದು, ಕ್ರಿಶ್ಚಿಯನ್, ಇಸ್ಲಾಮ್, ಪಾರ್ಸಿ ಮತ್ತು ಬೌದ್ಧ ಎಂಬ ಮೊದಲಾದ ಶಬ್ದಗಳಿಗೆ ಸೀಮಿತವಾದುದಲ್ಲ. ಅದೊಂದು ಪುನರ್ಜನ್ಮ. ಡಾ.ಎಸ್.ರಾಧಾಕೃಷ್ಣನ್ನರು ತಮ್ಮ "ಧರ್ಮ ಮತ್ತು ಸಂಸ್ಕೃತಿ" ಎಂಬ ಗ್ರಂಥದಲ್ಲಿ ಧರ್ಮದ ಸ್ವರೂಪ ಕುರಿತು ವಿವೇಚನೆ ಮಾಡುವಾಗ 'ಪ್ಲಾಟಿನಸ್'ನ ಒಂದು ಅವತರಣಿಕೆಯನ್ನು ಕೊಡುತ್ತಾರೆ. ಅದು ಧರ್ಮದ ಬಹು ಸುಂದರವಾದ ಚಿತ್ರವನ್ನು ನಿರೂಪಿಸುತ್ತದೆ. ಆದುದರಿಂದ ಅದನ್ನು ನಾವು ಇಲ್ಲಿ ನೋಡಬಹುದು. "ಅಂತರ್ಮುಖಿಯಾಗಿ ನಿನ್ನನ್ನು ನೋಡು, ನೀನು ಇದುವರೆಗೂ ಸುರೂಪಿಯಾಗಿ ಕಾಣದಿದ್ದರೆ - ಒಬ್ಬ ಶಿಲ್ಪಿ ಒಂದು ಸುಂದರಮೂರ್ತಿಯನ್ನು ಕೆತ್ತುವಾಗ, ಹೇಗೆ ಕಾರ್ಯಪ್ರವೃತ್ತನಾಗುವನೋ-ಹಾಗೆಯೇ ನೀನೂ ಪ್ರವೃತ್ತನಾಗು. ಇಲ್ಲಿ ಕೆತ್ತುತ್ತಾನೆ, ಅಲ್ಲಿ ನಯಗೊಳಿಸುತ್ತಾನೆ. ಒಂದು ರೇಖೆಯನ್ನು ಸೂಕ್ಷ್ಮಗೊಳಿಸಿ, ಮತ್ತೊಂದನ್ನು ಪೂರ್ಣಗೊಳಿಸುತ್ತಾನೆ. ಈ ರೀತಿ ಒಂದು ಮೋಹಕ ಮೂರ್ತಿ ಮೂಡಿಬರುವವರೆಗೆ ಕೆತ್ತುತ್ತಲೇ ಇರುತ್ತಾನೆ. ನೀನೂ ಹಾಗೆಯೇ ಮಾಡು. ಅನಾವಶ್ಯಕವಾದುದನ್ನು ಕೊರೆದು ಬಿಡು. ಹೇಯವಾದುದನ್ನು ಶುದ್ಧಗೊಳಿಸು, ಮುಸುಕಿದ ಕತ್ತಲೆಯನ್ನು ಹೊರದೂಡಿ, ಒಂದು ಸುಂದರ ಮೂರ್ತಿ ರೂಪಗೊಳ್ಳುವವರೆಗೂ ಕೆತ್ತನೆಯ ಕಾರ್ಯ ಮುಂದುವರೆಸು. ನಿನ್ನ ಹೃದಯ ಮಂದಿರದಲ್ಲಿ ಜ್ಯೋತಿಸ್ವರೂಪವಾದ ಮಂಗಲಮೂರ್ತಿಯ ಪ್ರತಿಷ್ಠಾಪನೆಯಾಗಿ, ಆ ಜ್ಯೋತಿಯ ಪ್ರಕಾಶ ನಿನ್ನ ಮುಖದ ಮೇಲೆ ಬೆಳಗಿ ಅದರ ಮುಖಾಂತರ ಸದ್ಗುಣ-ಸದಾಚಾರ ಹೊರಹೊಮ್ಮುವವರೆಗೂ ನಿನ್ನ ಕೆತ್ತನೆಯ ಕಾರ್ಯ ಸಾಗಿಯೇ ಇರಲಿ."[೨೧]

ಹೀಗೆ ಪ್ರತಿಯೊಬ್ಬ ಮಾನವನು ಅಂತರ್ಮುಖಿಯಾಗಿ, ತನ್ನನ್ನು ತಾ ನೋಡಿ; ತಾನಿನ್ನೂ ಸುರೂಪಿಯಾಗಿಲ್ಲವೆಂದು ಕಂಡುಬಂದಾಗ - ಸ್ವಶಿಲ್ಪಿಯಾಗಿ - ತನ್ನ ಕುರೂಪಿತನವನ್ನು ಹೋಗಲಾಡಿಸಲು ಕೆತ್ತನೆಯ ಕೆಲಸ ಕೈಕೊಳ್ಳಬೇಕಾಗುವುದು. ತನ್ನ ಕುರೂಪಿತನಕ್ಕೆ ಕಾರಣವಾದ ಪ್ರತ್ಯೇಕತೆಯ ಭಾವವನ್ನು ತ್ಯಜಿಸಿ; ಬುದ್ಧಿಭಾವಗಳನ್ನು ಶುದ್ಧಗೊಳಿಸಿ; ಅವುಗಳ ಹಿಂದೆ ಸುಪ್ತಾವಸ್ಥೆಯಲ್ಲಿರುವ ಜ್ಯೋತಿಸ್ವರೂಪವಾದ 'ಸತ್ಯ' ಪ್ರಜ್ವಲಿಸಲು ಆಸ್ಪದ ಮಾಡಿಕೊಡಬೇಕಾಗುವುದು. ಹಾಗಾದಾಗ, ಪ್ರತಿಯೊಬ್ಬನ ಹೃದಯದಲ್ಲಿಯೂ ಜ್ಯೋತಿ ಬೆಳಗಿ, ಆತನ ದೈನಂದಿನ ಜೀವನದಲ್ಲಿ ಸದ್ಗುಣ-ಸದಾಚಾರಗಳು ತಮ್ಮಷ್ಟಕ್ಕೆ ತಾವೇ ಹೊರಹೊಮ್ಮುವವು.

---

೨೦. ಈ ಬಗೆಗೆ ಈ ಕೃತಿಗಳನ್ನು ನೋಡಿ:
(i) D. Hukamachand Bharilla (1981) "Dharma ke Dashalakshana". P 203.
(ii) ಎದುರ್ಕಳ ಕೆ. ಶಂಕರನಾರಾಯಣ ಭಟ್ (೧೯೮೨) "ಹಿಂದೂ ಧರ್ಮದ ಪರಿಚಯ". ಪು. ೯.
(iii) ಅನ್ನದಾನಸ್ವಾಮಿಗಳು (೧೯೭೮) "ಮಾನವ ಧರ್ಮ". ಪು. ೩.
(iv) ಎ.ಎನ್. ಮೂರ್ತಿರಾವ (೧೯೯೧) "ದೇವರು". ಪು. ೧೮೨.

೨೧. Plotinus: quoted by Dr. S. Radhakrishnan in his book "Religion and Culture" Pg. 56. Published by Oriental Paper Backs. 1968

ಆಂತರಿಕ ವಿಕಾಸ ವ್ಯಕ್ತಿಗತವಾದರೂ ಅದರ ಪರಿಣಾಮ ಮಾತ್ರ ಸಾರ್ವತ್ರಿಕ. ಅರಳಿದ ಕುಸುಮದ ಸೌರಭ ಎಲ್ಲೆಡೆಯಲ್ಲಿಯೂ ಸೂಸುವಂತೆ ಸಾಕ್ಷಾತ್ಕಾರಿಯ ಪ್ರಭೆ ಸರ್ವತ್ರವೂ ಬೆಳಗುತ್ತದೆ. ಎಲ್ಲ ಪ್ರಕಾರದ ಭೇದಾಭೇದಗಳನ್ನಳಿದು-ಜಾತಿ, ವರ್ಣ, ಮತ, ಪ್ರದೇಶ, ಭಾಷೆ, ಜಡ-ಚೈತನ್ಯ, ಇಹ-ಪರ, ಪೂರ್ವಜನ್ಮ-ಪುನರ್ಜನ್ಮ, ಸ್ವರ್ಗ-ನರಕ, ಸುಖ-ದುಃಖ, ಸ್ತ್ರೀ-ಪುರುಷ ಹಾಗೂ ಬೇಕು-ಬೇಡ ಮುಂತಾದ ದ್ವಂದ್ವಗಳನ್ನು ಮೀರಿ ಸರ್ವತ್ರವೂ ಸರ್ವರಲ್ಲಿಯೂ ಸರ್ವದರಲ್ಲಿಯೂ ಸತ್ಯವನ್ನೇ ಕಾಣುತ್ತಾನೆ. ಅವನೇ "ವಿಶ್ವಮಾನವ".[೨೨] ಪ್ರತಿಯೊಬ್ಬನೂ ವಿಶ್ವಮಾನವನಾಗಬೇಕೆಂಬುದೇ ಧರ್ಮ ಅಥವಾ ದರ್ಶನದ ಗುರಿ.

ವಿಜ್ಞಾನ:

ವಿಜ್ಞಾನವೆಂದರೆ ತಕ್ಷಣ ನಮ್ಮ ಕಣ್ಣೆದುರಿಗೆ ರಸಾಯನ ಶಾಸ್ತ್ರ, ಭೌತಶಾಸ್ತ್ರ, ಪ್ರಾಣಿಶಾಸ್ತ್ರ ಮತ್ತು ಸಸ್ಯಶಾಸ್ತ್ರ ಮೊದಲಾದ ವಿಜ್ಞಾನ ಶಾಖೆಗಳು ಬಂದು ನಿಲ್ಲುತ್ತವೆ. ಆದರೆ ವಿಜ್ಞಾನವೆಂದರೆ ರಸಾಯನಶಾಸ್ತ್ರ ಇಲ್ಲವೆ ಸಸ್ಯಶಾಸ್ತ್ರವಲ್ಲ. 'ನಿಸರ್ಗ ಕುರಿತು ಸುವ್ಯವಸ್ಥಿತವಾಗಿ ಸಂಪಾದಿಸಿದ ಜ್ಞಾನಭಂಡಾರವೇ ವಿಜ್ಞಾನ '[೨೩] ವಿಜ್ಞಾನದ ಗುರಿ ಕೇವಲ ನಿಸರ್ಗ ಘಟನೆಗಳ ವರ್ಣನೆ ಮತ್ತು ವಿವರಣೆಯಾಗಿರದೆ, ಆ ಘಟನೆಗಳ ಹಿಂದಿರುವ ಸತ್ಯದ ಶೋಧನೆಯಾಗಿದೆ. ಸತ್ಯದ ಶೋಧನೆಗಾಗಿ ವಿಜ್ಞಾನ ಉಪಯೋಗಿಸುವ ವಿಧಾನವೇ ವೈಜ್ಞಾನಿಕ ಪದ್ಧತಿ. ಈ ಪದ್ಧತಿ ಮಾತ್ರ ತೀರ ಇತ್ತೀಚಿನದು. ಹೀಗೆಂದಾಗ, ಈ ಮೊದಲು ವಿಜ್ಞಾನವೇ ಅಸ್ತಿತ್ವದಲ್ಲಿ ಇರಲಿಲ್ಲವೆಂದಲ್ಲ, ವಿಜ್ಞಾನವಿತ್ತು. ಆದರೆ ಅದಕ್ಕೆ ಸ್ವತಂತ್ರವಾದ ಅಸ್ತಿತ್ವವಿರಲಿಲ್ಲ. ಅದು ತತ್ವಜ್ಞಾನದ ಒಂದು ಅಂಗವಾಗಿತ್ತು. ಪ್ರಾಚೀನ ಪಾಶ್ಚಿಮಾತ್ಯರಲ್ಲಿ ತತ್ವಜ್ಞಾನಿಗಳೇ ವಿಜ್ಞಾನಿಗಳೂ ಆಗಿದ್ದರು. ಹಾಗೆ ನೋಡಿದರೆ ತತ್ವಜ್ಞಾನ ಹಾಗು ವಿಜ್ಞಾನ ಇವು ಒಂದೇ ಎಂಬ ಭಾವನೆ ಇತ್ತು. ಆಧುನಿಕ ವಿಜ್ಞಾನ ಅಸ್ತಿತ್ವದಲ್ಲಿ ಬಂದದ್ದು ಹದಿನಾರನೆಯ ಶತಮಾನದಲ್ಲಿ. ಆಂಗ್ಲತತ್ವಜ್ಞಾನಿ ಡಾ. ಎ.ಎನ್. ವ್ಹಾಯಿಟ್ ಹೆಡ್‌ನು, ತನ್ನ "ದಿ ಸಾಯನ್ಸ ಆಂಡ್ ದಿ ಮಾಡರ್ನ್‌ವರ್ಲ್ಡ" ಎಂಬ ಗ್ರಂಥದ ಮೊದಲನೆಯ ಪುಟದಲ್ಲಿಯೇ ಈ ರೀತಿ ಬರೆಯುತ್ತಾನೆ." ಹದಿನಾರನೆಯ ಶತಮಾನ ಈ ನಮ್ಮ ಯುಗವು ಕ್ರಿಶ್ಚಿಯನ್ ಧರ್ಮ ಸಂಸ್ಥೆಯ ಕುಸಿತ ಹಾಗು ಆಧುನಿಕ ವಿಜ್ಞಾನದ ಉಗಮ ಕಂಡಿತು. ಹೊಸಹೊಸ ಸಿದ್ಧಾಂತಗಳಿಗೆ ಮತ್ತು ಹೊಸಹೊಸ ವಿಚಾರಗಳಿಗೆ ಮಾರ್ಗ ಮುಕ್ತವಾದರೂ ಯಾವುದರ ನಿಷ್ಕರ್ಷೆಯನ್ನು ಕಂಡುಕೊಳ್ಳುವುದಾಗಲಿಲ್ಲ"[೨೪] ಆಧುನಿಕ ವಿಜ್ಞಾನ ಅಸ್ತಿತ್ವದಲ್ಲಿ ಬರಲು ಕೋಪರ್ನಿಕಸ್(೧೪೭೩-೧೫೪೩); ಬ್ರುನೋ(೧೫೪೮-೧೬೦೦); ಫ್ರಾನ್ಸಿಸ್ ಬೇಕನ್(೧೫೬೧-೧೬೨೬); ಗ್ಯಾಲಿಲಿಯೋ (೧೫೬೪-೧೬೪೨); ಕ್ಯಾಂಪನೆಲ್ಲಾ (೧೫೬೮-೧೬೩೯); ಕೆಪ್ಲರ (೧೫೭೧-೧೬೩೦) ಮತ್ತು ಇನ್ನೂ ಅನೇಕ ವಿಜ್ಞಾನಿ-ತತ್ವಜ್ಞಾನಿಗಳನ್ನೂ ಕಾರಣಪುರುಷರೆಂದು ಪರಿಗಣಿಸಬಹುದು. ಬ್ರುನೋ, ಫ್ರಾನ್ಸಿಸ್ ಬೇಕನ್ ಹಾಗೂ ಕ್ಯಾಂಪನೆಲ್ಲಾ ಇವರು ತತ್ತ್ವಜ್ಞಾನಿಗಳಾದರೆ, ಕೋಪರ್ನಿಕಸ್, ಗೆಲಿಲಿಯೋ ಮತ್ತು ಕೆಪ್ಲರ ಇವರು ಖಗೋಳ ವಿಜ್ಞಾನಿಗಳು. ಈ ಎಲ್ಲ ತತ್ವಜ್ಞಾನಿ ಹಾಗೂ ವಿಜ್ಞಾನಿಗಳ ಪ್ರಯತ್ನದ ಫಲಶ್ರುತಿಯೇ ಈ ವೈಜ್ಞಾನಿಕಪದ್ಧತಿ. ವಸ್ತುತಃ ವೈಜ್ಞಾನಿಕ ಪದ್ಧತಿ ಒಂದು ಮನೋಭಾವ. (an attitude of mind) ಇದು ಅಂದಾಜು, ನಂಬುಗೆ ಮತ್ತು ಕಲ್ಪನಾರಹಿತವಾಗಿದ್ದು, ವಿಚಾರ, ನಿರೀಕ್ಷಣೆ, ಪರೀಕ್ಷಣೆಗಳನ್ನು ಪ್ರೋತ್ಸಾಹಿಸುವ ಮನೋಭಾವ ಅಥವಾ ಸತ್‌ದೃಷ್ಟಿಯಾಗಿದೆ. ಈ ಸತ್‌ದೃಷ್ಟಿಯ ಕಾರ್ಯಾಚರಣೆಯೇ ವೈಜ್ಞಾನಿಕ ಪದ್ಧತಿ. ಇಂಥ ಸತ್‌ದೃಷ್ಟಿಯ ಕಾರ್ಯಾಚರಣೆ ವ್ಯಕ್ತಗೊಂಡದ್ದನ್ನು - ನಾವು, ಕೋಪರ್ನಿಕಸ್ ಮತ್ತು ಗೆಲಿಲಿಯೋ ಇವರಲ್ಲಿ ಕಾಣುತ್ತೇವೆ.

---

೨೨. ವಿ.ಕೃ. ಗೋಕಾಕ (೧೯೭೧) ವಿಶ್ವಮಾನವದೃಷ್ಟಿ. ಪು. ೬೪.

೨೩. ಚಾರ್ಲ್ಸ್ ಡಾರ್ವಿನ್-ಜೀವ ಸಂಕುಲಗಳ ಉಗಮ (೧೯೯೧) ಕನ್ನಡಕ್ಕೆ ಕೆ. ಪುಟ್ಟಸ್ವಾಮಿ, ಪು. ೧೫.

೨೪. Alfred North Whitehead. (1971) "Science and the modern world" p.1.

ಕೋಪರ್ನಿಕಸ್‌ನು ರೋಮ ವಿಶ್ವವಿದ್ಯಾಲಯದಲ್ಲಿ ಖಗೋಳಶಾಸ್ತ್ರದ ಅಧ್ಯಾಪಕನಾಗಿದ್ದನು. ಕ್ರಿ.ಶ. ಹದಿನೈದುನೂರಾ ಎರಡರಲ್ಲಿ ಒಂದು ದಿನ ಈ ವಿಶ್ವದ ರಚನೆ ಮತ್ತು ಕಾರ್ಯವಿಧಾನ ಕುರಿತು ಟಾಲೆಮಿ ಎಂಬ ಪ್ರಾಚೀನ ಖಗೋಳ ವಿಜ್ಞಾನಿಯ ಸಿದ್ಧಾಂತವನ್ನು ತಿಳಿಸಿಕೊಡುತ್ತಿದ್ದನು. (ಟಾಲೆಮಿ ಇವನ ಸಿದ್ಧಾಂತವನ್ನು 'ಜಿಯೊಸೆಂಟ್ರಿಕ್' ಎಂದು ಕರೆಯಲಾಗಿದೆ. ಈ ಸಿದ್ಧಾಂತದ ಪ್ರಕಾರ, ಪೃಥ್ವಿ, ವಿಶ್ವದ ಕೇಂದ್ರಸ್ಥಾನವಿದ್ದು; ಸೂರ್ಯನನ್ನೊಳಗೊಂಡು ಗ್ರಹಗಳು ಪೃಥ್ವಿಯ ಪ್ರದಕ್ಷಿಣೆ ಹಾಕುತ್ತವೆ.) ಆಗ ಒಬ್ಬ ವಿದ್ಯಾರ್ಥಿ ಬಹುವಿನಯದಿಂದ "ಸರ್, ಟಾಲೇಮಿಗಿಂತ ಪೂರ್ವದಲ್ಲಿ ಪಾಯಥೆಗೋರಸ್ ಎಂಬ ಗ್ರೀಕ ತತ್ತ್ವಜ್ಞಾನಿಯು, ನೀವು ಈಗ ಬೋಧಿಸುತ್ತಿರುವ ಸಿದ್ಧಾಂತಕ್ಕೆ ವ್ಯತಿರಿಕ್ತವಾದ ಸಿದ್ಧಾಂತವನ್ನು ಹೇಳಿದ್ದಾನಲ್ಲ" ಎಂದು ನುಡಿದನು. ಆಗ ಕೋಪರ್ನಿಕಸ್ - 'ಅರಿಸ್ಟಾಟಲ್‌ನು (ಕ್ರಿ. ಪೂ. ೩೮೪-೩೨೨) ಹಾಗೆಯೇ ಹೇಳಿದ್ದಾನೆ' ಎಂದು ನುಡಿದು - ಕ್ಲಾಸನ್ನು ಅಷ್ಟಕ್ಕೆ ನಿಲ್ಲಿಸಿ ಹೊರಬಂದನಂತೆ. ಮುಂದೆ ತನ್ನ ಅಧ್ಯಾಪಕ ವೃತ್ತಿಗೆ ರಾಜೀನಾಮೆ ಇತ್ತು, ತನ್ನೂರಿಗೆ ಮರಳಿ ಬಂದು, ಪಾಯಥಾಗೋರಸ್, ಟಾಲೆಮಿ ಮತ್ತು ಅರಿಸ್ಟಾಟಲ್ ಇವರ ಬರಹಗಳನ್ನು ಮರಳಿ ಚಿಕಿತ್ಸಕ ಮನೋಭಾವದಿಂದ ಅಭ್ಯಸಿಸಿದನು. ಆಳವಾದ ಅಭ್ಯಾಸ, ದೀರ್ಘಚಿಂತನೆ ಹಾಗೂ ಆತ್ಮವಿಶಾಸಗಳ ಮೂಲಕ - ಅವನೇ ಮುಂದೆ ಖಗೋಳ ವಿಜ್ಞಾನದಲ್ಲಿಯೇ ಬಹುಕ್ರಾಂತಿಕಾರಕವಾದ ಸಿದ್ಧಾಂತವನ್ನು ಪ್ರತಿಪಾದಿಸಿದನು. (ಕೋಪರ್ನಿಕಸ್‌ನು ಮಂಡಿಸಿದ ಸಿದ್ಧಾಂತವನ್ನು 'ಹೆಲಿಯೋ ಸೆಂಟ್ರಿಕ್' ಎಂದು ಕರೆಯುತ್ತಾರೆ. ಆ ಸಿದ್ಧಾಂತದ ಪ್ರಕಾರ, ಸೂರ್ಯನೇ ವಿಶ್ವದ ಕೇಂದ್ರಸ್ಥಾನವಿದ್ದು, ಪೃಥ್ವಿಯನ್ನೊಳಗೊಂಡು ಉಳಿದೆಲ್ಲ ಗ್ರಹಗಳು ಸೂರ್ಯನ ಸುತ್ತಲೂ ಪ್ರದಕ್ಷಿಣೆ ಹಾಕುತ್ತವೆ.) ಈ ಹೊಸ ಸಿದ್ಧಾಂತ ಈ ಮೊದಲು ವಿಶ್ವದ ಬಗೆಗಿರುವ ಕಲ್ಪನೆಯನ್ನೇ ಬುಡಮೇಲುಮಾಡಿತು. ಈ ಹೊಸ ಸಿದ್ಧಾಂತವನ್ನೊಳಗೊಂಡ ಗ್ರಂಥ ಅವನ ಜೀವಿತ ಕಾಲದಲ್ಲಿ ಪ್ರಕಟವಾಗಿದ್ದರೆ - ಅವನನ್ನು ಗಲ್ಲಿಗೇರಿಸಬಹುದಾಗಿತ್ತು. ಆ ಗ್ರಂಥ ಅಚ್ಚಾಗಿ ಅವನ ಕೈಗೆ ಬಂದದ್ದು, ಅವನು ಮರಣಶಯ್ಯೆಯಲ್ಲಿದ್ದಾಗ. ಕೋಪರ್ನಿಕಸ್‌ನು ಮೇ ೨೧, ೧೫೪೩ರಲ್ಲಿ ನಿಧನನಾದನು.

ಕೋಪರ್ನಿಕಸ್‌ನ ಸಿದ್ಧಾಂತವನ್ನು ದೃಢೀಕರಿಸಿದವನು ಗೆಲಿಲಿಯೋ. ಅವನನ್ನು ಧರ್ಮಸಂಸ್ಥೆ ವಿಚಾರಣೆಗೆ ಗುರಿ ಮಾಡಿ ಶಿಕ್ಷೆ ವಿಧಿಸುವದರಲ್ಲಿತ್ತು. ಇದರಿಂದ ಪಾರಾಗಲು ಗೆಲಿಲಿಯೋ ಹೇಳತೀರದಷ್ಟು ಮಾನಸಿಕಯಾತನೆ ಸಹಿಸಬೇಕಾಯಿತು. ಧರ್ಮವಿರೋಧಿಯಾದ ಕೋಪರ್ನಿಕಸ್‌ನ ಸಿದ್ಧಾಂತವು ಸುಳ್ಳೆಂದು ಸಾರಿ, ಈ ಕಠಿಣ ಶಿಕ್ಷೆಯಿಂದ ಪಾರಾದನು. ಗೆಲಿಲಿಯೋ ಪೀಸಾವಿಶ್ವವಿದ್ಯಾಲಯದಲ್ಲಿ ಗಣಿತಶಾಸ್ತ್ರದ ಅಧ್ಯಾಪಕನಾಗಿದ್ದನು. ಅವನ ಸ್ವತಂತ್ರ ವಿಚಾರಸರಣಿ, ಸತ್ಯಾನ್ವೇಷಣೆಯ ತವಕ ಕಂಡು, ಎಷ್ಟೋ ಸಂಪ್ರದಾಯವಾದಿಗಳು ಅವನನ್ನು ದ್ವೇಷಿಸುತ್ತಿದ್ದರು. ಹೀಗೆ 'ಮಾಡಿ ನೋಡು' ಎಂಬ ಮನೋಭಾವ ಗೆಲಿಲಿಯೋ ಹೊಂದಿದ್ದರೆ, ಸುಮ್ಮನೆ ಏನನ್ನೂ ಒಪ್ಪದೆ - "ಪ್ರತಿಯೊಂದನ್ನು ಪ್ರಶ್ನಿಸಿ, ಬುದ್ಧಿಯ ಒರೆಗಲ್ಲಿಗೆ ಹಚ್ಚು" ಎಂಬ ಮನೋಭಾವವನ್ನು ಕೋಪರ್ನಿಕಸ್ ಹೊಂದಿದ್ದನು.

ಈ ಇಬ್ಬರು ವಿಜ್ಞಾನಿಗಳು ಹೊಂದಿದ ಮನೋಭಾವವೇ ನಾವು ಈಗ ಚರ್ಚಿಸುತ್ತಿರುವ ವೈಜ್ಞಾನಿಕ ಪದ್ಧತಿಯ ಜೀವಾಳ. ಆದರೆ, ಈಗ ಅಸ್ತಿತ್ವದಲ್ಲಿದ್ದ ವೈಜ್ಞಾನಿಕ ಪದ್ಧತಿಗೆ ಸುವ್ಯವಸ್ಥಿತ ರೂಪುಕೊಟ್ಟು, ಅದನ್ನು ಪ್ರಚಾರದಲ್ಲಿ ತಂದವನು ಆಂಗ್ಲ ತತ್ತ್ವಜ್ಞಾನಿಯಾದ ಫ್ರಾನ್ಸಿಸ್ ಬೇಕನ್ನನು. ಮಾನವನ ವೈಚಾರಿಕ ವಿಶ್ವಕ್ಕೆ ಫ್ರಾನ್ಸಿಸ್ ಬೇಕನ್ನನು ನೀಡಿದ ಪದ್ಧತಿ, ಒಂದು ಅಮೂಲ್ಯ ಕೊಡುಗೆ ಎಂದು ಪರಿಗಣಿಸಲಾಗಿದೆ. ನಿರೀಕ್ಷಣೆ, ಸಿದ್ಧಾಂತಕಲ್ಪನೆ, ಪರೀಕ್ಷಣೆ ಮತ್ತು ಸಿದ್ಧಾಂತ ರಚನೆ ಇವು ಈ ಪ್ರಕ್ರಿಯೆಯಲ್ಲಿರುವ ನಾಲ್ಕು ಪ್ರಮುಖ ಮೆಟ್ಟಿಲುಗಳು. ಸುಮಾರು ಒಂದು ಸಾವಿರ ವರ್ಷಗಳವರೆಗೆ (Middle Age 500 to 1500 A.D.) ಅಂಧಕಾರದಲ್ಲಿ ಮುಳುಗಿದ್ದ ಪಾಶ್ಚಿಮಾತ್ಯ ಜಗತ್ತಿಗೆ ಈ'ವೈಜ್ಞಾನಿಕ ಪದ್ಧತಿ' ಒಂದು ದಾರಿದೀಪವಾಗಿ ಪರಿಣಮಿಸಿತು.

ಈ ಒಂದು ಹರಿತವಾದ ಸಾಧನ ಅಂದರೆ 'ವೈಜ್ಞಾನಿಕ ಪದ್ಧತಿ' ಕೈಗೆಟುಕಿದ ತಕ್ಷಣ, ಪಾಶ್ಚಿಮಾತ್ಯ ಮನುಕುಲದ ಪ್ರತಿಭೆ ಧರ್ಮಸಂಸ್ಥೆಯ ಕಪಿಮುಷ್ಟಿಯಿಂದ ಬಿಡಿಸಿಕೊಂಡು, ತತ್ವಜ್ಞಾನದ ಕೊಂಕುಳದಿಂದ ಕೆಳಗಿಳಿದು, ರೆಕ್ಕೆ ಮೂಡಿದ ಹಕ್ಕಿಯಂತೆ ಜ್ಞಾನಭಾಂಡಾರದ ಎಲ್ಲ ಶಾಖೆಗಳಲ್ಲಿ ಹಾರಾಡಿ, ತನ್ನ ಪ್ರಭಾವ ಬೀರತೊಡಗಿತು. ವಿಜ್ಞಾನದ ಜೊತೆಗೆ ತತ್ತ್ವಜ್ಞಾನ, ನಂತರ ರಾಜನೀತಿಶಾಸ್ತ್ರ ಮತ್ತು ಮನೋವಿಜ್ಞಾನ ಆ ಮೇಲೆ ಅರ್ಥಶಾಸ್ತ್ರ ಮೊದಲಾದವುಗಳು ಈ ಹೊಸ ಪದ್ಧತಿಯನ್ನು ಅಳವಡಿಸಿಕೊಂಡು; ಅರಿಸ್ಟಾಟಲ್‌ನ ವಿಚಾರಸರಣಿ ಮತ್ತು ಕ್ರಿಶ್ಚಿಯನ್ ಧರ್ಮಸಂಸ್ಥೆಯ ಪ್ರಭಾವದಿಂದ ಪಾರಾಗಿ, ತಮ್ಮವೇ ಆದ ಸ್ಥಾನಮಾನಗಳನ್ನು ಹೊಂದಿದವು. ಈ ಹೊಸ ಪದ್ಧತಿಯನ್ನು ತಮ್ಮ ತಮ್ಮ ಕ್ಷೇತ್ರಗಳಲ್ಲಿ ಮೊದಲು ಬಾರಿಗೆ ಅಳವಡಿಸಿಕೊಂಡವರಲ್ಲಿ ಈ ಕೆಳಗಿನವರು ಅಗ್ರಗಣ್ಯರೆಂದು ಹೇಳಬಹುದು. ತತ್ವಜ್ಞಾನಕ್ಕೆ ಹೊಸ ತಿರುವು ಕೊಟ್ಟವನು ಫ್ರಾನ್ಸದೇಶದ ದರ್ಶನಕಾರ-ದೆಕಾರ್ಟನು(೧೫೯೬-೧೬೫೦); ರಾಜನೀತಿಶಾಸ್ತ್ರವು ಹೊಸಮಾರ್ಗ ತುಳಿಯುವಂತೆ ಮಾಡಿದವನು ಇಟಲಿ ದೇಶದ ಮೆಕ್ಯಾವಲ್ಲಿಯು (೧೪೬೯-೧೫೨೭) ಆ ಹೊಸ ಮಾರ್ಗ ತುಳಿದು ರಾಜನೀತಿ ಶಾಸ್ತ್ರಕ್ಕೆ ಸ್ವತಂತ್ರ ಅಸ್ತಿತ್ವ ಪ್ರಾಪ್ತಮಾಡಿಕೊಟ್ಟವನು ಥಾಮಸ್ ಹಾಬ್ಸನು(೧೫೮೮-೧೬೭೯). ರಸಾಯನ ಶಾಸ್ತ್ರಜ್ಞ ಜಾನ್ ಡಾಲ್ಟನ್ (೧೭೬೬-೧೮೪೪) ಮತ್ತು ಭೌತ ವಿಜ್ಞಾನ ಆವ್‌ಗಾಡ್ರೋ(೧೭೭೬-೧೮೫೦) ಇವರು ಅಣುಸಿದ್ಧಾಂತವನ್ನು ಕಟ್ಟಿದರು. ಹದಿನೆಂಟನೂರಾ ಒಂಬತ್ತರಲ್ಲಿ ಜೀನ ಬ್ಯಾಪ್ಟಿಸ್ ಲಾ ಮಾರ್ಕನು (೧೭೪೪-೧೮೨೯) ಉತ್ಕ್ರಾಂತಿವಾದದ ಬೀಜವನ್ನು ಬಿತ್ತಿದನು. ಬಯಾಲಾಜಿ (Biology) ಶಬ್ದವನ್ನು ಬಳಕೆಯಲ್ಲಿ ತಂದವನೇ ಲಾ ಮಾರ್ಕನು. ಮುಂದೆ ಐವತ್ತು ವರ್ಷಗಳ ನಂತರ ಅಂದರೆ ೧೮೫೯ ರಲ್ಲಿ ಚಾರ್ಲ್ಸ ಡಾರ್ವಿನ್ನನು (೧೮೦೯-೧೮೮೨) ಉತ್ಕ್ರಾಂತಿವಾದವನ್ನು ಒಂದು ಸಿದ್ಧಾಂತದ ರೂಪದಲ್ಲಿ ಪ್ರಕಟಿಸಿದನು. ಈ ಸಿದ್ಧಾಂತಕ್ಕೆ ವಿರೋಧಬಂದಾಗ, ಟಿ.ಎಚ್. ಹಕ್ಸಲೆಯು ಧೈರ್ಯದಿಂದ ಈ ಸಿದ್ಧಾಂತವನ್ನು ಎತ್ತಿಹಿಡಿದು; ಅದನ್ನು ಬಹುಪರಿಣಾಮಕಾರಿಯಾಗಿ ಪ್ರತಿಪಾದಿಸಿದನು. ಜರ್ಮನಿಯ ಲೆಪಝಿಗ್ ನಗರದಲ್ಲಿ ಮನೋವಿಜ್ಞಾನದ ಪ್ರಯೋಗಶಾಲೆಯನ್ನು ೧೮೭೯ ರಲ್ಲಿ ಸ್ಥಾಪಿಸಿ, ಮನೋವಿಜ್ಞಾನಕ್ಕೆ ಸ್ವತಂತ್ರಸ್ಥಾನ ದೊರಕಿಸಲು ಅಸ್ತಿಭಾರ ಹಾಕಿದವನು ವ್ಹಿಲ್‌ಹಮ್ ಉಂಟ್‌ನು. ಅರ್ಥಶಾಸ್ತ್ರವನ್ನು ಧರ್ಮದ ಅಪ್ಪುಗೆಯಿಂದ ಬೇರ್ಪಡಿಸಿ ಅದಕ್ಕೊಂದು ಹೊಸ ರೂಪಕೊಟ್ಟವನು ಕಾರ್ಲಮಾರ್ಕ್ಸನು (೧೮೧೮-೧೮೮೩). ನೀತಿಶಾಸ್ತ್ರವನ್ನು ನೈಸರ್ಗಿಕ ಅಥವಾ ಉತ್ಕ್ರಾಂತಿವಾದದ ತತ್ತ್ವಕ್ಕನುಸರಿಸಿ, ಅರ್ಥಯಿಸಲು ಪ್ರಯತ್ನಿಸಿದವನು ಹರ್ಬರ್ಟಸ್ಪೆನ್ಸರನು.

ಈ ರೀತಿ ಈ ಹೊಸಮನೋಭಾವ (ವೈಜ್ಞಾನಿಕ ಪದ್ಧತಿ)ಮಾನವನ ಜೀವಿತದ ಎಲ್ಲ ಕ್ಷೇತ್ರಗಳಲ್ಲಿ ಪ್ರವೇಶಿಸಿ ತನ್ನ ಪ್ರಭಾವ ಬೀರಿತು. ತತ್ಪರಿಣಾಮವಾಗಿ, ಜ್ಞಾನಭಂಡಾರದ ಎಲ್ಲ ಶಾಖೆಗಳಲ್ಲಿ ಹೊಸ ಹೊಸ ವಿಚಾರ ಮತ್ತು ಹೊಸ ಹೊಸ ಸಿದ್ಧಾಂತಗಳು ಜನ್ಮತಾಳಿದವು. ಈ ಎಲ್ಲ ವಿಚಾರಗಳ ಮತ್ತು ಸಿದ್ಧಾಂತಗಳ ಸಂಯುಕ್ತಪರಿಣಾಮದಿಂದ ಹತ್ತೊಂಬತ್ತನೆಯ ಶತಮಾನ ಕೊನೆಗಳ್ಳುವ ಪೂರ್ವದಲ್ಲಿಯೇ-ಮಾನವ ಕುರಿತಾಗಿ ಮತ್ತು ಜಗತ್ತಿನ ಕುರಿತಾಗಿ ಒಂದು ಹೊಸ ಸಿದ್ಧಾಂತ ರೂಪು ತಾಳಿತು. ಅದೇ ಆಧುನಿಕ ಭೌತವಾದ (Modern Materialism).[೨೫]

ಆಧುನಿಕ ಭೌತವಾದ ಕುರಿತು ಚಾರ್ಲ್ಸ ಎಸ್. ಶೀಲೀ ಹೀಗೆ ಹೇಳುತ್ತಾನೆ. "ಆಧುನಿಕ ಭೌತವಾದವು ಈ ವಿಶ್ವವನ್ನು ಒಂದು ಅಪರಿಮಿತವಾದ ಪುದ್ಗಲಪಿಂಡದಂತೆ ಕಾಣುತ್ತದೆ. ವಿಶ್ವ ಮತ್ತು ಅದರೊಳಗಿರುವ ಜಡವಾದ ವಸ್ತು ಶಕ್ತಿ, ಚಲನೆ ಅಥವಾ ಒತ್ತಡ ಇವು ಈ ಹಿಂದೆಯೂ ಅಸ್ತಿತ್ವದಲ್ಲಿದ್ದು, ಮುಂದೆಯೂ ಇರುವಂಥವುಗಳು. ಈ ಜಗತ್ತು ಸತ್ಯ. ಅದನ್ನು ಇಂದ್ರಿಯಗಳ ಮುಖಾಂತರ ತಿಳಿಯುವುದು ಸಾಧ್ಯ. ಜಡವಸ್ತು ಮನಸ್ಸಿಗಿಂತಲೂ ಮುಖ್ಯ. ಮನಸ್ಸು ಮತ್ತು ಜಗತ್ತಿನ ಕುರಿತಾಗಿ ಕಟ್ಟಿದ ವಿಚಾರಗಳು ಗೌಣ ಎಂಬುದು ಭೌತವಾದದ ಅಭಿಪ್ರಾಯ."[೨೬]

---

೨೫. Quoted from Modern Materialism: C.S. Sheely by harold Titus in his book "Living Issues in philosophy' Pg. 206.

೨೬. ದಿವ್ಯಜೀವನ (೧೯೮೩) ಕನ್ನಡಕ್ಕೆ ಕೋ. ಚನ್ನಬಸಪ್ಪ, ಪು. ೧೦೨೦.

ಈ ಭೌತವಾದವು ಮಾನವನ ಜೀವನದ ಮೇಲೆ ಬೀರಿದ ಪ್ರಖರವಾದ ಪರಿಣಾಮದ ಅಂಶಗಳು ಹೀಗಿವೆ:

೧. ಖಗೋಳಶಾಸ್ತ್ರ ವಿಶ್ವದಿಂದ 'ದೇವ'ನನ್ನು ದೂರಿಟ್ಟರೆ, ತತ್ತ್ವಜ್ಞಾನ ಮತ್ತು ಮನೋವಿಜ್ಞಾನ, 'ಆತ್ಮ'ವನ್ನು ಮಾನವನಿಂದ ಹೊರಹಾಕಿದವು

೨. ಸೃಷ್ಟಿಯ ಕಲ್ಪನೆಯ ಸ್ಥಾನವನ್ನು, ಉತ್ಕ್ರಾಂತಿವಾದ ಆಕ್ರಮಿಸಿಕೊಂಡು, ದೇವಸೃಷ್ಟಿಯ ಬದಲು, ಉತ್ಕ್ರಾಂತಿವಾದ ಪ್ರಚಾರದಲ್ಲಿ ಬಂದಿತು.

೩. ಉತ್ಕ್ರಾಂತಿವಾದದ ಪ್ರಚಾರದಿಂದ ಮಾನವ ಮತ್ತು ಪ್ರಾಣಿಗಳಲ್ಲಿಯ ಅಂತರ ಕಡಿಮೆಯಾಗಿ, ಮಾನವನೆಂದರೆ, 'ದೇವನ ಅತ್ಯುತ್ತಮ ಕೃತಿ' ಎಂಬ ಭಾವ ಭ್ರಾಮಕವೆನಿಸತೊಡಗಿತು.

೪. ಮಾನವನ ವಿಚಾರ ಆಚಾರಗಳನ್ನು ನಿರ್ವಹಿಸುವ ಆತ್ಮದ ಕಾರ್ಯವನ್ನು ಅಜಾಗ್ರ ಮನಸ್ಸು ಮತ್ತು ಸಹಜ ಪ್ರವೃತ್ತಿಗಳು ವಹಿಸಿಕೊಂಡವು.

೫. ಮಾರ್ಕ್ಸ ಮತ್ತು ಎಂಜಿಲ್ಸ್‌ರ ಸಮತಾವಾದದ ಪರಿಣಾಮವಾಗಿ ಧರ್ಮ ಮತ್ತು ಕರ್ಮಸಿದ್ಧಾಂತಗಳಲ್ಲಿ ನಂಬುಗೆ ಕ್ಷೀಣಿಸತೊಡಗಿತು.

ಈ ಮೇಲಿನ ಪರಿಣಾಮಗಳ ಪ್ರಭಾವದಿಂದಾಗಿ ಧರ್ಮದ ಸ್ಥಾನವನ್ನು ಮಾವನತಾವಾದ ಮತ್ತು ಉಪಯುಕ್ತವಾದಗಳು ಆಕ್ರಮಿಸಿಕೊಂಡವು. ಹೀಗಾಗಿ, ಈ ಮೊದಲು ಮಾನವನ ಮೇಲಿದ್ದ ಧರ್ಮದ ಹಿಡಿತ ಸಡಿಲುಗೊಂಡಿತು ಸ್ವಲ್ಪ ಗಂಭೀರ ಪ್ರಕೃತಿಯವರಿಗೆ, ಜೀವನಕ್ಕೊಂದು ಗುರಿಬೇಕೆನ್ನುವವರಿಗೆ, ಇಹ-ಪರ, ಪುಣ್ಯ-ಪಾಪಗಳಲ್ಲಿ ನಂಬುಗೆ ಉಳ್ಳವರಿಗೆ, ಈ ಭೌತವಾದ ಒಂದು ಆಹ್ವಾನವಾಗಿ ಪರಿಣಮಿಸಿ;ಇಪ್ಪತ್ತನೆಯ ಶತಮಾನದ ಆರಂಭಕ್ಕೆ ಧರ್ಮ ಮತ್ತು ವಿಜ್ಞಾನಗಳಲ್ಲಿ ಘರ್ಷಣೆಯ ಚಿತ್ರ ಕಾಣತೊಡಗಿತು. ಡಾ.ಎ.ಎನ್‌ವಾಯಿಟ್ ಹೆಡ್ ಅವರು ತಮ್ಮ "ಸಾಯನ್ಸ ಅಂಡ್ ದಿ ಮಾಡರ್ನವರ್ಲ್ಡ" ಎಂಬ ಗ್ರಂಥದ 'ಧರ್ಮ ಮತ್ತು ವಿಜ್ಞಾನ' ವೆಂಬ ಅಧ್ಯಾಯದಲ್ಲಿ : "ಧರ್ಮ ಮತ್ತು ವಿಜ್ಞಾನ ಕುರಿತು ವಿಚಾರಮಾಡುವಾಗ, ನಮ್ಮ ಮನದಲ್ಲಿ ಸಹಜವಾಗಿಯೇ ಮೊದಲು ಹೊಳೆಯುವ ವಿಚಾರ ಅವೆರಡರಲ್ಲಿರುವ ಘರ್ಷಣೆ. ಸುಮಾರು ಅರ್ಧಶತಮಾನದಿಂದ ವೈಜ್ಞಾನಿಕ ಸಂಶೋಧನೆಗಳಲ್ಲಿ ಮತ್ತು ಧಾರ್ಮಿಕ ಬೋಧನೆಗಳಲ್ಲಿ ಭಿನ್ನಾಭಿಪ್ರಾಯವಿದ್ದಂತೆ ತೋರುತ್ತದೆ. ಹೀಗಾಗಿ, ವೈಜ್ಞಾನಿಕ ತತ್ತ್ವಗಳನ್ನು ಸ್ವೀಕರಿಸಿ, ಧಾರ್ಮಿಕ ತತ್ತ್ವಗಳನ್ನು ಬಿಡಬೇಕೋ ಅಥವಾ ಧಾರ್ಮಿಕ ತತ್ತ್ವಗಳನ್ನು ಸ್ವೀಕರಿಸಿ, ವೈಜ್ಞಾನಿಕ ತತ್ತ್ವಗಳನ್ನು ಬಿಡಬೇಕೋ ಎಂಬ ಸಂದಿಗ್ಧ ಸ್ಥಿತಿಯುಂಟಾಗಿ-ಇದರಿಂದ ಹೊರಬರುವ ದಾರಿ ತೋರದಾಗಿದೆ."[೨೭]

ಬರಟ್ರಾಂಡ ರಸಲ್‌ರೂ ಈ ಮೇಲಿನ ಅಭಿಪ್ರಾಯವನ್ನು ಪುಷ್ಟೀಕರಿಸುವ ವಿಚಾರಗಳನ್ನೇ ತಮ್ಮ "ಸಾಯನ್ಸ ಅಂಡ್ ರಿಲಿಜನ್" ಎಂಬ ಗ್ರಂಥದಲ್ಲಿ ಹೀಗೆ ವ್ಯಕ್ತಮಾಡಿದ್ದಾರೆ. "ವಿಜ್ಞಾನ ಮತ್ತು ಧರ್ಮ ಇವುಗಳ ಈಗಿನ ಸಂಬಂಧ, ರಾಷ್ಟ್ರಬಯಸುವ ರೀತಿಯಲ್ಲಿ, ೧೯೩೦ರ ಶರತ್ಕಾಲದಲ್ಲಿ ಬಿ.ಬಿ.ಸಿ. ಯವರು ಬಿತ್ತರಿಸಿದ ಹನ್ನೆರಡು ಭಾಷಣಗಳ 'ಧರ್ಮ ಮತ್ತು ವಿಜ್ಞಾನ' ಎಂಬ ಬಹುಬೋಧಪ್ರದವಾದ ವಿಚಾರಮಾಲೆಯಿಂದ ತಿಳಿದುಕೊಳ್ಳಬಹುದು. ಸಂಪ್ರದಾಯಪ್ರಿಯ ಶ್ರೋತೃವೃಂದದ ಮನನೋಯಿಸುವ ವಿಚಾರಗಳನ್ನು ವ್ಯಕ್ತಮಾಡುವ ಧರ್ಮವಿರೋಧಿ ಭಾಷಣಕಾರರನ್ನು ಉದ್ದೇಶ ಪೂರ್ವಕವಾಗಿಯೇ ಆಹ್ವಾನಿಸಿರಲಿಲ್ಲ. ಪ್ರೊಫೆಸರ ಜ್ಯುಲಿಯನ್ ಹಕ್ಸಲೇ ಅವರ ಪ್ರಾಸ್ತಾವಿಕ ಭಾಷಣ ಬಹು

೨೭. Alfred North Whitehead (1981) "Science and the Modern World": Pg. 180

ಉತ್ತಮವಾಗಿತ್ತು. ಆದರೆ, ಅವರ ಭಾಷಣದಲ್ಲಿ ಸಂಪ್ರದಾಯವನ್ನು ಸ್ವಲ್ಪವೂ ಎತ್ತಿ ಹಿಡಿಯುವ ಇಲ್ಲವೆ ಉದಾರ ಮನಸ್ಸಿನ ಧರ್ಮಬಾಂಧವರು ಗುಣುಗುಟ್ಟುವ ಯಾವ ಅಂಶಗಳೂ ಆದರಲ್ಲಿರಲಿಲ್ಲ. ತಮ್ಮ ವಿಚಾರಗಳನ್ನು ವ್ಯಕ್ತಮಾಡಲು ಮತ್ತು ಆ ವಿಚಾರಗಳಿಗೆ ಸೂಕ್ತವಾದ ಆಧಾರಗಳನ್ನು ನೀಡಲು ಪೂರ್ಣಸ್ವಾತಂತ್ರ್ಯ ಹೊಂದಿದ ಭಾಷಣಕಾರರು, ಭಿನ್ನಭಿನ್ನ ವಿಚಾರಗಳನ್ನು ವ್ಯಕ್ತಮಾಡಿದರು. ಪ್ರೊಫೆಸರ ಮ್ಯಾಲಿನೋವ್ಸ್ಕಿಯವರ-ದೇವರು ಮತ್ತು ಅಮರತ್ವ ಇವುಗಳಲ್ಲಿ ನಂಬುಗೆಯ ಅವಶ್ಯಕತೆಯ ಭಾವಪೂರಿತ ಮನವಿಯಿಂದ, ಪೂಜ್ಯ ಓಹಾರವರ ಧರ್ಮದ ತತ್ತ್ವಗಳನ್ನು ಒಪ್ಪಲೇಬೇಕೆನ್ನುವ ದಿಟ್ಟ ಪ್ರತಿಪಾದನೆ ಮತ್ತು ಧರ್ಮ-ವಿಜ್ಞಾನಗಳಲ್ಲಿ ಘರ್ಷಣೆ ತೋರಿದಾಗ, ಧರ್ಮದ ಮೇಲುಗೈ ಇರಲೇ ಬೇಕೆಂಬ ವಾದದವರೆಗೂ - ಅನೇಕ ವಾದಗಳು ವ್ಯಕ್ತವಾದವು. ವಿವರಗಳಲ್ಲಿ ವ್ಯತ್ಯಾಸ ಕಂಡುಬಂದರೂ, ಆ ವಿಚಾರ ಮಾಲಿಕೆಯಿಂದ ಮೂಡಿಬಂದ ಭಾವನೆ: ಧರ್ಮ ಮತ್ತು ವಿಜ್ಞಾನಗಳಲ್ಲಿಯ ಘರ್ಷಣೆ ಕೊನೆಗೊಂಡಂತೆ:ಎಂಬುದಾಗಿತ್ತು."[೨೮]

ಈ ಮೇಲಿನ ಎರಡು ಅವತರಣಿಕೆಗಳನ್ನು ನೋಡಿದರೆ, ಧರ್ಮ ಮತ್ತು ವಿಜ್ಞಾನಗಳಲ್ಲಿ ಘರ್ಷಣೆ ಇದ್ದುದು ಕಂಡು ಬರುವುದು. ಆದರೆ ಆಳವಾಗಿ ವಿಚಾರಮಾಡಿ, ನಿಜವಾಗಿಯೂ ಅವುಗಳಲ್ಲಿ ಘರ್ಷಣೆ ಇದೆಯೇ? ಎಂದು ನಮ್ಮನ್ನು ನಾವೇ ಪ್ರಶ್ನಿಸಿದಾಗ, ನಮ್ಮ ಪೂರ್ವಾಭಿಪ್ರಾಯವನ್ನು ಬದಲಿಸಬೇಕಾಗುವುದು. ಏಕೆಂದರೆ, ಈ ಮೊದಲು ಉಲ್ಲೇಖಿಸಿದ ಲೇಖನದಲ್ಲಿ ಸ್ವತಃ ವ್ಹಾಯಿಟ್ ಹೆಡ್‌ರೇ ಇದೇ ಪ್ರಶ್ನೆಯನ್ನೆತ್ತಿ, ಧರ್ಮ ಮತ್ತು ವಿಜ್ಞಾನಗಳ ಸಂಬಂಧ ಚರ್ಚಿಸುತ್ತ ಈ ರೀತಿ ಅಭಿಪ್ರಾಯ ತಾಳುತ್ತಾರೆ : "ಘರ್ಷಣೆಯಿರುವುದೆಂಬ ನಿರ್ಣಯಕ್ಕೆ ಬರಲು ಎರಡೂ ಪಕ್ಷಗಳಲ್ಲಿಯ ವಿವಾದಾತ್ಮಕ ವ್ಯಕ್ತಿಗಳ ಒತ್ತಾಯವೇ ಕಾರಣ. ಎಲ್ಲ ವಿವಾದಾತ್ಮಕ ವ್ಯಕ್ತಿಗಳು ಹೀಗೆಯೇ ಇರುತ್ತಾರೆಂತಲ್ಲ. ಯಾರು ಖಂಡಿತವಾದಿಗಳೋ ಮತ್ತು ಪ್ರತಿಯೊಂದು ವಿವಾದ ಹುಟ್ಟಿಕೊಳ್ಳಲು ಪ್ರೋತ್ಸಾಹಿಸುವರೋ - ಅಂಥವರು"[೨೯]

ಧರ್ಮ ಮತ್ತು ವಿಜ್ಞಾನ ಇವುಗಳ ಸಂಬಂಧ ಕುರಿತು ಪ್ರೊಫೆಸರ್ ಜ್ಯೂಲಿಯನ್ ಹಕ್ಸಲೆಯವರು ತಮ್ಮ 'Religion as an objective problem' ಎಂಬ ಪ್ರಬಂಧದಲ್ಲಿ ಈ ರೀತಿ ಹೇಳುತ್ತಾರೆ : "ನನ್ನ ಎಲ್ಲ ವಿಚಾರಗಳ ಸಾರಾಂಶವೇನೆಂದರೆ, ಧರ್ಮ ಮತ್ತು ವಿಜ್ಞಾನಗಳಲ್ಲಿಯ ಘರ್ಷಣೆ ತೋರಿಕೆಯದು. ಧರ್ಮ ಮತ್ತು ವಿಜ್ಞಾನಗಳಲ್ಲಿ ಘರ್ಷಣೆಯಿರದೆ ಅವು ಹೊಂದಿದ ದೃಷ್ಟಿಗಳಲ್ಲಿ ಘರ್ಷಣೆಯಿದೆ. ಈ ದೃಷ್ಟಿಗಳು ಮಾನವನ ಬಾಹ್ಯ ಪರಿಸರಗಳಿಗೆ ಸಂಬಂಧಿಸಿದವುಗಳಾಗಿವೆ. ಈಗ ಕುಸಿದು ಬೀಳುವ ಭೀತಿಯೊಳಗಿರುವ ಧಾರ್ಮಿಕ ಸಿದ್ಧಾಂತಗಳು ಅವನ ಬಾಹ್ಯ ಪರಿಸರಕ್ಕೆ ಸಂಬಂಧಿಸಿದವುಗಳು ಮತ್ತು ಅವು ಮಾನವನ ಅಸಹಾಯಕತೆ, ಅಜ್ಞಾನದ ಮೇಲೆ ಕಟ್ಟಲ್ಪಟ್ಟವುಗಳು. ಈಗ ಅಂಥ ಧಾರ್ಮಿಕ ಸಿದ್ಧಾಂತಗಳ ಕುರಿತೇ ವಿಜ್ಞಾನವು ಸಾಕಷ್ಟು ಜ್ಞಾನ ಸಂಪಾದಿಸಿಕೊಟ್ಟು, ಆ ಕ್ಷೇತ್ರಗಳ ಮೇಲೆ ಮಾನವ ತನ್ನ ಪ್ರಭುತ್ವ ಸಾಧಿಸಲು ಆಸ್ಪದ ಮಾಡಿಕೊಟ್ಟಿದೆ."[೩೦]

ಡಾ. ವ್ಹಾಯಿಟ್ ಹೆಡ್ ಮತ್ತು ಪ್ರೊ. ಜ್ಯೂಲಿಯನ್ ಹಕ್ಸಲೆ ಇವರ ಪೂರ್ವದಲ್ಲಿಯೇ ಅಂದರೆ ೧೮೯೩ರಲ್ಲಿ ಸ್ವಾಮಿ ವಿವೇಕಾನಂದರು ಚಿಕ್ಯಾಗೋ ಪಟ್ಟಣದಲ್ಲಿ ಸೇರಿದ್ದ ಜಾಗತಿಕ ಧರ್ಮ ಸಭೆಯಲ್ಲಿ ಹೀಗೆ ಘೋಷಿಸಿದ್ದರು : "ವಿಕಾಸ, ಸೃಷ್ಟಿಯಲ್ಲ. ಇದು ವಿಜ್ಞಾನದ ನುಡಿ. ಒಬ್ಬ ಹಿಂದುವಿಗೆ ಈ ನುಡಿ ಸಂತೋಷವನ್ನೇ ಕೊಡುತ್ತದೆ. ಕಾರಣವಿಷ್ಟೇ:

---

೨೮. B. Russell, (1970) Religion and Science: Pg. 173-74

೨೯. "Science and the Modern World" Pg. 180.

೩೦. Julian Huxley (1971) "Man in the Modern World" P.g. 137-38.

ಯುಗಯುಗಗಳಿಂದಲೂ ಅವನ ಹೃದಯವನ್ನಾವರಿಸಿದ ತತ್ತ್ವವನ್ನೇ ವಿಜ್ಞಾನವು ತಾನು ಕಂಡುಕೊಂಡ ಇತ್ತೀಚಿನ ಸಿದ್ಧಾಂತಗಳ ಬೆಳಕಿನಲ್ಲಿ ಬಹು ಪ್ರಬುದ್ಧವಾದ ಭಾಷೆಯಲ್ಲಿ ಬೋಧಿಸುತ್ತದೆ".[೩೧]

ಈ ಮೇಲಿನ ವಿವೇಚನೆಯಿಂದ ಸ್ಪಷ್ಟವಾಗಿ ಕಂಡುಬರುವದೇನಂದರೆ : ವಸ್ತುತಃ ಧರ್ಮ ಮತ್ತು ವಿಜ್ಞಾನಗಳಲ್ಲಿ ಘರ್ಷಣೆಯಿರುವುದಿಲ್ಲ. ಬದಲಾಗಿ ಅವುಗಳ ಬೋಧನೆಯಲ್ಲಿ ಸಾಮ್ಯವಿರುವುದು ಕಂಡು ಬರುತ್ತದೆ. ಈ ಮಾತನ್ನು ಇಪ್ಪತ್ತನೆಯ ಶತಮಾನದ ವೈಜ್ಞಾನಿಕ ಸಂಶೋಧನೆಗಳು ಇನ್ನಷ್ಟು ಪುಷ್ಟೀಕರಿಸುತ್ತವೆ. ೧೯ನೆಯ ಶತಮಾನದ ವಿಜ್ಞಾನ ವಸ್ತುನಿಷ್ಠವಾದರೆ (Factual); ೨೦ನೆಯ ಶತಮಾನದ ವಿಜ್ಞಾನ ಆಕಾರಾತ್ಮಕವಾಗಿದೆ (Formal). ನಿರೀಕ್ಷಣೆಯ ಸಹಾಯದಿಂದ ಸಾಗುತ್ತಿದ್ದ ವೈಜ್ಞಾನಿಕ ಶೋಧನೆ, ನಿರೀಕ್ಷಣೆಗೆ ಅತೀತವಾದ ತತ್ತ್ವಕ್ಕೆ ತಂದು ಮುಟ್ಟಿಸಿದೆ. ಇತ್ತೀಚಿನ ವೈಜ್ಞಾನಿಕ ಸಿದ್ಧಾಂತದ ಪ್ರಕಾರ, ಈ ಗೋಚರ ಸೃಷ್ಟಿಯ ಹಿಂದಿರುವ ವಸ್ತು ಒಂದು ಶಕ್ತಿ (Energy) ಎಂದು ಕಂಡುಬಂದಿದೆ.[೩೨] ಇದೊಂದು ಶುಭಚಿಹ್ನ ಸ್ವಾಮಿ ವಿವೇಕಾನಂದರು ವ್ಯಕ್ತಮಾಡಿದ ವಿಚಾರಗಳನ್ನು ಸಮಕಾಲೀನ ವಿಜ್ಞಾನವು ಅಧಿಕೃತವಾಗಿ ದೃಢೀಕರಿಸಿಲ್ಲವಾದರೂ, ಅವರ ವಿಚಾರಗಳಿಗೆ ಆಶಾದಾಯಕ ಬೆಂಬಲ ಕಾಣಬರುತ್ತಿದೆ. ಈಗ ವಿಜ್ಞಾನವು ಕಂಡುಕೊಂಡ ಶಕ್ತಿಯೇ, ಪ್ರವಾದಿಗಳು ಮತ್ತು ದ್ರಷ್ಟಾರರು ಕಂಡುಕೊಂಡ 'ಪರವಸ್ತು' 'ದೇವರು' 'ಶಿವ' ಅಥವಾ 'ಸ್ಥಲ' ಎಂದು ಗುರುತಿಸಿದರೆ ಅದು ಅಕಾಲಿಕ ಮತ್ತು ಅವಸರದ ನಿರ್ಧಾರವಾದೀತು. ಸಧ್ಯ ಇಷ್ಟನ್ನು ಮಾತ್ರ ಗಮನಿಸಬಹುದು. ಹತ್ತೊಂಬತ್ತನೆಯ ಶತಮಾನದ ಕೊನೆಗೆ ಮತ್ತು ಇಪ್ಪತ್ತನೆಯ ಶತಮಾನದ ಪ್ರಾರಂಭಕ್ಕೆ ಧರ್ಮ ಮತ್ತು ವಿಜ್ಞಾನಗಳಲ್ಲಿದ್ದ ಘರ್ಷಣೆಯ ಚಿತ್ರ ಮಸಕಾಗಿದೆ. ಅಷ್ಟೇ ಏಕೆ ಆಗ ಬೆನ್ನಿಗೆ ಬೆನ್ನು ಹಚ್ಚಿ ನಡೆಯುತ್ತಿದ್ದ ಧರ್ಮ ಮತ್ತು ವಿಜ್ಞಾನಗಳು, ಈಗ ಕೈಕೈ ಹಿಡಿದು ಸಾಗುತ್ತಿರುವ ಹೊಸ ಚಿತ್ರ ಕಾಣಬರುತ್ತಿದೆ. ಈ ಸಂಬಂಧದಲ್ಲಿ ಡಾ. ಐನಸ್ಟೀನರು ಸಾಪೇಕ್ಷಸಿದ್ಧಾಂತ (Theory of Relativity)ದಲ್ಲಿ ನಿರೀಕ್ಷಕನಿಗೆ Observer ಕಲ್ಪಿಸಿಕೊಟ್ಟ ಸ್ಥಾನವೇ ಒಂದು ಜೀವಂತ ಉದಾಹರಣೆಯಾಗಿದೆ.[೩೩]

೧೯೭೪ರಲ್ಲಿ ನೋಬೆಲ್ ಬಹುಮಾನ ಪಡೆದ ಅಮೇರಿಕಾ ದೇಶದ ಭೌತ ವಿಜ್ಞಾನದ್ವಯರಾದ ಸ್ಯಾಮ್ಯುಯಲ್ ಟಿಂಗ್ ಮತ್ತು ಬರ್ಟನ್‌ರಿಚ್ಚರ್ ಇವರ ಹೊಸ ಸಿದ್ಧಾಂತ ಕುರಿತು, "ಇದು ಪ್ರಾಥಮಿಕ ಕಣಗಳ ಕ್ಷೇತ್ರದಲ್ಲಿ ಅಭೂತಪೂರ್ವ ಸಂಶೋಧನೆ" ಎಂದು ಸ್ವೀಡಿಶ್ ಪ್ರೊಫೆಸರ್ ಗೋಯಸ್ಟಾ ಎಕ್ಸಪಾಂಗ್ ಅವರು ಹೇಳಿದ್ದಾರೆ. ಅವರು ಇನ್ನೂ ಮುಂದುವರಿದು ಹೇಳುವುದೇನಂದರೆ "ಈ ಸಂಶೋಧನೆಯು ಪ್ರಕೃತಿಯ ಎಲ್ಲ ಸಿದ್ಧಾಂತಗಳನ್ನು ಒಂದುಗೂಡಿಸುವ ಒಂದು ಹೊಸ ಸಿದ್ಧಾಂತಕ್ಕೆ ಹಾದಿಮಾಡುವುದು"[೩೪] ಎಂದು "ಇದಂ ಸರ್ವಂ ಯದಯಂ ಆತ್ಮಾ"[೩೫] ಅಂದರೆ ಈ "ಗೋಚರ

---

೩೧. "Swami Vivekananda's synthesis of Science and Religion" By Swami Ranganathananda, pg. 38.

೩೨. ಕೆ.ಎಸ್. ರಾಮಕೃಷ್ಣಮೂರ್ತಿ (೧೯೯೧) ಜ್ಞಾನಕೋಶ ೫೯೮.

೩೩. ೧. (i) ಜಿ.ಟಿ. ನಾರಾಯಣರಾವ್ (೧೯೯೧) ಪ್ಲಾಂಕ್ ಐನ್ ಸ್ಟೈನ್ ಬೋರ್ ಪು. ೧೪೭.
(ii) Dr. Radhakrishnan (13th Reprint 1987) Religion and Culture. Pg. 8.

೩೪. ಪಿ. ಉಪೇಂದ್ರ ಅವರ ಒಂದು ಲೇಖನ:
"ಭೌತಶಾಸ್ತ್ರದಲ್ಲಿ ನೊಬೆಲ್ ಬಹುಮಾನ ವಿಜೇತರು"
ಕನ್ನಡ ಪ್ರಭೆ: ೨೩ ನವೆಂಬರ್ ೧೯೭೬.

೩೫. ಬೃಹದಾರಣ್ಯಕೋಪನಿಷತ್ - ೧೧-೪-೬.

ಸೃಷ್ಟಿ ಈ ಆತ್ಮವೇ ಆಗಿದೆ."[೩೬] ಇದು ಬೃಹದಾರಣ್ಯಕ ಉಪನಿಷತ್ತಿನ ದ್ರಷ್ಟಾರರು ಈ ಪ್ರಕೃತಿಯನ್ನು ಕುರಿತು ಕಟ್ಟಿದ ಒಂದು ಸಿದ್ಧಾಂತ. ಪ್ರೊ. ಗೋಯಸ್ವಾ ಎಕ್ಸಪಾಂಗ್ ಅವರ ಅಭಿಪ್ರಾಯದ ಪ್ರಕಾರ ಸ್ಯಾಮ್ಯುಯಲ್ ಟಿಂಗ್ ಮತ್ತು ಬರ್ಟನ್ ರಿಚ್ಚರ್ ಇವರ ಹೊಸಸಿದ್ಧಾಂತ ಈ ಮೇಲೆ ಹೇಳಿದ ಬೃಹದಾರಣ್ಯಕ ಉಪನಿಷತ್ತಿನ ದ್ರಷ್ಟಾರರು ಕಂಡುಕೊಂಡ ಸಿದ್ಧಾಂತದ ಮೇಲೆ ಬೆಳಕು ಚೆಲ್ಲಲು ಸಹಾಯಕವಾಗುವುದರಲ್ಲಿ ಸಂಶಯವಿಲ್ಲ. ಇಂದಿಲ್ಲ ನಾಳೆ ಮುಂದೆ ಎಂದಾದರೊಮ್ಮೆ - ವೈಜ್ಞಾನಿಕ ಸಿದ್ಧಾಂತ ಮತ್ತು ಈ ಹಿಂದಿನ ದ್ರಷ್ಟಾರರು ಕಂಡ ಸತ್ಯದ ಸಿದ್ಧಾಂತ ಒಂದೇ ಎಂಬ ಖಚಿತ ನಿರ್ಧಾರ ಹೊರಬೀಳುವ ಸಾಧ್ಯತೆ ಇಲ್ಲದಿಲ್ಲ.

ಹೀಗೆ ಎಲ್ಲ ಧರ್ಮಗಳು ಸಾಧನೆಯ ಮಾರ್ಗಗಳನ್ನು ಹೇಳುವಲ್ಲಿ ವಿಭಿನ್ನತೆಯನ್ನು ಅನುಸರಿಸುವುದು ಸಹಜ. ಆದರೆ ಅವೆಲ್ಲ ಒಂದೇ ಸತ್ಯನಿರ್ದೇಶಿಸುವುದನ್ನು ಸರ್ವಧರ್ಮಗಳ ವಿಶ್ಲೇಷಣಾ ಸಂದರ್ಭವು ಸ್ಪಷ್ಟಪಡಿಸುತ್ತದೆ. ಧರ್ಮಗಳು ಇಂಥ ವಿಶಾಲ ಅರ್ಥವನ್ನು ಒಳಗೊಂಡುದುದರಿಂದ ಅವುಗಳನ್ನು ಭಾರತೀಯರು 'ದರ್ಶನ' ಎಂದು ಕರೆದು 'ಧರ್ಮ-ದರ್ಶನ'ಗಳಲ್ಲಿ ಅಭೇದ ಕಲ್ಪಿಸಿದುದಕ್ಕೆ ಇದೇ ಹಿನ್ನೆಲೆ ಇದ್ದಿರಬಹುದು.[೩೬] ಈ ಸತ್ಯಾಂಶವೇ ಎಲ್ಲ ಧರ್ಮದರ್ಶನಗಳನ್ನು ಒಂದುಗೂಡಿಸುತ್ತದೆ. ಈ ಸಮನ್ವಯ ಘಟ್ಟದಲ್ಲಿ ಏಕವು ಅನೇಕವಾಗಿ ಕೊನೆಗೆ ಅನೇಕವು ಏಕತೆಯಲ್ಲಿ ಪರ್ಯವಸಾನವಾಗುವದನ್ನು ಸರ್ವ ಧರ್ಮದದರ್ಶನಗಳ ತಿರುಳಿನಲ್ಲಿ ಕಾಣುತ್ತೇವೆ. ಮಹಾಮಾನವರಾಗಿದ್ದ ಧರ್ಮದೃಷ್ಟಾರರು ಮಾನವನ ಅಂತಿಮ ಗುರಿ ಕುರಿತು ಚಿಂತಿಸಿದರು. ಅವನ ಆತ್ಮತೃಪ್ತಿಗಾಗಿ ತಮ್ಮ ಅನುಭವಗಳನ್ನೇ ಸರಳಗೊಳಿಸಿ, ಸಾಧನೆಯ ಹಲವಾರ ಮಾರ್ಗಗಳನ್ನು ಶೋಧಿಸಿದರು. ಅವರು ತೋರಿದ ಮಾರ್ಗಗಳಿಗೆ, ಮಾನವ ಕಲ್ಯಾಣದ ಆತ್ಯಂತಿಕ ಹಾಗೂ ಅವನ ಸನಾತನ ಅಭೀಷ್ಟಗಳೇ ಅಡಿಗಲ್ಲಾದವು. ಅವು ಕಾಲ್ಪನಿಕವಾಗಿರದೆ ಸತ್ಯಾನ್ವೇಷಣೆಯನ್ನೇ ಗುರಿಯಾಗಿಟ್ಟುಕೊಂಡ ವಿಜ್ಞಾನದೊಂದಿಗೆ, ಚರ್ಚಿಸುವಷ್ಟು ಸಮರ್ಥವಾದವು.

ಒಂದು ವೇಳೆ ವಿಜ್ಞಾನದ ಪ್ರಯೋಗಗಳು ಧರ್ಮದ ಮುಂದೆ ಅತ್ಯಂತ ಕಠೋರ ಸತ್ಯಗಳನ್ನು ಮಂಡಿಸಿದರೂ, ವೀರಶೈವ ವಿಚಲಿತಗೊಳ್ಳದಷ್ಟು ಬಲಿಷ್ಠವಾಗಿದೆಯೆಂದು ಈ ಸಂದರ್ಭದಲ್ಲಿ ಹೇಳಬಹುದು. ಏಕೆಂದರೆ ಶರಣರು ಷಟ್‌ಸ್ಥಲಕ್ಕೆ ಅಷ್ಟು ಗಟ್ಟಿಯಾದ ತಳಹದಿಯನ್ನೇ ನಿರ್ಮಿಸಿದುದನ್ನು ಮನಗಾಣಬಹುದು. ವಿಜ್ಞಾನ ನಿಂತಲ್ಲಿಂದ ಧರ್ಮ ಆರಂಭವಾಗುತ್ತದೆ ಎಂಬ ಅನುಭಾವಿಗಳ ಮಾತು, ಷಟ್‌ಸ್ಥಲದರ್ಶನಕ್ಕೆ ಹೆಚ್ಚು ಅನ್ವಯವಾಗುವಂತಹದು.

ಷಟ್‌ಸ್ಥಲದರ್ಶನದಲ್ಲಿ ಇತರ ದರ್ಶನಗಳಿಗಿಂತಲೂ ಹೆಚ್ಚಿನ ವಿಶೇಷವನ್ನು ನಾವು ಕಾಣುತ್ತೇವೆ. ಸಕಲ ಮಾನವರಿಗೂ ಒಂದೇ ಜನ್ಮದಲ್ಲಿ ಭೇದವನ್ನು ತೊಲಗಿಸಿ, ಅಭೇದಾನಂದವನ್ನನುಭವಿಸುವ ಸದವಕಾಶ, ದೃಷ್ಟಿವೈಶಾಲ್ಯಗಳನ್ನು ಈ ದರ್ಶನವು ದೊರಕಿಸುತ್ತಲಿದೆ. ಮಾನವನು ಪ್ರಕೃತಿ ಸಂಬಂಧದಿಂದ ಕ್ಷೀಣಶಕ್ತಿಕನೂ ಅಲ್ಪಪ್ರಕಾಶನೂ ಆಗಿದ್ದರೂ, ವಾಸ್ತವವಾಗಿ ಬ್ರಹ್ಮಾಂಶನಾದುದರಿಂದ ಬ್ರಹ್ಮದ ನಿರಂತರೋಪಾಸನದಿಂದ ತನ್ನಲ್ಲಿ ಕ್ಷೀಣವಾಗಿರುವ ಶಕ್ತಿಪ್ರಕಾಶಗಳನ್ನೂ ಪಡೆದು ಅವನು ನಿತ್ಯಸುಂದರನೂ ನಿತ್ಯಸುಖಿಯೂ ಆಗಲಿಕ್ಕೆ ಸಾಧ್ಯವಿರುವದರಿಂದ ಈ ದರ್ಶನವು ಸರ್ವರಿಗೂ ಆದರಣೀಯವೂ, ಅಭಿನಂದನಾರ್ಹವೂ ಆಗಿದೆ. ಮಾನವನಿಗೆ ಬಂದಿರುವ ದುಃಖವಾದರೋ ಪ್ರಕೃತಿಯ ಸಂಸರ್ಗದಿಂದಲೇ. ಆದರೆ ಅದು ಸ್ಥಲೋಪಾಸನದಿಂದ ಪರಿಹಾರವಾಗುವುದು. ಮಾನವನು ಪರಶಿವಬ್ರಹ್ಮಭಾವದಿಂದ ಸುಖಶಾಂತಿಗಳನ್ನು ಅನುಭವಿಸುತ್ತಲೇ, ನಿರ್ಲಿಪ್ತತೆಯಿಂದ ಪ್ರಪಂಚವ್ಯವಹಾರಗಳನ್ನು

---

೩೬. 'ನಮ್ಮಲ್ಲಿ ತತ್ತ್ವಶಾಸ್ತ್ರ ಮತ್ತು ಧರ್ಮ (Philosophy and Religion) ಬೇರೆಬೇರೆಯಲ್ಲ. ಒಂದರಿಂದ ಇನ್ನೊಂದು ಬೆಳೆಯಬೇಕು, ಪೂರ್ಣಗೊಳ್ಳಬೇಕು, ಧರ್ಮವೇ ಜೀವಂತ ಶಕ್ತಿ, ಅದಕ್ಕೊಂದು ತಳಹದಿಯಾಗಿ, ಬೆನ್ನೆಲುಬಾಗಿ, ತತ್ತ್ವಶಾಸ್ತ್ರ ಬೆಳೆದುಬಂದಿತು.' ಡಾ. ಎಚ್. ತಿಪ್ಪೇರುದ್ರಸ್ವಾಮಿ (೧೯೮೧) ಶರಣರ ಅನುಭಾವ ಸಾಹಿತ್ಯ, ಪು. ೨೬.

ನಡೆಸಬಹುದು. ಈ ಬಗೆಯ ವಿವೇಕವನ್ನು ಈ ದರ್ಶನವು ಮಾನವನಿಗೆ ಕೊಡುತ್ತದೆ. ಇದು ನಮ್ಮ ಮನದಲ್ಲಿ ದೃಢವಾಗಿ ನೆಲೆಸಿದರೆ, ಮಾನ ದೊರೆತೀತು? ಮಾನವನು ದೃಢನಿಶ್ಚಯನಾಗಿ ಪರಮಾತ್ಮನಿಗೆ ಶರಣಾಗತನಾದರೆ ಒಂದೇ ಜನ್ಮದಲ್ಲಿ ಜೀವಭಾವವನ್ನು ತೊರೆದು ಶಿವಭಾವದಲ್ಲಿ ನಿಂತು ನಿರ್ಮಮನೂ ನಿರಹಂಕಾರನೂ ಆಗಿ ಪ್ರಪಂಚದಲ್ಲಿ ನಿರ್ಲಿಪ್ತತೆಯಿಂದ ಬಾಳುವ ಚಾತುರ್ಯವನ್ನು ಷಟ್‌ಸ್ಥಲದರ್ಶನದಿಂದ ಕಲಿಯಬಹುದು. ಇದಕ್ಕಿಂತ ಬೇರೆ ಯಾವ ಪ್ರಯೋಜನವನ್ನು ಮಾನವನು ಈ ವೈಜ್ಞಾನಿಕಯುಗದಲ್ಲಿ ನಿರೀಕ್ಷಿಸಬಹುದು? ಆತ್ಮಶೋಧನೆಯ ಗೋಜಿಗೇ ಹೋಗದಿರುವ ವಿಜ್ಞಾನದಿಂದ, ಮಾನವನ ಆಶೋತ್ತರಗಳು ಈಡೇರದಿರುವಾಗ, ಷಟ್‌ಸ್ಥಲವು ಅವನನ್ನು ಅಪರಿಮಿತ ಶಕ್ತಿಗನನ್ನಾಗಿಯೂ, ಮಹಾಪ್ರಕಾಶನನ್ನಾಗಿಯೂ ಮಾಡಲು ಸಿದ್ಧವಾಗಿರುವುದು. ಮಾನವ ಸಾಮಾನ್ಯನೂ, ಅಪರಿಪೂರ್ಣನೂ, ಪರಾಧೀನನೂ ಸಂಕುಚಿತ ಸ್ವಭಾವದವನೂ ಆಗಿರುವನಾದರೂ, ಇದರ ಪರಿಹಾರಕ್ಕೆ ವಿಜ್ಞಾನವು ಯಾವ ಬಗೆಯ ಸಮಾಧಾನವನ್ನು ನೀಡಲು ಅಸಮರ್ಥವೆನಿಸಿರುವುದು ಸರ್ವವಿದಿತವಾಗಿದೆ. ಶಿವಾದ್ವೈತಸಿದ್ಧಾಂತವು, ಷಟ್‌ಸ್ಥಲದ ಆಚರಣೆಯಿಂದ ಮಾನವನಿಗೆ ಪರಿಪೂರ್ಣತೆ ಮತ್ತು ಸ್ವಾತಂತ್ರ್ಯಗಳನ್ನು ದೊರಕಿಸಬಲ್ಲದಾದುದರಿಂದ ಈ ವೈಜ್ಞಾನಿಕಯುಗದಲ್ಲಿ ಮಾನವಸಮಾಜಕ್ಕೆ ಇದರ ಉಪಯುಕ್ತತೆಯನ್ನು ಎಷ್ಟು ಹೇಳಿದರೂ ಸಾಲದು.

**ಮಾಯಿದೇವ ಉಪದೇಶಿಸಿದ ಸಾಧನತ್ರಯ:**

ಮಾಯಿದೇವನು ಜ್ಞಾನಸಂಪಾದನೆಗಾಗಿ ಮೂರು ಮಾರ್ಗಗಳನ್ನು ಉಪದೇಶಿಸಿದ್ದಾನೆ. ಅವು ಹೀಗಿವೆ:

೧. ವಿಹಂಗಮಾರ್ಗ
೨. ಮರ್ಕಟಮಾರ್ಗ
೩. ಪಿಪೀಲಿಕಾ ಮಾರ್ಗ

ಇವು ಕ್ರಮವಾಗಿ ಸಾಧನೆಯ ಶೀಘ್ರಗತಿ, ಮಧ್ಯಗತಿ ಹಾಗು ಮಂದಗತಿಗಳನ್ನು ಸೂಚಿಸುತ್ತವೆ. ಭೃಂಗಿ ಮೊದಲಾದ ದೇವಲೋಕ ಗಣಂಗಳು ವಿಹಂಗಮಾರ್ಗವಾದ ಉತ್ಕಟಶ್ರದ್ಧೆಯಿಂದ , ವೀರಶೈವ ಅನುಭಾವಿಗಳು ಮರ್ಕಟ ಮಾರ್ಗವಾದ ಷಟ್‌ಸ್ಥಲಾನುಸಂಧಾನದಿಂದ ಹಾಗೂ ಇನ್ನುಳಿದ ಶರಣ ಸಂಕುಲವು ಪಿಪೀಲಿಕಾ ಮಾರ್ಗವಾದ 'ನೂರೊಂದು ಸ್ಥಲಾಚರಣೆ'ಯಿಂದ ಪರಾತ್ಪರ ಜ್ಞಾನವನ್ನು ಸಾಕ್ಷಾತ್ಕರಿಸಿ ಕೊಂಡರೆಂದು ಮಾಯಿದೇವನು ಕೆಳಗಿನಂತೆ ಪದ್ಮಕೋತ್ತರ ಶತಸ್ಥಲದಲ್ಲಿ ಸ್ಪಷ್ಟಪಡಿಸುತ್ತಾನೆ.

ಆದೊಡವಧರಿಸುವುದು ನೀವು ಕೇಳಿದ ಜ್ಞಾನ
ಭೇದ ಮೂರಾಗಿಹುದು ಒಂದು ವೃಕ್ಷಾಗ್ರಹದೊಳ
ಗಾದ ಪಣ್ಣಿನ ರಸವ ಪಿಡಿವೆನೆಂದನುಗ್ಗೆಯ್ಯು ವಿಹಗ ಮರ್ಕಟ ಪಿಪೀಲಿಕಾ।
ವೇದ್ಯವೆ ಶೀಘ್ರಗತಿ ಮಧ್ಯಗತಿ ಮಂದಗತಿ
ಯಾದವವರಂದದಿಂ ವಸ್ತುವನ್ನರಸುತಿಹ
ಸಾಧಕರಿಗೆ ತಾನೊಂದು ದೊರಕೊಂಬುದೆಂದವನ ಮತಿಗೆ ತಕ್ಕನು ಗತಿಯೊಳು ॥

೩೭. ಪದ್ಮಕೋತ್ತರ ಶತಸ್ಥಲ ವೃತ್ತ, ೫-೭.

ಏಕನಿಷ್ಠಾಚಾರ ಮಾರ್ಗದೊಳು ನಿಜವೆರಸಿ
ಸ್ವೀಕರಿಸೆ ಶೀಘ್ರಗತಿ ವಿಹಗವೆಂದೆನಿಸುವಾ
ಲೋಕನೆಂಗೈಯ್ದಮಲ ವೀರಶೈವಾಚಾರ ಷಟ್‌ಸ್ಥಲಂಗಳ ಪಥದೊಳು ।
ನೂಕಿ ನಡೆಯಲು ಮಧ್ಯಗತಿ ಮರ್ಕಟಾಂಗವದು
ಲೋಕದೊಳು ನೂರೊಂದು ಸ್ಥಲವನ್ನೆದಲು ಮಂದ
ಜೋಕೆಗತಿ ಪಿಪಿಲಿಕನ ತೆರದೋಳ್ಳೆದುವುದಾಗಿ ಜ್ಞಾನ ತ್ರಿಗತಿಯೆನಿಸಿತು ॥[೩೭]

ಮೇಲಿನ ಪದ್ಯಗಳಿಂದ ವೀರಶೈವರಿಗೆ ತ್ರಿವಿಧ ಸಾಧನೆಗಳಿದ್ದುದಾಗಿ ಕಂಡುಬರುತ್ತವೆ. ಇವುಗಳಲ್ಲಿ ಶಿವಾನುಭವಸೂತ್ರದಲ್ಲಿ ಸೂತ್ರೀಕೃತವಾದ ಪ್ರವೃತಿ-ನಿವೃತಿಪರಷಟ್‌ಸ್ಥಲಗಳು ಕ್ರಮವಾಗಿ ಸಾಧನೆಯ ಶೀಘ್ರ, ಮಧ್ಯಗತಿಗಳನ್ನು ಸೂಚಿಸಿದರೆ, ಪದ್ಮಕೋತ್ತರ ಶತಸ್ಥಲವು ಸಾಧನೆಯ ಮಂದಗತಿಯನ್ನು ಸೂಚಿಸುತ್ತದೆ. ಇದರಿಂದ ಶಿವಾನುಭವ ಸೂತ್ರಪ್ರತಿಪಾದಿತವಾದ ಷಟ್‌ಸ್ಥಲವು ಪದ್ಮಕೋತ್ತರಕ್ಕಿಂತ ಉತ್ಕೃಷ್ಟಸಾಧನಮಾರ್ಗ ಎಂದು ವೇದ್ಯವಾಗುತ್ತದೆ.

ಶಿವಾನುಭವಸೂತ್ರದಲ್ಲಿ ಪ್ರತಿಪಾದಿಸಲಾದ ಷಟ್‌ಸ್ಥಲವು ವೀರಶೈವ ಪರಿಷ್ಕೃತ ಸಾಧನ ಮಾರ್ಗವಾಗಿರುವಂತೆ ಮಾಯಿದೇವನ ಪದ್ಮಕೋತ್ತರಶತಸ್ಥಲವೂ ಪರಿಷ್ಕೃತ ಮಂದಗತಿ ಸಾಧನಮಾರ್ಗವಾಗಿದೆ. ಸಿದ್ಧಾಂತ ಶಿಖಾಮಣಿಯನ್ನು ಆಮೂಲಾಗ್ರಪರಿಶೀಲಿಸಿದರೆ, ಈ ವಿಷಯ ಮನದಟ್ಟಾಗುತ್ತದೆ. ಹೇಗೆಂದರೆ, ಶಿವಾನುಭವಸೂತ್ರ ಹಾಗೂ ಪದ್ಮಕೋತ್ತರ ಶತಸ್ಥಲ- ಇವೆರಡೂ ವಚನ ಸಾಹಿತ್ಯವನ್ನು ಅನುಸರಿಸಿರುವುದು ಸ್ಪಷ್ಟವಾಗಿ ಗೋಚರವಾಗುತ್ತದೆ.[೩೮] ಆದರೆ ಸಿದ್ಧಾಂತ ಶಿಖಾಮಣಿಗೆ ಈ ಮಾತು ಅನ್ವಯಿಸಲಿಕ್ಕಿಲ್ಲ. ಏಕೆಂದರೆ ಈ ಎರಡನ್ನು ತೌಲನಿಕವಾಗಿ ವಿಮರ್ಶಿಸಿದ ವಿದ್ವಾಂಸರು, ಸಿದ್ಧಾಂತ ಶಿಖಾಮಣಿಯು, ಪದ್ಮಕೋತ್ತರ ಶತಸ್ಥಲದಲ್ಲಿಲ್ಲದ ಕೆಲವು ವಿಷಯಗಳನ್ನು ಪ್ರಸ್ತಾಪಿಸುತ್ತದೆ ಎಂದಿದ್ದಾರೆ. ಈ ಕಾರಣದಿಂದ ಕೆಲವು ಅಂಶಗಳಲ್ಲಿ ಸಿದ್ಧಾಂತ ಶಿಖಾಮಣಿಯು, ಮಾಯಿದೇವನ ಪದ್ಮಕೋತ್ತರಶತಸ್ಥಲಕ್ಕೆ ಹೊರತಾಗಿರುವುದು ಗಮನಾರ್ಹ.[೩೯] ಪದ್ಮಕೋತ್ತರ ಶತಸ್ಥಲವನ್ನು ಸಮೂಲಾಗ್ರವಾಗಿ ಪರಿಶೀಲಿಸಿದರೆ ಸಂಪೂರ್ಣವಾಗಿ ಶರಣರ ವಚನಗಳ ಪ್ರಭಾವ ಅಲ್ಲಿಯ ಎಲ್ಲ ಪದ್ಯಗಳ ಮೇಲೆ ಆದುದನ್ನು ಸಹಜವಾಗಿ ಗುರುತಿಸಬಹುದು. ಆದುದರಿಂದ ಶಿವಾನುಭವಸೂತ್ರದಂತೆ ಇದೂ ಕೂಡ ಮಾಯಿದೇವನ ಉತ್ಕೃಷ್ಟಕೃತಿ. ಅಲ್ಲದೆ ಇದು ಶಿವಾನುಭವಸೂತ್ರದ ಮೂರನೆಯ ಅನುಬಂಧವೆಂದು ಹೇಳಬಹುದು.

ಈ ಎಲ್ಲ ಕಾರಣಗಳಿಂದ ಶಿವಾನುಭವಸೂತ್ರವು, ಸಮಗ್ರ, ಹಾಗೂ ಶಾಸ್ತ್ರೀಯವಾಗಿ ಸಾಧನೆಯ ಮಧ್ಯಮಗತಿ ಪಥವನ್ನು ಪ್ರತಿಪಾದಿಸುವ ವೀರಶೈವದರ್ಶನಗ್ರಂಥವಾಗಿದೆ. ಶಿವಾನುಭವಸೂತ್ರದ ಒಟ್ಟು ಪರಿಶೀಲನೆಯಿಂದ ನಿವೃತ್ತಿ ಷಟ್‌ಸ್ಥಲವು ಹೆಚ್ಚಿನ ಅರ್ಥವ್ಯಾಪ್ತಿಯನ್ನು ಹೊಂದಿದಂತೆ ಕಂಡುಬರುತ್ತದೆ. ಆದರ ಲಕ್ಷಣಗಳಲ್ಲಿ ಧಾರ್ಮಿಕ, ನೈತಿಕ

---

೩೮. ಡಾ. ಆರ್.ಸಿ. ಹಿರೇಮಠ (೧೯೭೧) ಚೆನ್ನಬಸವಣ್ಣನವರ ವಚನಗಳು. ಈ ಬಗೆಗೆ ಮುಂದಿನ ವಚನಗಳನ್ನು ಗಮನಿಸಬಹುದು.

ವಚನಗಳ ಸಂಖ್ಯೆ: ೧೬೮, ೧೬೯, ೧೪೭, ೧೪೯, ೨೮೪, ೨೮೫, ೨೮೬, ೩೦೧, ೩೦೨, ೩೪೩, ೪೭೯, ೪೯೮, ೬೧೫, ೬೧೮, ೬೭೬, ೬೮೧, ೭೦೯, ೭೮೧, ೮೦೫, ೮೪೦, ೯೧೧, ೯೨೪, ೯೨೫, ೯೨೬, ೧೦೨೫, ೧೦೬೧, ೧೦೬೮, ೧೧೨೧, ೧೧೫೬, ೧೨೨೫, ೧೨೪೩, ೧೨೫೧, ೧೩೦೯, ೧೩೧೦, ೧೩೧೧, ೧೩೧೪, ೧೩೪೩, ೧೩೬೧, ೧೩೬೭, ೧೩೬೮, ೧೩೭೫, ೧೩೭೬, ೧೩೭೭, ೧೪೦೧, ೧೪೦೨, ೧೪೧೨, ೧೪೧೩, ೧೪೧೪, ೧೪೧೭, ೧೪೨೪, ೧೪೪೦ ಇತ್ಯಾದಿ.

೩೯. ಡಾ. ಎಮ್.ಜಿ. ನಂಜುಂಡಾರಾಧ್ಯ (೧೯೯೨) ಮಗ್ಗೆ ಮಾಯಿದೇವ ವಿಭುಕಂಡ ವೀರಶೈವದರ್ಶನ ಪು. ೩೦-೩೨.(ii) ಶ್ರೀ ಚೆನ್ನಮಲ್ಲಿಕಾರ್ಜುನರ (೧೯೯೨) ಮೊಗ್ಗೆಯ ಮಾಯಿದೇವ ಪ್ರಭುವಾಣಿ, ಪು. ೧೮-೫೨.

ಸಾಮಾಜಿಕ, ಮಾನಸಿಕ ಮೌಲ್ಯಗಳು ಅಡಕವಾಗಿವೆ. ಅಂತೆಯೆ ವಿದ್ವಾಂಸರು ಷಟ್‌ಸ್ಥಲವನ್ನು ವಿಭಿನ್ನದೃಷ್ಟಿಕೋನಗಳಿಂದ ವಿಮರ್ಶಿಸಿದ್ದಾರೆ. ಮನೋವಿಜ್ಞಾನದ ಹಿನ್ನೆಲೆಯಲ್ಲಿ ಕೆಲವರು ಇವುಗಳನ್ನು ವಿವೇಚಿಸಿದರೆ,[೪೦] ಮತ್ತೆ ಕೆಲವರು ಸಮಾಜವಿಜ್ಞಾನದ ಹಿನ್ನೆಲೆಯಲ್ಲಿ ಪ್ರತಿಪಾದಿಸಿದ್ದಾರೆ.[೪೧] ಹಲವರು ಷಟ್‌ಸ್ಥಲದ ಈ ಅನುಭಾವ ಮಾರ್ಗವನ್ನು ಉಳಿದ ಅನುಭಾವ ಮಾರ್ಗಗಳೊಂದಿಗೆ ತೌಲನಿಕವಾಗಿ ವಿವೇಚಿಸಿದರೆ,[೪೨] ಮತ್ತೆ ಕೆಲವರು ಪಾಶ್ಚಾತ್ಯದರ್ಶನಗಳೊಂದಿಗೆ ಹೋಲಿಸಿದ್ದಾರೆ.[೪೩]

ಈ ಕಾರಣದಿಂದ ಶಿವಾನುಭವಸೂತ್ರವು, ಇದರ ಹೆಸರೇ ಸೂಚಿಸುವಂತೆ ಹಲವಾರು ಅನುಭವಗಳ ಆಕರವಾಗಿದೆ. ವೀರಶೈವಕ್ಕೆ ವ್ಯಷ್ಟಿಗತ ಸಾಧನೆಯಿಂದ ಹಿಡಿದು ಸಮಷ್ಟಿಗತ ಸಾಧನೆಯವರೆಗೆ ಮಾರ್ಗದರ್ಶನಮಾಡಬಲ್ಲ ಈ ಕೃತಿ, ಹಲವಾರು ಮೌಲ್ಯವನ್ನೊಳಗೊಂಡ ಅನುಭವಾತ್ಮಕ ಹಾಗೂ ಸೈದ್ಧಾಂತಿಕ ಶಾಸ್ತ್ರಗ್ರಂಥವಾಗಿದೆ.

❑

---

೪೦. ೧. (i) ಡಾ. ಆರ್.ಸಿ. ಹಿರೇಮಠ (೧೯೭೭) ಷಟ್‌ಸ್ಥಲಪ್ರಭೆ. ಪು. ೧೨೭-೧೩೦
(ii) ಡಾ. ಎ.ಎಲ್.. ಶಿವರುದ್ರಪ್ಪ (ಸಂ) (೧೯೮೭) ಶರಣತತ್ತ್ವ ಚಿಂತನ. ಪ್ರೊ. ಸ.ಸ. ಮಾಳವಾಡ (ಅಧ್ಯಕ್ಷಭಾಷಣ) ಪು. ೨೫-೪೫.
(ii) ಡಾ. ಎಚ್. ತಿಪ್ಪೇರುದ್ರ (೧೯೮೨) ಸ್ವಾಮಿವಚನಗಳಲ್ಲಿ ವೀರಶೈವಧರ್ಮ, ಪು. ೧೮೧.

೪೧. ೨. (i) ಡಾ. ಬಸವರಾಜ ಕಲ್ಗುಡಿ (೧೯೮೮) ಮಧ್ಯಕಾಲೀನ ಭಕ್ತಿ ಮತ್ತು ಅನುಭಾವ ಸಾಹಿತ್ಯ ಹಾಗೂ ಚಾರಿತ್ರಿಕ ಪ್ರಜ್ಞೆ, ಪು. ೭೩
(ii) ಹಿರೇಮಲ್ಲೂರ ಈಶ್ವರನ್ (೧೯೮೭) ಬಸವಣ್ಣ ಹಾಗೂ ಲಿಂಗಾಯತ ಧರ್ಮ ಪು. ೧೪೧-೮೨; ೨೩೦-೩೨. (iii) ಡಾ. ಎಂ.ಎಂ. ಕಲಬುರಗಿ (ಸಂ) (೧೯೯೦) ಚನ್ನಬಸವಣ್ಣನವರ ಷಟ್ಸ್ಥಲ ವಚನ ಮಹಾಸಂಪುಟ (ಪ್ರಸ್ತಾವನೆ) ಪು.ix-xiv.

೪೨. ೩. (i) ಪಂ. ಶ್ರೀ ಷಣ್ಮುಖಯ್ಯ ಅಕ್ಕೂರಮಠ. (೧೯೮೨) ಸೂಫಿ ಮತ್ತು ಶರಣರ ಅನುಭಾವ ಪಥ. ಪು. ೭-೧೫(ii) ಕೋ. ಚನ್ನಬಸಪ್ಪ (೧೯೮೪) ಅರ್ಚನ. ಪು. ೬೦೧.

೪೩. ೪. ಡಾ. ಡಿ.ಎಲ್. ಪಾಟೀಲ (೧೯೮೪) ವೀರಶೈವ ಮತ್ತು ಹೆಗಲ್ ದರ್ಶನಗಳು 'ಅರ್ಚನ', ಪು. ೯೩೭. ಈ ಲೇಖಕರು ಶಿವಾನುಭವ ಸೂತ್ರವನ್ನೇ ಹೆಚ್ಚು ಅವಲಂಬಿಸಿದ್ದಾರೆ.

ಅಧ್ಯಾಯ : ಏಳು

# ಸಮಾರೋಪ

ಈವರೆಗೆ ವೀರಶೈವತತ್ವದ ಆತ್ಮವೆಂದು ಪರಿಗಣಿಸಲಾದ ಸೂತ್ರ ರೂಪದಲ್ಲಿ ನಿರೂಪಿತವಾದ ಷಟ್‌ಸ್ಥಲ ಸಿದ್ಧಾಂತವನ್ನು ಮಾಯಿದೇವನ ಶಿವಾನುಭವಸೂತ್ರ ಕೃತಿಯ ಹಿನ್ನೆಲೆಯಲ್ಲಿ ವಿವೇಚಿಸಲಾಯಿತು. ಆತನ ಸಮಕಾಲೀನ ರಾಜಕೀಯ, ಧಾರ್ಮಿಕ ಹಾಗೂ ಸಾಹಿತ್ಯಕ ಸಿಂಹಾವಲೋಕನದೊಂದಿಗೆ ಆತನ ಸಮಗ್ರ ಚರಿತ್ರೆಯನ್ನು ವಿವರಿಸಲಾಯಿತು. ಅಲ್ಲದೆ ಮಾಯಿದೇವನ ಇನ್ನುಳಿದ ಕೃತಿಗಳನ್ನು ಪ್ರಾಸಂಗಿಕವಾಗಿ ಚರ್ಚಿಸಲಾಯಿತು.

ಮೂರನೆಯ ಅಧ್ಯಾಯದಲ್ಲಿ ಸ್ಥಲತತ್ವಕುರಿತು ಸುದೀರ್ಘವಾಗಿ ವಿವೇಚಿಸಲಾಯಿತು. ಮಾಯಿದೇವಸೂಚಿಸಿದ ಪ್ರಾಚೀನಕೃತಿಗಳ ಹಿನ್ನೆಲೆಯಲ್ಲಿಯೇ ಸ್ಥಲತತ್ವದ ಸಮಗ್ರಸ್ವರೂಪವನ್ನು ಗಮನಿಸಲಾಯಿತು.

ಶಿವಾನುಭವಸೂತ್ರದಲ್ಲಿ ಪ್ರತಿಪಾದಿತವಾದ ಷಟ್‌ಸ್ಥಲವೂ ಒಂದು ದರ್ಶನವಾದುದರಿಂದ ಉಳಿದ ಭಾರತೀಯ ದರ್ಶನಗಳ ಹಿನ್ನೆಲೆಯಲ್ಲಿ ಅದನ್ನು ತೌಲನಿಕವಾಗಿ ಅಧ್ಯಯನ ಗೈಯ್ಯಲಾಯಿತು.

ಅಸೀಮದ ಬಗೆಗೆ ನಡೆದ ಜಿಜ್ಞಾಸೆಯೆಲ್ಲವೂ ಸ್ಥಲತತ್ವ ಕುರಿತಾದ ವಿವೇಚನೆಯ ಜನನಿಯಾಗಿದೆ. ಭಾರತೀಯ ದಾರ್ಶನಿಕ ಪರಂಪರೆಯಲ್ಲಿ ಸ್ಥಲತತ್ವಕ್ಕೆ ಸಂಬಂಧಿಸಿದ ಚಿಂತನಧಾರೆಯು ವೈದಿಕಕಾಲದಿಂದ ವಿಕಾಸಗೊಳ್ಳುತ್ತ ಬಂದಿತು. ಬಹುದೇವತಾವಾದದೊಂದಿಗೆ ಏಕೇಶ್ವರವಾದ ಹಾಗೂ ಅದ್ವೈತವಾದದ ಮಾನ್ಯತೆಗಳು ವೈದಿಕ ಕಾಲದಲ್ಲಿ ಪರಿಲಕ್ಷಿತವಾಗುತ್ತವೆ. ವೈದಿಕ ಮಾನ್ಯತೆಗಳ ವಿರುದ್ಧವಾಗಿ ನಾಸ್ತಿಕದರ್ಶನಗಳು ಪ್ರಾದುರ್ಭಾವಗೊಂಡವು.

ಅವುಗಳಲ್ಲಿ ಪ್ರಮುಖವಾದವುಗಳೆಂದರೆ ಚಾರ್ವಾಕ, ಬೌದ್ಧ ಹಾಗೂ ಜೈನದರ್ಶನಗಳು. ಚಾರ್ವಾಕರು ಭೌತವಾದಿಗಳು. ಇವರು ಎಲ್ಲ ಆಧ್ಯಾತ್ಮಿಕ ತತ್ವಗಳನ್ನು ಹಾಗೂ ತತ್ಸಂಬಂಧಿ ಪ್ರಶ್ನೆಗಳನ್ನು ಸಮೂಲಾಗ್ರವಾಗಿ ಉಚ್ಛೇದಿಸಿದರು. ಅನಾತ್ಮವಾದಿ ಹಾಗೂ ಅನೀಶ್ವರವಾದಿಯಾದ ಬೌದ್ಧದರ್ಶನವು ಅಂತಿಮ ಸತ್ಯವಾದ ನಿರ್ವಾಣವನ್ನು ಸ್ವೀಕರಿಸುದುದರಿಂದ ಆಧ್ಯಾತ್ಮಿಕತೆಗೆ ಪ್ರಾಮುಖ್ಯತೆ ನೀಡಿತು. ಅಲ್ಲದೆ ನೈತಿಕತೆಯ ಮಹತ್ವವನ್ನು ಎತ್ತಿ ಹಿಡಿಯಿತು. ಜೈನದರ್ಶನವು ಮೋಕ್ಷವನ್ನು ಪ್ರಸ್ತಾಪಿಸುವದರೊಂದಿಗೆ ಅನೇಕ ಜೀವಿಗಳ ಅಸ್ತಿತ್ವವನ್ನು ಸ್ವೀಕರಿಸಿತು. ಮೇಲಿನ ಈ ಮೂರೂ ದರ್ಶನಗಳಲ್ಲಿ ಈಶ್ವರ ಅಸ್ತಿತ್ವವನ್ನು ನಿರಾಕರಿಸಲಾಯಿತು. ನಾಸ್ತಿಕ ಸಂಪ್ರದಾಯಗಳ ವಿರುದ್ಧವಾಗಿ ಆಸ್ತಿಕದರ್ಶನಗಳು ಹುಟ್ಟಿಕೊಂಡವು. ಇವುಗಳನ್ನು ಷಡ್‌ದರ್ಶನಗಳೆಂದು ಕರೆಯಲಾಯಿತು. ನ್ಯಾಯವೈಶೇಷಿಕದಲ್ಲಿ ಈಶ್ವರಾಸ್ತಿತ್ವವನ್ನು ಸ್ವೀಕರಿಸಲಾಯಿತಾದರೂ, ಅಲ್ಲಿಯ ಈಶ್ವರನು ಕರ್ಮ, ಅದೃಷ್ಟ ಹಾಗೂ ಪರಮಾಣುಗಳ ಅಧೀನನಾದನು. ಇದರಿಂದಾಗಿ ಈಶ್ವರನು ಅಲ್ಲಿ ಸೀಮಿತನಾಗಿ ಕಂಡುಬರುತ್ತಾನೆ. ಇದು ಅಲ್ಲದೆ ಅನೇಕವಿಧವಾದ ತತ್ತ್ವ (ಕರ್ಮ, ಅದೃಷ್ಟ, ಪರಮಾಣು)ಗಳು ಸ್ವತಂತ್ರವಾಗಿರುವುದರಿಂದ, ನ್ಯಾಯವೈಶೇಷಿಕವು ಅನೇಕವಾದವನ್ನು ಅವಲಂಬಿಸಬೇಕಾಯಿತು. ಅನೇಕವಾದದ ತೊಂದರೆಗಳನ್ನು ಗಮನದಲ್ಲಿರಿಸಿಕೊಂಡ ಸಾಂಖ್ಯಯೋಗವು, ಪ್ರಕೃತಿ-ಪುರುಷ ಎಂಬ ದ್ವೈತವಾದವನ್ನು ಅಂಗೀಕರಿಸಿತು. ಆದರೆ ಈಶ್ವರಾಸ್ತಿತ್ವವನ್ನು ಸಬಲವಾದ ತರ್ಕದಿಂದ ಸಿದ್ಧಗೊಳಿಸುವಲ್ಲಿ

ವಿಫಲವಾದುದರಿಂದ ಸಾಂಖ್ಯವು, ಅನೀಶ್ವರವಾದಿ ದರ್ಶನವಾಯಿತು. ಯೋಗವು ಈಶ್ವರನನ್ನು ಅಂಗೀಕರಿಸಿದರೂ ಅವನನ್ನು "ಪುರುಷ ವಿಶೇಷ"ವೆಂದು ಸೀಮಿತಗೊಳಿಸಿತು. ಮೀಮಾಂಸದರ್ಶನವು ಈಶ್ವರ ಅಸ್ತಿತ್ವವನ್ನು ಪೂರ್ಣವಾಗಿ ನಿಷೇಧಿಸಿ ವೈದಿಕ ಕರ್ಮಕಾಂಡಕ್ಕೆ ವಿಶೇಷ ಮಹತ್ವವನ್ನಿತ್ತಿತು. ಅದ್ವೈತವೇದಾಂತವು ಕೇವಲ ಬ್ರಹ್ಮನ ಅಸ್ತಿತ್ವವನ್ನಷ್ಟೆ ಪ್ರತಿಪಾದಿಸಿತು. ಆದರೆ ಬ್ರಹ್ಮನು ಶುದ್ಧಚೈತನ್ಯ ಅಥವಾ ಜ್ಞಾನಸ್ವರೂಪನಾದುದರಿಂದ ಅವನಲ್ಲಿ ಕ್ರಿಯೆಯ ಅಭಾವ ಕಂಡುಬರುವದು. ವಿಶಿಷ್ಟಾದ್ವೈತವು ಬ್ರಹ್ಮ ಹಾಗೂ ಶಕ್ತಿಯ ಸಂಬಂಧವನ್ನು ಆಂತರಿಕವೆಂದು ಪರಿಗಣಿಸಿತು. ಅಲ್ಲಿ ಪ್ರತಿಪಾದಿಸಲಾದ ಶಕ್ತಿಯು ಬ್ರಹ್ಮನ ಶರೀರವೆಂದು ಬ್ರಹ್ಮನು ಆ ಶರೀರದಲ್ಲಿರುವ ಆತ್ಮ (ಶರೀರ) ಎಂದೂ ಭಾವಿಸಿದುದರಿಂದ, ವಿಶಿಷ್ಟಾದ್ವೈತವು ಬ್ರಹ್ಮ ಮತ್ತು ಶಕ್ತಿಗಳ ಸಂಬಂಧವನ್ನು' ಅಪೃಥಕ್ ಸಿದ್ಧಿ' ಎಂದು ಕರೆಯಿತು. ಆದರೂ ಅದು ಅವಿನಾಭಾವಸಂಬಂಧವನ್ನು ಸಂಪೂರ್ಣವಾಗಿ ಸೂಚಿಸುವುದಿಲ್ಲ, ಏಕೆಂದರೆ ಬ್ರಹ್ಮನು ಜಗತ್ತನ್ನು ಯಾವವಿಧದಲ್ಲೂ ಅವಲಂಬಿಸುವುದಿಲ್ಲ. ಅಲ್ಲದೆ ಅದು ಅವನೊಡನೆ ಅಥವಾ ಅವನು ಅದರೊಡನೆ ಪ್ರಳಯಕಾಲದಲ್ಲಿ ಬೆರೆಯುವದಿಲ್ಲ. ಮಾಧ್ವರು, ಶೈವಸಿದ್ಧಾಂತಿಗಳು ಶಕ್ತಿ ಮತ್ತು ಶಕ್ತ (ಬ್ರಹ್ಮ-ಶಿವ) ಎರಡಕ್ಕೂ ಮಾನ್ಯತೆನೀಡಿದರೂ ಅವುಗಳಿಗಿರುವ ಸಂಬಂಧವನ್ನು ಬಾಹ್ಯವೆಂದು ಪರಿಗಣಿಸಿದರು. ಹೀಗೆ 'ಸ್ಥಲ' ತತ್ವಕ್ಕೆ ಸಂಬಂಧಿಸಿದ ಮೇಲಿನ ಎಲ್ಲ ಮಾನ್ಯತೆಗಳಲ್ಲಿ ಒಂದಿಲ್ಲೊಂದು ದೃಷ್ಟಿಯಿಂದ ನ್ಯೂನ್ಯತೆ ಕಂಡುಬರುತ್ತದೆ.

ತತ್ವಗಳು ಸ್ವತಂತ್ರ ಹಾಗೂ ಅನೇಕ ಎಂದು ಪ್ರತಿಪಾದಿಸಿದಲ್ಲಿ ಈಶ್ವರನು ಇತರ ತತ್ವಗಳಂತೆ ಸೀಮಿತಗೊಳ್ಳುತ್ತಾನೆ. ಆಗ ಅವನ ಸರ್ವಶಕ್ತಿಮತ್ತೆ ಹಾಗೂ ಸರ್ವಜ್ಞತೆಗಳನ್ನು ಖಂಡಿಸಿದಂತಾಗುತ್ತದೆ. ಒಂದುವೇಳೆ ಈಶ್ವರನು ಸೃಷ್ಟಿಮೊದಲಾದವುಗಳಿಗೆ ಪರಮಾಣು ಅದೃಷ್ಟಾದಿಗಳನ್ನು ಅವಲಂಬಿಸುವುದಾದರೆ, ಅವನ ಈಶ್ವರತೆಗೆ ಅರ್ಥವೇ ಇಲ್ಲವಾಗುತ್ತದೆ. ಆದುದರಿಂದ ಎಷ್ಟೇ ತತ್ವಗಳನ್ನು ಸ್ವೀಕರಿಸಿದರೂ ಆ ತತ್ವಗಳೆಲ್ಲ ಈಶ್ವರಾಧೀನವೆಂದು ಒಪ್ಪಿಕೊಳ್ಳಬೇಕಾಗುವುದು. ವಿಶಿಷ್ಟಾದ್ವೈತವಾದದಲ್ಲಿ ಬರುವ ಚಿತ್ ಹಾಗೂ ಅಚಿತ್ ಇವು ಪರಸ್ಪರ ಭಿನ್ನ ಸ್ವಭಾವದವುಗಳು ಚಿತ್ ನಿಷ್ಕ್ರಿಯ ಆದ್ದರಿಂದ ಅದರ ಸಂಯೋಗ ಅಚಿತ್‌ಯೊಂದಿಗೆ ಸಂಭವಿಸದು. ಅಲ್ಲದೆ ಅಚಿತ್ ಅಚೇತನ, ಆದುದರಿಂದ ಚಿತ್ತಿನೊಂದಿಗೆಅದು ಸಮ್ಮಿಲ್ಲಿತವಾಗದು. ಹೀಗೆ ಈ ತತ್ವಗಳಲ್ಲಿ ವಾಸ್ತವವಾಗಿ ಸಂಬಂಧವೇ ಅಸಾಧ್ಯಾವಾಗಿರುವಾಗ ಅವುಗಳಿಂದ ಸೃಷ್ಟಿಪ್ರಕ್ರಿಯೆ ಅಸಂಭವ. ಈ ಮೌಲಿಕ ತ್ರುಟಿಯ ಪರಿಷ್ಕಾರಕ್ಕಾಗಿ ಈ ಎರಡೂ ತತ್ವಗಳನ್ನು ಸಂಚಾಲನಗೊಳಿಸುವ ಶಾಶ್ವತ ಹಾಗೂ ಸರ್ವಶಕ್ತಿಯುತವಾದ ಈಶ್ವರ ಪ್ರತ್ಯಯವನ್ನು ಒಪ್ಪಿಕೊಳ್ಳುವುದು ಅನಿವಾರ್ಯ. ಅದ್ವೈತವಾದೀ ಮಾನ್ಯತೆಯಲ್ಲಿ ಕೇವಲ ಅದ್ವೈತ ತತ್ವ (ಬ್ರಹ್ಮವನ್ನು) ಸ್ವೀಕರಿಸಿ ಎಲ್ಲ ಭಿನ್ನಾಭಿಪ್ರಾಯಗಳನ್ನು ಶುದ್ಧಚೈತನ್ಯವೆಂದು ಪರಿಲಕ್ಷಿಸಿದ ಕಾರಣ ಅದರಲ್ಲಿ ಕ್ರಿಯೆ(ಶಕ್ತಿ)ಯ ಅಭಾವವನ್ನು ಕಾಣುತ್ತೇವೆ. ಹೀಗೆ ವಿವಿಧ ಭಾರತೀಯ ತತ್ವಶಾಸ್ತ್ರಗಳನ್ನು ವಿಶ್ಲೇಷಣಾತ್ಮಕ ದೃಷ್ಟಿಯಿಂದ ಅವಲೋಕಿಸಿದಾಗ ಅವುಗಳಲ್ಲಿ ಕಂಡುಬರುವ ಈಶ್ವರ ಪರಿಕಲ್ಪನೆ ಒಂದಿಲ್ಲೊಂದು ಕೊರತೆಯನ್ನು ಹೊಂದಿರುವುದು ಕಂಡು ಬರುತ್ತದೆ. ಅಂದರೆ, ಅದು ಮಾನವನ ಧಾರ್ಮಿಕ ಅವಶ್ಯಕತೆಗಳನ್ನು ಹಾಗೂ ಆಧ್ಯಾತ್ಮಿಕ ಜಿಜ್ಞಾಸೆಯ ಪೂರ್ಣ ಹಸಿವನ್ನು ಹಿಂಗಿಸಲು ಅಸಮರ್ಥವಾಗಿದೆ.

ಮಾಯಿದೇವನು ಅನೂಚಾನವಾಗಿ ಬಂದಂತಹ ಯುಗಬಂಧನದಿಂದ ಮುಕ್ತನಾಗಿ ಈಶ್ವರ (ಸ್ಥಲ) ಪರಿಕಲ್ಪನೆಗಳ ಎಲ್ಲ ವಿಚಾರಸರಣಿಗಳನ್ನು ಪರೀಕ್ಷಿಸಿ, ಅವುಗಳಲ್ಲಿ ಏಕಸೂತ್ರದ ಆಧಾರದ ಮೇಲೆ ಒಂದು ಸಮನ್ವಯದ ಮತ್ತು ಮಾನವನ ಅನುಭವಕ್ಕೆ ನಿಲುಕುವ ಈಶ್ವರ ಪರಿಕಲ್ಪನೆಯನ್ನು ಸೂತ್ರೀಕರಿಸಿದ್ದಾನೆ.

ಶಿವಾನುಭವಸೂತ್ರ ಪ್ರತಿಪಾದಿತ ಷಟ್‌ಸ್ಥಲ ಸಿದ್ಧಾಂತದಲ್ಲಿ, ಈಶ್ವರ ಪರಿಕಲ್ಪನೆಯು ಮಾನವನ ಧಾರ್ಮಿಕ ಜಿಜ್ಞಾಸೆ ಹಾಗೂ ಅವನ ಆಧ್ಯಾತ್ಮಿಕ ಅವಶ್ಯಕತೆಗಳನ್ನು ತೃಪ್ತಿಪಡಿಸುವ ಸ್ವರೂಪವನ್ನು ಹೊಂದಿದೆ. ಷಟ್‌ಸ್ಥಲ ಸಿದ್ಧಾಂತದಲ್ಲಿ ಈಶ್ವರ ಪರಿಕಲ್ಪನೆ ಸಾಧಕನ ಆತ್ಮವಿಕಾಸದ ಹಂತ ಅಥವಾ ಸ್ಥಲವನ್ನು ಅವಲಂಬಿಸಿದೆ. ಮೊದಲಹಂತವಾದ ಭಕ್ತಸ್ಥಲದಲ್ಲಿ ಲಿಂಗ ಹಾಗೂ ಅಂಗಗಳ ಮಧ್ಯೆ ಭಿನ್ನತೆ ಅಥವಾ ದ್ವೈತಭಾವನೆ ಇದ್ದು, ಕೊನೆಯ ಹಂತವಾದ ಐಕ್ಯಸ್ಥಲದಲ್ಲಿ ಸಂಪೂರ್ಣ ಏಕತೆ ಅಥವಾ ಅದ್ವೈತ ಕಂಡುಬರುತ್ತದೆ. ಶಿವಾನುಭವಸೂತ್ರದಲ್ಲಿ ಇದನ್ನು ನಿವೃತ್ತಿಮಾರ್ಗವೆಂದು ಕರೆಯಲಾಗಿದೆ.

'ಸ್ಥಲ' ಎಂದರೆ ಶಕ್ತಿವಿಶಿಷ್ಟ ಶಿವತತ್ತ್ವ. ಇದು ತನ್ನ ಶಕ್ತಿಸ್ಫುರಣದಿಂದ ಲಿಂಗ, ಅಂಗವೆಂದು ಎರಡು ಪ್ರಕಾರವಾಯಿತು. ಲಿಂಗವೆಂದರೆ ಸಾಕ್ಷಾತ್ ಶಿವ, ಅಂಗವೆಂದರೆ ಶಿವದೀಕ್ಷೆಯಿಂದ ಶುದ್ಧವಾದ ಜೀವ. ಒಂದು ಉಪಾಸ್ಯ, ಇನ್ನೊಂದು ಉಪಾಸಕ. ಆ ಶಕ್ತಿಯು ತಾನೂ ಎರಡು ಪ್ರಕಾರವಾಗಿ ಒಂದು ಅಂಗನನ್ನು ಆಶ್ರಯಿಸಿ, ಲಿಂಗಗತಶಕ್ತಿ ಕಲೆಯೆಂದೂ, ಇನ್ನೊಂದು ಅಂಗನನ್ನು ಆಶ್ರಯಿಸಿ ಅಂಗಗತ ಶಕ್ತಿ ಭಕ್ತಿಯೆಂದು ಹೆಸರಾಯಿತು. ಒಟ್ಟಿಗೆ ಹೇಳುವಾಗ ಕಲೆ ಭಕ್ತಿಗಳಿಗೆ ಶಕ್ತಿ-ಭಕ್ತಿಗಳೆಂದು ಹೇಳಲಾಗಿದೆ. ಇವೆರಡು ನಿಜವಾಗಿ ಶಕ್ತಿಯ ಎರಡು ರೀತಿಗಳಾಗಿದ್ದು ಅವುಗಳಲ್ಲಿ ಅಭೇದವಿದ್ದರೂ ಭಕ್ತಿಯೇ ಶ್ರೇಷ್ಠವಾಗಿದೆ. ಶಕ್ತಿಯಿಂದ ಪ್ರಪಂಚದ ಉದಯ, ಭಕ್ತಿಯಿಂದ ಪ್ರಪಂಚದ ಲಯ. ಶಕ್ತಿ ಪ್ರವೃತ್ತಿಪರ, ಭಕ್ತಿ ನಿವೃತ್ತಿಪರ. ಶಕ್ತಿ ಸೃಷ್ಟಿಯ ಇಚ್ಛೆಯುಳ್ಳದು, ಭಕ್ತಿ ಶಿವನಲ್ಲಿ ಸಾಮರಸ್ಯದ ಇಚ್ಛೆಯುಳ್ಳದು. ಈ ಲಿಂಗಸ್ಥಲ ಅಂಗಸ್ಥಲಗಳು ಒಂದೊಂದು ಮೂರಾಗಿ, ಮತ್ತೆ ಆರಾಗಿ, ಒಟ್ಟು ಆರು ಲಿಂಗಸ್ಥಲಗಳು, ಆರು ಅಂಗಸ್ಥಲಗಳಾಗಿ ಪರಿಣಮಿಸುತ್ತವೆ. ಆರು ಲಿಂಗಸ್ಥಲಗಳಿಗೆ ಆರು ವಿಧದ ಶಕ್ತಿಗಳು, ಆರು ಅಂಗಸ್ಥಲಗಳಿಗೆ ಆರು ವಿಧದ ಭಕ್ತಿಗಳು ಹೊಂದಿಕೊಳ್ಳುತ್ತವೆ. ಲಿಂಗಸ್ಥಲ ಮೊದಲು ಭಾವಲಿಂಗ, ಪ್ರಾಣಲಿಂಗ, ಇಷ್ಟಲಿಂಗ ಎಂದಾಗಿ ಮುಂದೆ ಭಾವಲಿಂಗವು ಮಹಾಲಿಂಗ, ಪ್ರಸಾದಲಿಂಗವೆಂದೂ, ಪ್ರಾಣಲಿಂಗವು ಜಂಗಮಲಿಂಗ, ಶಿವಲಿಂಗವೆಂದೂ, ಇಷ್ಟಲಿಂಗವು ಗುರುಲಿಂಗ, ಆಚಾರಲಿಂಗವೆಂದೂ ಎರಡೆರಡು ತೆರಲಾಯಿತು. ಲಿಂಗವನ್ನಾಶ್ರಯಿಸಿದ ಕಲಾಶಕ್ತಿ ಮಹಾಲಿಂಗದಲ್ಲಿ ಚಿಚ್ಛಕ್ತಿ, ಪ್ರಸಾದಲಿಂಗದಲ್ಲಿ ಪರಾಶಕ್ತಿ, ಮುಂದಿನ ಲಿಂಗಗಳಲ್ಲಿ ಕ್ರಮವಾಗಿ ಆದಿಶಕ್ತಿ, ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾಶಕ್ತಿಯಾಗುತ್ತದೆ.

ಅಂಗಸ್ಥಲ ಮೊದಲು ಯೋಗಾಂಗ, ಭೋಗಾಂಗ, ತ್ಯಾಗಾಂಗ ಎಂದಾಗ ಮತ್ತೆ ಯೋಗಾಂಗದಲ್ಲಿ ಐಕ್ಯಸ್ಥಲ, ಶರಣಸ್ಥಲ, ಭೋಗಾಂಗದಲ್ಲಿ ಪ್ರಾಣಲಿಂಗಿಸ್ಥಲ, ಪ್ರಸಾದಿಸ್ಥಲ ಮತ್ತು ತ್ಯಾಗಾಂಗದಲ್ಲಿ ಮಾಹೇಶ್ವರಸ್ಥಲ, ಭಕ್ತಸ್ಥಲ ಎಂದಾಯಿತು. ಅಂಗವನ್ನಾಶ್ರಯಿಸಿದ ಭಕ್ತಿಯು ಐಕ್ಯಸ್ಥಲದಲ್ಲಿ ಸಮರಸಭಕ್ತಿ, ಶರಣಸ್ಥಲದಲ್ಲಿ ಆನಂದಭಕ್ತಿ, ಪ್ರಾಣಲಿಂಗಿಸ್ಥಲದಲ್ಲಿ ಅನುಭವಭಕ್ತಿ, ಮುಂದೆ ಕ್ರಮವಾಗಿ ಅವಧಾನ. ನಿಷ್ಠೆ, ಶ್ರದ್ಧೆಯಾಗುತ್ತದೆ.

ಹೀಗೆ ಪರಶಿವನೆ ಲಿಂಗಾಂಗ ಭೇದದಿಂದ ದ್ವಿವಿಧನಾಗಿ, ಸುವರ್ಣದಿಂದ ಕಡಗವು ಕೆಲವು ಕಾಲ ಭೇದವ್ಯವಹಾರದಿಂದಿದ್ದು, ಅನಂತರ ಸುವರ್ಣರೂಪವನ್ನು ಹೊಂದುವಂತೆ ಅಂಗನು ಉಪಾಸನೆಯ ಕಾಲದಲ್ಲಿ ಅಂಗ ಎಂದು ಕರಿಯಿಸಿಕೊಂಡು ಅನಂತರ ಲಿಂಗರೂಪವನ್ನು ಹೊಂದುವನು. ಅಂಗಗತಭಕ್ತಿಯು ನಿವೃತ್ತ್ಯುನ್ಮುಖಿಯಾಗಿ ಅಂಗನನ್ನು ಸಂಸಾರದ ವಿಷಮಸುಖದಿಂದ ನಿವೃತ್ತನನ್ನಾಗಿ ಮಾಡಿ ಪ್ರಸಾದ ಸುಖದಿಂದ ಲಿಂಗದಲ್ಲಿ ಬೆರೆಯುವಂತೆ ಮಾಡುತ್ತದೆ. ಅಂತಹ ಭಕ್ತಿಯ ಸಂಯೋಗವಿಶೇಷದಿಂದ ಅಂಗನು ಲಿಂಗವಾಗುತ್ತಾನೆ. ಆದುದರಿಂದ ಮಾಯಿದೇವನು ಭಕ್ತಿಯನ್ನು ಪಂಚಮ ಪುರುಷಾರ್ಥವೆಂದು ಸಂಬೋಧಿಸಿದ್ದಾನೆ.

ಸ್ಥಲಗಳಲ್ಲಿ ಐಕ್ಯಾದಿಯಾಗಿ ಭಕ್ತಾಂತವಾಗಿ ಹೇಳುವದು ಪ್ರವೃತ್ತಿಮಾರ್ಗವೆಂದೂ, ಭಕ್ತಾದಿಯಾಗಿ ಐಕ್ಯಾಂತವಾಗಿ ಹೇಳುವದು ನಿವೃತ್ತಿಮಾರ್ಗವೆಂದೂ ಕರಿಯಲಾಗಿದೆ. ಶಿವಾನುಭವಸೂತ್ರದಲ್ಲಿ ಈ ಉಭಯ ಮಾರ್ಗ ಕುರಿತು ಪ್ರತಿಪಾದಿಸಿದುದನ್ನು ಐದನೆ ಅಧ್ಯಾಯದಲ್ಲಿ ಸಾದ್ಯಂತವಾಗಿ ನಿರೂಪಿಸಲಾಯಿತು.

ಷಟ್‌ಸ್ಥಲ ದರ್ಶನವು ಜೀವ-ಜಗತ್ತುಗಳನ್ನು ಮಿಥ್ಯವೆಂದು ಹೇಳುವುದಿಲ್ಲ. ದೇಹವನ್ನಲ್ಲಗಳೆಯುವುದಿಲ್ಲ ವೃತ್ತಿಗಳನ್ನು ತುಚ್ಛಮಾಡುವುದಿಲ್ಲ. ಭೋಗವನ್ನು ದುಃಖಪ್ರದವೆಂದು ಜರಿಯುವದಿಲ್ಲ. ಈ ಜಗದಾದಿಗಳೇ ಜೀವನು ಶಿವನಾಗುವ ವಿಕಾಸಮಾರ್ಗಕ್ಕೆ ಮುಖ್ಯಸಾಧನಗಳೆಂದು ಹೇಳಲಾಗಿದೆ. ಜೀವ-ಜಗತ್ತುಗಳು ಈಶ್ವರನ ಅಂಶಗಳೇ. ಜೀವನಿಗೆ ದೇಹವು ದೇವಾಲಯ. ಅವನು ತನ್ನ ವಿಕಾಸರೂಪವಾದ ಈಶ್ವರನನ್ನು ದೇಹದಲ್ಲಿಟ್ಟು ಪೂಜಿಸುವನು. ಜೀವನ

ವೃತ್ತಿಗಳೆಲ್ಲವೂ ಈಶ್ವರಪೂಜೆಯೇ. ಜೀವನ ಭೋಗವೇ ಈಶ್ವರ ಪ್ರಸಾದವು. ಆ ಪ್ರಸಾದದಿಂದಲೇ ಜೀವನು ವಿಕಾಸಹೊಂದುವನು ಅರ್ಥಾತ್ ಈಶ್ವರನಾಗುವನು.

ಹೀಗೆ ಭಾರತೀಯ ಪ್ರಮುಖ ದರ್ಶನಗಳೊಂದಿಗೆ ಷಟ್‌ಸ್ಥಲ ದರ್ಶನವನ್ನು ತೌಲನಿಕವಾಗಿ ವಿವೇಚಿಸಲಾಯಿತು. ಚಾರ್ವಾಕರಿಂದ ಶೈವದರ್ಶನಗಳವರೆಗೆ ಮಾಯಿದೇವನ ಶಿವಾನುಭವಸೂತ್ರದ ಒಳಧ್ವನಿಯ ಹಿನ್ನೆಲೆಯಲ್ಲಿ ವಿಶ್ಲೇಷಿಸಲಾಗಿದೆ. ಮಾಯಿದೇವ ಬಾಹ್ಯ ದರ್ಶನಗಳಲ್ಲಿರುವ ತತ್ವವಿಚಾರಕ್ಕೆ ಸ್ಪಂದಿಸಿ ಕೆಲವು ಸ್ವತಂತ್ರ ನಿರ್ಣಯಗಳನ್ನು ಕೈಕೊಂಡಂತೆ, ಆಂತರಿಕವಾದ 'ಶಿವಾದ್ವೈತ'ದಲ್ಲೂ ಸ್ವತಂತ್ರವಾದ ಕೆಲವು ಅಭಿಪ್ರಾಯಗಳನ್ನು ಹೊಂದಿದ್ದಾನೆ. ಒಟ್ಟಾರೆ ಷಟ್‌ಸ್ಥಲ ಸಿದ್ಧಾಂತವು ವೇದ-ಆಗಮ-ಪುರಾಣಗಳಲ್ಲಿ ಅಂಕುರಿಸಿ, ಬಸವಾದಿ ಶರಣರ ವಚನವಾಙ್ಮಯದಲ್ಲಿ ಅದರ ಮಧುರ ಫಲವು ಫಲಿತವಾಯಿತು. ಅದನ್ನೇ ಮಾಯಿದೇವನು ಸ್ವಾನುಭಾವದಿಂದ ಸೂತ್ರರೂಪದಲ್ಲಿ ಪ್ರತಿಪಾದಿಸಿದ್ದಾನೆ. ಭಾರತೀಯ ಭಕ್ತಿಪರಂಪರೆಗೆ ಒಂದು ದಾರ್ಶನಿಕ ಸ್ವರೂಪವನ್ನು ಕೊಟ್ಟ ಪ್ರಥಮ ದಾರ್ಶನಿಕ ಮಗ್ಗೆಯ ಮಾಯಿದೇವ.

ಶ್ರೀಕರಭಾಷ್ಯವು ವೀರಶೈವದ ಮೋಕ್ಷ ವಿಷಯವೆಂದು ಪರಿಗಣಿಸಲಾದ, ಲಿಂಗಾಂಗ ಸಾಮರಸ್ಯ ಕುರಿತಾದ ತತ್ವವಿವೇಚನೆಯಲ್ಲಿ ಜೀವ-ಶಿವರಲ್ಲಿ ಕೊನೆಯವರೆಗೂ ಭೇದವನ್ನೇ ಉಳಿಸಿಕೊಂಡಿದೆ. ನೀಲಕಂಠ ಭಾಷ್ಯವು ಲಿಂಗಧಾರಣದ ಹಿರಿಮೆ ಕುರಿತು ಪ್ರಸ್ತಾಪಿಸುವುದಿಲ್ಲ. ಸಿದ್ಧಾಂತ ಶಿಖಾಮಣಿಯು ಷಟ್‌ಸ್ಥಲಕ್ಕೆ ಸಂಬಂಧಪಡುವ ಷಡ್ವಿಧ ಭಕ್ತಿಯನ್ನು ನಿರ್ದಿಷ್ಟವಾಗಿ ಹೇಳದೆ, ನವ ವಿಧಭಕ್ತಿಯನ್ನು ಪ್ರಸ್ತಾಪಿಸಿದೆ. ಹೀಗಾಗಿ ಈ ಎಲ್ಲ ತತ್ವನಿರೂಪಣೆಯ ಕೊರತೆಗಳನ್ನು ಶಿವಾನುಭವಸೂತ್ರ ಗ್ರಂಥವು ತುಂಬಿ ಕೊಟ್ಟುದುದರಿಂದ ಷಟ್‌ಸ್ಥಲ ಸಿದ್ಧಾಂತವನ್ನು ಸಂಸ್ಕೃತವಾಙ್ಮಯದಲ್ಲಿ ಸಶಾಸ್ತ್ರೀಯವಾಗಿ ಪ್ರತಿಪಾದಿಸುವ ಔಚಿತ್ಯಪೂರ್ಣ ತತ್ವಶಾಸ್ತ್ರ ಕೃತಿ ಇದಾಗಿದೆ. ಅಲ್ಲದೆ ವೀರಶೈವಕ್ಕೆ ಸಂಬಂಧಿಸಿದ ಇತಿಹಾಸ, ಅಧ್ಯಯನ, ವ್ಯವಸ್ಥೆ, ಸಂಹಿತೆ, ದರ್ಶನ, ಮಾರ್ಗದರ್ಶನ, ಅನುಭಾವ, ಅನುಷ್ಠಾನ ಇವೆಲ್ಲವುಗಳನ್ನು ಒಂದೆಡೆ ನೆರವೇರಿಸಿದ ಕೃತಿ ಶಿವಾನುಭವಸೂತ್ರ. ಶಿವಾನುಭವಸೂತ್ರ ಪ್ರತಿಪಾದಿಸುವ ಷಟ್‌ಸ್ಥಲ ಸಿದ್ಧಾಂತವು ಅಪ್ರಾಕೃತವಾಗಿರುವ ಕಾರಣ ಜಾತಿ-ಮತ-ಪಂಥ-ಪಂಗಡ-ವರ್ಣ-ಲಿಂಗ ಆಶ್ರಮ ಭೇದಗಳಿಗೆ ಅತೀತವಾಗಿದೆ.

ತತ್ವ ಪ್ರಧಾನವಾದ ಮಾಯಿದೇವನ ಶಿವಾನುಭವಸೂತ್ರದಲ್ಲಿ ಶಾಸ್ತ್ರ ಸೌರಭದೊಂದಿಗೆ ಕಾವ್ಯಸೌಂದರ್ಯವು ಅಡಕವಾಗಿದೆ. ಸಿದ್ಧಾಂತ ಪ್ರಮೇಯಗಳನ್ನು ಕಾವ್ಯಶೈಲಿಯ ಮೂಸೆಯಲ್ಲಿ ಕರಗಿಸಿ, ಎರಕಹೊಯ್ದು ನಿರ್ಮಿಸಿ, ತತ್ವಶಾಸ್ತ್ರದ ಸರಳ, ಸುಂದರ ಕಲಾಕೃತಿಗಳನ್ನು ವಿದ್ವಾಂಸರೆದುರಿಗೆ ಮಂಡಿಸಿದ ಹಿರಿಮೆ ಮಾಯಿ ದೇವನದಾಗಿದೆ.

ಸಕಲಜೀವಾತ್ಮರಿಗೆ ಲೇಸನೇ ಬಯಸುವ ಈ ಷಟ್‌ಸ್ಥಲ ದರ್ಶನವು, ಮಾನವಕುಲಕ್ಕೆ ಸಹಜವಾಗಿ ಶಾಂತಿಸಂದೇಶವನ್ನು ಬೀರುವ ಆದರ್ಶಪರಂಪರೆಯನ್ನೊಳಗೊಂಡಿದೆ. ಆಧ್ಯಾತ್ಮದಿಂದೊದಗುವ ಮನಶಾಂತಿ ವಿಜ್ಞಾನಕೊಡುವ ಭೌತಿಕಸಾಧನೆಗಳಿಂದ ಸಾಧ್ಯವಾಗದು. ಏಕೆಂದರೆ ಶಾಂತಿ ಎಂಬುದು ಬಾಹ್ಯವಸ್ತುಗಳಿಂದ ದೊರೆಯುವಂತಹುದಲ್ಲ. ಅದು ಆಂತರಿಕ ಆಧ್ಯಾತ್ಮ ಪ್ರಜ್ಞೆಯಿಂದಲೇ ಸಾಧ್ಯವಾಗುವಂತಹುದು. ಷಟ್‌ಸ್ಥಲ ದರ್ಶನವು ಇದನ್ನು ಮಾನವನಿಗೆ ಸಹಜವಾಗಿ ಒದಗಿಸಿಕೊಡುವುದು.

❑

# ಗ್ರಂಥಋಣ


**ಕನ್ನಡ ಆಕರಗಳು**

ಅನ್ನದಾನೀಶ್ವರ ಮಹಾಸ್ವಾಮಿಗಳು, **ಮಾನವಧರ್ಮ,** ಪ್ರ: ಶ್ರೀ ಜಗದ್ಗುರು ಅನ್ನದಾನೀಶ್ವರ ಸಂಸ್ಥಾನಮಠ, ಮುಂಡರಗಿ, ೧೯೭೯.

ಅಡಕೋಳಿ, ಮಹೇಶ(ಲೇ) ಶಂಕರಭಟ್ಟ(ಲೇ): **ತರ್ಕಸಂಗ್ರಹ,** ಅಮರ ಪ್ರಕಾಶನ, ಸಾಗರ, ೧೯೯೨.

ಅಕ್ಕೂರಮಠ ಷಣ್ಮುಖಯ್ಯ, **ಸೂಫಿ ಮತ್ತು ಶರಣರ ಅನುಭಾವ,** ಜ. ಮುರುಸಾವಿರ ಮಠ, ಹುಬ್ಬಳ್ಳಿ, ೧೯೮೨.

ಅಣ್ಣಾಜಪ್ಪ, ಎಂ., **ಅನಾದಿ ವೀರಶೈವ ಸಂಗ್ರಹ,** ಪ್ರ: ಅಣ್ಣಾಜಪ್ಪನವರು ರಘುವೀರ ಮುದ್ರಣಾಲಯ ಮೈಸೂರು, ೧೯೪೮.

ಆದಿದೇವಾನಂದ ಸ್ವಾಮಿ, **ಮಾಂಡೂಕ್ಯೋಪನಿಷತ್ ಮತ್ತು ಗೌಡಪಾದಕಾರಿಕಾ,** ಪ್ರ: ಶ್ರೀ ರಾಮಕೃಷ್ಣಾಶ್ರಮ ಮೈಸೂರು, ೧೯೫೮.

ಇಸ್ಲಾಹೀ ಸದ್ರುದೀನ್, (ಲೇ), **ಕುರ್ ಆನ್ ಸಮಗ್ರ ಪರಿಚಯ,** ಶಾಂತಿ ಪ್ರಕಾಶನ ಮಂಗಳೂರು, ೧೯೮೯.

ಉಮಾಪತಿ ಶಾಸ್ತ್ರಿಗಳು, **ವಿವೇಕ ಚಿಂತಾಮಣಿ,** ಪ್ರ: ಶ್ರೀ ಮೂರುಸಾವಿರ ಮಠ ಹುಬ್ಬಳ್ಳಿ, ೧೯೭೯.

ಎದುರ್ಕಳ ಕೆ. ಶಂಕರನಾರಾಯಣ ಭಟ್, **ಹಿಂದೂ ಧರ್ಮದ ಪರಿಚಯ,** ಪ್ರ: ಶ್ರೀ ರಾಮಕೃಷ್ಣ ಪ್ರಕಾಶನ ಭಾಗಮಂಡಲ ಕೊಡಗು, ೧೯೮೨.

ಎರೇಸೀಮೆ ಚನ್ನಪ್ಪ, ಮಹಾದೇವಯ್ಯ ಟಿ.ಆರ್., **ಸಿದ್ಧಗಂಗಾಶ್ರೀ,** ಪ್ರ: ಶ್ರೀ ಸಿದ್ಧಗಂಗಾಕ್ಷೇತ್ರ, ತುಮಕೂರು, ೧೯೮೧.

ಎಲಿ ವೀರಪ್ಪಾ, ಮುರಿಗೆಪ್ಪಾ, **ಲಿಂಗ ಸಕೀಲಗಳು,** ಪ್ರ: ಮುರುಘಾಮಠ, ಧಾರವಾಡ, ೧೯೭೩.

ಕಲಬುರ್ಗಿ ಎಂ. ಎಂ. (ಲೇ), ಮಾರ್ಗ ೧-೨,
ಪ್ರ: ನರೇಶ ಆ್ಯಂಡ್ ಕಂಪನಿ ಹನುಮಂತನಗರ ಬೆಂಗಳೂರು, ೧೯೮೮.

ಕಲಬುರ್ಗಿ. ಮಲ್ಲಿಕಾರ್ಜುನಪ್ಪ (ಲೇ), ವೀರಶೈವ ಧರ್ಮ ಸಂಭವ,
ಶ್ರೀ ಚನ್ನಬಸವೇಶ್ವರ ಪ್ರೆಸ್ ದಾವಣಗೆರೆ, ೧೯೩೮.

ಕಲ್ಗುಡಿ. ಬಸವರಾಜ, ಮಧ್ಯಕಾಲೀನ ಭಕ್ತಿ ಮತ್ತು ಅನುಭಾವ ಸಾಹಿತ್ಯ ಹಾಗೂ ಚಾರಿತ್ರಿಕ ಪ್ರಜ್ಞೆ
ಪ್ರ: ಕನ್ನಡ ಸಾಹಿತ್ಯ ಪರಿಷತ್ತು, ಪಂಪಮಹಾಕವಿ ರಸ್ತೆ. ಚಾಮರಾಪೇಟೆ, ಬೆಂಗಳೂರು, ೧೯೮೮.

ಕನವಳ್ಳಿ ಸದಾನಂದ(ಸಂ), ವೀರಶೈವ ಸಾಹಿತ್ಯ ಸಮೀಕ್ಷೆ,
ಪ್ರ: ಮಹಾಕವಿಪಂಪ ಪ್ರಕಾಶನ ಲಕ್ಷ್ಮೇಶ್ವರ, ೧೯೭೬.

ಕನವಳ್ಳಿ. ಸದಾನಂದ, ಮರೆತು ಹೋಗಿರುವ ಸಾಮ್ರಾಜ್ಯ ವಿಜಯನಗರ,
ಪ್ರ: ಕನ್ನಡ ವಿಶ್ವವಿದ್ಯಾಲಯ ಹಂಪಿ, ೧೯೯೨.

ಕಲಬುರ್ಗಿ. ಎಂ. ಎಂ., ಬಸವಣ್ಣನವರ ವಚನ ಸಂಪುಟ ೧,
ಪ್ರ: ಕರ್ನಾಟಕ ಸರ್ಕಾರ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು, ೧೯೯೩.

ಕಲಬುರ್ಗಿ. ಎಂ.ಎಂ., ಶಿವಯೋಗ ಪ್ರದೀಪಿಕಾ,
ಪ್ರ: ಕನ್ನಡ ಅಧ್ಯಯನಪೀಠ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, ೧೯೭೬.

ಕಲಬುರ್ಗಿ. ಎಂ.ಎಂ., ಚನ್ನಬಸವಣ್ಣವರ ಷಟ್‌ಸ್ಥಲವಚನ,
ಪ್ರ: ವೀರಶೈವ ಅಧ್ಯಯನ ಸಂಸ್ಥೆ ಜ. ತೋಂಟದಾರ್ಯಮಠ ಗದಗ, ೧೯೯೦.

ಕಂಬಿ. ವ್ಹಿ. ಎಸ್., (ಲೇ), ವೀರಶೈವ ದರ್ಶನ ಮೀಮಾಂಸೆ
ಶ್ರೀ ಕುಮಾರೇಶ ಗ್ರಂಥಮಾಲೆ, ಧಾರವಾಡ, ೧೯೭೧.

ಕಂಬಿ. ವ್ಹಿ. ಎಸ್., ಆಗಮ ಪ್ರಣೀತ ಎರಡು ಶೈವಗಳ ತೌಲನಿಕ ಪರಿಚಯ,
ಪ್ರ: ಶ್ರೀ ಜಗದ್ಗುರ ಅನ್ನದಾನೀಶ್ವರ ಸಂಸ್ಥಾನಮಠ ಮುಂಡರಗಿ ಧಾರವಾಡ, ೧೯೯೪.

ಕಂಬಿ. ವ್ಹಿ. ಎಸ್., ವೀರಶೈವ ದರ್ಶನ ಸಮೀಕ್ಷೆ,
ಪ್ರ: ಶ್ರೀ ಕುಮಾರೇಶ್ವರ ಗ್ರಂಥಮಾಲೆ ಧಾರವಾಡ, ೧೯೭೧.

ಕಂಬಿ. ವ್ಹಿ.ಎಸ್., ನಿಗಮಾಗಮ ಮತ್ತು ವಚನಾಗಮಗಳ ಶ್ರೌತಾ ಶ್ರೌತ ದೃಷ್ಟಿ,
ಪ್ರ: ಶ್ರೀ ಜಗದ್ಗುರು ರೇಣುಕ ಪ್ರಕಾಶನ ತೆಗ್ಗಿನಮಠ ಹರಪನಹಳ್ಳಿ, ೧೯೯೨.

ಕಾಯ್ಕಿಣಿ ಗೌರೀಶ, ನಾಸ್ತಿಕರು ಮತ್ತು ದೇವರು,
ಪ್ರ: ಕಾಲಗತಿ ಪ್ರಕಾಶನ ರಾಯಬಾಗ, ಬೆಳಗಾಂವ, ೧೯೮೯.

ಗುರುಶಾಂತ ಶಾಸ್ತ್ರಿಗಳು, ಕನ್ನಡ ವೀರಶೈವಾನಂದ ಚಂದ್ರಿಕೆ,
ಪ್ರ: ಬೇಲಿಮಠ ಬೆಂಗಳೂರು, ೧೯೮೨.

ಗೋಕಾಕ್. ವಿ.ಕೃ., ವಿಶ್ವಮಾನವ ದೃಷ್ಟಿ,
ಪ್ರ: ಸುರುಚಿ ಪ್ರಕಾಶನ ಸರಸ್ವತೀಪುರಂ. ಮೈಸೂರು, ೧೯೭೧.

ಗೌರೀನಾಥ ಶಾಸ್ತ್ರಿಗಳು(ಲೇ), ಷಟ್‌ಸ್ಥಲ ಶಾಸ್ತ್ರ ಉಭಯಮಾರ್ಗ ಬೋಧಿನಿ,
ಶ್ರೀ ಗೌರೀನಾಥ ಗ್ರಂಥಮಾಲೆ ೧೯೫೨.

ಚಿದನಂತಮೂರ್ತಿ. ಎಂ., ಲಿಂಗಾಯತ ಅಧ್ಯಯನಗಳು,
ಪ್ರ: ವಾಗ್ದೇವಿ ಪುಸ್ತಕಗಳು ೬೬ ದೇವರಾಜ ಅರಸ ರಸ್ತೆ ಮೈಸೂರು, ೧೯೮೬.

ಚನ್ನಮಲ್ಲಿಕಾರ್ಜುನ, ಮುಗ್ಗೆಯ ಮಾಯಿದೇವ ಪ್ರಭುವಾಣಿ,
ಪ್ರ: ಮೃತುಂಜ್ಯಯಸ್ವಾಮಿಗಳ ಮುರಘಾಮಠ ಧಾರವಾಡ ೧೯೬೨.

ಚನ್ನಮಲ್ಲಿಕಾರ್ಜುನರು, ಸದ್ಧರ್ಮ ದೀಪಿಕೆ,
ಪ್ರ: ಮಾಸಪತ್ರಿಕೆ ಪ್ರಕಾಶ ಮೈಸೂರು ೧೯೫೯.

ಚನ್ನಬಸಪ್ಪ ಕೋ, ದಿವ್ಯಜೀವನ,
ಪ್ರ: ಅರವಿಂದ ರಾಜಾಜೀನಗರ ಬೆಂಗಳೂರ ೧೯೮೩.

ಚಟ್ಟೋಪಾಧ್ಯಾಯ ದೇವಿಪ್ರಸಾದ, ಭಾರತೀಯ ದರ್ಶನಗಳು,
(ಕನ್ನಡಕ್ಕೆ) ಕಕ್ಕಿಲ್ಲಾಯ. ಬಿ.ಬಿ.,
ಪ್ರ: ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್ ಬೆಂಗಳೂರು, ೧೯೯೪.

ಚನ್ನಬಸಪ್ಪ ಕೋ, ಅರ್ಚನ,
ಪ್ರ: ಸೂತ್ತೂರುಮಠ, ಮೈಸೂರು, ೧೯೮೪.

ಜಗದೀಶಚಂದ್ರ ಜೈನೇನ (ಅನು), ಸ್ಯಾದ್ವಾದಮಂಜರೀ,
ಶ್ರೀ ಪರಮಶ್ರುತ ಪ್ರಭಾವಕ ಮಂಡಲ, ಶ್ರೀಮದ್ ರಾಜಚಂದ್ರ ಆಶ್ರಮ, ಅಗಾಸ, ೧೯೭೯

ಜ.ಚ.ನಿ.(ಲೇ)., ಶಿವಾಗಮಗಳಲ್ಲಿ ವೀರಶೈವ ಧರ್ಮ ಸಿದ್ಧಾಂತ,
ಪ್ರ: ಶ್ರೀ ಜ.ಚ.ನಿ. ಬಸವನಗುಡಿ., ಬೆಂಗಳೂರು, ೧೯೮೭.

ಜ.ಚ.ನಿ., ಶಿವಾದ್ವೈತ ದರ್ಶನ,
ಪ್ರ: ವೀರಶೈವ ಪ್ರಗತಿ ಶೀಲ ಯುವಕ ಸಂಘ, ಗದಗ ಬೆಟಗೇರಿ, ೧೯೭೭.

ಜೋಶಿ, ಮಹಾದೇವ ನಾರಾಯಣರಾವ, ಋಗ್ವೇದ ಪರಿಚಯ,
ಪ್ರ: ಸೂರ್ಯ ಪಬ್ಲಿಕೇಶನ. ಜಮಖಂಡಿ, ೧೯೯೩

ಜೋಶಿ. ಶಂಭಾ, ಶಿವರಹಸ್ಯ
೧೯೪೨

ತಿಪ್ಪೇರುದ್ರಸ್ವಾಮಿ. ಎಚ್., ಶೂನ್ಯ ಸಂಪಾದನೆ,
ಪ್ರ: ಡಿ.ವಿ.ಕೆ. ಮೂರ್ತಿ ಕೃಷ್ಣಮೂರ್ತಿಪುರಂ ಮೈಸೂರು.

ತಿಪ್ಪೇರುದ್ರಸ್ವಾಮಿ. ಎಚ್., ಶೂನ್ಯ ಸಂಪಾದನೆ ಮತ್ತು ಆಧುನಿಕ ಮೌಲ್ಯಗಳು,
ಪ್ರ: ಚಿತ್ತರಗಿ ಶ್ರೀ ವಿಜಯ ಮಹಾಂತೇಶ್ವರ ಧರ್ಮಪ್ರಸಾರಕ ಮಂಡಲ ಇಲಕಲ್ಲ, ೧೯೮೫

ತಿಪ್ಪೇರುದ್ರಸ್ವಾಮಿ. ಎಚ್., ವಚನಗಳಲ್ಲಿ ವೀರಶೈವ ಧರ್ಮ,
ಪ್ರ: ಡಿ.ವಿ.ಕೆ ಮೂರ್ತಿ ಮೈಸೂರು, ೧೯೮೩.

ತಿಪ್ಪೇರುದ್ರಸ್ವಾಮಿ. ಎಚ್., ಕರ್ನಾಟಕ ಸಂಸ್ಕೃತಿ ಸಮೀಕ್ಷೆ,
ಪ್ರ: ಡಿ.ವಿ.ಕೆ. ಮೂರ್ತಿ ಕೃಷ್ಣಮೂರ್ತಿಪುರಂ ಮೈಸೂರು, ೧೯೮೫.

ತಾಳ್ತಜೆ. ವಸಂತಕುಮಾರ., ಕರ್ನಾಟಕದಲ್ಲಿ ಬೌದ್ಧ ಸಂಸ್ಕೃತಿ,
ಪ್ರ: ಮುಂಬಯಿ ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ವಿಭಾಗದ ಪರವಾಗಿ ವಿನಯ ಪ್ರಕಾಶನ ಬೆಂಗಳೂರು, ೧೯೮೮.

ದೇವೀರಪ್ಪ ಎಚ್, ಎರೆಸೀಮೆ ಚನ್ನಪ್ಪ (ಸಂ) ಮಹಾನುಭಾವಿ ಶ್ರೀ ಚನ್ನಮಲ್ಲಿಕಾರ್ಜುನರು,
ಪ್ರ: ಜ. ಮೂರುಸಾವಿರಮಠ, ಹುಬ್ಬಳ್ಳಿ, ೧೯೮೩.

ದಿವಾಕರ ರಂಗನಾಥ ರಾಮಚಂದ್ರ., ವಚನಶಾಸ್ತ್ರ ರಹಸ್ಯ,
ಪ್ರ: ಶ್ರೀ ಮೂರುಸಾವಿರ ಮಠ, ಹುಬ್ಬಳ್ಳಿ, ೧೯೭೮.

| | |
|---|---|
| ದಿವಾಕರ. ಆರ್.ಆರ್., | ಶರಣರ ಅನುಭವ, ಅನುಭಾವ. ಅನುಭೂತಿ<br>ಪ್ರ: ಕನ್ನಡ ಅಧ್ಯಯನಪೀಠ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, ೧೯೭೭. |
| ದಿವಾಕರ. ರಾಮಚಂದ್ರ. ರಂಗನಾಥ (ಲೇ) | ವಚನಶಾಸ್ತ್ರರಹಸ್ಯ,<br>ಪ್ರ: ಬೋಧರಾವ. ರಾಮಚಂದ್ರ ದಿವಾಕರ ಆಧ್ಯಾತ್ಮ ಕಾರ್ಯಾಲಯ, ಧಾರವಾಡ, ೧೯೩೭. |
| ದೇವೀರಪ್ಪಾ. ಎಚ್., ಲಕ್ಮಣ ದಂಡೇಶನ, | ಶಿವತತ್ವ ಚಿಂತಾಮಣಿ,<br>ಪ್ರ: ವ್ಯಾಸಂಗ ವಿಸ್ತರಣ ಪ್ರಕಟಣ ವಿಭಾಗ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, ೧೯೭೪, |
| ನಂಜುಂಡಾರಾಧ್ಯ. ಎಂ.ಜಿ. (ಸಂ) | ಶಿವಾಗಮ ಸೌರಭ,<br>ಪ್ರ: ಜ. ಚ. ನಿ., ಅಧ್ಯಯನ ಪೀಠ ಬೆಂಗಳೂರು, ೧೯೮೭. |
| ನಂಜುಂಡಾರಾಧ್ಯ. ಎಂ. ಜಿ., | ಮಗ್ಗೆ ಮಾಯಿದೇವ ವಿಭುಕಂಡ ವೀರಶೈವ ದರ್ಶನ,<br>ಪ್ರ: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೨. |
| ನಾಗೇಶ ಶಾಸ್ತ್ರಿಗಳು ವೈ. ಬಳ್ಳಾರಿ, | ವಿಶೇಷಾರ್ಥ ಪ್ರಕಾಶಿಕಾ ಕನ್ನಡ ಭಾವಾರ್ಥಬೋಧಿನೀಟೀಕಾಸಹಿತಾ,<br>ಪ್ರ: ಶ್ರೀ ಮುರುಘಾಮಠ, ಧಾರವಾಡ, ೧೯೭೧. |
| ನಾಗಭೂಷಣಶಾಸ್ತ್ರಿಗಳು., | ಭಾರತೀಯ ದರ್ಶನ ಸಮೀಕ್ಷೆ ಭಾಗ ೧,<br>ಪ್ರ: ಶಾಸ್ತ್ರೀಮಠ. ಸಿ.ಎನ್., ಧಾರವಾಡ. ೧೯೮೭. |
| ನಾಗೇಶ ಶಾಸ್ತ್ರಿಗಳು. ವೈ (ಸಂ) | ಶಿವಾನುಭವ ಸೂತ್ರಂ,<br>ಪ್ರ: ಶ್ರೀ ಮುರುಘಾಮಠ ಧಾರವಾಡ, ೧೯೭೯. |
| ನಾಗೇಶ ಶಾಸ್ತ್ರಿಗಳು. ವೈ. (ಸಂ). | ಶತಕತ್ರಯವು,<br>ಪ್ರ: ಶ್ರೀ ಮುರುಘಾಮಠ ಧಾರವಾಡ, ೧೯೭೪. |
| ನಾಗಭೂಷಣ ಶಾಸ್ತ್ರಿಗಳು, | ಕರಣ ಹಸಿಗೆ,<br>ಪ್ರ: ಮುರುಘಾಮಠ ಧಾರವಾಡ, ೧೯೭೨. |
| ಶ್ರೀ ನಾರಾಯಣರಾವ್. ಜಿ.ಟಿ., | ಫ್ಲಾಂಕ ಐನ್ ಸ್ಟೈನ್ ಟೋರ್,<br>ಪ್ರ: ದತ್ತಾತ್ರೇಯ ಪ್ರಕಾಶನ ಮಂಗಳೂರು, ೧೯೯೧. |
| ನಾಗಭೂಷಣಸ್ವಾಮಿ. ಓ. ಎಲ್., | ಪುರಾಣ,<br>ಪ್ರ: ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ೧೯೯೩. |

ಪುರಾಣಿಕ ಡಿ. ವ್ಹಿ., ಮುಗ್ಗೆಯ ಮಾಯಿದೇವ ಒಂದು ಅಧ್ಯಯನ, ಬೆರಳಚ್ಚು ಪ್ರತಿ, ೧೯೯೨.

ಪುರಾಣಿಕ ಸಿದ್ದಯ್ಯ., ಶರಣ ಚರಿತಾಮೃತ, ಪ್ರ: ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ ಮೈಸೂರು, ೧೯೬೭.

ಪ್ರಭುಸ್ವಾಮಿಗಳು (ಸಂ) ಗುಬ್ಬಿಮಲ್ಲಣ್ಣ ವಿರಚಿತ ಗೂಢಭಾಷಿತ, ರತ್ನಮಾಲೆ ಪ್ರ: ಮುರುಘಾಮಠ ಧಾರವಾಡ, ೧೯೪೮.,

ಬಡಿಗೇರ. ವಿರೂಪಾಕ್ಷ., ಐಹೊಳೆ ಶಿಲ್ಪ ದರ್ಶನ, ಪ್ರ: ಕಾಳಿಕಾ ಪ್ರಕಾಶನ- ಐಹೊಳೆ ವಿಜಾಪುರ, ೧೯೮೪.

ಬಸವನಾಳ ಶಿವಲಿಂಗಪ್ಪನವರು, ಬಸವಣ್ಣನವರ ಷಟ್‌ಸ್ಥಲದ ವಚನಗಳು, ಸಾಹಿತ್ಯ ಸಮಿತಿ ಲಿಂಗಾಯತ ಅಭಿವೃದ್ಧಿಸಂಸ್ಥೆ ಧಾರವಾಡ, ೧೯೯೦.

ಬಸವರಾಜ್. ಎಲ್., ಅಲ್ಲಮನ ವಚನ ಚಂದ್ರಿಕೆ, ಪ್ರ: ಮೂರುಸಾವಿರ ಮಠ ಹುಬ್ಬಳ್ಳಿ, ೧೯೮೬.

ಬಸವರಾಜ್.ಎಲ್., ನಿಜಗುಣಶಿವಯೋಗಿಯ ತತ್ತ್ವದರ್ಶನ, ಪ್ರ: ಜಗದ್ಗುರು ಶ್ರೀ. ಶಿವರಾತ್ರೀಶ್ವರ ಗ್ರಂಥಮಾಲೆ, ೧೯೯೧.

ಭೂಸನೂರಮಠ. ಸಂ.ಶಿ., ಶೂನ್ಯ ಸಂಪಾದನೆ, ಪ್ರ: ಗುಲ್ಬರ್ಗಾಜಿಲ್ಲೆಯ ರಾವೂರು ಸಿದ್ಧಲಿಂಗೇಶ್ವಮಠ ಮತ್ತು ಆದವಾನಿಕಲ್ಲುಮಠದ ಅಧಿಪತಿಗಳು, ೧೯೮೬.

ಭೂಸನೂರಮಠ ಸಂ.ಶಿ., ಶೂನ್ಯ ಸಂಪಾದನೆ, ಪ್ರ: ಆದವಾನಿಯ ಕಲ್ಲುಮಠ ಅಧಿಪತಿಗಳು ಗುಲಬರ್ಗಾ, ೧೯೫೮.

ಭೂಸನೂರಮಠ. ಸಂ.ಶಿ(ಲೇ)., ಶೂನ್ಯಸಂಪಾದನೆಯ ಪರಾಮರ್ಶೆ, ಶ್ರೀ ಸಿದ್ಧಲಿಂಗೇಶ್ವರಮಠ ಆದವಾನಿ ಗುಲಬರ್ಗಾ, ೧೯೬೯.

ಭೂಸನೂರಮಠ ಸಂ ಶಿ. (ಸಂ), ಲಿಂಗಲೀಲಾವಿಲಾಸಚಾರಿತ್ರ, ಮುರುಘಾಮಠ, ಧಾರವಾಡ, ೧೯೫೬.

ಭೂಸನೂರಮಠ. ಸಂ. ಶಿ. (ಸಂ), ವೀರಶೈವ ಸಿದ್ಧಾಂತ ಶಿಖಾಮಣಿ, ಪ್ರ: ಶ್ರೀ ಮದ್ವೀರಶೈವ. ಶಿವಯೋಗಮಂದಿರ, ತಾ||ಬದಾಮಿ, ೧೯೯೨.

ಭೂಸನೂರಮಠ. ಸಂ. ಶಿ. (ಸಂ) ವಿಜಯ ಕಲ್ಯಾಣ, ಪ್ರ: ಮಹಾಕವಿ ಹರಿಹರ ಸ್ಮಾರಕ ಸಂಶೋಧನ ಕೇಂದ್ರ ಶ್ರೀ ಜಗದ್ಗುರು ಕೊಟ್ಟೂರುಸ್ವಾಮಿ ಮಠ ಹಂಪಿ, ೧೯೮೮.

ಭಟ್ಟಾಚಾರ್ಯ ಹರಿದಾಸ (ಸಂ), ಯುಗಯಾತ್ರೀ ಭಾರತೀಯ ಸಂಸ್ಕೃತಿ ಭಾಗ-೩ ಪ್ರ: ಪ್ರಸಾರಾಂಗ ಮೈಸೂರು. ವಿಶ್ವವಿದ್ಯಾನಿಲಯ, ೧೯೭೫.

ಭಾಷಾಂತರ ಯೋಜನಾ ಸಮೀತಿ, ಕರ್ನಾಟಕದ ಪರಂಪರೆ, (ಸಂ:೨), ಕರ್ನಾಟಕ ಸರಕಾರ ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೯೨.

ಭೂದೇವ್, ಆಧುನಿಕಯುಗದಲ್ಲಿ ಭಾರತೀಯ ತತ್ತ್ವಶಾಸ್ತ್ರ, ಪ್ರ. ನವಕರ್ನಾಟಕ ಪಬ್ಲಿಕೇಷನ್ಸ ಪ್ರವೇಟ ಲಿ. M.B.C. ಸಂಟರ ಕ್ರಸೆಂಟರಸ್ತೆ ಬೆಂಗಳೂರು, ೧೯೯೦.

ಮಲ್ಲಾಪುರ. ಬಿ. ವ್ಹಿ. (ಸಂ), ಚೆನ್ನಬಸವಣ್ಣವನರ ವಚನ ಸಂಪುಟ ಸಂ: ೩, ಕರ್ನಾಟಕ ಸರ್ಕಾರ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು, ೧೯೯೩.

ಮಲ್ಲಾಪುರ. ಬಿ.. ವ್ಹಿ. (ಸಂ), ಅಲ್ಲಮಪ್ರಭುದೇವರ ವಚನ ಸಂಪುಟ, ಸಂಪುಟ ೨, ಕರ್ನಾಟಕ ಸರ್ಕಾರ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು, ೧೯೯೩.

ಮಲ್ಲೇದೇವರು. ಹೆಚ್. ಪಿ., ವಾತುಲ ಶುದ್ಧಾಗಮ, ಪ್ರ: ಪ್ರಾಚ್ಯವಿದ್ಯಾ. ಸಂಶೋಧನಾಲಯ ಮೈಸೂರು, ೧೯೮೮.

ಮಳಿಮಠ. ಪ್ರೇಮಾದೇವಿ. (ಅನು), ವೀರಶೈವ ಧರ್ಮದ ಕೈಪಿಡಿ, ಕನ್ನಡ ಅಧ್ಯಯನ ಪೀಠ ಕರ್ನಾಟಕ ವಿಶ್ವವಿದ್ಯಾಲಯ, ೧೯೯೦.

ಮಹೀಶವಾಡಿ. ಬಿ.ಬಿ., ಜೈನ ಸಿದ್ಧಾಂತ ಸಮೀಕ್ಷೆ, ಪ್ರ: ಡಾ. ಎ. ಬಿ. ಮಹೀಶವಾಡಿ ಜ್ಞಾನ ವಿಕಾಸ ಪ್ರಕಾಶನ ಜಿ. ಬೆಳಗಾವಿ, ೧೯೭೭.

ಮಾಳವಾಡ. ಸ.ಸ., ಸಾಹಿತ್ಯ ಸಂಗಮ, ಪ್ರ: ಜಯಪ್ರಕಾಶನ ಧಾರವಾಡ, ೧೯೭೦.

ಮೂರ್ತಿರಾವ್. ಎ. ಎನ್., ದೇವರು, ಪ್ರ: ಡಿ. ವಿ. ಕೆ. ಮೂರ್ತಿ ಕೃಷ್ಣಮೂರ್ತಿಪುರಂ. ಮೈಸೂರು, ೪ ೧೯೯೧.

ಶ್ರೀ ರಂಗರಾಜ್. ಎಚ್. ಎ. (ಲೇ) ಗೌತಮ ಬುದ್ಧ,
ಆನಂದ ಪಬ್ಲಿಕೇಶನ್ಸ್, ಧಾರವಾಡ, ೧೯೮೦.

ಶ್ರೀ ರಾಘವೇಂದ್ರಾಚಾರ್ಯ,ವಿದ್ವಾ.ಹೆಚ್.ಎನ್., ಭಾರತೀಯ ತತ್ತ್ವಶಾಸ್ತ್ರ ಸಂಗ್ರಹ, ಪ್ರ: ಮೈಸೂರು ಕ್ರೌನ್ ಇಲೆಕ್ಟ್ರಿಕ್
ಮೈಸೂರು, ೧೯೬೦.

ರಾಮಕೃಷ್ಣಮೂರ್ತಿ. ಕೆ. ಎಸ್., ಜ್ಞಾನಕೋಶ,
ಪ್ರ: ಸುಭಾಷ ಬೆಂಗಳೂರು, ೧೯೯೧.

ರುದ್ರಪ್ಪ. ಜೆ., ಶಿವಸೂತ್ರಗಳು,
ಪ್ರ: ಬೆಂಗಳೂರ ಪ್ರೆಸ್ ಮೈಸೂರರೋಡ ಬೆಂಗಳೂರು, ೧೯೫೮.

ಲಕ್ಷ್ಮೀನರಸಿಂಹಮೂರ್ತಿ. ಹೆಚ್. ಎಸ್. (ಸಂ), ಬ್ರಹ್ಮಸೂತ್ರಭಾಷ್ಯಸಾರ,
ಪ್ರ: ಅಧ್ಯಾತ್ಮ ಪ್ರಕಾಶಕಾರ್ಯಾಲಯ ಹೊಳೆನರಸೀಪುರ, ೧೯೭೭.

ವೀರಪ್ಪ. ಎನ್. ಎಸ್. (ಲೇ) ಚಾರ್ಲ್ಸ್ ಡಾರ್ವಿನ್,
ಗೀತಾ ಬುಕ್ ಹೌಸ್. ಪ್ರಕಾಶಕರು ಮೈಸೂರು, ೧೯೮೧.

ವಿರಕ್ತಮಠ ಶಿವಾನಂದ (ಲೇ), ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೮.

ವಿದ್ಯಾಶಂಕರ. ಎಸ್., ವೀರಶೈವ ಪುರಾಣ ಒಂದು ಅಧ್ಯಯನ,
ಪ್ರ: ಕನ್ನಡ ಸಾಹಿತ್ಯ ಪರಿಷತ್ತು ಚಾಮರಾಜಪೇಟೆ ಬೆಂಗಳೂರು, ೧೯೮೬.

ವಿರೂಪಾಕ್ಷ ಪಂಡಿತ ಕೃತ, ಚೆನ್ನಬಸವ ಪುರಾಣ,
ಪ್ರ: ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ವಾಙ್ಮಯ ಶಾಖೆ ಧಾರವಾಡ, ೧೯೬೪.

ವೀರಣ್ಣ ರಾಜೂರ (ಸಂ) ಶಿವಶರಣೆಯರ ವಚನಸಂಪುಟ (ಸಂ) ೫,
ಕರ್ನಾಟಕ ಸರ್ಕಾರ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು, ೧೯೯೬.

ವಿಷ್ಣುಮೂರ್ತಿಭಟ್ಟ. ಜಿ., ನ್ಯಾಯಸಿದ್ಧಾಂತ ಮುಕ್ತಾವಳೀ,
(ಕನ್ನಡ ವ್ಯಾಖ್ಯಾನ ಪ್ರಭಾ) ಎಮ್. ವ್ಹಿ. ಬಾಲಗಣಪತಿ ಮೈಸೂರು, ೧೯೭೨.

ವೇಂಕಟೇಶ. ಜಿ., ಸ್ವೈರಾಟವಾದ್,
ಪ್ರ: ಶ್ರೀನಿವಾಸರಾಜ ನಿರ್ದೇಶಕ ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ೧೯೯೩.

ವೃಷಭೇಂದ್ರಸ್ವಾಮಿ. ಎಸ್.ಎಂ., ಚಂದ್ರಶೇಖರ ಕಂಬಾರ, ಶೂನ್ಯ ಸಂಪಾದನೆ ಪರಾಮರ್ಶೆಯ ವಿಮರ್ಶೆ,
ಪ್ರ: ರಾವೂರು ಶ್ರೀ ಸಿದ್ಧಲಿಂಗೇಶ್ವರಮಠ ಆದವಾನಿಯ ಕಲ್ಲುಮಠ ಅಧಿಪತಿಗಳು, ಆದವಾನಿ.

ಶಿವಮೂರ್ತಿಶಾಸ್ತ್ರಿಗಳು ಬಿ., ರಾಮೇಶ್ವರಮುಖಿ ಪ್ರಣೀತ ನ್ಯಾಯ ಶತಕಮ್,
ಪ್ರ: ಶರಣ ಸಾಹಿತ್ಯ ಕಾರ್ಯಾಲಯ ರಂಗಸ್ವಾಮಿಗುಡಿ ಬೀದಿ ಬೆಂಗಳೂರು, ೧೯೫೧.

ಶ್ರೀನಿವಾಸಮೂರ್ತಿ. ಎಂ. ಆರ್., ವಚನಧರ್ಮಸಾರ,
ಪ್ರಸಾರಾಂಗ, ಪ್ರ: ಮೈಸೂರು ವಿಶ್ವವಿದ್ಯಾನಿಲಯ, ೧೯೬೮.

ಶಿವಾಚಾರ್ಯ ಸದಾಶಿವ., ಕೈವಲ್ಯೋಪನಿಷತ್ ಸದಾಶಿವ ಭಾಷ್ಯಮಂ,
ಪ್ರ: ಬೃಹನ್ಮಠ, ಸಂಶೋಧನಾಲಯ ಚಿತ್ರದುರ್ಗ, ೧೯೬೫.

ಶಿವಕುಮಾರಸ್ವಾಮಿ. ಎಂ., ಸಿದ್ಧಾಂತಶಿಖಾಮಣಿ,
ಪ್ರ: ಕನ್ನಡ ಅಧ್ಯಯನಪೀಠ. ಕರ್ನಾಟಕ ವಿಶ್ವಾವಿದ್ಯಾಲಯ ಧಾರವಾಡ, ೧೯೮೭.

ಶಿವರುದ್ರಪ್ಪ. A.L.(ಸಂ), ಶರಣತತ್ತ್ವಚಿಂತನ,
ಪ್ರ: ಅಖಿಲಭಾರತ ಶರಣಸಾಹಿತ್ಯಪರಿಷತ್ತು ಜೆ. ಎಸ್. ಎಸ್. ಮಹಾವಿದ್ಯಾಪೀಠ ಮೈಸೂರು, ೧೯೮೭.

ಶಿವಮೂರ್ತಿಶಾಸ್ತ್ರೀ. ಬಿ., ವೀರಶೈವ ಸಾಹಿತ್ಯ ಮತ್ತು ಇತಿಹಾಸ (ಭಾಗ-೩)
ಶರಣ ಸಾಹಿತ್ಯ ಕಾರ್ಯಾಲಯ ಟಿ. ೯೨, ರಂಗಸ್ವಾಮಿಗುಡಿ ಬೀದಿ, ಬೆಂಗಳೂರು, ೧೯೬೧.

ಶಿವಲಿಂಗಯ್ಯ. ಜಿ. ಎ. (ಸಂ), ಇಮ್ಮಡಿ ಮುರುಘಾ ಗುರುಸಿದ್ಧ ಸ್ವಾಮಿಗಳು ನಿರೂಪಿಸಿದ ಕೈವಲ್ಯ ಸೋಪಾನ ವಾಮ್ಯಕೋತ್ತರ ಶತಸ್ಥಲ ಸ್ವರವಚನಗಳು,
ಶ್ರೀ ಜಗದ್ಗುರು ಮುರುಘರಾಜೇಂದ್ರ ಮಠ ಆನಂದ ಪುರ-ಶಿವಮೊಗ್ಗ, ೧೯೮೯.

ಶೇಷ ನವರತ್ನ., ನಾಲ್ಕು ವೇದಗಳು,
ಪ್ರ: ಸಮಾಜ ಪುಸ್ತಕಾಲಯ ಧಾರವಾಡ, ೧೯೮೯.

ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳವರು, ಶ್ರೀ ಮದ್ಭಗವದ್ಗೀತಾ ಭಾಷ್ಯ, ಪ್ರ: ಅಧ್ಯಾತ್ಮ ಪ್ರಕಾಶಕಾರ್ಯಾಲಯ ಹೊಳೆನರಸೀಪುರ, ೧೯೮೯.

ಸುಂಕಾಪುರ. ಎಂ. ಎಸ್. (ಸಂ), ಸರ್ವದರ್ಶನ ಸಂಗ್ರಹ, ಪ್ರ: ಕನ್ನಡ ಅಧ್ಯಯನ ಪೀಠ ಪಠ್ಯಪುಸ್ತಕ ನಿರ್ದೇಶನಾಲಯ ಕರ್ನಾಟಕ ವಿಶ್ವವಾದ್ಯಾಲಯ ಧಾರವಾಡ, ೧೯೭೬.

ಸಿದ್ಧಪ್ಪಾರಾಧ್ಯ ಟಿ.ಜಿ., ಶಕ್ತಿವಿಶಿಷ್ಟಾದ್ವೈತದರ್ಶನ, ಪ್ರ: ವಿಶ್ವನಾಥ ಪ್ರೆಸ್ ಮೈಸೂರು, ೧೯೭೪.

ಸಚ್ಚಿದಾನಂದ ಸ್ವಾಮಿಗಳು, ಬ್ರಹ್ಮಸೂತ್ರ ಶಂಕರ ಭಾಷ್ಯ, ಪ್ರ: ಹೊಳೆ ನರಸಿಂಪಪೂರ, ೧೯೫೧.

ಸಿದ್ಧಪ್ಪಾರಾಧ್ಯ. ಟಿ. ಜಿ. ಭಗವದ್ಗೀತಾವೀರಶೈವ ಭಾಷ್ಯ, ಪ್ರ: ಗುಬ್ಬಿ ಶ್ರೀ ಚನ್ನಬಸವೇಶ್ವರ ಗ್ರಂಥಮಾಲೆ ೩೬೨ ವಿಶ್ವೇಶ್ವರಪುರಂ, ಬೆಂಗಳೂರು, ೧೯೬೫.

ಹಳಕಟ್ಟಿ. ಫ. ಗು. (ಸಂ), ಪ್ರಾಣಲಿಂಗ ಜ್ಞಾನ ದರ್ಪಣ ಚಾರಿತ್ರ, ಪ್ರ: ಫ. ಗು. ಹಳಕಟ್ಟಿ ವಿಜಾಪುರ, ೧೯೫೨.

ಹನ್ನೆರಡುಮಠ. ಜಿ. ಎಚ್. (ಸಂ), ವಿಶ್ವಪ್ರಭೆ (ಸಂ೩) ಪ್ರ: ಜಿ. ಮುರುಸಾವಿರಮಠ ಹುಬ್ಬಳ್ಳಿ, ೧೯೯೧.

ಹಳಕಟ್ಟಿ. ಫ. ಗು. (ಸಂ), ವಚನಶಾಸ್ತ್ರಸಾರ ಭಾಗ ೧.೨, ಪ್ರ: ಹಿತಚಿಂತಕ ಪ್ರಿಂಟಿಂಗ ಪ್ರೆಸ್ ಭಾಗ ೨. ೧೯೩೮. ವಿಜಾಪುರ, ೧೯೪೫.

ಹಿರೇಮಠ. ಆರ್. ಸಿ., ಚನ್ನಬಸವಣ್ಣನವರ ವಚನಗಳು, ಪ್ರ: ಕನ್ನಡ ಅಧ್ಯಯನ ಸಂಸ್ಥೆ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, ೧೯೭೧.

ಹಿರೇಮಠ. ಚಂದ್ರಶೇಖರಶಾಸ್ತ್ರೀ (ಲೇ). ಬಸವತತ್ವ ರತ್ನಾಕರ, ಪ್ರ: ಅಮೃತವರ್ಷಿಣೀ ಗ್ರಂಥಮಾಲಾ ೫೫೮, ಥಿಯೋಬಾಲ್ಡ್ ರೋಡ್ ಮೈಸೂರು, ೧೯೬೦.

ಹಿರಿಯಣ್ಣ. ಎಮ್. (ಲೇ), ರಾಮಕೃಷ್ಣರಾವ್. ಕೆ. ಬಿ. (ಅನು). ಭಾರತೀಯ ತತ್ವಶಾಸ್ತ್ರದ ಮೂಲಾಂಶಗಳು, ಪ್ರ: ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾನಿಲಯ, ೧೯೭೧.

ಹಿರಿಯಣ್ಣ. ಎಂ., ಭಾರತೀಯತತ್ವ ಶಾಸ್ತ್ರದ ರೂಪರೇಖೆಗಳು,
ಪ್ರ: ಕನ್ನಡ ಅಧ್ಯಯನ ಪೀಠ ಮೈಸೂರು ವಿಶ್ವವಿದ್ಯಾಲಯ, ೧೯೭೩.

ಹಿರೇಮಠ ಆರ್. ಸಿ., ಭೀಮಕವಿ ವಿರಚಿತ ಬಸವ ಪುರಾಣ,
ಪ್ರ: ಶ್ರೀ ಮುರುಘಾಮಠ ಧಾರವಾಡ, ೧೯೭೧.

ಹಿರೇಮಠ. ಆರ್. ಸಿ., ಷಟ್‌ಸ್ಥಲ ಪ್ರಭೆ,
ಪ್ರ: ಕನ್ನಡ ಅಧ್ಯಯನ ಸಂಸ್ಥೆ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, ೧೯೭೭.

ಹಿರೇಮಠ. ಆರ್. ಸಿ. (ಸಂ) ಷಟ್‌ಸ್ಥಲಜ್ಞಾನಸಾರಾಮೃತ,
ಪ್ರ: ವೀರಶೈವ ಅಧ್ಯಯನ ಸಂಸ್ಥೆ ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ, ೧೯೮೩.

ಹಿರೇಮಠ ಆರ್. ಸಿ., ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರ ಭಾಗ ೨,
ಪ್ರ: ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, ೧೯೭೮.

ಹೀರಾಲಾಲ ಜೈನ, ಭಾರತೀಯ ಸಂಸ್ಕೃತಿಗೆ ಜೈನಧರ್ಮದ ಕೊಡುಗೆ,
ಪ್ರ: ಲಾಲಚಂದ ಹೀರಾಚಂದ ದೋಶೀ ಜೈನ ಸಂಸ್ಕೃತಿ ಸಂರಕ್ಷಕ ಸಂಘ ಸೊಲ್ಲಾಪುರ, ೧೯೮೧.

ಹಿರೇಮಲ್ಲೂರ ಈಶ್ವರನ್, ಬಸವಣ್ಣ ಹಾಗೂ ಲಿಂಗಾಯತ ಧರ್ಮ,
ಪ್ರ: ಎಸ್. ಬಿ. ನಾಯಕ ಕ. ವಿ. ವಿ. ಧಾರವಾಡ, ೧೯೮೯.


## ಪತ್ರಿಕೆಗಳು


ಕನ್ನಡಪ್ರಭೆ, ೨೩ ನವೆಂಬರ್, ೧೯೭೭.

ತರಂಗ, ೯ ಅಕ್ಟೋಬರ್, ೧೯೯೪.

ಸುಕುಮಾರ ಪತ್ರಿಕೆ, ಸಂ. ೧೦ ಸಂಚಿಕೆ ೯, ಶಿವಯೋಗಮಂದಿರ ೧೯೭೧.

## ಸಂಸ್ಕೃತ ಮತ್ತು ಹಿಂದಿ ಆಕರಗಳು


ಆತ್ರೆಯ ಶಾಂತಿಪ್ರಕಾಶ, — ಯೋಗ ಮನೋವಿಜ್ಞಾನ,
ಪ್ರ: ದಿ. ಇಂಟರ್ ನ್ಯಾಶನಲ್ ಸ್ಟ್ಯಾಂಡರ್ಡ್ ಪಬ್ಲಿಕೇಶನ್ಸ್, ವಾರಾಣಸೀ ೧೯೬೫.

ಉಪಾಧ್ಯಾಯ, ಬಲದೇವ, — ಭಾರತೀಯ ದರ್ಶನ,
ಶಾರದಾಮಂದಿರ ವಾರಾಣಸೀ, ೧೯೬೧.

ಕವಿರಾಜ, ಗೊಪಿನಾಥ, — ತಾಂತ್ರಿಕ ವಾಙ್ಮಯ ಮೆ ಶಾಕ್ತದೃಷ್ಟಿ,
ಬಿಹಾರ ರಾಷ್ಟ್ರಭಾಷಾ ಪರಿಷದ್, ಪಟನಾ೧೯೬೮.

ಕೃಷ್ಣಾನಂದ ಸಾಗರ, — ಈಶ್ವರ ಪ್ರತ್ಯಭಿಜ್ಞಾ ವಿಮರ್ಶಿಣಿ,
ಪ್ರ: ಶ್ರೀ ತೋಂಟಾದಾರ‍್ಯ ಆಚಾರ್ಯ ಉತ್ತರ ಕಾಶಿ ೧೯೮೪.

ಕಾಶೀನಾಥ ಶಾಸ್ತ್ರೀ. (ಸಂ), — ಶಿವಾಗಮಸಂಗ್ರಹ,
ಶ್ರೀ ಪಂಚಾಚಾರ್ಯಎಲೆಕ್ಟ್ರಿಕ್ ಪ್ರೆಸ್ ಮೈಸೂರ ೧೯೮೨.

ಕಾಶೀನಾಥ ಶಾಸ್ತ್ರಿ, — 'ಶ್ರೀಕರಭಾಷ್ಯಂ',
ಪಂಚಾಚಾರ‍್ಯ ಮುದ್ರಣಾಲಯ ಮೈಸೂರು ೧೯೩೮.

ಗೋಸ್ವಾಮಿ ಮಹಾಪ್ರಭುಲಾಲ (ವ್ಯಾ), — ಪಾತಂಜಲಯೋಗಸೂತ್ರಂ (ಹಿಂದಿ)
ಚೌಖಂಭಾ ಸಂಸ್ಕೃತ ಸಂಸ್ಥಾನ ವಾರಾಣಸೀ ೧೯೮೩.

ಟೊಪಿಗಿ, ಶಂಕರಪ್ಪ ಅಚ್ಚಪ್ಪ, — ತನ್ತ್ರಸಙ್ಗ್ರಹಃ,
ಪ್ರ. ಮೈಸೂರು ಕ್ರೌನ್ ಮುದ್ರಾಕ್ಷರಶಾಲೆ, ೧೯೧೪.

ತೋಂಟದ ಸಿದ್ಧೇಶ್ವರ ಆಚಾರ‍್ಯ, (ಲೇ) — ಷಟ್‌ಸ್ಥಲ ಕೌಮುದಿಯು,
ಕನ್ನಿಕಾ ಪರಮೇಶ್ವರ ಪ್ರೆಸ್ ದೊಡ್ಡಪೇಟೆ ಮೈಸೂರು. ೧೯೨೬.

ದಾಸುಗುಪ್ತಾ. ಎಸ್. ಎನ್., — ಭಾರತೀಯ ದರ್ಶನ ಕಾ ಇತಿಹಾಸ ಭಾಗ ೩-೫,
ರಾಜಸ್ಥಾನ ಹಿಂದೀ, ಗ್ರಂಥ ಅಕಾದಮೀ. ಯಪುರ, ೧೯೬೫.

ನಂಜುಂಡಾರಾಧ್ಯ. ಎಂ. ಜಿ. (ಸಂ), — 'ಬ್ರಹ್ಮ ಸೂತ್ರ ವೃತಿ'
ಶ್ರೀಶಂಕರ ವಿಲಾಸ, ಸಂಸ್ಕೃತ ಪಾಠಶಾಲಾ ಶಂಕರಮಠ ರೋಡ ಮೈಸೂರು ೧೯೬೪.

ನಂಜುಂಡಾರಾಧ್ಯ.ಮ.ಗಂ. (ಸಂ), ಕೈವಲ್ಯೋಪನಿಷತ್ ಸದಾಶಿವಭಾಷ್ಯಮ್,
ಪ್ರಬೋಧ ಪುಸ್ತಕಮಾಲಾ ೧೯೫೧.

ನಾರಾಯಣ ಸ್ವಾಮೀ ಶಾಸ್ತ್ರೀ. ಎಸ್. (ಸಂ), ಕ್ರಿಯಾಸಾರ (ಭಾ-೨)
(ನೀಲಕಂಠ ಶಿವಾಚಾರ್ಯವಿರಚಿತ) O.R.I. ಮೈಸೂರ ೧೯೫೭.

ಪುಷ್ಪೇಂದ್ರಕುಮಾರ (ಸಂ), ಶಿವಮಹಾ ಪುರಾಣಂ,
ನಾಗ ಪಬ್ಲಿಷರ್ ಜವಾಹರ ನಗರ ದೆಲ್ಲಿ ೧೯೮೧.

ಪೊದ್ದಾರ. ಎಮ್. ಪಿ. (ಸಂ), ಕಲ್ಯಾಣ ಶಿವಾಂಕ,
ಗೀತಾಪ್ರೆಸ್ ಗೋರಖಪುರ ಸ ೧೯೯೩.

ಬನಾರಸೀದಾಸ ಮೋತಿಲಾಲ, ಈಶಾದಿದಶೋಪನಿಷದಃ
ಪ್ರ: ಮೋತಿಲಾಲ ಬನಾರಸೀದಾಸ, ದಿಲ್ಲೀ ವಾರಾಣಸೀ. ಪಟನಾ.೧೯೬೪.

ಭಟ್ಟಾಚಾರ್ಯ ಶ್ರೀ ಕೃಷ್ಣಾನಂದ, ತಂತ್ರಸಾರ (ವ್ಯಾ)ವಾಗೀಶ.
ಪ್ರ: ಚೌಕಂಬಾ ಸಂಸ್ಕೃತಿ ಸೀರಿಜ ವಾರಾಣಸೀ ೧೯೩೮.

ಮಂಡನಮಿಶ್ರ. (ಸಂ), ಸರ್ವದರ್ಶನ-ಸಮನ್ವಯಃ,
ಶ್ರೀಲಾಲಬಹಾದ್ದೂರ ಶಾಸ್ತ್ರೀ ಕೇಂದ್ರೀಯ ಸಂಸ್ಕೃತ ವಿದ್ಯಾಪೀಠಮ್, ದಿಲ್ಲಿ, ೧೯೮೧.

ಮಹರ್ಷಿ, ವೇದ ವ್ಯಾಸ, 'ಮಹಾಭಾರತಂ',
ಗೀತಾ ಪ್ರೆಸ್ ಗೋರಖಪುರ ೧೯೬೪.

ಮುಸಲಗಾಂವಕರ ಗಜಾನನಶಾಸ್ತ್ರೀ, ಸಾಂಖ್ಯತತ್ತ್ವಕೌಮುದೀ,
ಚೌಖಂಬಾ ಸಂಸ್ಕೃತ್ ಸೀರೀಜ, ವಾರಾಣಸೀ, ೧೯೮೧.

ಮಲ್ಲೇದೇವರು. ಎಚ್. ಪಿ., ವೀರಶೈವ ಧರ್ಮಕೆ ಮೂಲತತ್ತ್ವ,
ಪ್ರ: ಭಾರತೀಯ ವಿದ್ಯಾ ಪ್ರಕಾಶನ್, ದೆಹಲಿ, ವಾರಾಣಸೀ ೧೯೯೧.

ಮಲ್ಲಿಕಾರ್ಜುನ ಶಾಸ್ತ್ರೀ (ವ್ಯಾ). ಶಿವಾದ್ವೈತಮಂಜರೀ,
ಲಿಂಗೀಬ್ರಾಹ್ಮಣಗ್ರಂಥಮಾಲಾ, ಸೋಲಾಪೂರ. ೧೯೦೯.

ಮುಸಲಗಾಂವಕರ್ ಗಜಾನನಶಾಸ್ತ್ರೀ, ವೇದಾಂತ ಪರಿಭಾಷೆ,
ಪ್ರ: ಚೌಖಂಬಾ ವಿದ್ಯಾಭವನ ವಾರಣಾಸಿ ೧೯೮೩.

ಮಿಶ್ರಾ-ಪ್ರಭಾಕರ, ಲಘು ಶಿದ್ಧಾಂತ ಕೌಮುದೀ,
ಪ್ರ: ಅರವಿಂದ ಮಿಶ್ರಾ ಬಿ. ೩೭/೪೫/೨೦೮, ವಿರದೋಪೂರ ವಾರಾಣಾಸೀ, ೧೯೭೩.

ಮಿಶ್ರ ಕೈಲಾಸಪತಿ, ಶೈವ ಸಿದ್ಧಾಂತದರ್ಶನ,
ಅರ್ಧನಾರೀಶ್ವರ ಪ್ರಕಾಶನ ವಾರಾಣಾಸೀ, ೧೯೭೨.

ಮರುಳಸಿದ್ಧಯ.ಜಿ., ಶ್ರೀಕರ ಭಾಷ್ಯಂ (ಭಾಗ,೧.೨.)
ಪ್ರ: ಪ್ರಾಚ್ಯವಿಷಯ ಸಂಶೋದನಾಲಯ ಮೈಸೂರು ವಿಶ್ವವಿದ್ಯಾಲಯ ಮೈಸೂರು, ೧೯೮೮.

ಯಾ. ಮಸೀಹ. (ಲೇ), ತುಲನಾತ್ಮಕ ಧರ್ಮದರ್ಶನ,
ಮೋತಿಲಾಲ ಬನಾರಸೀದಾಲ ದಿಲ್ಲೀ ವಾರಾಣಸೀ, ೧೯೭೫.

ವರ್ಮಾ ಸಾಂವಲಿಯಾ ವಿಹಾರಿಲಾಲ (ಲೇ), ವಿಶ್ವಧರ್ಮದರ್ಶನ
ಬಿಹಾರ ರಾಷ್ಟ್ರಭಾಷಾ ಪರಿಷತ್ ಪಟನಾ, ೧೯೮೫.

ವ್ರಜವಲ್ಲಭದ್ವಿವೇದಿ, ಆಗವಾ ಚೌರ ತಂತ್ರಸಾರ,
ಪ್ರ: ವಾಣೀವಿಲಾಸ ಮುದ್ರಣಾಲಯ ಶ್ರೀರಂಗಮ್, ೧೯೨೫.

ಶರ್ಮಾರಾಮಮೂರ್ತಿ, ಅದ್ವೈತ್-ವೇದಾಂತ,
ನ್ಯಾಶನಲ್ ಪಬ್ಲಿಶಿಂಗ ಹೌಸ್, ೧೯೮೨.

ಶಾಸ್ತ್ರಿ, ಧರ್ಮೇಂದ್ರನಾಥ (ಸಂ), ನ್ಯಾಯಸಿದ್ಧಾಂತ ಮುಕ್ತಾವಲೀ, ದ್ವಿತೀಯ ಸಂಸ್ಕರಣ, ಮೋತೀಲಾಲ ಬಲಾರಸೀದಾಸ್, ವಾರಾಣಸೀ, ೧೯೮೧.

ಶಾಸ್ತ್ರೀ. ದುಂಡಿರಾಜ (ಅನು), ವೈಶೇಷಿಕ ದರ್ಶನಮ್ ಪ್ರಶಸ್ತಪಾದ ಭಾಷ್ಯ, ಚೌಖಂಬಾ ಸಂಸ್ಕೃತಿ ಸೀರೀಜ., ವಾರಾಣಸೀ, ೧೯೮೮.

ಶಿರೋಮಣಿ, ಶ್ರೀವಿಶ್ವೇಶ್ವರ, (ವ್ಯಾ) ನ್ಯಾಯ ಕುಸುಮಾಂಜಲಿ ಉದಯನಕೃತ, ಚೌಖಂಬಾ ವಿದ್ಯಾಭವನ, ವಾರಾಣಸೀ, ೧೯೮೨.

ಸಂಪೂರ್ಣಾನಂದ, ಯೋಗ ದರ್ಶನಮ್,
ಹಿಂದೀ ಸಮಿತಿ. ಸೂಚನಾ ವಿಭಾಗ. ಉ. ಪ್ರ., ೧೯೮೫.

ಸೂರ್ಯಕಾಂತ (ಅನು), ವೈದಿಕಧರ್ಮ ಏವಂ ದರ್ಶನ (ಕೀತಕೃತ),
ಮೋತೀಲಾಲಾ ಬನಾರಸೀದಾಸ, ವಾರಾಣಾಸೀ, ೧೯೮೩.

ಸರ್ವೇಶ್ವರಾನಂದ (ಸಂ), ಜೈಮಿನಿ ಸೂತ್ರ ವೃತ್ತಿ ಸುಭೋಧಿನೀ ನಾಯಿಕಾ - ಭಾಗ ೧.

ಸದಾಶಿವ ಶಿವಾಚಾರ್ಯವಿರಚಿತಮ್, ಕೈವಲ್ಯೋಪನಿಷತ್ ಸದಾಶಿವಭಾಷ್ಯಮ್,
ಪ್ರಬೋಧ ಪುಸ್ತಕಮಾಲಾ ಬೆಂಗಳೂರು, ೧೯೫೧.

ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳವರು, ಬೃಹದಾರಣ್ಯಕೋಪನಿಷತ್ತು ಸಂ.೧,
ಪ್ರ. ಅಧ್ಯಾತ್ಮ ಪ್ರಕಾಶ ಕಾರ್ಯಾಲಯ ಹೊಳೆನರಸೀಪುರ, ೧೯೮೪.

ಸಿದ್ಧಪ್ಪಾರಾಧ್ಯ. ಟಿ.ಜಿ. (ಲೇ), ಶ್ವೇತಾಶ್ವತರೋಪನಿಷದ್ವೀರಶೈವ ಭಾಷ್ಯಮ್,
ಬೃಹನ್ಮಠ ಚಿತ್ರದುರ್ಗ, ೧೯೯೫.


## ಇಂಗ್ಲೀಷ್ ಆಕರಗಳು


Alfred North Whitehead: Science and the Modern World
Pub: A Metor Book New American Library 1971.

Batt. N.R. : Ajitagam vol I
Pub: Institute francais Dindolagie Pandichari 1964.

Datta and chatterjee: An Introduction to Indian Philosophy
Pub: University of calacatta sixth edition 1960.

Dovasonpati. V.A.: Saivasiddhanta
Pub: Madras University 1974.

Dut,Nalinaksha: Munis aro subdividod in to six classos as quoted in oarly Monastic Buddhism
Pub: Calcutt oriental Book agency Calcatta 1960.

Gokak.V.K. : India and world culture
Pub: Sahitya Akademi 1989.

Hukamachand Bharilla.D: Dharma ke Dashalakshana
Pub: Digamba join Firtha suraksa Trust Bombay 1981.

John Woodrofee: Introduction to Tantra Shastra
Pub: Ganesh and co ( Madras) Ltd. 1952.

Julian Huxley: Man in the modern world
Pub: A Mentor Book New American Library. 1971.

Johan woodroffe: Shakati and Shakata
Pub: Ganesh and co, Thirel edition Madaras 1929.

Kumara swamiji: Religion of Humanity
Pub: Navakalyan Math Dharwar 1946.

Kramrish, stella: The Presence of Shiva Philadelphia Museum of Arts 1967.

Keith,A.B.: The Religion and the Philosophy of the Veda and the Upanisada
Harvard Oriental series, vols. 31 and 32, 1925.

Nandimath. S.C.: A Hand Book of Veerasaivisam
Pub: The litterary committee L.E. Association Dharwar S.INDIA.1942.

Paul Bruntan: The Quest of the overself
Pub: B.I.Publications 1981.

Pandey. K.C.: Bhaskari. Vol III
Superintendent Printing and stationery Lucknow 1954.

Radhakrishnan.S.: Religion and culture
Pub: Orent Aperbacks A Division of vision books Pvt.Ltd. 1987.

Rangnathanand: Vivekananda's Synthesis of Science and Religion.
Pub: Bharatiya Vidya Bhawan, Bombay, 1971.

Russell.B.: Religion and science
Pub: F.R.S.oxford University- press Landon 1970.

Radhakrishnan.s: Indian Religions Orient paperbacks.
A Division of vision Books pvt Ltd New-Delhl.Bombay. 1988.

Ralph waldo Trine: In tune the Infinite
Pub: George Bell and sons London 1906.

Radhakrishanan: Indian Philosophy. vol I
Pub: Rajapal Adition Kashimire gate Delhi 1969.

Sivaraman K.: Siva jananasiddhiyar Tirupanandal 1973.

Suzuki.D.T.: Outlines of Buddhism on Indian Mahayan budhism,
Pub: Horper and kow Newyork 1968.

Suzaki.D.T.: The Lankavatar Sutra,
Routledage and keganpaul. London 1956.

Sharma.L.N.: Kashmir Saivism,
Bharati Vidya Prakashan.1972.

Swami Ranganathananda: Eternal Values for a Changing Society
Pub: Bharatiya Vidya Bhawan. Bombay. 1971.

Sharma.C.d.: A critical survey of Indian Philosophy
Motilal Banarasidass Varanashi 1973.

Theos Beernard: Hindu Philosophy.
Pub: Jaico Publishing House Bombay Delhi Bangalore Hyderabad. Calcutta. Madras.1989.


ಸ್ಥಲಾದರ್ಶಪಟ
ಸ್ಥಲ (ಬ್ರಹ್ಮ)
ಲಿಂಗಸ್ಥಲ (ಈಶ)
ಅಂಗಸ್ಥಲ (ಜೀವ)
ಭಾವಲಿಂಗಸ್ಥಲ
(ಈಶ್ವರ)
ಪ್ರಸಾದಲಿಂಗಸ್ಥಲ
ಮಹಾಲಿಂಗಸ್ಥಲ
ಪ್ರಾಣಲಿಂಗಸ್ಥಲ
(ಹಿರಣ್ಯಗರ್ಭ)
ಶಿವಲಿಂಗಸ್ಥಲ
ಚರಲಿಂಗಸ್ಥಲ
ಇಷ್ಟಲಿಂಗಸ್ಥಲ
(ವಿರಾಟ)
ಆಚಾರಲಿಂಗಸ್ಥಲ
ಗುರುಲಿಂಗಸ್ಥಲ
ಯೋಗಾಂಗಸ್ಥಲ
(ಪ್ರಾಜ್ಞ)
ಶರಣಸ್ಥಲ
ಐಕ್ಯಸ್ಥಲ
ಭೋಗಾಂಗಸ್ಥಲ
(ತೈಜಸ)
ಪ್ರಸಾದಿಸ್ಥಲ
ಪ್ರಾಣಲಿಂಗಸ್ಥಲ
ತ್ಯಾಗಾಂಗಸ್ಥಲ
(ವಿಶ್ವ)
ಭಕ್ತಸ್ಥಲ
ಮಹೇಶಸ್ಥಲ


ಸ್ಥಲಗತಶಕ್ತಿತತ್ವದ ವಿಕಾಸ
ಶಕ್ತಿ
ಕಲಾಶಕ್ತಿ
ಭಕ್ತಿಶಕ್ತಿ
ಚಿಚ್ಛಕ್ತಿ
ಪರಾಶಕ್ತಿ
ಆದಿಶಕ್ತಿ
ಇಚ್ಛಾಶಕ್ತಿ
ಜ್ಞಾನಶಕ್ತಿ
ಕ್ರಿಯಾಶಕ್ತಿ
ನಿವೃತ್ತಿಕಲಾ
ಪ್ರತಿಷ್ಠಾಕಲಾ
ವಿದ್ಯಾಕಲಾ
ಶಾಂತಿಕಲಾ
ಶಾಂತ್ಯತೀತಾಕಲಾ
ಶಾಂತ್ಯತೀತೋತ್ತರಾಕಲಾ
ಸಮರಸಭಕ್ತಿ
ಆನಂದಭಕ್ತಿ
ಅನುಭವಭಕ್ತಿ
ಅವಧಾನಭಕ್ತಿ
ನೈಷ್ಠಿಕಾಭಕ್ತಿ
ಶ್ರದ್ಧಾಭಕ್ತಿ

# ಲಿಂಗಾಂಗಸಾಮರಸ್ಯ ಸದ್ಭಾವದರ್ಶಕ ಪಟ

| ಲಿಂಗ | ಮುಖ | ಶಕ್ತಿ | ತತ್ತ್ವ | ಜ್ಞಾನಾಂಗ | ಕರ್ಮಾಂಗ |
|---|---|---|---|---|---|
| ಮಹಾಲಿಂಗ | ಹೃದಯ | ಚಿಚ್ಛಕ್ತಿ | ಶಿವತತ್ತ್ವ | ಹೃದಯ | ಹೃದಯ |
| ಪ್ರಸಾದಲಿಂಗ | ಶ್ರೋತ್ರ | ಪರಾಶಕ್ತಿ | ಸಾದಾಖ್ಯತತ್ತ್ವ | ಶ್ರೋತ್ರ | ವಾಕ್ |
| ಚರಲಿಂಗ | ತ್ವಕ್ | ಆದಿಶಕ್ತಿ | ಅಮೂರ್ತತತ್ತ್ವ | ತ್ವಕ್ | ಪಾಣಿ |
| ಶಿವಲಿಂಗ | ನೇತ್ರ | ಇಚ್ಛಾಶಕ್ತಿ | ಮೂರ್ತತತ್ತ್ವ | ನೇತ್ರ | ಪಾದ |
| ಗುರುಲಿಂಗ | ಜಿಹ್ವಾ | ಜ್ಞಾನಶಕ್ತಿ | ಕರ್ತೃತತ್ತ್ವ | ರಸನಾ | ಉಪಸ್ಥ |
| ಆಚಾರಲಿಂಗ | ನಾಸಿಕಾ | ಕ್ರಿಯಾಶಕ್ತಿ | ಸಕಲತತ್ತ್ವ | ನಾಸಿಕಾ | ಪಾಯು |